# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು

(ಜೆ.ಎಸ್.ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ, ವಿದ್ಯಾಗಿರಿ, ಧಾರವಾಡ ಇವರ ಮೂಲಕ ಚರಿತ್ರೆ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಾಗಿರುವ ಮಹಾಪ್ರಬಂಧ)



ಸಂಶೋಧಕರು
ಕೆಂಚಳ್ಳಿ ಹೇಮಪ್ಪ ಬಸವಣ್ಣೆಪ್ಪ

ಮಾರ್ಗದರ್ಶಕರು
ಡಾ. ಅಜಿತ ಪ್ರಸಾದ
ಪ್ರಾಚಾರ್ಯರು
ಜೆ.ಎಸ್.ಎಸ್. ಶ್ರೀ ಮಂಜುನಾಥೇಶ್ವರ
ಸ್ನಾತಕ ಮತ್ತು ಸ್ನಾತಕೋತ್ತರ ಅಧ್ಯಯನ ಸಂಸ್ಥೆ
ವಿದ್ಯಾಗಿರಿ, ಧಾರವಾಡ



ಸಮಾಜ ವಿಜ್ಞಾನಗಳ ನಿಕಾಯ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭

# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು

(ಜೆ.ಎಸ್.ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ, ವಿದ್ಯಾಗಿರಿ, ಧಾರವಾಡ ಇವರ ಮೂಲಕ ಚರಿತ್ರೆ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಿರುವ ಮಹಾಪ್ರಬಂಧ)




ಸಂಶೋಧಕರು

**ಕೆಂಚಳ್ಳಿ ಹೇಮಪ್ಪ ಬಸವಣ್ಣಪ್ಪ**

ಮಾರ್ಗದರ್ಶಕರು

**ಡಾ. ಅಜಿತ ಪ್ರಸಾದ**

ಪ್ರಾಚಾರ್ಯರು

ಜೆ.ಎಸ್.ಎಸ್. ಶ್ರೀ ಮಂಜುನಾಥೇಶ್ವರ

ಸ್ನಾತಕ ಮತ್ತು ಸ್ನಾತಕೋತ್ತರ ಅಧ್ಯಯನ ಸಂಸ್ಥೆ

ವಿದ್ಯಾಗಿರಿ, ಧಾರವಾಡ



**ಸಮಾಜ ವಿಜ್ಞಾನಗಳ ನಿಕಾಯ**

**ಚರಿತ್ರೆ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩೨೭೬

೨೦೧೭





# ಮಾರ್ಗದರ್ಶಕರ ದೃಢೀಕರಣ ಪತ್ರ

**ಕೆಂಚಳ್ಳಿ ಹೇಮಪ್ಪ ಬಸವಣ್ಣಪ್ಪ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ **ಜೆ.ಎಸ್.ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ, ವಿದ್ಯಾಗಿರಿ, ಧಾರವಾಡ ಇವರ ಮೂಲಕ** ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ದಿನಾಂಕ :** 9-12-2017
**ಸ್ಥಳ : ಧಾರವಾಡ**

**ಡಾ. ಅಜಿತ ಪ್ರಸಾದ**
ಪ್ರಾಚಾರ್ಯರು
ಜೆ.ಎಸ್.ಎಸ್. ಶ್ರೀ ಮಂಜುನಾಥೇಶ್ವರ
ಸ್ನಾತಕ ಮತ್ತು ಸ್ನಾತಕೋತ್ತರ ಅಧ್ಯಯನ ಸಂಸ್ಥೆ
ವಿದ್ಯಾಗಿರಿ, **ಧಾರವಾಡ**

ಡಾ|| ಅಜಿತಪ್ರಸಾದ
ಮಾರ್ಗದರ್ಶಕರು
ಜೆ.ಎಸ್.ಎಸ್; ಡಾ. ಡಿ. ವೀರೇಂದ್ರ ಹೆಗ್ಗಡೆ
ಸಂಶೋಧನ ಕೇಂದ್ರ, ವಿದ್ಯಾಗಿರಿ ಧಾರವಾಡ-4

# ಸಂಶೋಧಕರ ಘೋಷಣಾ ಪತ್ರ

**"ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಹಂಪಿ, ಕನ್ನಡ ವಿಶ್ವವಿದ್ಯಾಲಯದ ಮಾನ್ಯತಾ ಕೇಂದ್ರವಾದ ಜೆ.ಎಸ್.ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ, ವಿದ್ಯಾಗಿರಿ, ಧಾರವಾಡದ **ಡಾ. ಅಜಿತ ಪ್ರಸಾದ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ದಿನಾಂಕ :** 9/12/2017
**ಸ್ಥಳ :** ಧಾರವಾಡ

**ಕೆಂಚಳ್ಳಿ ಹೇಮಪ್ಪ ಬಸವಣ್ಣಪ್ಪ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಜೆ.ಎಸ್.ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ
ಸಂಶೋಧನಾ ಕೇಂದ್ರ, ವಿದ್ಯಾಗಿರಿ
ಧಾರವಾಡ

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧. ಪ್ರಸ್ತಾವನೆ
೧.೨. ಅಧ್ಯಯನದ ಉದ್ದೇಶ
೧.೩. ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ
೧.೪. ಅಧ್ಯಯನದ ವಿಧಾನ
೧.೫. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧. ಪ್ರಸ್ತಾವನೆ

ಪ್ರಪಂಚದಲ್ಲಿ ಮಾನವನು ಸಂಘ ಜೀವನ ಆರಂಭಿಸಿದ ದಿನದಿಂದಲೂ ಒಂದಿಲ್ಲೊಂದು ಹೋರಾಟ ನಡೆಸುತ್ತಲೇ ಬಂದಿದ್ದಾನೆ. ಹೋರಾಟ ಅವನ ಹಕ್ಕು ಅದರ ಮುಖಾಂತರ ತನಗೆ ಬೇಕಾದುದನ್ನು ಪಡೆದು ಬೇಡವಾದುದನ್ನು ತಿರಸ್ಕರಿಸುತ್ತಾನೆ. ಅಂಥ ಹಲವು ಹೋರಾಟಗಳಲ್ಲಿ ಸ್ವಾತಂತ್ರ್ಯ ಹೋರಾಟವೂ ಒಂದು. ಕಾರಣ ಸ್ವಾತಂತ್ರ್ಯವಿಲ್ಲದ ವ್ಯಕ್ತಿ ಅತಂತ್ರನಾಗಿ ಬದುಕಬೇಕಾಗುತ್ತದೆ. ಅತಂತ್ರದ ಬದುಕು ಅಂಧಕಾರದಿಂದ ಕೂಡಿದ್ದು ಸವಲತ್ತುಗಳು ಸಿಗದೇ ಹೋದಾಗ ಮನುಷ್ಯ ನ್ಯಾಯ-ಸಮ್ಮತವಾಗಿ ಅವುಗಳನ್ನು ಪಡೆಯಲು ಪ್ರಯತ್ನಿಸುತ್ತಾನೆ. ಅವು ದೊರಕದಿದ್ದಾಗ ಹೋರಾಟ ಅನಿವಾರ್ಯವಾಗಿ ಅದಕ್ಕೋಸ್ಕರ ಪ್ರಾಣಾರ್ಪಣೆಗೂ ಸಿದ್ಧನಾಗುತ್ತಾನೆ. ಈ ಹಿನ್ನೆಲೆಯಲ್ಲಿ ಭಾರತೀಯರ ಸ್ವಾತಂತ್ರ್ಯ ಹೋರಾಟವು ಅತ್ಯಂತ ಪ್ರಮುಖವಾದುದು.

ಭಾರತೀಯರು ಸ್ವರಾಜ್ಯಕ್ಕಾಗಿ ತನು, ಮನ, ಧನಗಳನ್ನು ಅರ್ಪಿಸಿ ಹೋರಾಟ ನಡೆಸಿರುವುದು ಚರಿತ್ರಾರ್ಹ ಘಟನೆಯಾಗಿದೆ. ಬ್ರಿಟಿಷರ ಆಳ್ವಿಕೆಯಿಂದ ಬೇಸತ್ತಿದ್ದ ಭಾರತೀಯರಲ್ಲಿ ರಾಷ್ಟ್ರೀಯ ಜಾಗೃತಿ ಉಂಟಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ದುಮ್ಮುಕ್ಕಿದ್ದಾರೆ. ಶಸ್ತ್ರಸಜ್ಜಿತರಾಗಿ ಹೋರಾಟ ಮಾಡಿ ಬ್ರಿಟಿಷರ ಪ್ರಾಬಲ್ಯವನ್ನು ತೊಡೆದುಹಾಕುವುದು ಸಾಧ್ಯವಿಲ್ಲವೆಂದು ಮನಗಂಡ ಭಾರತೀಯ ಮುಖಂಡರಿಂದ ಕ್ರಿ.ಶ ೧೮೮೫ರಲ್ಲಿ ಪ್ರಾರಂಭಿಸಲ್ಪಟ್ಟ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸ್ವಾತಂತ್ರ್ಯಕ್ಕಾಗಿ ಹೋರಾಟದ ವೇದಿಕೆಯಾಗಿ ಮಾರ್ಪಟ್ಟಿತು. ಕ್ರಿ.ಶ ೧೯೧೯ರ ನಂತರ ಗಾಂಧೀಜಿ ಪ್ರವೇಶವಾಗಿದ್ದರಿಂದ ಹೊಸ ಗಾಳಿ ಬೀಸಲಾರಂಭಿಸಿ ಅವರ ನೇತೃತ್ವದಲ್ಲಿ ಅಸಹಕಾರ ಚಳುವಳಿ, ಕಾನೂನು ಭಂಗ ಚಳುವಳಿ, ಕರ ನಿರಾಕರಣೆ ಚಳುವಳಿ, ಉಪ್ಪಿನ ಸತ್ಯಾಗ್ರಹ ವೈಯಕ್ತಿಕ ಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿ ಹೀಗೆ ಮೊದಲಾದ ಚಳುವಳಿಗಳ ಮೂಲಕ ಬ್ರಿಟಿಷರೊಂದಿಗೆ ಹೋರಾಟ ಮಾಡಿ ಸ್ವಾತಂತ್ರ್ಯ ದೊರಕಿಸಿಕೊಟ್ಟರು.

ಈ ವೀರಪರಂಪರೆಗೆ ಸಲ್ಲುವಂತೆ ಹಾವೇರಿ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು ಆರಂಭದಲ್ಲಿ ಬಾಲಗಂಗಾಧರ ತಿಲಕರ ಪ್ರಭಾವದಿಂದ ಚಳುವಳಿಯಲ್ಲಿ ಭಾಗಿಯಾಗಿ ನಂತರ

ಗಾಂಧೀಜಿಯ ತತ್ವ ಸಿದ್ಧಾಂತಗಳಿಗನುಗುಣವಾಗಿ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ಬಂಧ ವಿಮೋಚನೆಯ ಚಳುವಳಿಗಳಲ್ಲಿ ಮಹತ್ವದ ಕೊಡುಗೆ ನೀಡಿದ್ದಾರೆ.

**ಸ್ವಾತಂತ್ರ್ಯದ ಅವಶ್ಯಕತೆ**

ಸ್ವಾತಂತ್ರ್ಯ ಜೀವನದ ಮೌಲ್ಯವಾಗಿದೆ. ಸ್ವಾತಂತ್ರ್ಯವಿಲ್ಲದ ಜೀವನವು ನರಕಸದೃಶವಾದ ಬದುಕಾಗುತ್ತದೆ. ಮನುಷ್ಯನಿಗೆ ಅನ್ನ, ನೀರು, ಗಾಳಿ, ಬೆಳಕು ಎಷ್ಟು ಮುಖ್ಯವೋ ಸ್ವಾತಂತ್ರ್ಯವೂ ಅಷ್ಟೇ ಮುಖ್ಯವಾಗಿದೆ. ರಾಜಕೀಯ ಸ್ವಾತಂತ್ರ್ಯ ಎಲ್ಲ ಸ್ವಾತಂತ್ರ್ಯಗಳ ತಳಹದಿಯಾಗಿದೆ. ಯಾಕೆಂದರೆ ಅದು ಮನುಷ್ಯನಿಗೆ ಮೊಟ್ಟಮೊದಲು ಜೀವಿಸುವ ಹಕ್ಕು ಹಾಗೂ ಮತ ಚಲಾಯಿಸಿ ತನ್ನ ಸರಕಾರವನ್ನು ತಾನೇ ನಿರ್ಮಿಸಿಕೊಳ್ಳುವ ಅಧಿಕಾರ ಕೊಡುತ್ತದೆ. ಅಂಥ ರಾಜಕೀಯ ಸ್ವಾತಂತ್ರ್ಯವಿಲ್ಲದ ಪರತಂತ್ರದ ಸ್ಥಿತಿಯು ಅತ್ಯಂತ ಹೀನ, ಅವಮಾನಕರ ಸ್ಥಿತಿ; ಅಲ್ಲದೆ ಮಾನವನು ತಲೆಯೆತ್ತಿ ಬದುಕಲು ಸಾಧ್ಯವಿಲ್ಲ. ಹಾಗಾಗಿ ರಾಜಕೀಯ ಸ್ವಾತಂತ್ರ್ಯ ಮಾನವನ ಬದುಕಿನಲ್ಲಿ ಅತ್ಯಂತ ಮಹತ್ವದ ಮತ್ತು ಅವಶ್ಯಕವಾದ ಸಂಗತಿಯಾಗಿದೆ.

**ಸ್ವಾತಂತ್ರ್ಯದ ಅರ್ಥ ಹಾಗೂ ವ್ಯಾಖ್ಯೆಗಳು :** 'ಸ್ವಾತಂತ್ರ್ಯ' ಎಂಬ ಪದವು ಆಂಗ್ಲ ಭಾಷೆಯ 'liberty' ಎಂಬ ಪದದಿಂದ ಬಂದಿದೆ. 'Liberty'ಯು Liber ಎನ್ನುವ ಲ್ಯಾಟಿನ್ ಪದದಿಂದ ಬಂದಿದೆ. ಅದರ ಮೂಲ ಅರ್ಥ ಸ್ವಾತಂತ್ರ್ಯ ಎಂದಾಗಿದೆ. ಸ್ವಾತಂತ್ರ್ಯವೆಂದರೆ ಯಾವುದೇ ಪ್ರತಿಬಂಧಕಗಳಿಲ್ಲದೇ ಇರುವುದು. ಸ್ವಾತಂತ್ರ್ಯವಿಲ್ಲದಿದ್ದರೆ ಹಕ್ಕುಗಳನ್ನು ಅನುಭೋಗಿಸುವುದಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯದ ಹಕ್ಕು ಬಹಳ ಪ್ರಧಾನವಾದುದು.

**ವ್ಯಾಖ್ಯೆಗಳು**

ಸ್ವಾತಂತ್ರ್ಯವನ್ನು ಕುರಿತು ಹಲವಾರು ತತ್ವಜ್ಞಾನಿಗಳು ತಮ್ಮದೇ ಆದ ರೀತಿಯಲ್ಲಿ ಅಭಿಪ್ರಾಯ ಗಳನ್ನು ವ್ಯಕ್ತಪಡಿಸಿದ್ದಾರೆ.

೧. ಲೈಮನ್ ಬ್ರೈಸನ್ ತಮ್ಮ 'Science and Freedom' ಎಂಬ ಕೃತಿಯಲ್ಲಿ– "ತನ್ನ ಜೀವನ ವಿಧಾನದಲ್ಲಿ ವೈವಿಧ್ಯ ತಂದುಕೊಂಡು, ಮಾರ್ಪಡಿಸಿಕೊಂಡು, ಮಾರ್ಪಡಿಸಿಕೊಳ್ಳಲು ಮನುಷ್ಯನಿಗಿರುವ ನಾನಾ ಅವಕಾಶಗಳಲ್ಲಿ ಉತ್ತಮವೆನಿಸಿದ್ದನ್ನು ಆಯ್ದುಕೊಳ್ಳಲು ಅವನು ಸ್ವತಂತ್ರನು. ಈ ಆಯ್ಕೆಗಿರುವ ಅವಕಾಶದ ಫಲಿತಾಂಶವೇ ಸ್ವಾತಂತ್ರ್ಯ" ಎಂದಿದ್ದಾರೆ.

೨. ಪ್ಲೇಟೋ, ಸ್ಪೈನೋಜ ಎಂಬ ತಜ್ಞರ ಅಭಿಪ್ರಾಯದಲ್ಲಿ 'ಆಶಾಬಂಧನಗಳನ್ನು ಮೀರಿಸುವುದಕ್ಕೆ ನೇರವಾಗಿ ಮನುಷ್ಯನನ್ನು ವಿವೇಕದ ಹಂತಕ್ಕೆ ಏರಿಸತಕ್ಕದ್ದೇ ಸ್ವಾತಂತ್ರ್ಯ' ಎಂದಿದ್ದಾರೆ.

೩. ಹೆರಾಲ್ಡ್ ಲಾಸ್ಕಿ ಎಂಬ ಆಂಗ್ಲ ರಾಜಕೀಯ ತತ್ವಜ್ಞಾನಿ ಸ್ವಾತಂತ್ರ್ಯದ ಮೂರು ಲಕ್ಷಣಗಳನ್ನು ಹೀಗೆ ಹೇಳಿದ್ದಾರೆ.

ಎ. 'ವ್ಯಕ್ತಿತ್ವದಲ್ಲಿ ಸಮರಸಪೂರ್ಣವಾದ ಸ್ಥಿತಿ'

ಬಿ. 'ಪ್ರತಿಬಂಧಕವಿಲ್ಲದಿರುವಿಕೆ'

ಸಿ. 'ಸ್ವಂತ ಇಚ್ಚೆ ಅಥವಾ ಸಂಕಲ್ಪದಂತೆ ಕಾರ್ಯಾರಂಭ ಮಾಡುವ ಅವಕಾಶ' ಎಂದಿರುವರು.

೪. ಮಾರ್ಟಿಮರ್ ಯ್ಯಾಡ್ಲರ್ ಇವರ 'The Idea of Freedom' ಎಂಬ ತಮ್ಮ ಗ್ರಂಥದಲ್ಲಿ

ಎ. 'ಒಬ್ಬ ಮನುಷ್ಯನು ತಾನಾಗಿ ಇಷ್ಟದಿಂದ ಬಯಸಿದ ಮಾರ್ಗವನ್ನು ಅನುಸರಿಸುವವನು ಸ್ವತಂತ್ರನು'

ಬಿ. 'ತನ್ನ ಬುದ್ಧಿಯಲ್ಲಿ ಆತ ತೀರ್ಮಾನಗಳನ್ನು ಕಾರ್ಯರೂಪಕ್ಕೆ ತಿರುಗಿಸಬಲ್ಲವನು ಅಥವಾ ಅಂಥವನು ಸ್ವತಂತ್ರನು'

ಸಿ. ತಾನು ಇಷ್ಟಪಟ್ಟಿದ್ದನ್ನು ಸಾಧಿಸಿಕೊಳ್ಳಬಲ್ಲ ಸ್ಥಿತಿಯಲ್ಲಿರುವವನು ಸ್ವತಂತ್ರ ಎಂದು ಅಭಿಪ್ರಾಯಪಟ್ಟಿದ್ದಾರೆ.

೫. ಜವಾಹರಲಾಲ್ ನೆಹರೂ ಅಭಿಪ್ರಾಯದಂತೆ- 'ಜನತೆಯನ್ನು ಸರ್ವ ದುಃಖಗಳಿಂದ ಮುಕ್ತ ಮಾಡುವುದೇ ಸ್ವಾತಂತ್ರ್ಯ' ಎಂದಿದ್ದಾರೆ.

ಈ ಮೇಲಿನ ಹೇಳಿಕೆಗಳು ಸ್ವಾತಂತ್ರ್ಯ ಕಲ್ಪನೆಯ ಬಗ್ಗೆ ನಾನಾ ವಿಚಾರಗಳು ತಳೆದ ದೃಷ್ಟಿ ವೈವಿಧ್ಯವನ್ನು ತೋರಿಸುತ್ತವೆ. ರಾಜಕೀಯ ಸ್ವಾತಂತ್ರ್ಯವು ಪ್ರಜೆಗಳಿಗೆ ಸ್ವಾತಂತ್ರ್ಯ ನೀಡುವುದಲ್ಲದೇ ಅಧಿಕಾರದಲ್ಲೂ ಭಾಗವಹಿಸುವುದಕ್ಕೆ ಅವಕಾಶವಿದೆ. ಆದ್ದರಿಂದ ರಾಜಕೀಯ ಸ್ವಾತಂತ್ರ್ಯವು ರಾಷ್ಟ್ರದ ಪರಮಾಧಿಕಾರವನ್ನು ಮತ್ತು ಸ್ವಾತಂತ್ರ್ಯವನ್ನು ಪ್ರಜೆಗಳ ಕೈಯಲ್ಲಿರುವಂತೆ ಮಾಡುತ್ತದೆ. ಅಂತಹ ರಾಷ್ಟ್ರವು ಸ್ವತಂತ್ರವಾಗಿದೆ ಎಂದು ಹೇಳಬಹುದು.

ಭಾರತೀಯರ ಸ್ವಾತಂತ್ರ್ಯ ಹೋರಾಟಕ್ಕೆ ವಿಶ್ವದಲ್ಲಿ ಅನನ್ಯವಾದ ಸ್ಥಾನ ಲಭಿಸಿದೆ. ಬ್ರಿಟಿಷರ ಪ್ರಭುತ್ವವನ್ನು ಅಹಿಂಸೆ ಸತ್ಯಾಗ್ರಹಗಳ ಮೂಲಕ ಭಾರತವು ಮಣಿಸಿದ್ದು ನಿಜಕ್ಕೂ ಅದ್ವಿತೀಯವಾದ ಸಂಗತಿಯಾಗಿದೆ. ಈ ಹೋರಾಟವು ಅತ್ಯಂತ ಕೂತೂಹಲ ಕೆರಳಿಸುವ ಹಾಗೂ ರೋಮಾಂಚನ ಗೊಳಿಸುವ ವೀರಗಾಥೆಯಾಗಿದೆ.

ಚರಿತ್ರೆ ಎನ್ನುವುದು ಗತಕಾಲಕ್ಕೆ ಸಂಬಂಧಿಸಿದ ಘಟನೆಗಳ ದಾಖಲೆಯೆಂದು ಗುರುತಿಸಲಾಗಿದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಚರಿತ್ರೆಯನ್ನು ಜೀವಂತ ಪ್ರಕ್ರಿಯೆಯೆಂದು ಪರಿಭಾವಿಸಲಾಗಿದೆ. ಗತಕಾಲದ ವಿವರಗಳನ್ನು ಹೊರಹಾಕುವುದರ ಜೊತೆಗೆ ಒಳನೋಟಗಳಲ್ಲಿನ ವರ್ತಮಾನವನ್ನು ಅರ್ಥ ಮಾಡಿಕೊಳ್ಳಲು ನೆರವಾಗಿ ಸ್ವಾತಂತ್ರ್ಯ ಹೋರಾಟಗಾರರ ನಿಸ್ವಾರ್ಥ ಮನೋಭಾವದಿಂದ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ದೇಶಪ್ರೇಮಿಗಳಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿರುವುದು ಅವಿಸ್ಮರಣೀಯ ಸಂಗತಿಯಾಗಿದೆ.

**ಸ್ವಾತಂತ್ರ್ಯ ಹೋರಾಟಗಾರರೆಂದರೆ ಯಾರು?**

'ಸ್ವಾತಂತ್ರ್ಯ ಹೋರಾಟಗಾರರು' ಯಾರೆಂದು ಸ್ಪಷ್ಟಪಡಿಸುವುದು ಕಷ್ಟಸಾಧ್ಯ. ಇದರ ಅರ್ಥ-ವ್ಯಾಪ್ತಿಯು ಬಹಳ ವಿಶಾಲವಾದದ್ದು. ಸ್ವಾತಂತ್ರ್ಯ ಹೋರಾಟಗಾರರು ಯಾರು? ಎಂಬುದನ್ನು

ಗುರುತಿಸಿ ನಿರ್ವಚಿಸುವ ಪ್ರಮೇಯ ಸ್ವಾತಂತ್ರ್ಯಾನಂತರ ಉಂಟಾಯಿತು. ಸ್ವಾತಂತ್ರ್ಯ ಹೋರಾಟಗಾರರಿಗೆ ಭೂಮಿ, ಮಾಸಾಶನ, ತಾಮ್ರಪತ್ರ ಮುಂತಾದ ಗೌರವವನ್ನು ನೀಡುವುದಕ್ಕಾಗಿ ಸ್ವಾತಂತ್ರ್ಯ ಹೋರಾಟಗಾರರನ್ನು ನಿಖರವಾಗಿ ಗುರುತಿಸುವ ಕೆಲಸವನ್ನು ಸರ್ಕಾರವು ಮಾಡಬೇಕಾಗಿತ್ತು.

"ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಘಟಿಸಿದ್ದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸಿದವರನ್ನು ಸ್ವಾತಂತ್ರ್ಯ ಹೋರಾಟಗಾರರು"ರೆಂದು ಕರೆಯಲಾಯಿತು. 'ರಾಷ್ಟ್ರೀಯ ಕಾಂಗ್ರೆಸ್ ಸಂಘಟಿಸಿದ್ದ ಸ್ವಾತಂತ್ರ್ಯ ಚಳುವಳಿಯಲ್ಲಿ ಕೆಳಕಂಡ ಪ್ರಕರಣಗಳನ್ನು ಸರ್ಕಾರ ಪಟ್ಟಿ ಮಾಡಿತ್ತು. ಕ್ರಿ.ಶ ೧೯೨೦ರ ಅಸಹಕಾರ ಚಳುವಳಿ, ನಾಗಪೂರ ಧ್ವಜ ಸತ್ಯಾಗ್ರಹ, ಕ್ರಿಶ ೧೯೨೮-೨೯ರಲ್ಲಿ ಸೈಮನ್ ಆಯೋಗದ ಬಹಿಷ್ಕಾರ, ಕ್ರಿ.ಶ.೧೯೩೦ರ ಉಪ್ಪಿನ ಸತ್ಯಾಗ್ರಹ, ಕ್ರಿ.ಶ.೧೯೪೦-೪೧ರ ವೈಯಕ್ತಿಕ ಸತ್ಯಾಗ್ರಹ ಹಾಗೂ ಕ್ರಿ.ಶ.೧೯೪೨ರ ಭಾರತ ಬಿಟ್ಟು ತೊಲಗಿ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದವರನ್ನೆಲ್ಲ "ಸ್ವಾತಂತ್ರ್ಯ ಹೋರಾಟಗಾರರೆಂದು ಪರಿಗಣಿಸಿ ಮದ್ರಾಸ್ ಪ್ರಾಂತ ಸರಕಾರವು ದಿನಾಂಕ ೨೨.೧೨.೧೯೪೭ರಲ್ಲಿಯೇ ಹೊರಡಿಸಿದ ಆದೇಶದಲ್ಲಿ ಒಂದು ವಿಶೇಷ ಭಾಗವನ್ನು ಸೇರಿಸಿತು. ಅದರ ಪ್ರಕಾರ 'ಜೈಲು ಶಿಕ್ಷೆಯು ಕಡ್ಡಾಯವೇನಲ್ಲ. ಕೆಳಕಂಡ ಸಂದರ್ಭದಲ್ಲಿಯ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಗಳಾಗಿದ್ದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು' ಪರಿಗಣಿಸಬೇಕೆಂಬುದು ಆದೇಶದಲ್ಲಿ ಸೂಚಿಸಲಾಯಿತು".

* ಕ್ರಿ.ಶ ೧೯೪೦-೪೧ರ ವೈಯಕ್ತಿಕ ಕಾಯ್ದೆ ಭಂಗ ಚಳುವಳಿಯಾಗಿ ಗಾಂಧೀಜಿ ಸಿದ್ಧಪಡಿಸಿದ್ದ ಚಳುವಳಿಕಾರರ ಪಟ್ಟಿಯಲ್ಲಿ ಯಾರ ಹೆಸರುಗಳಿವೆಯೋ ಅವರೆಲ್ಲರೂ ಸ್ವಾತಂತ್ರ್ಯ ಹೋರಾಟಗಾರರು.

* ಕಾಂಗ್ರೆಸ್ ಸಂಸ್ಥೆಯ ಪ್ರಾಂತೀಯ ಸಮಿತಿಗೆ ಅಧೀಕೃತ ನಿರ್ದೇಶನ ಅಥವಾ ಕ್ರಿ.ಶ. ೧೯೪೨ರಲ್ಲಿ ಭೂಗತರಾಗಿ ಚಳುವಳಿಯಲ್ಲಿ ಭಾಗಿಗಳಾದವರೆಲ್ಲರೂ ಸ್ವಾತಂತ್ರ್ಯ ಹೋರಾಟಗಾರರು.

ಅವರಲ್ಲಿ ಪ್ರಮುಖವಾಗಿ- ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಲಾಠಿ ಏಟು, ಗುಂಡಿನೇಟು ತಿಂದವರು. ಚಳುವಳಿಯಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸಿದ ಪ್ರಮಾಣ ಪತ್ರವನ್ನು ಪಡೆದವರನ್ನು ಹಾಗೂ ರಾಷ್ಟ್ರೀಯ ಕಾಂಗ್ರೆಸ್‌ನ ಸ್ವಾತಂತ್ರ್ಯ ಹೋರಾಟದ ಚಳುವಳಿಯಲ್ಲಿ ಭಾಗವಹಿಸಿದ್ದಕ್ಕೆ ಪ್ರಾಂತೀಯ ಕಾಂಗ್ರೆಸಿನಿಂದ ಪ್ರಮಾಣಪತ್ರ ಪಡೆದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಗುರುತಿಸುವ ಆದೇಶ ನೀಡಲಾಯಿತು.

ಸರ್ಕಾರವು ಇದನ್ನು ಕೇವಲ ಭೂಮಿ, ಮಾಸಾಶನ, ತಾಮ್ರಪತ್ರ ನೀಡುವ ಸಲವಾಗಿ ಇದೊಂದು ಆಡಳಿತಾತ್ಮಕ ವ್ಯಾಖ್ಯೆಯನ್ನಾಗಿಸಿದೆ. ಈ ವ್ಯಾಖ್ಯೆಯ ಪ್ರಕಾರ ಜೈಲು ಶಿಕ್ಷೆಯಾಗಲಿ ಅಥವಾ ಜೈಲು ಶಿಕ್ಷೆಯಾಗದಿರಲಿ, ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗವಹಿದವರೆಲ್ಲ ಸ್ವಾತಂತ್ರ್ಯ ಹೋರಾಟಗಾರರು. ಅಪ್ಪರಮಟ್ಟಿಗೆ ಈ ವ್ಯಾಖ್ಯೆಯ ವ್ಯಾಪ್ತಿ ವಿಶಾಲವಾದುದಾಗಿದೆ.

ಆದರೆ, ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗವಹಿಸದಿದ್ದರೂ ಅದಕ್ಕೆ ಅಪ್ರತ್ಯಕ್ಷವಾಗಿ ಹೋರಾಟಗಾರರಿಗೆ ಬೆಂಬಲ ನೀಡಿದವರಿದ್ದಾರೆ. ಚಳುವಳಿಯಲ್ಲಿ ನೇರವಾಗಿ ಭಾಗಿಗಳಾಗಿದ್ದವರಿಗೆ, ಜೈಲು ಶಿಕ್ಷೆಗೆ ಒಳಗಾದವರಿಗೆ ನೆರವು ನೀಡಿದವರಿದ್ದಾರೆ. ಗಂಡನು ಸ್ವಾತಂತ್ರ್ಯ ಹೋರಾಟದಲ್ಲಿ ಜೈಲು ಸೇರಿದಾಗ ಹೆಂಡತಿ ತನ್ನ ಕುಟುಂಬದ ಜವಾಬ್ದಾರಿ ಹೊತ್ತಿದ್ದಾಳೆ. ಮಕ್ಕಳು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದಾಗ ತಂದೆ-ತಾಯಿಂದಿರು ಕುಟುಂಬ ನಿರ್ವಹಣೆಗೆ ಕಷ್ಟಪಟ್ಟವರಿದ್ದಾರೆ. ಹೋರಾಟಗಾರರಿಗೆ ಹಣಕಾಸಿನ ನೆರವು, ಪ್ರೇರಣೆ ನೀಡಿದವರಿದ್ದಾರೆ. ಅವರ ಕೋರ್ಟ್ ಕೇಸ್‌ಗಳನ್ನು ಉಚಿತವಾಗಿ ನಡೆಸಿಕೊಟ್ಟ ವಕೀಲರುಗಳು ಹಾಗೂ ಚಳುವಳಿಕಾರರನ್ನು ಸಹಾನುಭೂತಿಯಿಂದ ಕಂಡ ಸರ್ಕಾರಿ ಅಧಿಕಾರಿಗಳಿದ್ದಾರೆ. ಸರ್ವೇಸಾಮಾನ್ಯವಾಗಿ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಶಾಲಾ ಕಾಲೇಜು ಅಧ್ಯಾಪಕರುಗಳು ಅದ್ವಿತೀಯ ಪಾತ್ರ ನಿರ್ವಹಿಸಿದ್ದಾರೆ. ಅವರೆಲ್ಲರೂ ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗವಹಿಸಲಿಲ್ಲ. ಜೈಲು ಶಿಕ್ಷೆ ಅನುಭವಿಸಿಲ್ಲ. ಇಂಥವರೂ ಕೂಡ ರಾಷ್ಟ್ರೀಯ ಚಳುವಳಿಯಲ್ಲಿ ನೀಡಿದ ಕೊಡುಗೆ ಸ್ಮರಣಾರ್ಹವಾದುದ್ದು.

ಸ್ವಾತಂತ್ರ್ಯ ಹೋರಾಟವನ್ನು 'ವರ್ಗಸ್ವರೂಪಿ' ಎಂದೂ, ಅದು ಕೇವಲ ಉನ್ನತ ವರ್ಗದವರ ಹೋರಾಟವಾಗಿತ್ತೆಂದೂ ಪ್ರತಿಪಾದಿಸುವ ವಾಡಿಕೆಯಿದೆ. ವಾಸ್ತವವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಉನ್ನತ ವರ್ಗದ ಪ್ರಾಬಲ್ಯವಿತ್ತು ಎಂಬುದು ಅರೆಸತ್ಯ; ನಿಜವಾಗಿ ಆ ಸಂದರ್ಭದಲ್ಲಿ ಅದರಲ್ಲೂ ನಗರ/ಗ್ರಾಮಗಳಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಯಲ್ಲಿ ಕೇವಲ ಗಣ್ಯರನ್ನು, ಜಮೀನ್ದಾರರನ್ನು, ಮುಖಂಡರುಗಳನ್ನು ಮಾತ್ರ ಬಂಧಿಸುತ್ತಿದ್ದು, ಅವರುಗಳ ಮೇಲೆ ಮಾತ್ರ ಕೋರ್ಟ್ ಖಟ್ಲೆ ಹಾಕುತ್ತಿದ್ದು ಕೂಲಿನಾಲಿ ಮಾಡಿಕೊಂಡಿದ್ದವರು ಚಳುವಳಿಯಲ್ಲಿ ಭಾಗವಹಿಸುತ್ತಿದ್ದರೂ ಅವರನ್ನು ಬಂಧಿಸುತ್ತಿರಲ್ಲಿಲ್ಲವಂತೆ. ಇದರಿಂದಾಗಿ ಸಾಮಾನ್ಯರು ಕೆಳ ಸಮುದಾಯದವರು ಚಳುವಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದ ಅನೇಕ ಬಡವರು ಕೂಲಿಯಾಳುಗಳು, ಭೂರಹಿತರನ್ನು ಪೊಲೀಸರು ಬಂಧಿಸಲಿಲ್ಲ. ಇದರಿಂದಾಗಿ ಸಾಮಾನ್ಯ ಜನರಿಗೆ ಹಾಗೂ ಕೆಳಸಮುದಾಯದ ಜನರಿಗೂ 'ಸ್ವಾತಂತ್ರ್ಯ ಹೋರಾಟಗಾರ' ಎಂಬ ಪ್ರಮಾಣಪತ್ರ ದೊರೆತಿಲ್ಲ. ಈ ಕಾರಣದಿಂದಾಗಿ ಸ್ವಾತಂತ್ರ್ಯ ಹೋರಾಟಗಾರರೆನಿಸಿಕೊಳ್ಳಲು ಜೈಲು ಶಿಕ್ಷೆಯೊಂದೇ ಮಾನದಂಡವಾಗಲಾರದು.

### ೧.೨. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ಸ್ವಾತಂತ್ರ್ಯ ಹೋರಾಟಗಾರರು ಎಂದರೆ ಯಾರು ? ಎಂಬುದನ್ನು ಗುರುತಿಸುವ ಜೊತೆಗೆ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಜೈಲುವಾಸ ಅನುಭವಿಸಿದವರು ಮಾತ್ರವೇ ಸ್ವಾತಂತ್ರ್ಯ ಹೋರಾಟಗಾರರು ಎಂಬ ತಿಳುವಳಿಕೆ ಪ್ರಸ್ತುತ ಅಧ್ಯಯನಕ್ಕಿಲ್ಲ. ಹಾವೇರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಪ್ರಾದೇಶಿಕ ಸ್ವರೂಪವನ್ನು ಗಮನಿಸುವುದಾದರೆ ಈ ಜಿಲ್ಲೆ ಆಂಗ್ಲರ ಆಳ್ವಿಕೆಯಲ್ಲಿ ಅವಿಭಜಿತ ಧಾರವಾಡಕ್ಕೆ ಒಳಪಟ್ಟಿತ್ತು. ಸ್ವಾತಂತ್ರ್ಯ ನಂತರ

೧೯೯೭ ಆಗಸ್ಟ್ ೨೪ರಂದು ಕರ್ನಾಟಕ ಸರಕಾರ ಜಿಲ್ಲಾ ವಿಂಗಡನೆ ಮಾಡಿದರೂ ಹಾವೇರಿ, ಗದಗ ಹಾಗೂ ಧಾರವಾಡ ಜಿಲ್ಲೆಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಚಟುವಟಿಕೆಗಳು ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ವಿಶೇಷವಾಗಿ ಕಂಡುಬರುವುದರಿಂದ ಜಿಲ್ಲೆಗೆ ಸಂಬಂಧಿಸಿದ ಹೋರಾಟದ ವೈಶಿಷ್ಟ್ಯವನ್ನು ಗುರುತಿಸುವುದು ಅಧ್ಯಯನದ ಉದ್ದೇಶವಾಗಿದೆ.

* ಸ್ವಾತಂತ್ರ್ಯ ಹೋರಾಟದಲ್ಲಿ ರಾಷ್ಟ್ರೀಯತೆ ಮುಖ್ಯವಾದದ್ದು. ಅದು ಜಿಲ್ಲೆಯ ಮೇಲೆ ಹೇಗೆ? ಯಾರ ಮುಖಾಂತರ, ಯಾವ ಯಾವ ರೂಪದಲ್ಲಿ ಪರಿಣಾಮ ಬೀರಿತೆಂಬುದನ್ನು ಬೆಳಕಿಗೆ ತರುವ ಉದ್ದೇಶವಿದೆ.

* ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮ ಜೀವನವನ್ನೇ ಚಳುವಳಿಗಾಗಿ ಮುಡುಪಾಗಿಟ್ಟವರು, ಚಳುವಳಿಯನ್ನೇ ಪೂರ್ಣಾವಧಿ ಉದ್ಯೋಗವನ್ನಾಗಿ ಮಾಡಿಕೊಂಡವರು, ಚಳುವಳಿಯ ನೇತೃತ್ವವನ್ನು ವಹಿಸಿದವರು, ಅವರು ಅನುಸರಿಸಿದ ಮಾರ್ಗಗಳು, ಜನಸಾಮಾನ್ಯರನ್ನು ಚಳುವಳಿ ತಲುಪಲು ಸಂಘ-ಸಂಘಟನೆ, ಆಶ್ರಮಗಳು, ರಾಷ್ಟ್ರೀಯ ಶಾಲೆಗಳನ್ನು(ವ್ಯಾಯಾಮ ಶಾಲೆಗಳು ಸೇರಿದಂತೆ) ಆರಂಭಿಸಿದ ಚಳುವಳಿಗಾರರು ಅಂದಿನ ಸಮಾಜ ಎದುರಿಸುತ್ತಿದ್ದ ಮೂಢನಂಭಿಕೆಗಳು, ಅಸ್ಪೃಶ್ಯತೆ, ಜಾತೀಯತೆ, ಜಾತ್ರೆಗಳಲ್ಲಿ ಬಲಿ ನೀಡುವ ವ್ಯವಸ್ಥೆ, ಅನಕ್ಷರತೆ ಮುಂತಾದವುಗಳನ್ನು ತಿಳಿಸಿ, ಜನಸಾಮಾನ್ಯರನ್ನು ಜಾಗೃತಗೊಳಿಸುವಲ್ಲಿ ಚಳುವಳಿಗಾರರು ನಿರ್ವಹಿಸಿದ ಪಾತ್ರವನ್ನು ಬೆಳಕಿಗೆ ತರುವ ಉದ್ದೇಶವಿದೆ.

* ಜಿಲ್ಲೆಯಲ್ಲಿ ನಡೆದ ಚಳುವಳಿಗಳ ಉದ್ದೇಶ ಮತ್ತು ಅದರ ವ್ಯಾಪ್ತಿಯನ್ನು ತಿಳಿಸುವುದ ರೊಂದಿಗೆ ಚಳುವಳಿಗಳ ನಾಯಕತ್ವ ವಹಿಸಿದವರು, ಅವರು ಅನುಭವಿಸಿದ ಸಮಸ್ಯೆಗಳು ಮತ್ತು ಅವರನ್ನು ಬೆಂಬಲಿಸಿದವರನ್ನು ಹಾಗೂ ಅದರ ಪ್ರಭಾವವನ್ನು ಗುರುತಿಸಲಾಗುವುದು. ಅಲ್ಲದೆ ಜಿಲ್ಲೆಯ ಚಳುವಳಿಗಳಲ್ಲಿ ಕೆಳಸ್ಥರದ ಸಮುದಾಯದವರ ಪಾತ್ರವಿರುವುದನ್ನು ಗುರುತಿಸುವ ಉದ್ದೇಶವಿದೆ.

* ಜಿಲ್ಲೆಯಲ್ಲಿಯ ರಾಷ್ಟ್ರೀಯ ಹೋರಾಟದಲ್ಲಿ ಮಹಿಳೆಯರ ಪಾತ್ರ, ಅವರ ಕಾರ್ಯ ಚಟುವಟಿಕೆಗಳನ್ನು ಬೆಳಕಿಗೆ ತರುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ.

* ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಗಳಾಗಿ ಇಂದು ನಮ್ಮೊಂದಿಗೆ ಇರುವ ಹಲವು ಚಳುವಳಿಗಾರರನ್ನು ಸಂದರ್ಶಿಸಿ ಅವರ ಚಳುವಳಿಯ ರೂಪುರೇಷೆಗಳು, ಅನುಭವಿಸಿದ ನೋವು-ನಲಿವುಗಳನ್ನು ತಿಳಿಯುವುದು.

* ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಜೈಲಿಗೆ ಹೋಗದೆ ಚಳುವಳಿಗಾರರಿಗೆ ಬೆಂಬಲವಾಗಿ ನಿಂತು ಸಹಾಯ ಮಾಡಿದವರು, ಜಿಲ್ಲೆಯ ಚಳುವಳಿಗಳಿಗೆ ಪ್ರಾಂತ/ಜಿಲ್ಲೆ/ ತಾಲೂಕುಗಳಿಂದ ಬಂದ ಚಳುವಳಿಗಾರರ ಬಗ್ಗೆ, ಜಿಲ್ಲೆಯ ಚಳುವಳಿಗಾರರು ಬೇರೆ ಜಿಲ್ಲೆ/ತಾಲೂಕು/ಪ್ರಾಂತಗಳಿಗೆ

ಹೋಗಿ ಚಳುವಳಿ ಮಾಡಿ ಜೈಲು ಸೇರಿದವರಿದ್ದು, ಅವರ ಕಾರ್ಯಚಟುವಟಿಕೆಗಳನ್ನು ಗುರುತಿಸುವ ಉದ್ದೇಶವಿದೆ.

* ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಕ್ಷೇತ್ರಗಳಿಗೆ ನೀಡಿದ ಕೊಡುಗೆಗಳು ಮತ್ತು ಕರ್ನಾಟಕ ಏಕೀಕರಣದಲ್ಲಿ ಇವರ ಪಾತ್ರ ಮತ್ತು ಘಟನೆಗಳೊಂದಿಗೆ ಮಾಹಿತಿ ನೀಡುವ ಉದ್ದೇಶವಿದೆ.

* ಸವಣೂರು ಭಾಗಕ್ಕೆ ಲಭಿಸದ ೧೯೪೭ರ ಆಗಸ್ಟ್‌ದ ಸ್ವಾತಂತ್ರ್ಯ, ಅದಕ್ಕಿದ್ದ ಕಾರಣಗಳು, ಆ ಸಂದರ್ಭದಲ್ಲಿ ಸವಣೂರು ಸಂಸ್ಥಾನದಲ್ಲಿ ನಡೆದ ಚಟುವಟಿಕೆಗಳನ್ನು ಗುರುತಿಸುವ ಉದ್ದೇಶವಿದೆ.

### ೧.೩. ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

ನಮಗೆ ಸ್ವಾತಂತ್ರ್ಯ ಲಭಿಸಿದ್ದು ಇತಿಹಾಸಕಾರರು ಇಲ್ಲಿಯವರೆಗೂ ಗುರುತಿಸಿರುವ ಹಿರಿಯ ನಾಯಕರಿಂದ ಮಾತ್ರವಲ್ಲ, ಇತಿಹಾಸದ ಪರಿಧಿಯಲ್ಲಿ ಐಕ್ಯವಾಗಿ ಹೋಗಿರುವ ಸಾವಿರಾರು ನಿಸ್ವಾರ್ಥ ಜನಸಾಮಾನ್ಯ ಹೋರಾಟಗಾರರು, ಹುತಾತ್ಮರ ಧೈರ್ಯ, ಹುಮ್ಮಸ್ಸು ಮತ್ತು ಸಾಹಸದ ಫಲದಿಂದ. ಕ್ರಿ.ಶ. ೧೯೪೨ರ ಭಾರತ ಬಿಟ್ಟು ತೊಲಗಿ ಆಂದೋಲನ ಒಂದು ಸಾಂಕೇತಿಕ ಮಾತ್ರ. ಅದರ ಪರಿಣಾಮವಾಗಿ ಹಾವೇರಿ ಜಿಲ್ಲೆಯಲ್ಲಿ ಹಲವಾರು ಬಂಡಾಯಗಳು ನಡೆದಿವೆ. ಈ ಭಾಗದಲ್ಲಿಯ ಅಂತಹ ಹೋರಾಟಗಾರರನ್ನು ಕುರಿತು ತಿಳಿಸುವುದು, ಸ್ವಾತಂತ್ರ್ಯ ಚಳುವಳಿಯ ಉಗಮದ ಬಗ್ಗೆ ಶೋಧಿಸುವುದು, ಸ್ವಾತಂತ್ರ್ಯ ಹೋರಾಟದ ಇತಿಹಾಸ ಮತ್ತು ಬೆಳವಣಿಗೆಯನ್ನು ಗುರುತಿಸುವುದು, ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಅವರಿಗೆ ಪ್ರೇರಕವಾದ ಸಂಗತಿಗಳನ್ನು ತಿಳಿದುಕೊಳ್ಳುವುದು, ಚಳುವಳಿಯ ಕಾಲಕ್ಕೆ ಜಿಲ್ಲೆಯಲ್ಲಿದ್ದ ವಾತಾವರಣವನ್ನು ತಿಳಿಯುವುದು ಹಾಗೂ ಸ್ವಾತಂತ್ರ್ಯ ಪಡೆಯುವಲ್ಲಿ ಸತ್ಯ, ಅಹಿಂಸೆ ಮುಂತಾದ ತತ್ವಗಳ ಪಾತ್ರಗಳನ್ನು ಅರಿತುಕೊಳ್ಳುವುದು ಈ ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿಯಾಗಿದೆ.

ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರರೊಂದಿಗೆ ಕ್ರಾಂತಿಕಾರಿ ಸಂಘಟನೆಯ ಪ್ರಸ್ತಾಪವಿದ್ದು, ಅದಕ್ಕೆ ಕಾರಣರಾರು? ಆ ಸಂಘಟನೆಯಿಂದ ಜಿಲ್ಲೆಯಲ್ಲಿ ಹೇಳಿಕೊಳ್ಳುವಂತಹ ಭಯಾನಕವಾಗಲಿ, ರಕ್ತಪಾತವಾದ ಬಗ್ಗೆಯಾಗಲಿ ಘಟನೆಗಳು ಸಂಭವಿಸಿಲ್ಲ. ಆದರೂ ಆ ಯೋಚನೆ, ಯೋಜನೆ, ಅದರ ಸೂತ್ರದಾರರು ಯಾರು ಎಂಬುದನ್ನು ಅಧ್ಯಯನದಲ್ಲಿ ವಿವರಿಸಲಾಗಿದೆ.

(ಪ್ರಸ್ತುತ ಅಧ್ಯಯನದ ವ್ಯಾಪ್ತಿ ಹಾವೇರಿ ಜಿಲ್ಲೆಗೆ ಸೀಮಿತವಾಗಿದ್ದರೂ ಗಡಿ ಜಿಲ್ಲೆಗಳೂ ಒಳಗೊಂಡಂತೆ, ಈ ಜಿಲ್ಲೆಯಲ್ಲಿನ ಜೀವಿತ ಹಾಗೂ ತೀರಿಹೋದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರ ಪಾತ್ರವನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.)

ಒಟ್ಟಾರೆ ಭಾರತದ ದಾಸ್ಯದ ಬಿಡುಗಡೆಯಲ್ಲಿ ಹಾವೇರಿ ಜಿಲ್ಲೆಯು ಯಾವ ರೀತಿಯಾಗಿ ತನ್ನ ಕರ್ತವ್ಯವನ್ನು ನಿರ್ವಹಿಸಿದೆ ಎಂಬುದನ್ನು ಅವಲೋಕಿಸುವುದೇ ಪ್ರಸ್ತುತ ಅಧ್ಯಯನದ ಆಯ್ಕೆಯ ವ್ಯಾಪ್ತಿಯಾಗಿದೆ. ಭಾರತವನ್ನು ಬ್ರಿಟಿಷರ ಆಳ್ವಿಕೆಯಿಂದ ವಿಮುಕ್ತಗೊಳಿಸಿ ಸ್ವತಂತ್ರ



See page 13

ರಾಷ್ಟ್ರವನ್ನಾಗಿಸುವಲ್ಲಿ ಹಾವೇರಿ ಜಿಲ್ಲೆಯ ಪಾತ್ರದ ಕುರಿತಾದ ಅಧ್ಯಯನಗಳು ನಡೆದಿಲ್ಲ. ಈ ದೃಷ್ಟಿಯಿಂದ **ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು** ಎಂಬ ಮಹಾಪ್ರಬಂಧವನ್ನು ರಚಿಸಲಾಗಿದೆ.

## ೧.೪. ಅಧ್ಯಯನದ ವಿಧಾನ

ಈ ಅಧ್ಯಯನ ಸಮಾಜವಿಜ್ಞಾನ ಅಧ್ಯಯನ ವಿಧಾನವಾಗಿದ್ದರಿಂದ ಅದರ ಹಲವು ಶಿಸ್ತುಗಳನ್ನು ಅಳವಡಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಪ್ರಮುಖವಾದ ಮಾಹಿತಿಯನ್ನು ಪ್ರಾಥಮಿಕ ಹಾಗೂ ಆನುಷಂಗಿಕ ಮೂಲಗಳಿಂದ ಸಂಗ್ರಹಿಸಿಕೊಳ್ಳಲಾಗಿದೆ. ಹಾವೇರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಉಲ್ಲೇಖಗಳಿರುವ ಚಾರಿತ್ರಿಕ ದಾಖಲೆ ಮತ್ತು ಇತರ ಆಕರಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಸರಕಾರದ ಗೆಜೆಟಿಯರ್‌ಗಳು, ಕರ್ನಾಟಕ ಚರಿತ್ರೆ ಸಂಪುಟಗಳು, ಸಂಶೋಧನ ಪ್ರಬಂಧಗಳು, ಗಾಂಧೀ ಸ್ಮಾರಕ ನಿಧಿಯ ಪ್ರಕಟಣೆಗಳು, ಗಾಂಧೀಜಿಯವರ ಸಮಗ್ರ ಕೃತಿ ಸಂಪುಟಗಳು, ವಿಶ್ವಕೋಶದ ಮಾಹಿತಿ ಮುಂತಾದವುಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಪ್ರಕಟವಾದ ಕಿರು ಹೊತ್ತಿಗೆಗಳನ್ನು ಇಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಈಗಾಗಲೇ ಬೆಳಕಿಗೆ ತಂದಿರುವ ಸಂಗತಿಗಳನ್ನು ಚರ್ಚಿಸುವ ಜೊತೆಗೆ ಇಲ್ಲಿಯವರೆಗೆ ಬೆಳಕಿಗೆ ಬರದಿರುವ ಅಲಕ್ಷ್ಯಕ್ಕೆ ಗುರಿಯಾಗಿರುವ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದೆ. ಅಲ್ಲದೆ, ಅಂದಿನ ದಿನಪತ್ರಿಕೆಗಳಾದ ವಿಜಯ, ಸಂಯುಕ್ತ ಕರ್ನಾಟಕ, ವಿಶ್ವ ಕರ್ನಾಟಕ, ವೀರಕೇಸರಿ ಹಾಗೂ ಇತರ ನಿಯತಕಾಲಿಕೆಗಳಾದ ಕ್ರಾಂತಿವೀರ, ಕರ್ಮವೀರ, ರಾಜಹಂಸ ಹಾಗೂ ಮೌಖಿಕವಾಗಿ/ನೇರ ಸಂದರ್ಶನಗಳ ಮೂಲಕ ಸ್ವತಃ ಸ್ವಾತಂತ್ರ್ಯ ಹೋರಾಟಗಾರರೊಂದಿಗೆ ಚರ್ಚಿಸಲಾಗಿದೆ. ಅವರ ಸಂಬಂಧಿಗಳೊಂದಿಗೆ, ಚಳುವಳಿಯನ್ನು ನೋಡಿದವರೊಂದಿಗೆ ಹೋರಾಟಗಾರರಿಂದ ಹೋರಾಟದ ವಿವರ ಕೇಳಿದವರೊಂದಿಗೆ ಚರ್ಚಿಸಿದ್ದಲ್ಲದೆ, ಅವರಿಗೆ ಸಂಬಂಧಿಸಿದ ದಾಖಲೆಗಳು, ಪುಸ್ತಕಗಳನ್ನು ಬಳಸಿಕೊಳ್ಳಲಾಗಿದೆ.

### ಪ್ರಾಥಮಿಕ ಆಕರಗಳು

ಈ ಅಧ್ಯಯನದಲ್ಲಿ ಪ್ರಾಥಮಿಕ ಮೂಲಗಳಿಂದ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ ಮಾಹಿತಿಯ ಸಂಗ್ರಹಕ್ಕೆ ಕ್ಷೇತ್ರಕಾರ್ಯ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

**ಕ್ಷೇತ್ರಕಾರ್ಯ :** ಈ ಸಂಶೋಧನಾ ಮಹಾಪ್ರಬಂಧ ರಚನೆಗಾಗಿ ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರನ್ನು ಭೇಟಿ ಮಾಡಲಾಗಿದೆ. ಹಾವೇರಿಯ ಜಿಲ್ಲಾ ನೋಂದಣಿ ಕಚೇರಿಯಿಂದ ಸ್ವಾತಂತ್ರ್ಯಯೋಧರ ಹೆಸರುಗಳನ್ನು ಪಡೆದು ಬಹುತೇಕ ಹಳ್ಳಿಗಳಿಗೆ ಭೇಟಿ ನೀಡಿ ಪ್ರಶ್ನಾವಳಿಗಳ ಮೂಲಕ ವಿಷಯ ಸಂಗ್ರಹಿಸಲಾಗಿದೆ.

ಭೇಟಿ ನೀಡಿದ ಊರುಗಳಲ್ಲಿ ಸರಿಸುಮಾರು ಚಳುವಳಿಗಾರರು ಮಡಿದವರೇ ಹೆಚ್ಚು. ಬದುಕುಳಿದವರು ಹಲವರಷ್ಟೇ. ಹೀಗೆ ಬದುಕಿರುವಂತಹ ಯೋಧರಲ್ಲಿ ಸಹ ಅನಾರೋಗ್ಯ ದಿಂದಿರುವವರು ಹೆಚ್ಚಿದ್ದಾರೆ. ಕೆಲವರಿಗೆ ಕಿವಿ ಕೇಳದಿರುವುದು, ಕಣ್ಣು ಕಾಣದಿರುವ ಮತ್ತು ನೆನಪಿನ ಶಕ್ತಿಯೇ ಇಲ್ಲದಿರುವವರೇ ಹೆಚ್ಚು. ಕೆಲವೇ ಕೆಲವು ಹೋರಾಟಗಾರರು ಆರೋಗ್ಯವಾಗಿದ್ದು, ತಮ್ಮ ಹೋರಾಟದ ವಿವರ ಮತ್ತು ಜಿಲ್ಲೆಯ ಇತರ ಚಳುವಳಿಕಾರರ ಬಗ್ಗೆ, ಮಡಿದವರ ಬಗ್ಗೆಯೂ ಮಾಹಿತಿ ನೀಡುವಲ್ಲಿ ಸಹಕರಿಸಿದ್ದಾರೆ. ಮಡಿದಂತಹ ಯೋಧರ ವಿಷಯ ಮತ್ತು ಅವರ ಜೈಲಿನ ಪ್ರಮಾಣಪತ್ರ, ತಾಮ್ರಪತ್ರ, ಭಾವಚಿತ್ರ ಹಾಗೂ ಇನ್ನಿತರ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ದಾಖಲೆಗಳನ್ನು ಪಡೆಯುವಾಗ ಅನೇಕ ಹೋರಾಟಗಾರರ ಮಾಹಿತಿ ತಿಳಿದುಕೊಳ್ಳುವುದು ಕಷ್ಟವಾಗುತ್ತಿತ್ತು. ಕಾರಣ ಅಂದು ಪೊಲೀಸರ ದಬ್ಬಾಳಿಕೆ ಅಧಿಕವಾಗಿದ್ದರಿಂದ ಅವರು ಭೂಗತರಾಗಿ(೧೯೪೨) ಹೋರಾಟ ಮಾಡುತ್ತಿದ್ದರು. ಬೆಳಗಾವಿಯ ಹಿಂಡಲಗಾ ಜೈಲಿಗೆ ಬೆಂಕಿಬಿದ್ದ ಕಾರಣ ಮಹತ್ವದ ದಾಖಲೆಗಳು ನಾಶವಾಗಿವೆ. ಚಳುವಳಿಗಾರರು ಇದೇ ಜೈಲಿಗೆ ಹೋಗಿರುವುದರಿಂದ ಸೂಕ್ತ ದಾಖಲೆಗಳು ದೊರೆಯುವುದು ಕಷ್ಟಸಾಧ್ಯ.

**ಮಾಧ್ಯಮಿಕ ಆಕರಗಳು** : ಪ್ರಸ್ತುತ ಮಹಾಪ್ರಬಂಧವನ್ನು ರಚಿಸಲು ಹಲವಾರು ಗ್ರಂಥಗಳನ್ನು ಅಧ್ಯಯನ ಮಾಡಲಾಯಿತು. ಅವುಗಳೆಂದರೆ–ಸೂರ್ಯನಾಥ ಕಾಮತರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಸಂಪುಟ ೧,೨,೩. ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆಗಳಾದ 'ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು' ಈ ಕೃತಿ 'A who's who in freedom struggle in karnataka' ಎಂಬುದರ ಅನುವಾದವಾಗಿದೆ. 'ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು'(ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಮಹೋತ್ಸವ ಸ್ಮರಣ ಸಂಚಿಕೆ, ಬೆಂಗಳೂರು(೧೯೯೩), ಗ.ಸ. ಹಾಲಪ್ಪನವರ 'ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು', ಸುರೇಂದ್ರ ದಾನಿಯವರ 'ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಾಮ' ಹಾಗೂ ಪ್ರೊ. ಬಿ. ಷೇಕ್ ಅಲಿ ಅವರ 'ಕರ್ನಾಟಕ ಚರಿತ್ರೆ ಸಂಪುಟ' ೬ ಮತ್ತು ೭, ಹಾ.ಮಾ. ನಾಯಕರ 'ಕನ್ನಡ ವಿಶ್ವಕೋಶ ಸಂಪುಟಗಳು', ಪ್ರೊ. ಎಸ್. ಚಂದ್ರಶೇಖರ್ ಅವರ 'ಕರ್ನಾಟಕ ಸ್ವಾತಂತ್ರ್ಯ ಚಳುವಳಿಯ ಅಧ್ಯಯನಗಳು'(ಲೇಖನ), ಹಾಲಪ್ಪ ಗ.ಸ. 'ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ' ಸಂ. ೧,೨, ಬೆಂಗಳೂರು, ೧೯೬೪-೬೯, ಸೂರ್ಯನಾಥ ಕಾಮತ್(ಸಂ) ಭಾರತ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ, ಕರ್ನಾಟಕ ಸರಕಾರ, ೧೯೯೫, ಶರ್ಮಾ ತಿ.ತಾ. 'ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ' (೧೮೦೦–೧೮೫೭), ದಿವಾಕರ ರಂಗನಾಥರ 'ಕರ ನಿರಾಕರಣೆಯ ವೀರಕಥೆ' ೧೯೫೫ ಇತ್ಯಾದಿ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ.

### ೧.೫. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಕೆಲವೊಂದು ಅಧ್ಯಯನಗಳು ನಡೆದಿವೆ. ಕೆಲವು ಕೃತಿಗಳು ಪ್ರಕಟವಾಗಿವೆ. ಕರ್ನಾಟಕ ಸರಕಾರದಿಂದಲೂ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ ಕೃತಿಗಳು ಪ್ರಕಟಗೊಂಡಿದ್ದು, ಅವುಗಳಲ್ಲಿ ಹಾವೇರಿ ಜಿಲ್ಲೆಗೆ ಸಂಬಂಧಿಸಿದ

ವಿವರ ಕಂಡು ಬರುತ್ತವೆ. ಹಾಗೆಯೇ ಕೆಲವೊಂದು ಲೇಖನಗಳು ಪ್ರಕಟವಾಗಿರುವುದನ್ನು ಗಮನಿಸಲಾಗಿದೆ.

ಚಲೇಜಾವ್ ಚಳುವಳಿಯಲ್ಲಿ ಹುತಾತ್ಮ ಮೈಲಾರ ಮಹದೇವಪ್ಪನ ಬಗ್ಗೆ ಪ್ರೊ. ವ್ಹಿ.ಸಿ. ಹಿತ್ತಲಮನಿ 'ಮಾಡಿ ಮಡಿದ ಮೈಲಾರ ಮಹದೇವ' ಕೃತಿಯಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಮೈಲಾರ ಮಹದೇವಪ್ಪ ಹಾವೇರಿ ಭಾಗದಲ್ಲಿ ಭೂಗತ ತಂಡ ಕಟ್ಟಿಕೊಂಡು ಪೊಲೀಸರಿಗೆ ಸಿಗದೆ ನಿರ್ವಹಿಸುವ ಕಾರ್ಯಗಳನ್ನು ವಿವರಿಸಿದ್ದಾರೆ. ಅಲ್ಲದೆ ಗಾಂಧೀಜಿ ನೇತೃತ್ವದಲ್ಲಿಯ ಉಪ್ಪಿನ ಸತ್ಯಾಗ್ರಹದಲ್ಲಿ ನಾಡಿನ ಏಕೈಕ ಪ್ರತಿನಿಧಿಯಾಗಿ ಭಾಗಿಯಾಗಿ ಆರು ತಿಂಗಳ ಶಿಕ್ಷೆ ಅನುಭವಿಸಿದ ವಿವರವನ್ನು ದಾಖಲಿಸಿದ್ದಾರೆ.

ಕರ್ನಾಟಕ ಸರಕಾರದಿಂದ ಸುಶೀಲಾ ಸುಬ್ರಹ್ಮಣ್ಯ ಸಂಪಾದಕತ್ವದಲ್ಲಿ ಪ್ರಕಟಗೊಂಡಿರುವ 'ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ'ಯಲ್ಲಿ ಇಡೀ ನಾಡಿನ ಹಲವು ಚಳುವಳಿಗಾರರ ಸಂಕ್ಷಿಪ್ತ ವಿವರಗಳನ್ನು ನೀಡಲಾಗಿದೆ. ಅದರಲ್ಲಿ ಹಾವೇರಿ ಜಿಲ್ಲೆಯ ಹಿರೇಕೆರೂರ, ಬ್ಯಾಡಗಿ, ರಾಣೆಬೆನ್ನೂರು, ಹಾನಗಲ್ಲು, ಶಿಗ್ಗಾವಿ ಮತ್ತು ಹಾವೇರಿ ತಾಲೂಕುಗಳ ಕೆಲ ಚಳುವಳಿಗಾರರ ಸಂಕ್ಷಿಪ್ತ ವಿವರಗಳನ್ನು ದಾಖಲಿಸಿದ್ದಾರೆ.

ಸೂರ್ಯನಾಥ ಕಾಮತ್ ಅವರ ಸಂಪಾದಕತ್ವದಲ್ಲಿ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಸಂಪುಟ-೧, ೨ ಮತ್ತು ೩ ಈ ಸಂಪುಟಗಳಲ್ಲಿ ಕರ್ನಾಟಕದ ಹಲವು ಜಿಲ್ಲೆಗಳೊಂದಿಗೆ ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ಇಂದಿನ ಹಾವೇರಿ ಜಿಲ್ಲೆಗೆ ಸಂಬಂಧಿಸಿದ ವರಣ್ಣ ಹೊಸಮನಿ, ಕೆ.ಎಫ್. ಪಾಟೀಲ್, ವೀರನಗೌಡ ಪಾಟೀಲ್, ಗೋವಿಂದಾಚಾರ್ಯ ಅಗ್ನಿಹೋತ್ರಿ, ಗೋವಿಂದಾಚಾರ್ಯ ರಾಯಚೂರ, ಸಿದ್ಧಪ್ಪ ಹೊಸಮನಿ, ಸುಬ್ಬಣ್ಣಾಚಾರ್ಯ ಅಕ್ಕಿವಳಿ, ಕರಿಯಪ್ಪ ಸಂಗೂರ - ಹೀಗೆ ಜಿಲ್ಲೆಯ ಹಲವು ಚಳುವಳಿಗಾರರ ವಿವರ ನೀಡಿರುತ್ತಾರೆ.

ಎಂ.ಎಂ. ಕಲಬುರ್ಗಿ ಅವರ ಸಂಪಾದಕತ್ವದಲ್ಲಿ ಪ್ರಕಟಿತವಾದ 'ಉಕ್ಕಿನ ಮನುಷ್ಯ' ಶ್ರೀ ಗುದ್ಲೆಪ್ಪ ಹಳ್ಳಿಕೇರಿ ಎಂಬ ಕೃತಿಯಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಗುದ್ಲೆಪ್ಪ ಹಳ್ಳಿಕೇರಿ ಚಲೇಜಾವ್ ಚಳುವಳಿಯಲ್ಲಿ ಜೈಲಿನಲ್ಲಿದ್ದುಕೊಂಡೆ ಚಳುವಳಿಯ ರೂಪುರೇಷೆಗಳನ್ನು ರೂಪಿಸುತ್ತಿದ್ದ ವಿವರ ನೀಡಲಾಗಿದೆ. ಗುದ್ಲೆಪ್ಪನವರ ಸಾಮಾಜಿಕ, ಶೈಕ್ಷಣಿಕ ಮತ್ತು ರಾಜಕೀಯ ಕೊಡುಗೆಗಳನ್ನು ವಿವರಿಸಿದ್ದಾರೆ.

ಸೂರ್ಯನಾಥ ಕಾಮತ್ ಅವರ ಸಂಪಾದಕತ್ವದಲ್ಲಿ ಪ್ರಕಟವಾದ ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಜಿಲ್ಲೆಯಲ್ಲಿ ಘಟಿಸಿದ ಬ್ರಾಹ್ಮಣೇತರ ಚಳುವಳಿಯಿಂದ ಚಲೇಜಾವ್ ಚಳುವಳಿಯವರೆಗಿನ ಅವಧಿಯಲ್ಲಿ ಚಳುವಳಿಗಾರರು ಎದುರಿಸಿದ ಕಷ್ಟಗಳನ್ನು ವಿವರಿಸಲಾಗಿದೆ. ಆಂಗ್ಲರ ಆಗಮನ ಪೂರ್ವದಲ್ಲಿ ಮತ್ತು ತದನಂತರದಲ್ಲಿ ಜಿಲ್ಲೆಯಲ್ಲಾದ ಆರ್ಥಿಕ ಹಾಗೂ ಸಾಮಾಜಿಕ ಬದಲಾವಣೆಗಳನ್ನು ಉಲ್ಲೇಖಿಸಿರುತ್ತಾರೆ.

ಸರೋಜಿನಿ ಚವಲಾರ್ ಸಂಪಾದಕತ್ವದಲ್ಲಿ 'ಚಿರಚೇತನ' ಎಂಬ ಕೆ.ಎಫ್. ಪಾಟೀಲರ ಅಭಿನಂದನಾ ಗ್ರಂಥದಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಅವರು ಶಿಕ್ಷಕರಾಗಿದ್ದುಕೊಂಡು ಹಂಸಬಾವಿ ಶಾಲಾ ವಿದ್ಯಾರ್ಥಿಗಳನ್ನು ರಾಷ್ಟ್ರ ನಿರ್ಮಾಣ ಮಾಡುವ ಕಾರ್ಯದಲ್ಲಿ ನಿರ್ವಹಿಸಿದ ಪಾತ್ರ ತದನಂತರದಲ್ಲಿ ಜಿಲ್ಲೆಯ ಚಳುವಳಿಗಾರರ ರಾಯಭಾರಿಯಾಗಿ ಅವರ ಬೇಕು-ಬೇಡಿಕೆಗಳನ್ನು ಪೂರೈಸಲು ಶ್ರಮಿಸಿದ ಬಗ್ಗೆ ಉಲ್ಲೇಖಿಸಲಾಗಿದೆ. ಅಲ್ಲದೆ ಕೆ.ಎಫ್. ಪಾಟೀಲರು ಚಳುವಳಿಯೊಂದಿಗೆ ಶೈಕ್ಷಣಿಕ ಹಾಗೂ ರಾಜಕೀಯ ಕ್ಷೇತ್ರದಲ್ಲಿಯೂ ನಿಸ್ವಾರ್ಥ ಸೇವೆಯನ್ನು ದಾಖಲಿಸಿದ್ದಾರೆ.

ಮೈಸೂರು ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಪ್ರಕಟವಾದ 'ಕರ್ನಾಟಕದ ಪರಂಪರೆ' ಎಂಬ ಎರಡನೇ ಸಂಪುಟದಲ್ಲಿ ರಂಗನಾಥ ದಿವಾಕರ, ದತ್ತಾತ್ರೇಯ ಕರಮರಕರ್ ಮತ್ತು ವಿ.ಎಸ್. ನಾರಾಯಣ ಇವರ ಲೇಖನಗಳು ಪ್ರಾಂತ ಹಾಗೂ ಮುಂಬೈ ಕರ್ನಾಟಕದಲ್ಲಿಯ ಚಳುವಳಿಯ ರೂಪರೇಷಗಳನ್ನು ರೂಪಿಸುತ್ತಿದ್ದ ರಂಗನಾಥ ದಿವಾಕರ, ಗದಿಗೆಯ್ಯ ಹೊನ್ನಾಪುರ ಮಠ, ಗಂಗಾಧರರಾವ್ ದೇಶಪಾಂಡೆ ಇನ್ನೂ ಮುಂತಾದವರ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಎಸ್.ಯು. ಮುಗಳಿ ಅವರ ಮಾರ್ಗದರ್ಶನದಲ್ಲಿ ನಾಗಪ್ಪ ಗು. ಯತ್ನಳ್ಳಿ ಅವರ ಎಂ.ಫಿಲ್. ಸಂಪ್ರಬಂಧ 'ಹಾವೇರಿ ತಾಲೂಕಿನ ಸ್ವಾತಂತ್ರ್ಯ ಚಳುವಳಿ-ಒಂದು ಅಧ್ಯಯನ' ಎಂಬ ಪ್ರಬಂಧದಲ್ಲಿ ಹಾವೇರಿ ತಾಲೂಕಿನ ಪ್ರಮುಖ ಚಳುವಳಿಗಾರರಾದ ಪರಮಣ್ಣ ಹೊಸಮನಿ, ಸಿದ್ಧಪ್ಪ ಹೊಸಮನಿ, ಗೋವಿಂದಾಚಾರ್ಯ ಅಗ್ನಿ ಹೋತ್ರಿ, ಗುದ್ಲೆಪ್ಪ ಹಳ್ಳಿಕೇರಿ, ವಿರೂಪಾಕ್ಷ ಅಂಗಡಿ ಇನ್ನೂ ಮುಂತಾದವರು ಚಳುವಳಿಯಲ್ಲಿ ಅವರು ನಿರ್ವಹಿಸಿದ ಪಾತ್ರದೊಂದಿಗೆ ವಿವರಿಸಿದ್ದಾರೆ.

ಹಾವೇರಿ ಜಿಲ್ಲೆಯ ಪ್ರಮುಖ ಚಳುವಳಿಗಾರ ಟಿ.ಆರ್. ನೆಶ್ವಿ ಅವರು ಶಾಲಾ ಶಿಕ್ಷಕರಾಗಿದ್ದುಕೊಂಡು ಕಾಂಗ್ರೇಸ್ ಸೇರಿ ಕರ ನಿರಾಕರಣ ಚಳುವಳಿಯನ್ನು ರಾಷ್ಟ್ರ ನಾಯಕರ ಗಮನ ಸೆಳೆಯುವಂತೆ ರೈತ ಸಂಘಟನೆಯನ್ನು ಸಂಘಟಿಸಿದ ರೀತಿಯನ್ನು ಸಂಶೋಧಕ ಭೋಜರಾಜ ಪಾಟೀಲ್ ಇವರು 'ಸ್ವಾತಂತ್ರ್ಯ ಯೋಧ ಟಿ.ಆರ್. ನೆಶ್ವಿ' ಎಂಬ ಕೃತಿಯಲ್ಲಿ ಸ್ಪಷ್ಟಪಡಿಸಿದ್ದಾರೆ.

ಬಸಪ್ಪ ರಾಯಪ್ಪ ನರಗುಂದ ಇವರು 'ಕಾಯಕ ಯೋಗಿ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಶಾಂತೇಶ್ವರರು' ಎಂಬ ಕೃತಿಯಲ್ಲಿ ರಾಯಪ್ಪ ನರಗುಂದ ಎಂಬ ಸಾಮಾನ್ಯ ವ್ಯಕ್ತಿ ಸ್ವಾತಂತ್ರ್ಯ ಹೋರಾಟದಲ್ಲಿ ನಿರ್ವಹಿಸಿದ ಪಾತ್ರ ಹಾಗೂ ಸವಣೂರು ಭಾಗದಲ್ಲಿ ಮೈಲಾರ ಮಹದೇವಪ್ಪನ ಭೂಗತ ಕಾರ್ಯಕ್ಕೆ ಭಾಗಿಯಾಗುವುದರೊಂದಿಗೆ ಸಕಲ ರೀತಿಯ ಸಹಕಾರ ನೀಡಿ ಸವಣೂರು ರೈಲ್ವೆ ಸ್ಟೇಷನ್ ಸುಡಲು ಕಾರಣಿಕರ್ತರಾದ ವಿವರವನ್ನು ಅನಾವರಣ ಗೊಳಿಸಲಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಲ್ಲಿಸಲ್ಪಟ್ಟ ಪ್ರೊ. ಎಸ್. ರಾಜಶೇಖರ ಮಾರ್ಗದರ್ಶನದಲ್ಲಿ ಎ.ಬಿ. ವಗ್ಗರ್ ಸಂಶೋಧನೆಯ ಪಿಎಚ್.ಡಿ. ಮಹಾಪ್ರಬಂಧ 'ಮುಂಬೈ

ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟ' ಎಂಬ ಮಹಾಪ್ರಬಂಧದ ಮೂರನೇ ಅಧ್ಯಾಯದಲ್ಲಿ ಮುಂಬೈ ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಪ್ರಭಾವ ಕಾರಣಗಳ ಬಗ್ಗೆ ವಿವರಿಸುವುದರೊಂದಿಗೆ ರಾಷ್ಟ್ರೀಯತೆಯ ಜ್ವಾಲೆ ವ್ಯಾಪಿಸಿರುವುದನ್ನು ವಿವರಿಸಿದ್ದಾರೆ.

ಕೆ.ಬಿ. ಭಿಕ್ಷಾವರ್ತಿ ಮಠ ಅವರ 'ಸ್ವಾತಂತ್ರ್ಯ ಸೇನಾನಿಗಳಾದ ದೇವಕ್ಕ ಹಾಗೂ ರಾಮಾನಂದ ಮನ್ನಂಗಿ' ಕೃತಿಯಲ್ಲಿ ಹಾವೇರಿ ಭಾಗದ ಮೈಲಾರ ಮಹದೇವಪ್ಪ ತಂಡದ ಭೂಗತ ಕಾರ್ಯಗಳ ಬಗ್ಗೆ ಗಾಂಧೀಜಿಯ ವರ್ಧಾಶ್ರಮದ ತರಬೇತಿ ಹಾಗೂ ಸಾಮಾಜಿಕ ಕಾರ್ಯಗಳ ಮಾಹಿತಿ ನೀಡಲಾಗಿದೆ.

ಸಂಕಮ್ಮ ಜಿ. ಸಂಕಮ್ಮನವರ 'ಹೋರಾಟದ ಒಂದು ನೋಟ' ಎಂಬ ಕೃತಿಯಲ್ಲಿ ಮೈಲಾರ ಸಿದ್ಧಮ್ಮನವರ ಸ್ವಾತಂತ್ರ್ಯ ಹೋರಾಟದ ಜೀವನದ ವಿವಿಧ ಹಂತಗಳನ್ನು ತಿಳಿಸುವುದ ರೊಂದಿಗೆ ಕೊರಡೂರಿನಲ್ಲಿ ಆಶ್ರಮ ಸ್ಥಾಪಿಸಿ ಜನಸಾಮಾನ್ಯರನ್ನು ಮೂಢನಂಬಿಕೆಗಳಿಂದ ಬಿಡುಗಡೆಗೊಳಿಸುವುದರೊಂದಿಗೆ ರಾಷ್ಟ್ರೀಯ ಹೋರಾಟದೊಂದಿಗೆ ಸಾಮಾಜಿಕ ಕಾರ್ಯಗಳನ್ನು ನಿರ್ವಹಿಸಿದ ಬಗ್ಗೆ ವಿವರಿಸಲಾಗಿದೆ.

ಜಿಲ್ಲೆಯಲ್ಲಿ ಮಹಿಳಾ ಹೋರಾಟಗಾರರು ನಿರ್ವಹಿಸಿದ ಪಾತ್ರವನ್ನು ಕಮಲ ಸಂಪಳ್ಳಿ ಅವರ 'ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರ ವನಿತೆಯರು' ಕೃತಿಯಲ್ಲಿ ಜಿಲ್ಲೆಗೆ ಸಂಬಂಧಿಸಿದಂತೆ ನಾಗಮ್ಮ ಪಾಟೀಲ್, ವೀರಮ್ಮ ಸಂಗೂರು, ಲೀಲಾವತಿ ಮಾಗಡಿ, ದೇವಕ್ಕ ಮನ್ನಂಗಿ ಇನ್ನೂ ಮೊದಲಾದ ಮಹಿಳಾ ಹೋರಾಟಗಾರ್ತಿಯರ ಚಿತ್ರಣವನ್ನು ಚಿತ್ರಿಸಿದ್ದಾರೆ.

ಗಡಿ ಜಿಲ್ಲೆಗೆ ಸಂಬಂಧಿಸಿದಂತೆ ಶೇಷಾದ್ರಿ ಬಿ. ಮತ್ತು ಚಂದ್ರಶೇಖರ ಟಿ.ಆರ್. ಸಂಪಾದಕತ್ವದ 'ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು' ಕೃತಿಯಲ್ಲಿ ಹಾವೇರಿ ಜಿಲ್ಲೆಗೆ ಸಂಬಂಧಿಸಿದ ವಿಷಯ ಪ್ರಸ್ತಾಪವಿದ್ದು ಹರಿಹರ-ಹರಪನಹಳ್ಳಿ ಟಪಾಲು ಬಸ್ಸಿನ ಲೂಟಿ ಪ್ರಕರಣದ ಉಲ್ಲೇಖವಿದ್ದು ಅಂದಿನ ಘಟನೆಯ ತಂಡದ ನಾಯಕತ್ವವನ್ನ ಮೈಲಾರ ಮಹದೇವಪ್ಪನ ಸಹೋದರ ಲಿಂಗಣ್ಣ ಮೈಲಾರ ವಹಿಸಿದ್ದ ಎಂಬ ಉಲ್ಲೇಖವಿದೆ. ಈ ಘಟನೆಗೆ ಸಂಬಂಧಿಸಿದಂತೆ ಅದೇ ಘಟನೆಯಲ್ಲಿ ಭಾಗಿಯಾದ ದೇವೇಂದ್ರಪ್ಪ ವಿಭೂತಿ ಹೇಳಿಕೆಯಂತೆ – 'ಮೈಲಾರ ಲಿಂಗಣ್ಣನ ನಾಯಕತ್ವದಲ್ಲಿ ಜಿಲ್ಲೆಯಲ್ಲಿ ಯಾವುದೇ ಭೂಗತ ಕಾರ್ಯಗಳು ನಡೆದಿರುವುದಿಲ್ಲ' ಎಂಬುದನ್ನು ಸಂದರ್ಶನದಲ್ಲಿ ಹೇಳಿದ್ದಾರೆ.

ಗಡಿ ಜಿಲ್ಲೆಗೆ ಸಂಬಂಧಿಸಿದಂತೆ ಸಿ.ಎಂ. ಚುರ್ಚಿಹಾಳ ಅವರ ಸಂಪಾದಕತ್ವದ 'ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದರಾಬಾದ್ ವಿಮೋಚನಾ ಹೋರಾಟ' ಎಂಬ ಕೃತಿಯಲ್ಲಿ ಹಾವೇರಿ ಜಿಲ್ಲೆಯ ಚಳುವಳಿ ನಾಯಕ ಮಹದೇವಪ್ಪ ಮೈಲಾರ ಮುಂಡರಗಿ ಭಾಗದ ಮೇಲೆ ಪ್ರಭಾವ ಬೀರಿದ ಉಲ್ಲೇಖವಿದೆ.

ಭೋಜರಾಜ ಪಾಟೀಲ್ ಸಂಪಾದಕತ್ವದ 'ಕರ್ನಾಟಕ ಗ್ರಾಮಚರಿತ್ರೆ ಕೋಶ: ಹಾವೇರಿ ಜಿಲ್ಲಾ ಸಂಪುಟ-೧, ೨' ಕೃತಿಯಲ್ಲಿ ಹಾವೇರಿ ಜಿಲ್ಲೆಯ ಗ್ರಾಮಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಸಂಕ್ಷಿಪ್ತ ಪರಿಚಯವನ್ನು ದಾಖಲಿಸಿದ್ದಾರೆ.

ಇದೇ ರೀತಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಜಿಲ್ಲೆ/ತಾಲೂಕು ಸಾಹಿತ್ಯ ಸಮ್ಮೇಳನಗಳ ಸ್ಮರಣ ಸಂಚಿಕೆಗಳಲ್ಲಿಯ ಲೇಖನಗಳು, ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳು ಮತ್ತು ಜಿಲ್ಲೆಯ ರಾಷ್ಟ್ರೀಯ ಹೋರಾಟಕ್ಕೆ ಸಂಬಂಧಿಸಿದಂತೆ ಹಲವು ಕೃತಿಗಳನ್ನು ಗಮನಿಸಲಾಗಿದೆ.

ಒಟ್ಟಾರೆ ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ಹೋರಾಟದ ಸಮಗ್ರ ಚಿತ್ರಣವನ್ನು ಕಟ್ಟಿಕೊಡುವ ಮೂಲಕ ಈ ಹಿಂದಿನ ಕೃತಿಗಳ ಹಾಗೂ ಲೇಖನಗಳಲ್ಲಿಯ ಕೊರತೆಯನ್ನು ನೀಗಿಸುವ ಪ್ರಯತ್ನ ಮಾಡಲಾಗಿದೆ.

**ಮಹಾಪ್ರಬಂಧದ ವಿನ್ಯಾಸ**

ಈ ಮಹಾಪ್ರಬಂಧವು ಒಟ್ಟು ಏಳು ಅಧ್ಯಾಯಗಳಲ್ಲಿ ನಿರೂಪಿತವಾಗಿದೆ. ಪೀಠಿಕೆಯೋಪಾದಿ-ಯಲ್ಲಿರುವ ಮೊದಲನೆಯ ಅಧ್ಯಾಯವು ಇಡೀ ಅಧ್ಯಯನದ ಆಶಯವನ್ನು ಒಳಗೊಂಡಿದೆ. ಅಧ್ಯಯನದ ಉದ್ದೇಶ, ವಿಧಾನ, ಅಲ್ಲದೆ, ಸ್ವಾತಂತ್ರ್ಯ ಹೋರಾಟಗಾರರೆಂದರೆ ಯಾರು? ಎಂಬುದನ್ನು ವಿವರಿಸಲಾಗಿದೆ. ಈವರೆಗಿನ ಅಧ್ಯಯನದ ವಿವರ ನೀಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಜಿಲ್ಲೆಯ ಐತಿಹಾಸಿಕ ಹಾಗೂ ರಾಜಕೀಯ ಹಿನ್ನೆಲೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಆಳರಸರ ಕಾಲದಿಂದ ಆಂಗ್ಲರ ಆಳ್ವಿಕೆಯ ಅವಧಿಯವರೆಗಿನ ಜಿಲ್ಲೆಯ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಕುರಿತು ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯವು ಪ್ರಸ್ತುತ ಅಧ್ಯಯನಕ್ಕೆ ಹಿನ್ನೆಲೆಯಾಗಿ ರಾಷ್ಟ್ರೀಯತೆಯ ಅರ್ಥ, ಉಗಮ ಹಾಗೂ ಬೆಳವಣಿಗೆಗೆ ಸಂಬಂಧಿಸಿದ ವಿವರಗಳನ್ನೊಳಗೊಂಡಿದೆ. ಜಿಲ್ಲೆಗೆ ರಾಷ್ಟ್ರೀಯತೆಯ ಬೆಳವಣಿಗೆಗೆ ಪ್ರೇರಕವಾದ ಅಂಶಗಳೊಂದಿಗೆ ರಾಷ್ಟ್ರ ನಾಯಕರ ಪ್ರಭಾವವನ್ನು ಗುರುತಿಸಲಾಗಿದೆ. ಜಿಲ್ಲೆಯ ಚಳುವಳಿಗಳಲ್ಲಿ ಸಂಘ, ಸಂಘಟನೆ ಮತ್ತು ಆಶ್ರಮಗಳ ಕೊಡುಗೆಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಜಿಲ್ಲೆಯಲ್ಲಿ ನಡೆದ ವಿವಿಧ ಆಯಾಮಗಳನ್ನು ಒಳಗೊಂಡಿದೆ. ಜಿಲ್ಲೆಯಲ್ಲಿ ವಿವಿಧ ಚಳುವಳಿಗಳು ಯಾವ ಕಾರಣಗಳಿಂದ ನಡೆದುವು, ಆಗಿನ ಚಳುವಳಿಗಾರರ ಉದ್ದೇಶಗಳು, ಆಯಾ ಚಳುವಳಿಗಳ ನಾಯಕರುಗಳು ಯಾರು? ಎಂಬ ಬಗ್ಗೆ ಸಮಗ್ರ ಮಾಹಿತಿಗಳನ್ನು ಈ ಅಧ್ಯಾಯ ಒಳಗೊಂಡಿದೆ.

ಐದನೆಯ ಅಧ್ಯಾಯದಲ್ಲಿ ಜಿಲ್ಲೆಯ ಪ್ರಮುಖ ಚಳುವಳಿಗಾರರು ಯಾರು? ಅವರ ಕಾರ್ಯವಿಧಾನಗಳು ಏನು? ಎಂಬ ವಿವರಗಳೊಂದಿಗೆ ಜಿಲ್ಲೆಯಲ್ಲಿಯ ಮಹಿಳಾ ಚಳುವಳಿಗಾರರ ವಿವರ ನೀಡಲಾಗಿದೆ. ಅಧ್ಯಯನ ನಡೆದ ಕಾಲದಲ್ಲಿ ನಮ್ಮೊಂದಿಗಿರುವ ಹಲವಾರು ಚಳುವಳಿಗಾರರನ್ನು ಸಂದರ್ಶಿಸಲಾಗಿದೆ. ಅಂದಿನ ಚಳುವಳಿಗಾರರಿಗೆ ಬೆಂಬಲವಾಗಿರುವ ಸಾಮಾನ್ಯರು, ಸರಕಾರಿ ಅಧಿಕಾರಿಗಳಿದ್ದು, ಇವರ ಬಗ್ಗೆ ಮಾಹಿತಿಯನ್ನು ಗಮನಿಸಲಾಗಿದೆ.

ಹಾವೇರಿ ಜಿಲ್ಲೆಯ ಚಳುವಳಿಗಾರರಿಗೆ ಗಡಿ/ಜಿಲ್ಲೆ/ತಾಲೂಕುಗಳ ಚಳುವಳಿಗಾರರೂ ನೀಡಿದ ಬೆಂಬಲ ಹಾಗೂ ಘಟನೆಗಳನ್ನು ವಿವರಿಸಲಾಗಿದೆ. ಜಿಲ್ಲೆಯ ಸವಣೂರು ತಾಲೂಕು ಭಾಗವು ಅಂದು ನವಾಬರಿಗೆ ಸೇರಿತ್ತು. ಆ ಭಾಗವು ಜಿಲ್ಲೆಯ ಉಳಿದ ಭಾಗಕ್ಕೆ ಸ್ವಾತಂತ್ರ್ಯ ದೊರೆತ ನಂತರ ದೊರೆತಿರುವ ವಿವರ ನೀಡಲಾಗಿದೆ.

ಅಧ್ಯಾಯ ಆರರಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಸಾಮಾಜಿಕ, ಶೈಕ್ಷಣಿಕ, ರಾಜಕೀಯವಾಗಿ ನೀಡಿದ ಕೊಡುಗೆಗಳನ್ನು ವಿಶ್ಲೇಷಿಸಲಾಗಿದೆ. ಹಾಗೂ ಕರ್ನಾಟಕ ಏಕೀಕರಣದಲ್ಲಿ ಅವರು ನಿರ್ವಹಿಸಿದ ಪಾತ್ರಗಳನ್ನು, ನಡೆದ ಘಟನೆಗಳನ್ನು ವಿವರಿಸಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪ ಅಧ್ಯಾಯವಾಗಿದ್ದು, ಅಧ್ಯಯನದ ಫಲಿತಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಪಟ್ಟಿ, ಚಳುವಳಿ ಗೀತೆಗಳು, ಗ್ರಂಥಋಣ, ಸಂಕ್ಷೇಪಗಳು, ನಕಾಶೆ, ಛಾಯಾಚಿತ್ರಗಳು ಹಾಗೂ ಪತ್ರಾಗಾರ ವಿಭಾಗವನ್ನು ನೀಡಲಾಗಿದೆ.



ಅಧ್ಯಾಯ : ಎರಡು

# ಐತಿಹಾಸಿಕ, ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ

## ಅಧ್ಯಾಯ : ಎರಡು

# ಐತಿಹಾಸಿಕ, ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ

ಅವಿಭಜಿತ ಧಾರಾವಾಡ ಜಿಲ್ಲೆಯ ಒಂದು ತಾಲೂಕಾಗಿದ್ದ ಹಾವೇರಿ ಕ್ರಿ.ಶ. ೧೯೯೭ ಆಗಸ್ಟ್ ೨೪ರಂದು ಒಂದು ಸ್ವತಂತ್ರ ಜಿಲ್ಲೆಯಾಗಿ ರೂಪುಗೊಂಡಿತು. ಹಾವೇರಿ ಜಿಲ್ಲೆಯು ಮಧ್ಯ ಕರ್ನಾಟಕದಲ್ಲಿ ೧೪.೨೮ ಮತ್ತು ೧೪.೫೯ ಅಕ್ಷಾಂಶ ಮತ್ತು ೭೫.೦೭ ಮತ್ತು ೭೫.೩೮ ರೇಖಾಂಶಗಳ ಮಧ್ಯದಲ್ಲಿದ್ದು ಉತ್ತರ ಕರ್ನಾಟಕದ ಹೆಬ್ಬಾಗಿಲು ಎನಿಸಿದೆ. ಈ ಜಿಲ್ಲೆಯನ್ನು ಉತ್ತರದಲ್ಲಿ ಧಾರವಾಡ, ಗದಗ ಜಿಲ್ಲೆಗಳೂ, ಪೂರ್ವದಲ್ಲಿ ಬಳ್ಳಾರಿ, ದಾವಣಗೆರೆ ಜಿಲ್ಲೆಗಳು, ಪಶ್ಚಿಮದಲ್ಲಿ ಉತ್ತರ ಕನ್ನಡ ಜಿಲ್ಲೆಯು ಮತ್ತು ದಕ್ಷಿಣದಲ್ಲಿ ಶಿವಮೊಗ್ಗ ಜಿಲ್ಲೆ ಸುತ್ತುವರಿದಿವೆ. ಬೆಳಗಾವಿ ವಿಭಾಗಕ್ಕೆ ಸೇರಿದ ಈ ಜಿಲ್ಲೆಗೆ ಶಿಗ್ಗಾವಿ, ಹಾವೇರಿ, ಸವಣೂರು, ಬ್ಯಾಡಗಿ, ಹಾನಗಲ್ಲು, ಹಿರೇಕೆರೂರು ಮತ್ತು ರಾಣೆಬೆನ್ನೂರು ಹೀಗೆ ಏಳು ತಾಲೂಕುಗಳು ಸೇರಿವೆ. ಜಿಲಯು ೧೯ ಹೋಬಳಿಗಳು, ೬೯೮ ಗ್ರಾಮಗಳು, ೭ ಪುರಸಭಾ ಆಡಳಿತವಿರುವ ಪಟ್ಟಣಗಳನ್ನೊಳಗೊಂಡಿದ್ದು, ೨೮೨೮ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ರಾಜ್ಯದ ಒಟ್ಟು ವಿಸ್ತೀರ್ಣದ ಶೇ. ೨.೫೩ರಷ್ಟು ಇದೆ. ಹಾನಗಲ್ಲು ತಾಲೂಕು ಅತಿ ಹೆಚ್ಚು ಗ್ರಾಮಗಳನ್ನು ಹೊಂದಿದರೆ ಸವಣೂರು ಅತೀ ಕಡಿಮೆ ಗ್ರಾಮಗಳನ್ನು ಹೊಂದಿದ ತಾಲೂಕಾಗಿದೆ.

### ೨.೧. ಜಿಲ್ಲೆಯ ಐತಿಹಾಸಿಕ, ಪೌರಾಣಿಕ ಹಿನ್ನೆಲೆ

ಹಾವೇರಿ ಜಿಲ್ಲೆಯಲ್ಲಿ ಪ್ರಾಗ್ಯೈತಿಹಾಸಿಕ ಕಾಲದಲ್ಲಿ ಶಿಲಾಯುಗದ ಮಾನವರು ವಾಸವಾಗಿದ್ದ ಕುರುಹುಗಳು ಸಾಕಷ್ಟು ದೊರೆತಿವೆ. ಇಲ್ಲಿ ಹರಿಯುವ ತುಂಗಭದ್ರಾ, ವರದಾ ನದಿಗಳು ಪ್ರಾಗ್ಯೈತಿಹಾಸಿಕ ನೆಲೆಗಳಿಗೆ ಆಸ್ಪದವಿತ್ತಿವೆ. "ಹಳ್ಳೂರು, ನಾಗವಂದ, ಭೈರನಪಾದ, ಗುಡ್ಡದ ಮಾದಾಪುರ, ಶಿರಗಂಬಿ (ಹಿರೇಕೆರೂರು ತಾ.) ಪ್ರಾಗ್ಯೈತಿಹಾಸಿಕ ನೆಲೆಗಳಾಗಿವೆ. ಹಳ್ಳೂರು ಉತ್ಖನನದಲ್ಲಿ ದೊರೆತ ಕಲ್ಲಿನ ಆಯುಧಗಳು ಶಿಲಾಯುಗಕ್ಕೆ ಸಂಬಂಧಿಸಿವೆ. ಇಲ್ಲಿ ದೊರೆತ ಕಬ್ಬಿಣದ ಉಪಕರಣಗಳು ಇತಿಹಾಸಪೂರ್ವ ಕಾಲದ ಮಾನವನು ದಕ್ಷಿಣ ಭಾರತದಲ್ಲಿ ಬಹು ಹಿಂದೆಯೇ ಅಂದರೆ ಕ್ರಿಸ್ತ. ಪೂರ್ವ ೧೨೦೦ರ ಸುಮಾರಿಗೆ ಕಬ್ಬಿಣದ ಬಳಕೆಯನ್ನು ಅರಿತಿದ್ದನೆಂಬುದಕ್ಕೆ ಸಾಕ್ಷಿ ಹೇಳುತ್ತವೆ.

ಮೋಟೆಬೆನ್ನೂರು(ಬ್ಯಾಡಗಿ ತಾ.) ಬಳಿಯ ಬಾಚಿಗುಡ್ಡದಲ್ಲಿಯ ಕಲ್ಲಿನ ಆಯುಧಗಳು ಮತ್ತು ಹಿಂದಿನ ಕಾಲದ ಸಂಸ್ಕೃತಿಗಳ ಮಡಿಕೆ, ಕುಡಿಕೆಗಳೂ ದೊರೆತಿವೆ. ಸವಣೂರು ತಾಲೂಕಿನ ಜಲ್ಲಾಪುರವನ್ನು ಶಿಲಾಯುಗದ ನೆಲೆಯೆಂದು ಗುರುತಿಸಲಾಗಿದೆ. ಹಾನಗಲ್ಲು ತಾಲೂಕು ವರ್ದಿಯಲ್ಲಿ ಹಳೇ ಶಿಲಾಯುಗದ ಸಲಕರಣೆಗಳು ದೊರೆತಿವೆ. ರಾಣೆಬೆನ್ನೂರು ತಾಲೂಕು ನದಿಹರಳಹಳ್ಳಿಯಲ್ಲಿ ಸೂಕ್ಷ್ಮ ಶಿಲಾಯುಗದ ಅವಶೇಷಗಳು ದೊರೆತಿವೆ. ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯ ಮಡಿಕೆ ಕುಡಿಕೆಗಳು ಹಳ್ಳೂರು, ಪುರದಕೇರಿ, ಹಾದರಗೇರಿ(ಹರನಗಿರಿ)ಯಲ್ಲಿ ಲಭ್ಯವಾಗಿವೆ. ಈ ಮಡಿಕೆಗಳ ಮೇಲೆ ತಿಳಿ ಬಿಳಿಬಣ್ಣದ ಚಿತ್ರಗಳಿವೆ. ಅಲ್ಲದೇ ಈ ಜನರಿಗೆ ಕುದುರೆ ಅಪರಿಚಿತವಾಗಿತ್ತು ಎಂಬುದು ತಿಳಿಯುತ್ತದೆ"[೧]

"ಬೃಹತ್ ಶಿಲಾಯುಗದ ಜನರ ಕಲ್ಮನೆಗಳು, ಶಿಲಾವೃತ್ತಗಳು ಈ ಜಿಲ್ಲೆಯಲ್ಲಿ ಕಂಡು ಬಂದಿವೆ. ರಾಣೆಬೆನ್ನೂರು ತಾಲೂಕು ಅಸುಂಡಿ, ಕೋಟಿಹಾಳ, ಕೂಸನೂರು ಹಾಗೂ ಮಲಕನಹಳ್ಳಿಗಳಲ್ಲಿಯೂ, ಹಾವೇರಿ ತಾಲೂಕು ಬೆನಕನಹಳ್ಳಿ ಅಗಡಿಗಳಲ್ಲಿಯೂ, ಬ್ಯಾಡಗಿ ತಾಲೂಕು ಮೋಟೆಬೆನ್ನೂರು, ಕದರಮಂಡಲಗಿಗಳಲ್ಲಿ ಇಂಥ ಗೋರಿಗಳಿವೆ"[೨] ಇವುಗಳನ್ನು ಸ್ಥಳೀಯರು ಪಾಂಡವರ ಕಟ್ಟೆ, ಸಿದ್ದರಕಟ್ಟೆ ಎಂದು ಕರೆಯುತ್ತಾರೆ.

**ಪೌರಾಣಿಕ ಹಿನ್ನೆಲೆ**

ಹಾವೇರಿ ಜಿಲ್ಲೆಯ ಅನೇಕ ಗ್ರಾಮಗಳು ಊರ ಹೆಸರಿನೊಂದಿಗೆ ರಾಮಾಯಣ, ಮಹಾಭಾರತಗಳ ಪೌರಾಣಿಕ ವ್ಯಕ್ತಿಗಳೊಡನೆ ಇಲ್ಲವೆ ಘಟನೆಗಳೊಂದಿಗೆ ತಳುಕು ಹಾಕಿಕೊಂಡಿವೆ. "ಹಾನಗಲ್ಲು ಮಹಾಭಾರತ ಕಥೆಯಲ್ಲಿ ಬರುವ ವಿರಾಟರಾಜನ ರಾಜಧಾನಿಯೆಂದು ೧೨ನೇ ಶತಮಾನದ ಶಾಸನಗಳಲ್ಲಿ ವ್ಯಕ್ತವಾಗಿದೆ. ಹಾವೇರಿಯ ಪಟ್ಟಣವನ್ನು ನಳ ಮಹಾರಾಜನು ಸ್ಥಾಪಿಸಿದನೆಂದು ಹಾವೇರಿಯ ಶಾಸನ ಉಲ್ಲೇಖಿಸುತ್ತದೆ. ಹಿರೇಕೆರೂರು ತಾಲೂಕು ಕಡೂರು ಗ್ರಾಮದ ಒಂದು ಶಾಸನವು ಊರ ಹೆಸರಿನ ಬಗೆಗೆ ಪೌರಾಣಿಕ ಕಥೆಯೊಂದನ್ನು ನಮ್ಮೆದುರು ಇಡುತ್ತದೆ. ಪರಶುರಾಮ ತನ್ನ ತಂದೆ ಜಮದಗ್ನಿ ಮಹರ್ಷಿಗಳ ಸಾವಿಗೆ ಕಾರಣನಾದ ಸಹಸ್ರಾರ್ಜುನ (ಕಾರ್ತ್ಯವೀರ)ನ ಸಹಸ್ರ ತೋಳುಗಳನ್ನು ಇಲ್ಲಿಯೇ ಕಡಿದು ಹಾಕಿದ್ದರಿಂದ ಕಡೂರು ಆಯಿತಂತೆ. ಹಾನಗಲ್ಲು ತಾಲೂಕಿನ 'ದಶರಥಕೊಪ್ಪ' ಶ್ರೀರಾಮಚಂದ್ರನ ತಂದೆಯ ಹೆಸರನ್ನು ಹೊಂದಿದೆ. ಅಲ್ಲದೆ ಈ ಊರಲ್ಲಿ ದಶರಥ ಮಹಾರಾಜನ ದೇವಾಲಯವೂ ಇದೆ. ಹಾನಗಲ್ಲು ತಾಲೂಕಿನ 'ತುರುಬಿಗುಡ್ಡ'ವು ವಿರಾಟರಾಯನ ತುರುಮಂದೆಯನ್ನು ಮೇಯಿಸಲು ಈ ಗುಡ್ಡದಲ್ಲಿ ತರುಬುತ್ತಿದ್ದುದರಿಂದ ತರುಬಿಗುಡ್ಡವು ಮುಂದೆ ತುರುಬಿಗುಡ್ಡವಾಯಿತಂತೆ. ಹಿರೇಕೆರೂರು ತಾಲೂಕು ಸೀತಿಕೊಂಡ ಶ್ರೀರಾಮಚಂದ್ರನು ಸೀತಾದೇವಿಯ ಸತ್ವಪರೀಕ್ಷೆಗೆ ಇಲ್ಲಿ 'ಅಗ್ನಿಕುಂಡ' ನಿರ್ಮಿಸಿದ್ದನಂತೆ. ಆ 'ಸೀತಾಕೊಂಡ'ವೇ 'ಸೀತಿಕೊಂಡ' ಎಂದಾಯಿತು. ಇದಕ್ಕೆ ಸಮೀಪದ ಶ್ರೀರಾಮನಕೊಪ್ಪ ಗ್ರಾಮವು ಶ್ರೀರಾಮನು ಬಂದುಹೋದ ಹಳ್ಳಿಯಂತೆ. ಇಂತಹ ಐತಿಹ್ಯಗಳು ಹಾವೇರಿ ಜಿಲ್ಲೆಯ ಒಂದೊಂದು ತಾಲೂಕಿನಲ್ಲಿಯೂ ಸಾಕಷ್ಟು ಕಂಡುಬರುತ್ತವೆ.

ನವಾಬರ ಆಡಳಿತದಲ್ಲಿದ್ದ ಫಕೀರನಂದಿಹಳ್ಳಿ ಗ್ರಾಮದಲ್ಲಿ ಫಕೀರರು ಹಾಗೂ ಸೂಫಿ ಸಂತರು ಓಡಾಡಿದ ಬಗ್ಗೆ ಐತಿಹ್ಯಗಳಿವೆ.[3] ಹೀಗೆ ಜಿಲ್ಲೆಯ ಹತ್ತು ಹಲವು ಗ್ರಾಮಗಳು ಒಂದೊಂದು ರೀತಿಯಲ್ಲಿ ಪೌರಾಣಿಕ ಹಿನ್ನೆಲೆಯನ್ನೊಳಗೊಂಡಿವೆ.

**ಇತಿಹಾಸ ಪೂರ್ವಕಾಲ**

ಪ್ರಾಚೀನ ಕಾಲದಲ್ಲಿ ಕುಂತಳ ದೇಶದ ಭಾಗವಾಗಿದ್ದ ಈ ಜಿಲ್ಲೆಯು ಹಿರೇಕೆರೂರು ತಾಲೂಕಿನ ಹಳ್ಳೂರು ಮತ್ತು ಕುಡಪಲಿ ಗ್ರಾಮಗಳು ಇತಿಹಾಸ ಪೂರ್ವಕಾಲಕ್ಕೆ ಸೇರಿದವುಗಳಾಗಿವೆ. ಪ್ರಾಗೈತಿಹಾಸಿಕ ಕಾಲಕ್ಕೆ ಸಂಬಂಧಿಸಿದಂತೆ ೧೯೬೦ರ ದಶಕದಲ್ಲಿ ಹಳ್ಳೂರಿನಲ್ಲಿ ನಡೆದ ಉತ್ಖನನದಲ್ಲಿ ಮಾನವನು ಮೊದಲ ಬಾರಿಗೆ ರಾಗಿಯನ್ನು ಬಳಸಿರುವುದಕ್ಕೆ ಸಾಕ್ಷಾಧಾರಗಳು ದೊರೆತಿವೆ. ಈ ನೆಲೆಯ ಕಾಲವನ್ನು ಕ್ರಿ.ಪೂ. ೧೦೦೦ ವರ್ಷಗಳೆಂದು ನಿರ್ಧರಿಸಲಾಗಿದೆ. ಹಿರೇಕೆರೂರು ತಾಲೂಕಿನ ತಡಕನಹಳ್ಳಿ, ಮೇದೂರು ಕಮಲಾಪುರ ಹಾಗೂ ಹಾನಗಲ್ಲು ತಾಲೂಕಿನ ಗುಡಗುಡಿ ಗ್ರಾಮಗಳಲ್ಲಿ ಬೃಹತ್ ಶಿಲಾಯುಗದ ಕಾಲಕ್ಕೆ ಸೇರಿದ ಅವಶೇಷಗಳು ಕಂಡುಬಂದಿವೆ.

"ಬೃಹತ್ ಶಿಲಾಯುಗದ ಜನರು ಭಾರಿ ಗಾತ್ರದ ಕಲ್ಲು ಚಪ್ಪಡಿಗಳನ್ನು ಬಳಸಿ ಮೇಜಿನಂತೆ ಕಾಣುವ ಕಲ್ಮನೆಗಳನ್ನು ಹಾಗೂ ಶಿಲಾವೃತ್ತಗಳನ್ನು ರಚಿಸಿರುವುದು ಜಿಲ್ಲೆಯ ಹಲವು ಗ್ರಾಮಗಳಲ್ಲಿ ಕಂಡುಬಂದಿವೆ. ಹಿರೇಕೆರೂರು ತಾಲೂಕಿನ ನೆಶ್ವಿ ಗ್ರಾಮದಲ್ಲಿ"[4] ಬೃಹತ್ ಶಿಲಾಯುಗದ ಎರಡು ಸಮಾಧಿಗಳು ಕಂಡುಬರುತ್ತವೆ. ಇವು ೨೦೦೦ ವರ್ಷಗಳ ಹಿಂದಿನವು ಎಂದು ಗೊತ್ತಾಗುತ್ತದೆ"[5] ಹೀಗೆ ಇತಿಹಾಸ ಪೂರ್ವಕಾಲದ ಇತಿಹಾಸಕ್ಕೆ ಆಧಾರಗಳನ್ನು ಜಿಲ್ಲೆಯಲ್ಲಿ ಕಾಣಬಹುದಾಗಿದೆ.

ಹಾವೇರಿ ಜಿಲ್ಲೆ ವಿವಿಧ ಆಳರಸರ ಆಳ್ವಿಕೆಗೆ ಒಳಪಟ್ಟಿರುವುದನ್ನು ಹಲವು ಆಧಾರಗಳಿಂದ ಈ ಕೆಳಗಿನಂತೆ ವಿವರಿಸಲಾಗಿದೆ.

**ಶಾತವಾಹನರು** : ಈ ಅರಸು ಮನೆತನಕ್ಕೆ ಹಾವೇರಿ ಜಿಲ್ಲೆಯ ಪ್ರದೇಶಗಳು ಒಳಪಟ್ಟಿರುವ ಕೆಲವು ಪ್ರದೇಶಗಳನ್ನು ಗಮನಿಸಬಹುದು. ಇತಿಹಾಸ ಪ್ರಾಧ್ಯಾಪಕರಾದ ಶ್ರೀನಿವಾಸ ಪಾಡಿಗಾರ ಅವರು "ಶಾತವಾಹನರ ಕಾಲದಲ್ಲಿ ಅನೇಕ ಸಂಖ್ಯೆಯಲ್ಲಿ ನಗರಗಳು ಅಸ್ತಿತ್ವಕ್ಕೆ ಬಂದವು. ಹಾವೇರಿ ಜಿಲ್ಲೆಯ ಸಂಗೂರು, ಹೊಸರಿತ್ತಿ, ಹಳ್ಳಿಹಾಳ, ತಡಸ, ಸಿಡೇನೂರು, ಆಣೂರು ಕದರಮುಂಡಲಗಿ, ಮೋಟೆಬೆನ್ನೂರು, ಹೊನ್ನತ್ತಿ, ಮುದೇನೂರು, ಕೂನಬೇವು, ಇಟಗಿ ನಿಟ್ಟೂರು, ಶಂಕರನಹಳ್ಳಿ ಮುಂತಾದ ಕಡೆ ಶಾತವಾಹನರ ಕಾಲದ ಅವಶೇಷಗಳು ಕಂಡುಬರುತ್ತವೆ" ಎಂದು ಉಲ್ಲೇಖಿಸಿದ್ದಾರೆ.

ಗ್ರೀಕ್ ಭೂಗೋಳ ತಜ್ಞ ಟಾಲಮಿ(ಕ್ರಿ.ಶ. ೧೫೦) ಉಲ್ಲೇಖಿಸುವ ಸ್ಥಳಗಳಲ್ಲಿ ಜಿಲ್ಲೆಯ ಅಕ್ಕಿಆಲೂರು, ಮುಳಗುಂದ ಸೇರಿದ್ದು, ಅವು ಆಗ ಭಾರತ ಮತ್ತು ರೋಮ್‌ಗಳ ಮಧ್ಯದ ವ್ಯಾಪಾರದಲ್ಲಿ ಈ ಜಿಲ್ಲೆಯ ಪಾತ್ರ ಕಾಣಬಹುದು. ಮತ್ತು ಹಾನಗಲ್ಲು ತಾಲೂಕಿನ ಅಕ್ಕಿಆಲೂರಲ್ಲಿ

ರೋಮನ್ ನಾಣ್ಯಗಳು ದೊರೆತಿರುವುದು ಇದಕ್ಕೆ ಪೂರಕವಾಗಿದೆ"[೬] ಎಂಬುದನ್ನು ಗಮನಿಸಬಹುದಾಗಿದೆ.

**ಕದಂಬರು :** "ಬನವಾಸಿಯನ್ನು ರಾಜಧಾನಿ ಮಾಡಿಕೊಂಡು ಕುಂತಳನಾಡನ್ನು ಆಳಿದವರು ಕದಂಬರು. ಇವರಿಗೆ ಸಂಬಂಧಿಸಿದಂತೆ ಮೂರು ತಾಮ್ರಪಟಗಳು ದೇವಗಿರಿ(ಹಾವೇರಿ ತಾ.)ಯಲ್ಲಿಯೂ, ಒಂದು ತಾಮ್ರಪಟ ಬ್ಯಾಡಗಿ ತಾಲೂಕಿನ ಮತ್ತೂರಿನಲ್ಲಿಯೂ ದೊರೆತಿವೆ.

ಮಯೂರವರ್ಮನ ನಂತರ ಆಳಿದ ಅರಸ ಕಾಕುತ್ಸವರ್ಮ; ಇವನ ಮೂರನೆಯ ಮಗ ೧ನೇ ಕೃಷ್ಣವರ್ಮನು ಅಣ್ಣನಿಂದ ದೂರವಾಗಿ ಪ್ರತ್ಯೇಕ ರಾಜ್ಯ ಆಡಳಿತ ಪ್ರಾರಂಭಿಸಿದನು. ಇದಕ್ಕಾಗಿ ಅವನು ಆರಿಸಿಕೊಂಡ ರಾಜಧಾನಿ ಸ್ಥಳ ಹಾವೇರಿ ತಾಲೂಕಿನ ದೇವಗಿರಿ".[೭] ಈ ಊರಿಗೆ ತ್ರಿಪರ್ವತವೆಂದೂ ಹೆಸರಿದೆ.

**ಬಾದಾಮಿ ಚಾಲುಕ್ಯರು :** "ಕ್ರಿ.ಶ. ೫೭೮ರಿಂದ ೭೫೭ರವರೆಗೆ ಕನ್ನಡ ನಾಡನ್ನು ಆಳಿದ ಬಾದಾಮಿ ಚಾಲುಕ್ಯರು ಬಹು ಪ್ರತಿಷ್ಠಿತ ಪ್ರಾಚೀನ ಅರಸು ಮನೆತನ. ಈ ರಾಜಮನೆತನಕ್ಕೆ ಸಂಬಂಧಿಸಿದ ತಾಮ್ರಪಟಗಳ ದಾಖಲೆಗಳು ಹಾವೇರಿ ಜಿಲ್ಲೆಯ ಸವಣೂರು, ಶಿಗ್ಗಾವಿ, ಅಕ್ಕಿಆಲೂರುಗಳಲ್ಲಿ ದೊರೆತಿವೆ. ಉಳಿದೆಡೆಗಳಲ್ಲಿ ಸುಮಾರು ೧೭ ಶಾಸನಗಳು ಲಭಿಸಿದ್ದು ಇತಿಹಾಸದ ಮೇಲೆ ಬೆಳಕು ಚೆಲ್ಲಿವೆ. ಹಾವೇರಿ ತಾಲೂಕಿನ ಗಣಜೂರು ಎಂಬ ಚಿಕ್ಕ ಗ್ರಾಮದಲ್ಲಿ ಬಾದಾಮಿ ಚಾಲುಕ್ಯರ ವಿಕ್ರಮಾದಿತ್ಯನ ಒಂದು, ವಿಜಯಾದಿತ್ಯನ ಒಂದು ಶಾಸನ ಮತ್ತು ವಿಜಯಾದಿತ್ಯನ ಇನ್ನೊಂದು ಶಾಸನ ಶಿಗ್ಗಾವಿ ತಾಲೂಕಿನ ಬನ್ನಿಕೊಪ್ಪದಲ್ಲಿದೆ."[೮]

ಹರಿಹರದ ಒಂದು ತಾಮ್ರಶಾಸನವು "ಕ್ರಿ.ಶ. ೬೯೫ರಲ್ಲಿ ಬಾದಾಮಿ ಚಾಲುಕ್ಯರ ಚಕ್ರವರ್ತಿ ವಿನಯಾದಿತ್ಯನು ಹಾವೇರಿ ತಾಲೂಕು ಕರ್ಜಗಿಯಲ್ಲಿ ಬೀಡುಬಿಟ್ಟಿದ್ದನೆಂದು ಹೇಳುತ್ತದೆ. ಈ ಅರಸು ಮನೆತನಕ್ಕೆ ಸಂಬಂಧಿಸಿದ ೩ ಶಾಸನಗಳು ಈ ತಾಲೂಕಿನಲ್ಲಿವೆ. ೨ನೆಯ ವಿಕ್ರಮಾದಿತ್ಯನ (ಸುಮಾರು ಕ್ರಿ.ಶ.೮) ಶಿಡೇನೂರು ಶಾಸನ ಮಹತ್ವದ್ದು; ಚಿಕ್ಕನಂದಿಹಳ್ಳಿ ಗ್ರಾಮವೊಂದರಲ್ಲಿಯೇ ಇವರ ೨ ಶಾಸನಗಳಿವೆ. ಇವು ಬಾದಾಮಿ ಚಾಲುಕ್ಯರ ಕೊಕ್ಕುಳಿ ವಿಕ್ರಮಾದಿತ್ಯನಿಗೆ (ಸುಮಾರು ಕ್ರಿ.ಶ.೮) ಸೇರಿದುವು. ಮುಳಗುಂದ ನಾಡನ್ನಾಳುವ ದೋಸಿರಾಜಿಗರ ಸೇನಾವರಸನಿಂದ ದಾನ ಹಾಗೂ ಕಣ ಅರ್ಕದಿ ಎಂಬುವನ ಮರಣವೊಂದರ ವಿಷಯ ಮತ್ತು ಇನ್ನೊಂದು ಕಿರಿಯಣ ಎಂಬುವನ ಮರಣದ ಪ್ರಸ್ತಾಪಿಸಿದೆ."[೯]

**ರಾಷ್ಟ್ರಕೂಟರು :** "ರಾಷ್ಟಕೂಟರನ್ನು ಕುರಿತ ಶಾಸನಗಳು ಕರ್ನಾಟಕದಲ್ಲಿ ಸುಮಾರು ೭೦೦ ಇರಬಹುದಾದರೆ ಹಾವೇರಿ ಜಿಲ್ಲೆಯೊಂದೇ ೧೦೦ ಶಾಸನಗಳನ್ನು ಹೊಂದಿದ್ದು, ಈ ಮನೆತನದ ಇತಿಹಾಸಕ್ಕೆ ಆಧಾರ ಒದಗಿಸುವ ಮೂಲಕ ದಾಖಲೆ ಸ್ಥಾಪಿಸಿದೆ. ರಾಷ್ಟ್ರಕೂಟರ ಆರಂಭಿಕ ಅರಸ ಅಕಾಲವರ್ಷ ೧ನೇ ಕೃಷ್ಣನನ್ನು ಕುರಿತ ದಾಖಲೆಗಳು ವಿರಳ. ಅದರಲ್ಲಿ

ಕನ್ನಡ ಶಾಸನಗಳು ತೀರ ವಿರಳ; ಆದರೆ ಈ ಜಿಲ್ಲೆಯ ಸವಣೂರು ತಾಲೂಕಿನ ಹತ್ತಿಮತ್ತೂರು ಗ್ರಾಮದ ಕನ್ನಡ ಶಾಸನವನ್ನು ಕಾಣಿಕೆಯಾಗಿ ನೀಡಿರುವುದು ಅಭಿಮಾನದ ಸಂಗತಿಯಾಗಿದೆ.

ರಾಷ್ಟ್ರಕೂಟರ ಮಾಂಡಲಿಕ ಅರಸರಲ್ಲಿ ಸುಪ್ರಸಿದ್ಧರಾದವರು ಮಾಟೂರು ಹಾಗೂ ಚಲ್ಲಕೇತನ ವಂಶದವರು. ಇವರೀರ್ವರನ್ನು ಕುರಿತು ಇಲ್ಲಿಯ ಶಾಸನಗಳು ವಿವರ ಒದಗಿಸುತ್ತವೆ. ಈ ವಂಶದ ಮೂಲಪುರುಷ ಬಂಕೆಯ ಚಕ್ರವರ್ತಿಗೆ ಬಲಗೈಯಾಗಿದ್ದನು. ಈತನು ಬಂಕಾಪುರದವನು. ಈ ವಂಶದವರು ಬಂಕಾಪುರವನ್ನು ರಾಜಧಾನಿ ಮಾಡಿಕೊಂಡು ಬನವಾಸಿ ಮಂಡಲದ ಆಡಳಿತ ನಡೆಸಿದರು."[೧೦] "ಅಮೋಘವರ್ಷನ ಕಾಲದ ಶಿಗ್ಗಾವಿ ತಾಲೂಕು ಬರಡೂರು ಶಾಸನದಲ್ಲಿ ಬನವಾಸಿ– ೧೨೦೦೦ರನ್ನು ಇಂದ್ರ(ಬೇರೆ ಶಾಸನಗಳಲ್ಲಿ ಇಂದಪ್ರಯ್ಯ) ಆಳುತ್ತಿದ್ದು ಕಿಮುಳೆಯಲ್ಲಿ ಇದ್ದ ಅಗ್ರಹಾರದ ಉಲ್ಲೇಖವಿದೆ:"[೧೧]

**ಕಲ್ಯಾಣ ಚಾಲುಕ್ಯರು** : ಈ ಅರಸು ಮನೆತನಕ್ಕೆ ಸಂಬಂಧಿಸಿದಂತೆ ಒಂದು ಶಾಸನ ಹಿರೇಕೆರೂರು ತಾಲೂಕಿನ ಚಿಕ್ಕೇರೂರಿನ ಬಳರಿ ದೇವಾಲಯದ ಮುಂದಿದೆ. "ಕಾಲ ಕ್ರಿ.ಶ. ೯೯೫, ನೂರ್ಮಡಿ ತೈಲಪನು ಉತ್ತರದ ಮಾಳವರ ಪರಮಾರರ ದೊರೆ ಮುಂಜರಾಜನ ಮೇಲೆ ಏರಿಹೋಗಿ ಜಯಿಸಿದ ವಿಷಯವಿದೆ. ಕರ್ನಾಟಕದಲ್ಲಿ ಈ ವಿಷಯ ಹೇಳುವ ಶಾಸನ ಇದೊಂದೇ ಆಗಿದೆ."[೧೨] ಜಿಲ್ಲೆಯಲ್ಲಿ ಚಾಳುಕ್ಯರ ಮುಖ್ಯ ಪ್ರಾಂತಗಳೆಂದರೆ– "ಪಾನುಂಗಲ್–೫೦೦(ಹಾನಗಲ್), ಬಾಸವೂರು–೧೪೦(ಬಾಸೂರು), ರಟ್ಟಪಳ್ಳಿ–೭೦ (ರಟ್ಟೀಹಳ್ಳಿ), ಇಟಗಿ–೩೦(ಇಟಗಿ) ಹೊನ್ನವತ್ತಿ–೧೨(ಹೊನ್ನತ್ತಿ), ಬೆಣ್ಣೆವೂರು–೧೨ (ಮೋಟೆಬೆನ್ನೂರು), ಬಿನ್ನವೂರು–೧೨(ರಾಣೆಬೆನ್ನೂರು)ಹೀಗೆ ಉಪ ವಿಭಾಗಗಳು"[೧೩] ಜಿಲ್ಲೆಯಲ್ಲಿ ಉಲ್ಲೇಖವಾಗಿವೆ.

**ಕಲಚೂರಿಗಳು** : ಕಲಚೂರಿಗಳು ಕಲ್ಯಾಣಿ ಚಾಲುಕ್ಯರ ಮಾಂಡಲಿಕರು ಹಾಗೂ ಸಂಬಂಧಿಗಳು. ಇವರು ೧೧೬೨ರಲ್ಲಿ ಅಧಿಕಾರಕ್ಕೆ ಬಂದರು. ಇವರ ಆಳ್ವಿಕೆಯಲ್ಲಿ ಜೈನರ ವಿರುದ್ಧ ವಾದನಡೆಸಿ ಗೆದ್ದ ವೀರಶೈವ "ಏಕಾಂತ ರಾಮಯ್ಯನಿಗೆ ಜಯಪತ್ರವನ್ನು ಬಿಜ್ಜಳನು ಕೊಟ್ಟುದಾಗಿ ಅಬಲೂರು ಶಾಸನ ಹೇಳುತ್ತದೆ. ಹಾಗೂ ಮಂತಗಿ(ಹಾನಗಲ್ಲ ತಾ.)ಯಲ್ಲಿ ಕಲಿದೇವ ಸೆಟ್ಟಿಯು ಬಿಜ್ಜಳನ ಕಾಲದಲ್ಲಿ ಬಸದಿಯನ್ನು ಸ್ಥಾಪಿಸಿ ೨೪ ತೀರ್ಥಂಕರರನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ. ಬಿಜ್ಜಳನ ಕೊನೆಯ ಶಾಸನ ೧೧೬೮ರಲ್ಲಿ ಹಿರೇಕೆರೂರು, ತಾ. ಎಮ್ಮಿಗನೂರಲ್ಲಿ ಕಾಮಗಾವುಂಡ ರಾಮೇಶ್ವರ ದೇವಾಲಯ ನಿರ್ಮಾಣ ಮಾಡಿದ"[೧೪] ವಿವರವಿದೆ. ಈ ವಂಶದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಯನ್ನೇ ಮಾಡಿದ ಬಸವಣ್ಣನ ನೇತೃತ್ವದಲ್ಲಿ ಅಂದಿನ ಸಾಮಾಜಿಕ ವ್ಯವಸ್ಥೆಯ ದೋಷಗಳನ್ನು ತೊಳೆದು ಹೊಸ ರೂಪ ನೀಡಲು ಯತ್ನಿಸಿದ್ದು ವಿಶೇಷವಾಗಿದೆ ಅಂದಿನ ಕ್ರಾಂತಿಯಿಂದ ಇಂದಿಗೂ ಅದರ ಪರಿಣಾಮ ಈ ಪ್ರದೇಶಗಳ ಮೇಲೆ ಆಗಿರುವುದನ್ನು ಗಮನಿಸಬಹುದಾಗಿದೆ.

**ಹಾನಗಲ್ಲ ಕದಂಬರು** : ಇವರು ಆರಂಭದಲ್ಲಿ "ರಾಷ್ಟ್ರಕೂಟರ ಕಾಲದಲ್ಲಿ ಬನವಾಸಿಯಿಂದ ಆಳ್ವಿಕೆ ಮಾಡುತ್ತಿದ್ದು ಮುಂದೆ ಬನವಾಸಿ-೧೨೦೦೦, ಪ್ರಾಂತಕ್ಕೆ ಇವರ ಮೇಲೆ ಅಧಿಕಾರ ಚಲಾಯಿಸಲು ಒಬ್ಬ ಪ್ರತ್ಯೇಕ ಮಂಡಳೇಶ್ವರನನ್ನು ಬಳ್ಳಿಗಾವಿ(ಶಿವಮೊಗ್ಗ ಜಿ.)ಯಿಂದ ನೇಮಿಸಿದಾಗ, ಅದಕ್ಕೆ ಒಳಪಟ್ಟ ಪಾನುಂಗಲ್-೫೦೦ರ ಮೇಲೆ ಹೆಚ್ಚಿನ ಅಧಿಕಾರ ಹೊಂದಿದರು. ೬ನೇ ವಿಕ್ರಮಾದಿತ್ಯನು ೧೦೭೫ರಲ್ಲಿ ತೈಲನ ಚಿಕ್ಕಪ್ಪ ಶಾಂತಯದೇವನಿಗೆ ಅಧಿಕಾರ ಒಪ್ಪಿಸಿದ(ನೀರಲಗಿ ಶಾಸನ) ಇವನೊಂದಿಗೆ ಇವನ ಮಗ ತೈಲನು ಬನವಾಸಿ, ಹಾನಗಲ್‌ಗಳನ್ನು ಆಳುತ್ತಿದ್ದನು. ಶಾಂತಿವರ್ಮ ಮುಂದೆ ಬಂಕಾಪುರದಲ್ಲಿ ಇರುತ್ತಿದ್ದನು."[೧೫]

**ಗುತ್ತಲದ ಗುತ್ತರು** : ಕಲ್ಯಾಣಿ ಚಾಲುಕ್ಯರ ಮಾಂಡಲಿಕರಾಗಿ, ಕೆಲಕಾಲ ಸ್ವತಂತ್ರರಾಗಿ, ನಂತರ "ದೇವಗಿರಿಯ ಸೇವಣರ ಮಾಂಡಲಿಕರಾಗಿ ೧೨ನೇ ಶತಮಾನದ ಆದಿಭಾಗದಿಂದ ೧೩ನೇ ಶತಮಾನದ ಕೊನೆಯವರೆಗೆ ಹಾವೇರಿ ತಾಲೂಕಿನ ಗುತ್ತವೊಳಲ್ ಅಥವ ಗುತ್ತಲದಿಂದ ಆಳಿದವರು ರಾಜವಂಶ ಗುತ್ತರು. ಮಗಧದ ಗುಪ್ತರ ಉತ್ತರಾಧಿಕಾರಿಗಳೆಂದೂ, ಉಜ್ಜಯಿನೀ ಪುರವರಾಧೀಶ್ವರರೆಂದು ತಮ್ಮನ್ನು ತಾವು ಚಂದ್ರಗುಪ್ತಾನ್ವಯರೆಂದೂ ಕರೆದುಕೊಂಡ ಇವರ ಮೂಲಪುರುಷ ಮಾಗುಪ್ತ (ಮಹಾಗುಪ್ತ), ಹಾಗೂ ಆತನ ಮಗ ಗುತ್ತ ಎಂದು ಅವರ ಶಾಸನಗಳು ಹೇಳುತ್ತವೆ. ಬಹುಶಃ ಇವನು ಕಲ್ಯಾಣದ ಒಂದನೇ ಸೋಮೇಶ್ವರನ ಕಾಲದಲ್ಲಿ ಅಧಿಕಾರ ಹೊಂದಿದ್ದು ಹಾನಗಲ್ಲ ಕದಂಬರಿಂದ ಕೆಲವೊಂದು ಪ್ರದೇಶಗಳನ್ನು ಗೆದ್ದುಕೊಂಡಿರಬೇಕು; ಅವನ ಮಗ ಮಲ್ಲಿದೇವನೇ ಖಚಿತವಾದ ತಾರೀಖು ಉಳ್ಳ(೧೧೧೫) ಚೌಡದಾನಪುರ ಶಾಸನದಲ್ಲಿ ಉಲ್ಲೇಖಿತವಾದ ಅರಸನಾಗಿದ್ದು ಇವನು ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಮಾಂಡಲಿಕ(ಬನವಾಸಿ-೧೨೦೦೦ದ ಅಧಿಕಾರಿ) ಗೋವಿಂದರಸನ ಅಧೀನ ನಾಗಿದ್ದನೆಂದು ತಿಳಿಯುತ್ತದೆ. ಇವನ ಅಧಿಕಾರಿಯಾಗಿದ್ದ ಜಟಾಚೋಳನಿಂದ ಚೌಡದಾನಪುರ ಮುಕ್ತೇಶ್ವರ ದೇವಾಲಯ ನಿರ್ಮಾಣವಾಯಿತು(೧೧೨೦). ಮಲ್ಲಿದೇವನ ಸೋದರ ಜೋಯಿದೇವನು ಇದೇ ಕಾಲದಲ್ಲಿ ಬೆಳಹುಗೆ-೭೦(ಬೆಳವಿಗೆ), ಹೊನ್ನತ್ತಿ-೧೨(ರಾಣೆಬೆನ್ನೂರು ಹತ್ತಿರ) ಹಾಗೂ ಬೆಣ್ಣೆಊರು-೧೨(ಮೋಟೆಬೆನ್ನೂರು)ಗಳ ಆಡಳಿತ ನೋಡಿಕೊಳ್ಳುತ್ತಿದ್ದ. ಮಹಾಮಂಡಲೇಶ್ವರ ಎಂದೇ ಶಾಸನಗಳು ಬರೆದಿರುವ ಜೋಯಿದೇವನ ಮಂತ್ರಿಗಳಾದ ದೇಕಣ್ಣ ಮತ್ತು ನಾಕಣ್ಣ ಎಂಬುವವರು ಚಾಮೇಶ್ವರ ದೇವಾಲಯಕ್ಕೆ ಪನ್ನವರ್ತಿ(ಹೊನ್ನತಿ, ರಾಣೆಬೆನ್ನೂರು ತಾ.) ಗ್ರಾಮವನ್ನು ದಾನ ಮಾಡಿದ ವಿಷಯವನ್ನು ಹೊನ್ನತ್ತಿ ಶಾಸನ ಉಲ್ಲೇಖಿಸುತ್ತದೆ(೧೧೨೪).

**ನೂರಂಬಾಡದ ಕಡಂಬರು** : ಶಾಸನಗಳಲ್ಲಿ ತಮ್ಮನ್ನು 'ಕಡಂಬ' ಎಂದೇ ಕರೆದುಕೊಂಡಿರುವ ನೂರಂಬಾಡದ ಈ ಮಾಂಡಲಿಕರು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ತಲೆಯೆತ್ತಿ ರಟ್ಟಪಳ್ಳಿ-೭೦(ಹಿರೇಕೆರೂರು ತಾ.) ಹಾಗೂ ಇಟ್ಟಗೆ-೩೦(ರಾಣೆಬೆನ್ನೂರು ತಾ.) ಹೀಗೆ ೧೦೦ ಗ್ರಾಮಗಳನ್ನು ಒಳಗೊಂಡ ಪ್ರದೇಶವನ್ನು ಆಳುತ್ತಿದ್ದರು. ರಟ್ಟಹಳ್ಳಿ ಇವರ ಆಡಳಿತ ಕೇಂದ್ರವಾಗಿತ್ತು. ಚಾಲುಕ್ಯ ಸಾಮ್ರಾಟ ೨ನೇ ಜಯಸಿಂಹ ಯಾವುದೋ ಶತ್ರುವನ್ನು ಸೋಲಿಸಿ ಶತ್ರುವಿನ ಒಂದು

ಆನೆಯನ್ನು ವಶಪಡಿಸಿಕೊಂಡು ಅದನ್ನು ಚಕ್ರವರ್ತಿಗೆ ನೀಡಿದ್ದರಿಂದ ಈ ನೂರಂಬಾಡದ ಆಡಳಿತವನ್ನು ಬೀರದೇವನಿಗೆ ನೀಡಲಾಯಿತೆಂದು ಕ್ರಿ.ಶ. ೧೧೭೪ರ ಹಿರೇಕೆರೂರು ತಾಲೂಕು ಕಣವಿಸಿದ್ದಗೇರಿ ಶಾಸನ (ಕ.ಇ.೬.ನಂ.೭)ದಿಂದ ತಿಳಿಯುತ್ತದೆ.

ಹೊನ್ನಬೊಮ್ಮಿಸೆಟ್ಟಿ ಎಂಬುವವನು ರಟ್ಟಿಹಳ್ಳಿ ಕಡಂಬೇಶ್ವರ ದೇವಾಲಯದಲ್ಲಿ ಮಲ್ಲೇಶ್ವರ ಮತ್ತು ರಾಜೇಶ್ವರ ಲಿಂಗಗಳನ್ನು ಪ್ರತಿಷ್ಠಾಪಿಸಿ ಅವುಗಳ ಪೂಜಾದಿಗಾಗಿ ಕಡವೂರು(ಹಿರೇಕೆರೂ ತಾ. ಕಡೂರು) ಎಂಬ ಗ್ರಾಮವನ್ನು ಕಾಳಾಮುಖ ಪಂಥದ ರಾಜಗುರು ಮೂರುಜಾವಿದೇವರಿಗೆ ಒಪ್ಪಿಸಿದ್ದನ್ನು ಶಾಸನ ಉಲ್ಲೇಖಿಸುತ್ತದೆ."[೧೬]

**ಬಂಕಾಪುರದ ಕದಂಬರು** : "ಅಲ್ಪಕಾಲ ಬಂಕಾಪುರದಿಂದ ಆಳ್ವಿಕೆ ಮಾಡಿದ ಕದಂಬ ಶಾಖೆಯೊಂದನ್ನು ಇತಿಹಾಸಕಾರ ಬಾ.ರಾ.ಗೋಪಾಲರು ಗುರುತಿಸಿದ್ದಾರೆ. ಇವರು ಕಲ್ಯಾಣದ ಚಾಲುಕ್ಯರ ಮಾಂಡಲಿಕರಾಗಿದ್ದು, ಸತ್ಯಾಶ್ರಯನ ಸಮಕಾಲೀನರಾದ ಹಾನಗಲ್ ಕದಂಬರ ಚಟ್ಟಯದೇವನ ನಂತರ ಬನವಾಸಿ-೧೨೦೦೦ ಪ್ರಾಂತವನ್ನು ಮಯೂರಶರ್ಮ ಎಂಬಾತನು ಆಳುತ್ತಿದ್ದ. ಇವನು ಚಟ್ಟಯದೇವನ ವಂಶಸ್ಥನಲ್ಲ, ಅರಿಕೇಸರಿ ಅಥವಾ ಹರಿಕಂತನ ಮಗ. ಈ ಹರಿಕಂತದೇವನ ಎರಡು ಶಾಸನಗಳು ಸಿದ್ಧಾಪುರ ತಾ. ಕೋಡಕಣಿಯಲ್ಲಿ ದೊರೆತಿವೆ. ಇವನ ಮಗ ಮಯೂರಶರ್ಮನು"ಪಾಂಥಿಪುರಾಧೀಶ್ವರ"(ಹಾನಗಲ್ ಮೂಲ ಸೂಚಿಸುತ್ತದೆ). ಎಂದು ಕರೆದುಕೊಂಡಿದ್ದು ಇವನು ಬಂಕಾಪುರದಿಂದ ಆಳುತ್ತಿದ್ದುದು ಖಚಿತವಾಗುತ್ತದೆ.

**ದೇವಗಿರಿಯ ಸೇವಣರು** : ೨ನೇ ಸಿಂಘಣನು ಸೇವುಣರ ವಂಶದಲ್ಲಿ ಗಣ್ಯದೊರೆ. ರಟ್ಟಿಹಳ್ಳಿಯ ಒಂದು ಶಾಸನದಂತೆ, ಸೇವುಣರ ಕೊಂಕಣದಲ್ಲಿದ್ದ ಆರಿಯ ಮಲ್ಲಿಸೆಟ್ಟಿ ದ್ವಾರಸಮುದ್ರವನ್ನು ಗೆದ್ದು ಹೊಯ್ಸಳರ ನರಸಿಂಹನಿಗೆ ೧೨ ಆನೆಗಳನ್ನು ಗೆದ್ದುಕೊಟ್ಟನೆಂದು ಉಲ್ಲೇಖವಿದೆ.

ಸಾತೇನಹಳ್ಳಿಯಲ್ಲಿ(ಹಿರೇಕೆರೂರು ತಾ.) ಕ್ರಿ.ಶ. ೧೨೧೪ರಲ್ಲಿ ನಾಡಪ್ರಭು ಬೊಮ್ಮಿಸೆಟ್ಟಿಯು ಶಂಕರನಾರಾಯಣ ದೇವಾಲಯವನ್ನು ಕಟ್ಟಿಸಿದನು. ಹಾನಗಲ್ ಕದಂಬ ವಂಶದ ಮಲ್ಲಿದೇವನ ಪತ್ನಿ ಪದ್ಮಲದೇವಿ 'ಹುಲ್ಲುಂಗೂರು'(ಹುಲಗೂರ)ದಲ್ಲಿ (ಶಿಗ್ಗಾವಿ ತಾ.) ಒಂದು ಅಗ್ರಹಾರವನ್ನು ಸ್ಥಾಪಿಸಿದಳು(೧೨೪೫), ಶಿಗ್ಗಾವಿ ತಾ. ಚಿಕ್ಕಮಲ್ಲೂರಿನಲ್ಲಿ ಧವಳೇಶ್ವರ ದೇವಾಲಯಕ್ಕೆ ಹೊನ್ನಬೊಮ್ಮಿಸೆಟ್ಟಿ ಎಳಬಳ್ಳಿ ಗ್ರಾಮವನ್ನು ದಾನ ಮಾಡಿದನು. ಬಾಳಂಬೀಡ(ಹಿರೇಕೆರೂರು ತಾ.) ಶಾಸನದಂತೆ ದಂಡನಾಯಕ ಬಾಚಯ್ಯ ಪಂಡರಂಗೇಶ್ವರನಿಗೆ ದಾನ ನೀಡಿದ ಶಾಸನವಿದೆ. ಹಾವೇರಿಯ ಸಿದ್ಧನಾಥ ದೇವಾಲಯಕ್ಕೆ ನೀಡಿದ ಮೂರು ದಾನಗಳನ್ನು ಉಲ್ಲೇಖಿಸುವ ಶಾಸನಗಳು ಸಿಂಘಣನ ಕಾಲದವು(೧೨೨೯-೩೧). ಸಿಂಗಣನ ಆಡಳಿತ ಜಿಲ್ಲೆಯಲ್ಲಿ ಭದ್ರವಾಗಿ ನೆಲೆಯಾಗಿ ಅನೇಕ ಜನಹಿತ ಕಾರ್ಯಗಳಿಗೆ ಬೆಂಬಲ ನೀಡಿದ ವಿವರ ಈ ಶಾಸನಗಳಿಂದ ತಿಳಿಯುತ್ತದೆ."[೧೭]

**ಹೊಯ್ಸಳರು** : "ಹೊಯ್ಸಳರ ೨ನೇ ಬಲ್ಲಾಳ(೧೧೭೩-೧೨೨೦) ಕ್ರಿ.ಶ. ೧೧೭೮ರಲ್ಲಿ ಹಾನಗಲ್ಲನ್ನು ವಶಪಡಿಸಿಕೊಂಡ. ಹಿರೇಕೆರೂರು ತಾ. ಸಾತೇನಹಳ್ಳಿಯಲ್ಲಿ ದೊರೆತ ಹಲವು ಶಾಸನಗಳಂತೆ ಆ ಕಾಲದ ಅದೇ ಊರ ಪರಿಸರದಲ್ಲಿ ಬೊಮ್ಮ ಎಂಬಾತನು ನಾಗರಖಂಡ-೭೦ನ್ನು ಹೊಯ್ಸಳ ಅಧಿಕಾರಿಯಾಗಿ ಆಳುತ್ತಿದ್ದು, ಆಗ ಅಲ್ಲಿ ಹರಿಹರೇಶ್ವರ ದೇವಾಲಯವನ್ನು ಕಟ್ಟಿದ ವಿವರವಿದೆ(೧೨೦೪). ಸಾತೇನಹಳ್ಳಿ ದೊಡ್ಡ ವ್ಯಾಪಾರಿ ಕೇಂದ್ರವೆಂದು ಹೇಳಿದೆ, ಕ್ರಿ.ಶ. ೧೨೦೩ರ ಪರಿಸರದಲ್ಲಿ ಹೊಯ್ಸಳರಿಗೂ ಹಾನಗಲ್‌ನ ಕಾಮದೇವ ಕದಂಬ ಸೈನ್ಯಕ್ಕೂ ನಡೆದ ಉಗ್ರ ಕಾಳಗಕ್ಕೆ ಸಂಬಂಧಿಸಿದ ವೀರಗಲ್ಲುಗಳಿವೆ."[೧೮]

**ವಿಜಯನಗರ ಸಾಮ್ರಾಜ್ಯ** : "ವಿಜಯನಗರ ಸಾಮ್ರಾಜ್ಯದ ದೊರೆ ಕುಮಾರರಾಮನಿಗೆ ಸಂಬಂಧಿಸಿದ ಸ್ಮಾರಕಗಳು ಹಾವೇರಿ ಜಿಲ್ಲೆಯಲ್ಲಿಯ ವೀರಾಪುರ, ಸಂಗೂರು, ಬಿದರಕಟ್ಟಿ ಇನ್ನೂ ಮುಂತಾದ ಕಡೆಗಳಲ್ಲಿವೆ. ಹಾವೇರಿ ತಾ. ಸಂಗೂರು, ಹಿರೇಕೆರೂರು ತಾ. ವೀರಾಪುರದಲ್ಲಿ ಕುಮಾರರಾಮನ ಉಬ್ಬುಶಿಲ್ಪ ಸ್ಥಾಪಿಸಲಾಗಿದೆ."[೧೯] ಈ ಸಾಮ್ರಾಜ್ಯಕ್ಕೆ ಹಿರೇಕೆರೂರು ತಾಲೂಕಿನ ಅಬಲೂರು, ಒಡೆಯನಪುರಗಳು ಸೇರಿದ್ದವು ಎಂಬುದಕ್ಕೆ ಶಾಸನಗಳು ಉಲ್ಲೇಖಿಸುತ್ತವೆ.

"ಕ್ರಿ.ಶ. ೧೩೮೭ರ ಸುತ್ತಕೋಟಿ ಶಾಸನದಲ್ಲಿ(ಹಿರೇಕೆರೂರು ತಾಲೂಕು) ೨ನೇ ಹರಿಹರನಿಗೆ ಸಂಬಂಧಿಸಿದ್ದು ವೀರನೊಬ್ಬನ ಮರಣದ ವಿವರವಿದ್ದರೆ, ಬ್ಯಾಡಗಿ ತಾಲೂಕಿನ ಹಿರೇಹಳ್ಳಿಯ ತೇದಿರಹಿತ ಶಾಸನದಲ್ಲಿ ೨ನೇ ಹರಿಹರನ ಕಾಲದ ವೀರನೊಬ್ಬನ ಮರಣದ ಉಲ್ಲೇಖ ಮತ್ತು ವೀರನ ತಂದೆ ತಾಯಿಯರ ಹೆಸರು ಪ್ರಸ್ತಾಪವಿದೆ."[೨೦]

ಸದಾಶಿವರಾಯನ ಶಾಸನಗಳು ಹಾವೇರಿ ಜಿಲ್ಲೆಯಲ್ಲಿ ದೊರೆತರೂ ಅವು ಹೆಚ್ಚಾಗಿ ನಾವಿದರಿಗೆ(ಕ್ಷೌರಿಕರಿಗೆ) ಸುಂಕಗಳಲ್ಲಿ ವಿನಾಯಿತಿ ನೀಡಿದವುಗಳು. ಹೊಂಬಳ(ಹಾನಗಲ್ ತಾ.) ಕ್ರಿ.ಶ. ೧೫೪೭, ಗುತ್ತಲ(ಹಾವೇರಿ ತಾ.) ಕ್ರಿ.ಶ. ೧೫೪೮, ರಾಣೆಬೆನ್ನೂರು(೧೫೫೦)ಗಳಲ್ಲಿ ಕಂಡುಬರುತ್ತವೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹಾವೇರಿ ಜಿಲ್ಲೆಯಲ್ಲಿ ರಾಜಕೀಯವಾಗಿ ಪೂರ್ವ ಇತಿಹಾಸ ಕಾಲದಿಂದ ವಿಜಯನಗರದವರೆಗಿನ ಆಡಳಿತವನ್ನು ರಾಜ ಮಹಾರಾಜರುಗಳು ನಡೆಸಿ ಚಾರಿತ್ರಿಕವಾಗಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಇಲ್ಲಿ ರಾಜ/ಅರಸು ವಂಶಗಳು ಅಥವಾ ಆಳುವ ಪ್ರಭುತ್ವ ಬದಲಾದರೂ ಜನಸಾಮಾನ್ಯರ ಜೀವನ ಎಂದಿನಂತೆ ನಡೆಯುತ್ತಿತ್ತು. ಜಿಲ್ಲೆಯ ಯಾವುದೇ ಭಾಗದಲ್ಲಿ ತಮ್ಮನ್ನಾಳುವ ಪ್ರಭುಗಳ ವಿರುದ್ಧ ದಂಗೆಯೆದ್ದ ಪ್ರಜಾ ಸಮುದಾಯ ಚರಿತ್ರೆಯಲ್ಲಿ ಯಾವುದೇ ವಿಧಗಳಲ್ಲಿ ದಾಖಲಾಗಿಲ್ಲ.

**ವಿಜಯನಗರದ ನಂತರದ ಆಡಳಿತ** : ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಶಾಹಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟ ಈ ಭಾಗದಲ್ಲಿ ಆದ ಬೆಳವಣಿಗೆಗಳನ್ನು ಗಮನಿಸುವುದಾದರೆ,

**ಬಹುಮನಿ ಸುಲ್ತಾನರು :** ಕ್ರಿ.ಶ. ೧೪೦೬ರಲ್ಲಿ ಸುಲ್ತಾನ್ ಫಿರೋಜ್(೧೩೯೭-೧೪೨೨) ಬಂಕಾಪುರವನ್ನು ವಿಜಯನಗರದಿಂದ ಗೆದ್ದುಕೊಂಡ ಎಂದು ಫೆರಿಸ್ತಾ ಹೇಳಿದ್ದಾನೆ. ಆದರೆ ೨ನೇ ದೇವರಾಯನ ಕಾಲಕ್ಕೆ ಇಡೀ ಧಾರವಾಡ ಜಿಲ್ಲೆ ವಿಜಯನಗರದ ವಶದಲ್ಲಿದ್ದ ಬಗ್ಗೆ ಹಿರೇಕೆರೂರು, ಬ್ಯಾಡಗಿ ತಾಲೂಕುಗಳ ಪ್ರದೇಶಗಳಲ್ಲಿ ಅವನ ಶಾಸನಗಳು ತಿಳಿಸುತ್ತವೆ.

**ಬಿಜಾಪುರದ ಆದಿಲ್‌ಷಾಹಿಗಳು :** ವಿಜಯನಗರದ ಪತನದ ನಂತರ ೧೫೭೩ರಲ್ಲಿ ಬಿಜಾಪುರದ ಅಲಿ ಆದಿಲ್‌ಷಾನ ವಶಕ್ಕೆ ಈ ಭಾಗ(ಧಾರವಾಡ ಜಿಲ್ಲೆ) ಒಳಪಟ್ಟಿತು. ಇದಕ್ಕೆ 'ನಸರಾಬಾದ್' ಎಂದು ನಾಮಕರಣ ಮಾಡಿದನು. ಬಂಕಾಪುರದಲ್ಲಿದ್ದ ವೆಲ್ಲಪ್ಪ ಎಂಬ ವಿಜಯನಗರದ ಅಧಿಕಾರಿಯನ್ನು ಸೋಲಿಸಿ ಮುಸ್ತಫಾಖಾನ್ ಅದನ್ನು ಗೆದ್ದುಕೊಂಡ. ಬಂಕಾಪುರ ಬಿಜಾಪುರದವರ ಒಂದು ಗಣ್ಯ ಠಾಣ್ಯವಾಯಿತು. ಈ ಪರಿಸರದ ಅನೇಕ ವಿಜಯನಗರದ ವಶದಲ್ಲಿದ್ದ ಕೋಟೆಗಳನ್ನು ಗೆದ್ದು ಅಲ್ಲಿ ವಿಜಾಪುರದ ಧ್ವಜ ಹಾರಿಸಿದ್ದರಿಂದ ಮುಸ್ತಾಫಾಖಾನನಿಗೆ ಈ ಪ್ರದೇಶವನ್ನು ಜಹಗೀರಾಗಿ ಕೊಡಲಾಯಿತು. ಆದಿಲ್‌ಷಾಹಿ ಆಡಳಿತದ ಕೆಲವು ಶಾಸನಗಳು ಅಣ್ಣಿಗೇರಿ, ಬಂಕಾಪುರ, ಸವಣೂರುಗಳಲ್ಲಿ ಸಿಗುತ್ತವೆ. ಹಾಗೂ ಅವರ ಕಾಲದ ಮಸೀದಿಗಳು ಬಂಕಾಪುರ, ಸವಣೂರು, ರಾಣೆಬೆನ್ನೂರು ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ."[೨೧]

**ಸವಣೂರು ನವಾಬರ ಬಗ್ಗೆ :** "ಸವಣೂರು ನವಾಬರ ವಂಶ ಮೂಲತಃ ಅಫಘಾನಿಸ್ತಾನದ ಕೊಹಲಾ ಸ್ಥಳದಿಂದ ಬಂದ ಝೋರಾನಾ ಮತ್ತು ಭೋರಸಾ ಮನೆತನದ ಪಠಾಣ ವಂಶದವರು ಎನ್ನಲಾಗಿದೆ. ಅಲ್ಲದೆ ದೆಹಲಿಯ ಮೊಘಲರಿಗೂ, ಬಿಜಾಪುರದ ಮುಸ್ಲಿಮರಿಗೂ ಬಂದೊದಗಿದ ಆಡಳಿತ ವಿದ್ಯಮಾನಗಳೇ ಸವಣೂರು ಸಂಸ್ಥಾನದ ಉಗಮಕ್ಕೆ ನಾಂದಿಯಾಯಿತು"[೨೨] ಎಂದು ಅಧ್ಯಯನದಿಂದ ಗುರುತಿಸಬಹುದಾಗಿದೆ.

"ಕ್ರಿ.ಶ. ೧೫೯೯ರಲ್ಲಿ ಬಂಕಾಪುರ ಕೋಟೆಯಲ್ಲಿದ್ದ ಅಧಿಕಾರಿ ಖಾನ್ ಏ ಅಜಂನು ಸವಣೂರು ತಾಲೂಕಿನ ನೀರಲಗಿ ಗ್ರಾಮದಲ್ಲಿ ಬಾವಿಯೊಂದನ್ನು ನಿರ್ಮಿಸಿದ ವಿವರವನ್ನು ಸವಣೂರಿನಲ್ಲಿಯ ಶಾಸನವೊಂದು ನೀಡುತ್ತದೆ. ಅಲ್ಲದೇ ಇದೇ ವಂಶದ ನಂತರದ ಆಡಳಿತಗಾರ ಮಹಮ್ಮದ್ ಷಾನ ಆಳ್ವಿಕೆಯಲ್ಲಿ ಕ್ರಿ.ಶ. ೧೬೩೮ರಲ್ಲಿ ಬ್ರಿಟಿಷರು ಅವನೊಂದಿಗೆ ವ್ಯಾಪಾರದ ಒಪ್ಪಂದವನ್ನು ಮಾಡಿಕೊಂಡರು."[೨೩] ಇದರಿಂದ ಹಾವೇರಿ ಭಾಗದಲ್ಲಿ ಆಂಗ್ಲರ ವ್ಯಾಪಾರ ಅಧಿಕೃತವಾಗಿ ಆರಂಭವಾಗಿದ್ದನ್ನು ಗಮನಿಸಬಹುದಾಗಿದೆ.

### ೨.೨. ಜಿಲ್ಲೆಯ ಸಾಮಾಜಿಕ ಹಿನ್ನೆಲೆ

"ಪ್ರತಿಯೊಂದು ಸಮಾಜವು ಒಂದು ಸಂಸ್ಕೃತಿಯನ್ನು ಹೊಂದಿರುತ್ತದೆ. ಸಾಮಾಜಿಕ ಸಂಬಂಧಗಳು, ಆಚಾರ ವಿಚಾರಗಳು, ಸುಸಂಸ್ಕೃತ ಜೀವನದ ಆಗುಹೋಗುಗಳ ಜೊತೆಯಲ್ಲಿಯೇ ಸಾಮಾಜೀಕರಣ ರೂಪುಗೊಳ್ಳುತ್ತದೆ."[೨೪] ಇಂಥ ಸಮಾಜದಲ್ಲಿ ವರ್ಗ-ವರ್ಣಗಳು ಪ್ರಮುಖ ಪಾತ್ರವಹಿಸುವುದನ್ನು ಪ್ರಾಚೀನ ಕಾಲದಿಂದ ಇಂದಿನವರೆಗೂ ಕಾಣಬಹುದಾಗಿದೆ.

ಹಾವೇರಿ ಜಿಲ್ಲೆಯ ಸಾಮಾಜಿಕ ವ್ಯವಸ್ಥೆಯನ್ನು ಗಮನಿಸುವುದಾದರೆ, ಜನರು ಅವಿಭಕ್ತ ಕುಟುಂಬದಲ್ಲಿ ಜೀವನ ಸಾಗಿಸುತ್ತಿದ್ದುದು ಕಂಡುಬರುತ್ತದೆ. ಈ ಜಿಲ್ಲೆಯಲ್ಲಿ ಸಮಾಜದಲ್ಲಿ ಬಾಲ್ಯ ವಿವಾಹ, ದೇವದಾಸಿ ಪದ್ದತಿ, ಬಹುಪತ್ನಿತ್ವ ಪದ್ಧತಿ ಮುಂತಾದ ಅನಿಷ್ಟಗಳು ಅಥವಾ ಅನಿಷ್ಟ ಸಂಪ್ರದಾಯಗಳು ಕಾಲ ಕಳೆದಂತೆ ಮಾಯವಾಗಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಹಂಚು, ತಗಡಿನ ಮನೆಗಳು ಇದ್ದು, ಇತ್ತೀಚೆಗೆ ಅಂದರೆ ೧೦ ವರ್ಷಗಳಿಂದೀಚೆ ಸಾಮಾನ್ಯವಾಗಿ ಸಿಮೆಂಟ್‌ನಿಂದ(ಆರ್.ಸಿ.ಸಿ ಮನೆಗಳು)ನಿರ್ಮಾಣ ಮಾಡಿರುವ, ಮಾಡುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತವೆ.

ಸಾಮಾನ್ಯವಾಗಿ ತಾಲೂಕು ಕೇಂದ್ರಗಳನ್ನು ಹೊರತುಪಡಿಸಿದರೆ, ಎಲ್ಲಾ ಕಡೆ ಜನರ ಕಸುಬು ಕೃಷಿ ಅದರಲ್ಲಿ ನೀರಾವರಿಗಿಂತ ಒಣಬೇಸಾಯವೇ ಹೆಚ್ಚು. ವಿವಿಧ ಬೆಳೆಗಳೊಂದಿಗೆ ತರಕಾರಿ ಬೆಳೆಗಳನ್ನೂ ಬೆಳೆಯುತ್ತಾರೆ. ಇಲ್ಲಿಯ ಜನರ ಉಡುಗೆ-ತೊಡುಗೆಗಳು ಗಮನಿಸಿದಾಗ ಪುರುಷರು ಲುಂಗಿ, ಪಂಜೆ, ಅಂಗಿ, ಒಳಅಂಗಿ, ಟವಲ್ಲು, ಶಲ್ಯ, ಜುಬ್ಬಾ ಧರಿಸುತ್ತಾರೆ. ಇತ್ತೀಚೆಗೆ ನವೀನ ಉಡುಪುಗಳು ಬಂದಿರುವುದನ್ನು ಕಾಣುತ್ತೇವೆ.

ಆಹಾರ ಪದ್ಧತಿಯನ್ನು ಗಮನಿಸುವುದಾದರೆ, ಜೋಳದ ರೊಟ್ಟಿ, ಅಕ್ಕಿ, ರಾಗಿ ಮುದ್ದೆ(ಇದು ಈ ಭಾಗದಲ್ಲಿ ಸ್ವಲ್ಪ ಕಡಿಮೆಯಿದ್ದು ಇತ್ತೀಚೆಗೆ ಹೆಚ್ಚಾಗಿದೆ ಎನ್ನಬಹುದು) ಮುಖ್ಯವಾಗಿ ಬಳಸುವ ಊಟವಾಗಿದೆ. ಮಂಸಾಹಾರ ಪದ್ಧತಿಯೂ ಇದೆ.

ಪ್ರಾಚೀನ ಭಾರತದ ಆಳರಸರ ಆಳ್ವಿಕೆಯ ಅವಧಿಯಲ್ಲಿ ಜಿಲ್ಲೆಯಲ್ಲಿಯ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಸಮಾಜವನ್ನು ಗಮನಿಸುವುದಾದರೆ, ಸಮಾಜದ ಮೇಲ್ವರ್ಗದಲ್ಲಿ ಬ್ರಾಹ್ಮಣ ವರ್ಗವಿದ್ದು, ಆಳರಸರಿಂದ ಗೌರವಾತಿಥ್ಯ ಪಡೆದುಕೊಂಡಿದ್ದನ್ನು ಕ್ರಿ.ಶ. "೧೭೮೫ರ ಹಾವೇರಿ ತಾಲೂಕಿನ ಶಾಸನ(ಬ್ರಾಹ್ಮಣ ವೃತಿಗಳ ಉಲ್ಲೇಖ)"[೨೫] ಹಾವೇರಿ ತಾಲೂಕಿನ "ಕರ್ಜಗಿ ಶಾಸನ"(ಬ್ರಾಹ್ಮಣರಿಗೆ ದಾನ ನೀಡಿದ)[೨೬] ಹಿರೇಕೆರೂರು ತಾಲೂಕಿನ "ನೂಲಗೇರಿ ಶಾಸನ(ಬ್ರಾಹ್ಮಣ ಕುಟುಂಬಗಳಿಗೆ ಭೂಮಿಯನ್ನು ದಾನ ನೀಡಿದ)"[೨೭] ರಟ್ಟೀಹಳ್ಳಿ ಶಾಸನ(ಬ್ರಾಹ್ಮಣರಿಗೆ ನೀಡಿದ ದಾನ)."[೨೮] ಹೀಗೆ ಹೆಚ್ಚು ಶಾಸನಗಳು ಬ್ರಾಹ್ಮಣರಿಗೆ ವಿವಿಧ ರೀತಿಯ ದಾನಗಳನ್ನು ನೀಡಿರುವುದನ್ನು ಉಲ್ಲೇಖಿಸಿವೆ. ಇದರಿಂದ ಅಂದು ಸಾಮಾಜಿಕವಾಗಿ ಗೌರವಯುತವಾದ ಸ್ಥಾನವನ್ನು ಆಳರಸರು ನೀಡಿರುವುದನ್ನು ಅರಿಯಬಹುದಾಗಿದೆ.

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಚಳುವಳಿಯ ಸಂಘಟನೆಯ ನಾಯಕತ್ವವನ್ನು ವಹಿಸಿದ್ದು ಬ್ರಾಹ್ಮಣರೇ ಹೆಚ್ಚು. ಇದಕ್ಕೆ ಅನ್ವಯಿಸಿ ಜಿಲ್ಲೆಯಲ್ಲಿ ಬ್ರಾಹ್ಮಣೇತರ ಚಳುವಳಿಯನ್ನು ಕಾಣಬಹುದು. ಸೂಕ್ಷ್ಮವಾಗಿ ಮತ್ತು ಆ ಅವಧಿಯಲ್ಲಿಯ ಸಮಾಜವನ್ನು ಗಮನಿಸಿದರೆ, ಬ್ರಾಹ್ಮಣ ವರ್ಗವೇ ಹೆಚ್ಚು ಶಿಕ್ಷಣ ಪಡೆದಿರುವುದನ್ನು ಒಪ್ಪಬಹುದು. ಹಾಗಾಗಿ ಇಂಗ್ಲೀಷರ ಒಡೆದಾಳುವ ನೀತಿಯನ್ನು ಆ ವರ್ಗ ಸೂಕ್ಷ್ಮವಾಗಿ ಗಮನಿಸಿಬಹುದು. ಕಾರಣ ಇಂಗ್ಲೀಷರ

ಆಳ್ವಿಕೆಯಲ್ಲಿ ಹೆಚ್ಚು ಸರಕಾರಿ ಕೆಲಸದಲ್ಲಿ ಇದ್ದವರು. ಅದರ ಪರಿಣಾಮ ಆಡಳಿತದಲ್ಲಿಯ ದೌರ್ಜನ್ಯವನ್ನು ಗುರುತಿಸಲು ಆ ವರ್ಗದವರಿಗೆ ಬೇಗ ಸಾಧ್ಯವಾಗಿರಬಹುದು. ಇದರಿಂದ ಇತರ ವರ್ಗದ ಜನತೆಗೆ ಅಥವಾ ಇಡೀ ಸಮಾಜಕ್ಕೆ ಇಂಗ್ಲೀಷರ ಆಡಳಿತದಲ್ಲಿ ಮೋಸ, ವಂಚನೆ, ಜನತೆಯ ಮೇಲಾಗುವ ಪರಿಣಾಮಗಳನ್ನು ಜನತೆಗೆ ತಿಳಿಸುತ್ತಿರಬಹುದು. ಜನತೆಯನ್ನು ಆಂಗ್ಲರ ವಿರುದ್ಧ ಎದ್ದು ನಿಲ್ಲುವಂತ ಪ್ರೇರೇಪಿಸಿದ್ದು ಇವರೇ.

ಹಾವೇರಿ ಜಿಲ್ಲೆಯ ಅರಸೊತ್ತಿಗೆಯಲ್ಲಿ ವರ್ತಕರು ಕೇವಲ ವ್ಯಾಪಾರ ಮಾಡುತ್ತಾ ಉತ್ತಮ ಜೀವನವನ್ನು ನಡೆಸಿಕೊಂಡಿರುವ ಜೊತೆಗೆ ಸಾಮಾಜಿಕ ಕಾರ್ಯ ಮಾಡಿರುವುದನ್ನು ಗಮನಿಸಬಹುದು. ವಿವಿಧ ದೇವಾಲಯಗಳಿಗೆ ನೀಡಿದ ದಾನ, ದತ್ತಿ, ಕೆರೆ, ಬಾವಿಗಳ ನಿರ್ಮಾಣಕ್ಕಾಗಿ ಮಾಡಿದ ಸಹಾಯವನ್ನು ಹಲವು ಶಾಸನಗಳು ಉಲ್ಲೇಖಿಸುತ್ತಿವೆ. ಉದಾಹರಣೆಗೆ– "ಕ್ರಿ.ಶ. ೧೧೭೯ರ ಹಿರೇಕೆರೂರು ತಾಲೂಕಿನ ಸುತ್ತಕೋಟಿ ಶಾಸನ,"[೨೯] "ಕ್ರಿ.ಶ. ೧೧೭೯ರ ಹಾನಗಲ್ ತಾಲೂಕಿನ ಶಾಸನ,"[೩೦] ಕ್ರಿ.ಶ. ೧೨೩೭ರ ರಟ್ಟಿಹಳ್ಳಿ ಶಾಸನ."[೩೧] ಹೀಗೆ ಹತ್ತು ಹಲವು ಶಾಸನಗಳು ಅಂದಿನ ವ್ಯಾಪಾರಿಗಳು ಸಮಾಜಮುಖಿ ಕಾರ್ಯಗಳನ್ನು ಮಾಡಿದ್ದನ್ನು ದಾಖಲಿಸಿವೆ.

"ಬ್ರಿಟಿಷರ ಆಗಮನದ ಪೂರ್ವದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಮನೆ ಮನೆಯಲ್ಲಿ ಹೆಂಗಸರು ನೂಲುತ್ತಿದ್ದು, ಒಬ್ಬ ದಿನವಿಡಿ ನೂಲುವ ವ್ಯಕ್ತಿಗೆ ಹೊಲದಲ್ಲಿ ಕೆಲಸ ಮಾಡುವಷ್ಟೇ ಕೂಲಿ ಸಿಗುತ್ತಿತ್ತು. ಹೀಗಾಗಿ ಹೆಂಗಸರು ತಮ್ಮದೇ ದುಡಿಮೆಯಿಂದ ಸಮಾಜದಲ್ಲಿ ಸ್ವಾವಲಂಬಿ ಜೀವನ ನಡೆಸುತ್ತಿದ್ದರು."[೩೨] ಇದೇ ಕಾರ್ಯವನ್ನು ಸ್ವಾತಂತ್ರ್ಯ ಹೋರಾಟದಲ್ಲಿಯೂ ಜಿಲ್ಲೆಯ ವ್ಯಾಪಾರಿ ವರ್ಗ ಚಳುವಳಿಗಾರರಿಗೆ, ಸಮಾಜಕ್ಕೆ ವಿವಿಧ ರೀತಿಯ ಸಮಾಜಮುಖಿ ಕಾರ್ಯಗಳನ್ನು ಮಾಡಿದ್ದನ್ನು ದಾಖಲೆಗಳಿಂದ ಅರಿಯಬಹುದಾಗಿದೆ.

ಕ್ರಿ.ಶ. ೧೯೩೪–೧೯೩೫ರಲ್ಲಿ ಹೊಸರಿತ್ತಿಯಲ್ಲಿ ಗಾಂಧೀಜಿ ಆಶ್ರಮದಲ್ಲಿ ಹಳ್ಳಿಕೇರಿ ಗುದ್ಲೆಪ್ಪ ಮತ್ತು ಮೈಲಾರ ಮಹದೇವಪ್ಪ ಇವರ ನೇತೃತ್ವದಲ್ಲಿ ಆಶ್ರಮದ ವತಿಯಿಂದ ಹಳ್ಳಿಗಳ ಜನತೆಗೆ ನೂಲುವುದು, ನೇಯುವುದರಿಂದ ಸ್ವಾವಲಂಬಿ ಜೀವನ ನಡೆಸಲು ಕಾರಣಿಕರ್ತರಾಗಿದ್ದನ್ನು ಗುರುತಿಸಬಹುದು.

ಜಿಲ್ಲೆಯ ಮತ್ತೊಬ್ಬ ಚಳುವಳಿಗಾರರಾದ ಮೆಣಸಿನಾಳ ತಿಮ್ಮನಗೌಡ ಇವರು ಲೇವಾದೇವಿ ವ್ಯವಹಾರ ಮಾಡಿಕೊಳ್ಳುತ್ತಾ, ತಾವು ಕೊಡುವ ಹಣಕ್ಕಾಗಿ ಬೆಳ್ಳಿ, ಬಂಗಾರ, ಆಸ್ತಿ ಪತ್ರಗಳನ್ನು ಇಟ್ಟುಕೊಂಡು ವ್ಯವಹಾರ ನಡೆಸುತ್ತಿದ್ದರು. ನಂತರದಲ್ಲಿ ರಾಷ್ಟ್ರೀಯ ಹೋರಾಟಕ್ಕೆ ಧುಮುಕಿದ ಮೇಲೆ ತಮ್ಮ ಊರಿನ ಜನರೆಲ್ಲರನ್ನು ಸೇರಿಸಿ, "ನೀವು ಯಾರು ನನಗೆ ಹಣ ಕೊಡುವುದು ಬೇಡ; ಬದಲಾಗಿ ನಿಮ್ಮ ನಿಮ್ಮ ಬೆಳ್ಳಿ, ಬಂಗಾರ ಮತ್ತು ಆಸ್ತಿ ಪತ್ರಗಳನ್ನು ತೆಗೆದುಕೊಳ್ಳಿ ಎಂದು ವಾಪಾಸು ನೀಡಿ, ನೀವು ಎಷ್ಟು ಸಾಧ್ಯವೋ ಅಷ್ಟು ಸಹಾಯವನ್ನು ಚಳುವಳಿಗಾರರಿಗೆ ಮಾಡಬೇಕು" ಎಂಬ ಹೇಳಿಕೆ ತಿಮ್ಮನಗೌಡರ ಸಾಮಾಜಿಕ ಕಳಕಳಿಗೆ ಸಾಕ್ಷಿ.

ಒಟ್ಟಾರೆ ಜಿಲ್ಲೆಯ ಚಳುವಳಿಗಾರರಾಗಲಿ ಅಥವಾ ಸಾಮಾನ್ಯ ವ್ಯಾಪಾರಿಯೇ ಆಗಲಿ, ಚಳುವಳಿಯ ಸಂದರ್ಭದಲ್ಲಿ ಅವರ ಸಹಾಯ-ಸಹಕಾರಗಳು ಅಂದಿನ ಸಾಮಾಜಿಕ ವ್ಯವಸ್ಥೆಯ ಪ್ರತಿರೂಪವೆನ್ನಬಹುದು. ಹಾಗಾಗಿಯೇ ಅಂದು ಜಿಲ್ಲೆಯಲ್ಲಿ ವಿವಿಧ ಚಳುವಳಿಗಳಿಗೆ ಅಭೂತಪೂರ್ವ ಬೆಂಬಲ ದೊರೆಯಿತು.

### ಸ್ತ್ರೀಯರ ಸ್ಥಾನಮಾನ

ಪ್ರಾಚೀನ ಕಾಲದಿಂದಲೂ ಮಹಿಳೆಯರಿಗೆ ವಿಶೇಷವಾದ ಗೌರವಗಳಿರುವುದನ್ನು ಕಾಣುತ್ತೇವೆ. "ಇತ್ತೀಚೆಗೆ ಅವಿಭಕ್ತ ಕುಟುಂಬ ಪದ್ಧತಿ ಬಹುಮಟ್ಟಿಗೆ ಇಳಿಮುಖವಾಗಿದೆ."[೩೩] ಕಾರಣ ಶೈಕ್ಷಣಿಕ ಹಾಗೂ ಆರ್ಥಿಕವಾಗಿ ಮುನ್ನಡೆ ಸಾಧಿಸಿದಂತೆ ಸ್ವತಂತ್ರ ಬದುಕಿನತ್ತ ಜನತೆಯ ಒಲವನ್ನು ಗಮನಿಸಬಹುದಾಗಿದೆ.

ಜಿಲ್ಲೆಯಲ್ಲಿ ಅರಸೊತ್ತಿಗೆಯ ಅವಧಿಯಲ್ಲಿ ಅರಸು ವಂಶಕ್ಕೆ ಸೇರಿದ ಮಹಿಳೆಯರು ದಾನ ದತ್ತಿ, ಕಾಣಿಕೆಗಳನ್ನು ಕೊಟ್ಟು ದೇವಾಲಯಗಳನ್ನು ಕಟ್ಟಿಸಿದ, ಭೂದಾನ ಮಾಡಿದ, ಇನ್ನಿತರ ಕಲ್ಯಾಣಕಾರಕ ಕಾರ್ಯಗಳನ್ನು ಮಾಡಿದ್ದನ್ನು ಜಿಲ್ಲೆಯ ಅನೇಕ ಶಾಸನಗಳಲ್ಲಿ ಕಾಣಬಹುದು. "ಕ್ರಿ.ಶ. ೧೦೨೮ರ ಹಾವೇರಿ ತಾ. ಕುಳೇನೂರು ಶಾಸನ,"[೩೪] ಕ್ರಿ.ಶ. ೧೦೨೮ರ ಹಾನಗಲ್ ತಾ. ಉಪ್ಪುಹುಣಸಿ ಶಾಸನ,"[೩೫] ಈ ರೀತಿ ಜಿಲ್ಲೆಯ ಹಲವು ಕಡೆ ಮಹಿಳೆಯರು ನೀಡಿದ ಕೊಡುಗೆಗಳನ್ನು ಶಾಸನಗಳು ಉಲ್ಲೇಖಿಸಿವೆ.

ಚಳುವಳಿ ಕಾಲಕ್ಕೆ ಜಿಲ್ಲೆಯ ಸಾಮಾಜಿಕ ವ್ಯವಸ್ಥೆಯು ಹೇಗಿತ್ತು ಎಂಬುದನ್ನು ಚಳುವಳಿಯ ಅಧ್ಯಯನದ ಕಂಡ ಹಲವು ಅಂಶಗಳ ಆಧಾರದ ಮೇಲೆ ತಿಳಿಯಬಹುದು. ಮೈಲಾರ ಮಹದೇವಪ್ಪನ ತಾಯಿ ಬಸಮ್ಮ ಮತ್ತು ಪತ್ನಿ ಸಿದ್ದಮ್ಮ, ಸಂಗೂರು ಕರಿಯಪ್ಪನ ಪತ್ನಿ ವೀರಮ್ಮ, ಶ್ರೀಮತಿ ನಾಗಮ್ಮ ನರಗುಂದ, ಶ್ರೀಮತಿ ಗಂಗಮ್ಮ ಹಳ್ಳಿಕೇರಿ, ರಮಾನಂದ ಮನ್ನಂಗಿಯವರ ಪತ್ನಿ ದೇವಕ್ಕ, ವೀರನಗೌಡ ಪಾಟೀಲರ ಪತ್ನಿ ನಾಗಮ್ಮ, ಲೀಲಾವತಿ ವೆಂಕಟೇಶ ಮಾಗಡಿ, ಹಾವೇರಿ ತಾಲೂಕಿನ ಹಾಲಗಿ ಗ್ರಾಮದ ಅಂಬವ್ವ ಕಾಕಡೆ, ಪುಟ್ಟವ್ವ ತೋಟಪ್ಪನವರ, ಭಾಗವ್ವ ಜಾಧವ, ಭವಾನೆವ್ವ ಡಿಸಾಳೆ, ಅಂಬವ್ವ ಹಳ್ಳಿಗುಡಿ, ಭರಮವ್ವ ಹಡಪದ, ಫೀರಮಾ ನದಾಫ್, ಭೀಮವ್ವ ಓಲೇಕಾರ, ನಾಗವ್ವ ಉಂಡಿ, ಗಂಗವ್ವ ಮಡಿವಾಳ ಮುಂತಾದ ಸ್ತ್ರೀಯರು ಚಳುವಳಿ ಕಾಲಕ್ಕೆ ವಿವಿಧ ರೀತಿಯಲ್ಲಿ ಭಾಗಿಗಳಾದವರು. ಇದನ್ನು ಗಮನಿಸಿದರೆ ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿಯ ಸ್ತ್ರೀಯರ ಸ್ಥಾನ-ಮಾನವನ್ನು ಸ್ಪಷ್ಟವಾಗಿ ಗ್ರಹಿಸಬಹುದು.

ಒಟ್ಟಾರೆ ಜಿಲ್ಲೆಯಲ್ಲಿ ಸ್ತ್ರೀಯರ ಸ್ಥಾನಮಾನ ಗೌರವಯುತವಾಗಿತ್ತು ಮತ್ತು ಸ್ತ್ರೀಯರು ತಮಗೆ ದೊರೆತ ಅವಕಾಶವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡು ಸಾರ್ಥಕ ಮಾಡಿಕೊಂಡರು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

## ೨.೩. ಜಿಲ್ಲೆಯ ಆರ್ಥಿಕ ಹಿನ್ನೆಲೆ

ಯಾವುದೇ ಒಂದು ಪ್ರದೇಶದ ಅಭಿವೃದ್ಧಿ ಆ ಪ್ರದೇಶದ ಆರ್ಥಿಕ ಸಂಪತ್ತನ್ನು ಅವಲಂಬಿಸಿರುತ್ತದೆ. ನೈಸರ್ಗಿಕ ಸಂಪನ್ಮೂಲಗಳು ಹಾಗೂ ಮಾನವನ ದುಡಿಮೆಯ ಪರಿಶ್ರಮದ ಫಲ ಆ ಪ್ರದೇಶ ಆರ್ಥಿಕ ಸ್ಥಿತಿಗತಿಯಾಗಿರುತ್ತದೆ.

ನೈಸರ್ಗಿಕ ಸಂಪನ್ಮೂಲಗಳಿಂದ ಕೂಡಿದ ಹಾವೇರಿ ಜಿಲ್ಲೆಯು ಉತ್ತಮ ಹವಾಗುಣ ಮತ್ತು ಒಳ್ಳೆಯ ಪರಿಸರವನ್ನು ಹೊಂದಿದೆ. ಈ ಜಿಲ್ಲೆಯ ಅತಿ ಹೆಚ್ಚು ಜನರು ಗ್ರಾಮೀಣ ಪರಿಸರದಲ್ಲಿ ಜೀವಿಸುತ್ತಿರುವುದರಿಂದ ಅವರಿಗೆ ಕೃಷಿಯೇ ಪ್ರಮುಖ ಆಧಾರ. ಹಾವೇರಿ ಪ್ರದೇಶವನ್ನು ಆಳಿದ ಆಳರಸರ ಅವಧಿಯಲ್ಲಿ ಕೃಷಿಕರಿಗಾಗಿ ಕೆರೆಗಳನ್ನು ಕಟ್ಟಿಸಿದ್ದು, ದುರಸ್ತಿಗೊಳಿಸಿದ್ದನ್ನು ಈ ಭಾಗದಲ್ಲಿಯ ಶಾಸನಗಳು ದೃಢಪಡಿಸುತ್ತವೆ. ಉದಾಹರಣೆಗೆ ಕ್ರಿ.ಶ. "೧೦೬೦ರ ಹಿರೇಕೆರೂರು ಶಾಸನ"[೩೬] ಕ್ರಿ.ಶ."೧೦೭೭ರ ಚಿಕ್ಕೇರೂರು ಶಾಸನ,"[೩೭] ಅಲ್ಲದೆ, ೧೧ ಮತ್ತು ೧೨ನೇ ಶತಮಾನದ ಹಾನಗಲ್ ತಾಲೂಕಿನ ಬೆಳಗುತ್ತಿಯ ಶಾಸನ,"[೩೮] ೧೫ನೇ ಶತಮಾನದ ಬ್ಯಾಡಗಿ ತಾಲೂಕಿನ ಮತ್ತೂರ ಶಾಸನ,"[೩೯] ಹಾಗೂ ಕ್ರಿ.ಶ "೧೮೫೪-೫೫ರಲ್ಲಿ ಸವಣೂರು ತಾಲೂಕಿನ ಶಾಸನದಲ್ಲಿ ಬಾವಿಯನ್ನು ಅಗೆಯಲು ದಿಲೇರ್ ಖಾನನ ಆದೇಶ ಉಲ್ಲೇಖ"[೪೦] ಮತ್ತು ಹಿರೇಕೆರೂರು ತಾಲೂಕಿನ "ಶಿರಗಂಬಿ ಶಾಸನ,"[೪೧] ಉಲ್ಲೇಖಿಸುತ್ತವೆ. ಇವು ಅಂದಿನ ಪ್ರಜೆಗಳ ಆರ್ಥಿಕ ಅಭಿವೃದ್ಧಿಗೆ ಆಳರಸರು ನೀಡಿದ ಕೊಡುಗೆಗಳನ್ನು ದೃಢಪಡಿಸುತ್ತದೆ.

ಜಿಲ್ಲೆಯ ಪ್ರತಿ ತಾಲೂಕಿನಲ್ಲಿ ಹಲವಾರು ಶಾಸನಗಳು ಅಂದು ಈ ಭಾಗವನ್ನು ಆಳಿದ ಅರಸರು ಪ್ರಜೆಗಳ ಹಿತಕ್ಕಾಗಿ, ನಾಡಿನ(ರಾಜ್ಯ)ಅಭಿವೃದ್ಧಿಗಾಗಿ ನಿರ್ಮಾಣ ಮಾಡಿದ ಕೆರೆ, ಬಾವಿ ಮತ್ತು ಅವುಗಳ ಅಭಿವೃದ್ಧಿ ಅಥವಾ ದುರಸ್ತಿ ಕಾರ್ಯಗಳನ್ನು ಉಲ್ಲೇಖಿಸಿವೆ. ಹಾಗಾಗಿ ಪ್ರಜೆಗಳು ಸಂಘಟನೆಯಾಗಿ ಅರಸನ ವಿರುದ್ಧ ಹೋರಾಡಿದ ಸನ್ನಿವೇಶ ಅಥವಾ ಘಟನೆಗಳು ಜಿಲ್ಲೆಯ ಶಾಸನಗಳಲ್ಲಿ ಕಂಡುಬರುವುದಿಲ್ಲ.

ಜಿಲ್ಲೆಯ "ಕ್ರಿ.ಶ. ೧೧೮೪ರ ತಿಳವಳ್ಳಿ ಶಾಸನ,"[೪೨] "ಕ್ರಿ.ಶ ೧೨೦೪ರ ಸಾತೇನಹಳ್ಳಿ ಶಾಸನ,"[೪೩] ಕ್ರಿ.ಶ. ೧೨೩೯ರ ಹಂಸಬಾವಿ ಶಾಸನ" "ಕ್ರಿ.ಶ. ೧೦೨೯ರ ತಿಳವಳ್ಳಿ ಶಾಸನ,"[೪೪] ಮತ್ತು "ಕ್ರಿ.ಶ. ೧೨೦೪ರ ಸಾತೇನಹಳ್ಳಿ ಶಾಸನ"[೪೫]ಗಳು ಅಂದು ಈ ಭಾಗದ ಪ್ರಮುಖ ಬೆಳೆಗಳು ತರಕಾರಿ ಬೆಳೆಗಳು, ವ್ಯಾಪಾರಿ ಬೆಳೆಗಳು, ಹೂತೋಟಗಳು, ತೆರಿಗೆಗಳು ಇನ್ನು ಮುಂತಾದ ವಿವರಗಳನ್ನು ಉಲ್ಲೇಖಿಸುತ್ತವೆ.

ಕ್ರಿ.ಶ. ೧೬೩೮ರಲ್ಲಿ ಮಹಮ್ಮದ್ ಷಾನ ಆಳ್ವಿಕೆಯಲ್ಲಿ ಬ್ರಿಟಿಷರೊಂದಿಗೆ ಮಾಡಿಕೊಂಡ ಒಪ್ಪಂದದ ಪ್ರಕಾರ, ಬ್ರಿಟಿಷರು ಕಾಳಿ ನದಿಯ ದಂಡೆ(ಕಾರವಾರದ ಹತ್ತಿರ) ಕಡವಾಡದಲ್ಲಿ ವ್ಯಾಪಾರಿ ಮಳಿಗೆ ತೆರೆದರು. ನಂತರದಲ್ಲಿ ಹುಬ್ಬಳ್ಳಿಯಲ್ಲಿಯೂ ವ್ಯಾಪಾರಿ ಮಳಿಗೆ ತೆರೆದರು.

ಬ್ರಿಟಿಷರ ಈ ವ್ಯಾಪಾರಿ ಮಳಿಗೆಗಳಿಗೆ ಹಾವೇರಿ, ರಾಣೆಬೆನ್ನೂರು ಭಾಗಗಳಿಂದ ನೇಯ್ಗಿ ಬಟ್ಟೆಯನ್ನು ಖರೀದಿಸಿ ತಮ್ಮ ತಾಯ್ನಾಡಿಗೆ ರಫ್ತು ಮಾಡುತ್ತಿದ್ದರು. ಜಿಲ್ಲೆಯ ರಾಣೆಬೆನ್ನೂರು ಮತ್ತು ಹಾವೇರಿ ಪ್ರದೇಶಗಳಲ್ಲಿ ಆ ಅವಧಿಯಲ್ಲಿ ಪ್ರಮುಖ ವಾಣಿಜ್ಯ ಬೆಳೆಯಾಗಿ ಹತ್ತಿ ಬೆಳೆಯುತ್ತಿದ್ದರೆಂದು ತಿಳಿಯುತ್ತದೆ.

೧೭೯೦ರ ವೇಳೆಗೆ ಹಾವೇರಿ ಜಿಲ್ಲೆಯ ಆರ್ಥಿಕ ಸ್ಥಿತಿಗತಿ ತಿಳಿಯಲು ಈ ಪ್ರದೇಶವನ್ನು ಸಂದರ್ಶಿಸಿದ ಮೂರ್ (ಕ್ಯಾಪ್ಟನ್ ಲಿಟ್ಲ ಜೊತೆ ಇದ್ದವ) "ಈ ಭಾಗಕ್ಕಿಂತ ಶ್ರೀಮಂತವಾದ ತೋಟಗಳು ಬೇರೆಡೆ ಇರಲಿಲ್ಲ. ಈ ಪ್ರದೇಶ ಗೋವಿಯ (ಗೋವಾ) ಜೊತೆ ವ್ಯಾಪಾರ ಸಂಪರ್ಕ ಹೊಂದಿತ್ತು. ಸವಣೂರು ಪರಿಸರದಲ್ಲಿಯೂ ಹಳ್ಳಿಗಳೆಲ್ಲ ಸಮೃದ್ಧ ಕೃಷಿಯಿಂದ ಕೂಡಿದ್ದವು. ಮೋಟೆಬೆನ್ನೂರು ವ್ಯಾಪಾರಿ ಪೇಟೆಯಾಗಿದ್ದು, ಮೈಸೂರಿನೊಂದಿಗೆ ಸಂಪರ್ಕ ಹೊಂದಿತ್ತು. ರಾಣೆಬೆನ್ನೂರು ಕೂಡಾ ಮಹತ್ವದ ವ್ಯಾಪಾರಿ ಪಟ್ಟಣವಾಗಿದ್ದು, ಆ ಪರಿಸರದಲ್ಲಿ ವಿಶಾಲ ತೋಟಗಳು ಇದ್ದು, ಈ ಪ್ರದೇಶದಲ್ಲಿ ಪಶುಸಂಪತ್ತು ಪುಷ್ಕಳವಾಗಿತ್ತು. ಜೀವನಾವಶ್ಯಕ ವಸ್ತುಗಳ ಪೂರೈಕೆ ಸದಾ ವಿಪುಲವಾಗಿದ್ದು, ಅವುಗಳನ್ನು ದಾಸ್ತಾನು ಮಾಡಬೇಕಾಗಿರಲಿಲ್ಲ"[೪೬] ಎಂಬ ಅವರ ಹೇಳಿಕೆಯಲ್ಲಿಯೂ ಜಿಲ್ಲೆಯ ಪ್ರಜೆಗಳು ಆರ್ಥಿಕವಾಗಿ ಸಮೃದ್ಧ ಜೀವನ ನಡೆಸುತ್ತಿದ್ದರೆಂಬುದು ತಿಳಿಯುತ್ತದೆ.

"ಕ್ರಿ.ಶ ೧೭೯೪ರಿಂದ ೧೮೧೭ರ ಅವಧಿಯಲ್ಲಿ ಮರಾಠರ ಆಳ್ವಿಕೆಗೆ ಹಾವೇರಿ ಜಿಲ್ಲೆಯ ಹಲವು ಭಾಗಗಳು ಒಳಪಟ್ಟಾಗ ಸವಣೂರು, ಹಾವೇರಿ, ರಾಣೆಬೆನ್ನೂರು ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿದ್ದವು. ಹತ್ತಿ ಬೆಳೆಯುವ ನಾಡಾದ ಹಾವೇರಿ ನೂಲುವ ನೇಯ್ಗೆಯ(ನೇಯುವ) ಉದ್ಯೋಗಕ್ಕೆ ಖ್ಯಾತಿ ಪಡೆದಿತ್ತು. ಆದರೆ ಇಂಗ್ಲೆಂಡಿನಲ್ಲಿ ಆದ ಕೈಗಾರಿಕಾ ಕ್ರಾಂತಿ ಮತ್ತು ಆಯಾತ ತೆರಿಗೆ ನೀತಿಯಿಂದ ಬಟ್ಟೆ ಉದ್ಯಮ ಬಹುಮಟ್ಟಿಗೆ ಹಾಳಾಯಿತು. ಮೇಲ್ವರ್ಗದವರು ನೂಲುವುದು ಪೂರ್ಣ ನಿಂತುಹೋಗಿ ಮಹಿಳೆಯರು ತಮ್ಮ ದುಡಿಮೆ ಕಳೆದುಕೊಂಡರು ಮತ್ತು ಪುರುಷರಿಗೆ ಆರ್ಥಿಕವಾಗಿ ಅಧೀನರಾದರು. ಇಂಗ್ಲೀಷರು ಸ್ಥಳೀಯ ಅರಸರೊಂದಿಗಿನ (ಮರಾಠರು) ಕಾದಾಟದ ಅವಧಿಯಲ್ಲಿಯೂ ಜಿಲ್ಲೆಯಲ್ಲಿ ಆರ್ಥಿಕ ಸ್ಥಿತಿ ಹೇಗಿತ್ತು? ಎಂಬುದಕ್ಕೆ ಮಹಿಳೆಯರ ಉದ್ಯೋಗದ ವಿವರವನ್ನು ಗ್ರಹಿಸಿಕೊಂಡರೆ ತಿಳಿಯುತ್ತದೆ. ಆದರೆ ಅದು ಬಹಳ ದಿನಗಳವರೆಗೆ ಇರಲಿಲ್ಲ. ಇಂಗ್ಲೆಂಡಿನಲ್ಲಿ ಆದ ಕೈಗಾರಿಕಾ ಕ್ರಾಂತಿ ಆರಂಭದಲ್ಲಿ ಮಹಿಳೆಯರು ನಂತರದಲ್ಲಿ ಪುರುಷರು ಆರ್ಥಿಕವಾಗಿ ಅವಲಂಬಿಗಳಾಗಿರುವುದು ತಿಳಿಯುತ್ತದೆ."[೪೭]

ಕ್ರಿ.ಶ "೧೮೭೩ರ ಉಪ್ಪಿನ ಕಾನೂನಿನಿಂದ ಕಲ್ಲುಪ್ಪು ತಯಾರಿಸುವ ನೂರಾರು ಉಪ್ಪಾರರು ತಮ್ಮ ಉದ್ಯೋಗವನ್ನು ಕಳೆದುಕೊಂಡರು ಹಾಗೂ ಉಪ್ಪು ತುಟ್ಟಿಯಾಯಿತು. ಇದೇ ರೀತಿ ವಿದೇಶದಿಂದ ಕಾಗದ ಬಂದಾಗ ಜಿಲ್ಲೆಯ ಗುತ್ತಲ, ಕರ್ಜಗಿ, ರಾಣೆಬೆನ್ನೂರು ಮುಂತಾದ ಊರುಗಳಲ್ಲಿ ಕೇಂದ್ರೀಕೃತವಾಗಿದ್ದ ಕಾಗದದ ಉದ್ಯಮ ಕಣ್ಮರೆಯಾಯಿತು. ಇದರಿಂದ ಆ

ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರು ಉದ್ಯೋಗ ಕಳೆದುಕೊಂಡರು. ನಂತರ ಕ್ರಿ.ಶ ೧೮೭೬ರಿಂದ ದೀಪ ಉರಿಸುವ ಸೀಮೆಎಣ್ಣೆ ಆಯತವಾಗಲು ಆರಂಭವಾದಾಗ ಗಾಣಿಗ ವೃತ್ತಿ ಮಾಡುವವರ ಉದ್ಯಮಕ್ಕೆ ಬಹಳ ಏಟು ಬಿತ್ತು. ಜಿಲ್ಲೆಯ ಗುತ್ತಲ, ಕರ್ಜಗಿ, ರಾಣೆಬೆನ್ನೂರು ಈ ಊರುಗಳಲ್ಲಿ ಕಾಗದದ ಉತ್ಪಾದನೆ ವಿಜಯನಗರದ, ಆದಿಲ್‌ಷಾಹಿಗಳ ಆಳ್ವಿಕೆಯಲ್ಲಿ ಆಗಿರಬೇಕೆಂದು ಉಲ್ಲೇಖಿಸಲಾಗಿದೆ. ಅಲ್ಲದೆ ಜಿಲ್ಲೆಯ ಎಣ್ಣೆ ಕೈಗಾರಿಕೆ ಬಗ್ಗೆ ಜಿ.ಆರ್. ಕುಪ್ಪುಸ್ವಾಮಿ ಅವರು ೧೩ನೇ ಶತಮಾನದ ಪೂರ್ವದಲ್ಲಿ ಜಿಲ್ಲೆಯು ಎಣ್ಣೆ ಕೈಗಾರಿಕೆಗೆ ಪ್ರಸಿದ್ಧವಾಗಿದ್ದು, ಗಾಣಿಗರು ಶ್ರೀಮಂತ ವರ್ಗಗಳಲ್ಲಿ ಪರಿಗಣಿಸಲ್ಪಟ್ಟಿದ್ದರು' ಎಂದು ಉಲ್ಲೇಖಿಸಿದ್ದಾರೆ. ಅಲ್ಲದೆ ಆಹಾರ ವಸ್ತುಗಳಾದ ಭತ್ತ, ಅಡಿಕೆಗಳ ಸಂಸ್ಕರಣ, ಕಲ್ಲುಪ್ಪಿನ ಉತ್ಪಾದನೆ, ಕಂಬಳಿ ನೇಯ್ಗೆ, ಲೋಹದ(ಕಬ್ಬಣ, ಕಂಚು, ಬೆಳ್ಳಿ, ಬಂಗಾರ) ಸರಕುಗಳ ತಯಾರಿಕೆ, ಕುಂಬಾರಿಕೆ, ಮರಗೆಲಸ, ಇವೆಲ್ಲ ಉದ್ಯೋಗಗಳಾಗಿದ್ದವು. ಇವುಗಳಿಗೆ ಗಾಣದೆರೆ, ಮಗ್ಗದೆರೆ ಎಂಬ ತೆರಿಗೆಗಳಿದ್ದವು. ಜಿಲ್ಲೆಯಲ್ಲಿ ಬ್ಯಾಡಗಿ, ರಾಣೆಬೆನ್ನೂರುಗಳಲ್ಲಿ ಊದುಬತ್ತಿ ತಯಾರಿಸುವ ಗೃಹ ಉದ್ಯಮವಿತ್ತು. ಅಲ್ಲದೆ ರಾಣೆಬೆನ್ನೂರು ಮತ್ತು ಹಾವೇರಿ ಇಲ್ಲಿ ಸುಣ್ಣ ಸುಡುವ ಕೇಂದ್ರಗಳಿದ್ದವು ಎಂದು ಉಲ್ಲೇಖಿಸಲಾಗಿದೆ."[೪೮] ನಂತರದ ಆಂಗ್ಲರ ಆಡಳಿತದಲ್ಲಿ ಈ ಉದ್ಯೋಗಗಳಿಗೆ ಹಾಗೂ ಅಂದಿನ ಆರ್ಥಿಕ ಸ್ಥಿತಿಗತಿಯ ಮೇಲೆ ವ್ಯತಿರಿಕ್ತವಾದ ಪರಿಣಾಮ ಬೀರತೊಡಗಿತು.

ಆರ್ಥಿಕ ದೃಷ್ಟಿಯಿಂದ ಮೊದಲು ಮಹಿಳೆಯರು ಆರ್ಥಿಕ ದುಸ್ಥಿತಿಯನ್ನು ಅನುಭವಿಸಿದ್ದಲ್ಲದೆ, ಹಂತ ಹಂತವಾಗಿ ಜಿಲ್ಲೆಯ ಬಹುಭಾಗಗಳಲ್ಲಿ ಬ್ರಿಟಿಷರ ದೌರ್ಜನ್ಯಕ್ಕೆ ಒಳಗಾದರು. ಈ ರೀತಿಯ ತೊಂದರೆಗಳಾದಾಗ ತಮ್ಮಲ್ಲಿಯ ಒಗ್ಗಟ್ಟನ್ನು ಪ್ರದರ್ಶಿಸುವ ಸಮಯಕ್ಕಾಗಿ ಕಾಯುವಂಥ ಪರಿಸ್ಥಿತಿ ನಿರ್ಮಾಣವಾಯಿತೆಂಬುದನ್ನು ಗಮನಿಸಬಹುದು.

**ತೆರಿಗೆಗಳು**

ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಆಳರಸರ ಆಳ್ವಿಕೆಯಲ್ಲಿ ವಿಧಿಸುತ್ತಿದ್ದ ತೆರಿಗೆಗಳ ವಿವರವಿದ್ದು ಅದರಿಂದಲೂ ಅಂದಿನ ಆರ್ಥಿಕ ಸ್ಥಿತಿಗತಿಯನ್ನು ಅರಿಯಬಹುದಾಗಿದೆ. "ಬಾವಿಗಳ ಮೇಲಿನ ತೆರಿಗೆಯನ್ನು ಉಲ್ಲೇಖಿಸುತ್ತಿದೆ. ಅಲ್ಲದೆ ಆ ಕಾಲದಲ್ಲಿ ಏನಾದರೂ ತಪ್ಪು ಮಾಡಿದವರು ಕ್ಷಮೆ ಪಡೆಯಬೇಕಾದರೆ ದಂಡ ನೀಡಬೇಕಾಗುತ್ತಿತ್ತು. ಅದನ್ನು 'ವಿಮೋಚನೆ ತೆರಿಗೆ' ಎಂದು ಕರೆಯಲಾಗುತ್ತಿತ್ತು. ಇದರ ಉಲ್ಲೇಖ ಬಂಕಾಪುರದ ಶಾಸನದಲ್ಲಿದೆ."[೪೯]

"ಕ್ರಿ.ಶ. ೧೨೦೪ರ ಸಾತೇನಹಳ್ಳಿ ಶಾಸನದಲ್ಲಿ ಎತ್ತಿನ ಮೇಲೆ ವಿಧಿಸಿದ್ದ ಸುಂಕದ ಮಾಹಿತಿಯಿದೆ."[೫೦] ಅಲ್ಲದೆ ಜಿಲ್ಲೆಯಲ್ಲಿ ಬಹಳಷ್ಟು ಶಾಸನಗಳಲ್ಲಿ ವೈಯುಕ್ತಿಕವಾಗಿ ದೇವರುಗಳಿಗೆ ದಾನ ನೀಡಿದ ವಿವರವನ್ನು ಕಾಣಬಹುದು, ಕ್ರಿ.ಶ ೧೮೫೩-೫೪ರಲ್ಲಿ ಇನಾಂ ಕಮಿಶನ್ ನೇಮಿಸಿದಾಗ ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ಬಹಳಷ್ಟು ಭೂಮಿಯನ್ನು ದಾಖಲೆಗಳಿಲ್ಲವೆಂದು ಸರಕಾರ ಕಸಿದುಕೊಂಡಿತು. "ಭೂಮಿ ಕಳೆದುಕೊಂಡವರು ಬೀದಿಗೆ ಬರಬೇಕಾಯಿತು. ಇಷ್ಟಾದರೂ

ಸರಕಾರ ಜನಗಳಿಗೆ ಭಾರವಾದ ಕಂದಾಯ ಹಾಕಿತ್ತು. ಅಲ್ಲದೆ ರೈತರ ಬಡತನಕ್ಕೆ ಭಾರವಾದ ಕಂದಾಯವೇ ಕಾರಣವಾಗಿತ್ತು ಎಂದು ಅಂದಿನ ಬ್ರಿಟಿಷ್ ಅಧಿಕಾರಿ ಉಲ್ಲೇಖಿಸುತ್ತಾನೆ."[೫೧] ಈ ರೀತಿಯ ಅಸಂಬದ್ಧ ತೆರಿಗೆಗಳು ರೈತರ ಸಂಕಷ್ಟಕ್ಕೆ ಕಾರಣವಾಗಿರುವುದನ್ನು ಕಾಣಬಹುದು.

**ಹಳೆಯ ಕೈಗಾರಿಕೆಗಳು**

"ಸವಣೂರಿನ ನವಾಬ ಅಬ್ದುಲ್ ರವೂಫ್‌ಖಾನ್(೧೬೮೬-೧೭೧೯) ತನ್ನ ರಾಜ್ಯದಲ್ಲಿ ವ್ಯವಸಾಯ ಮತ್ತು ಕೈಗಾರಿಕೆಗಳಿಗೆ ಉತ್ತೇಜನವನ್ನಿತ್ತನು. ಅವನ ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆ ನೆಲೆಯಾಗಿದ್ದವು. ಇದು ಬಾದಶಹ ಔರಂಗಜೇಬನಿಗೆ ಸುಪ್ರಿತವಾಗಿತ್ತೆಂದು ಉಲ್ಲೇಖ."[೫೨] ಬ್ರಿಟಿಷರ ಆಳ್ವಿಕೆಯ ಅಧೀನದಲ್ಲಿದ್ದ ತನ್ನ ಪ್ರಜೆಗಳ ಆರ್ಥಿಕ ಅಭಿವೃದ್ಧಿಗೆ ನವಾಬರು ವಿಶೇಷ ಗಮನ ನೀಡಿರುವುದಕ್ಕೆ ಸಾಕ್ಷಿ.

ಬ್ರಿಟಿಷರ ಆಗಮನದ ಅವಧಿಯಲ್ಲಿ ಜಿಲ್ಲೆಯಲ್ಲಿ ಬಟ್ಟೆ ಉದ್ಯಮ ಬಲಿಷ್ಠವಾಗಿತ್ತು. ಬಂಕಾಪುರ ಹತ್ತಿ ಮತ್ತು ಉಣ್ಣೆ ಬಟ್ಟೆ ತಯಾರಿಕಾ ಕೇಂದ್ರವಾಗಿತ್ತು. ರಾಣೆಬೆನ್ನೂರು ಹತ್ತಿ ಉತ್ಪಾದನೆ ಮತ್ತು ಉಣ್ಣೆ ಬಟ್ಟೆ ತಯಾರಿಕೆಗೆ ಹೆಸರು ಪಡೆದಿತ್ತು. ನಂತರದಲ್ಲಿ ಬ್ರಿಟಿಷರ ಬಟ್ಟೆ ಗಿರಣಿಗಳ ಜೊತೆ ಪೈಪೋಟಿ ನೀಡಲಾಗದೇ ಭಾರತದಲ್ಲಿ ಅನೇಕ ಕೈಮಗ್ಗಗಳು, ಬಟ್ಟೆ ಗಿರಣಿಗಳು ಮುಚ್ಚಲ್ಪಟ್ಟರೂ ಸಹ ಜಿಲ್ಲೆಯ ಬಂಕಾಪುರ, ಹಾನಗಲ್, ರಾಣೆಬೆನ್ನೂರುಗಳಲ್ಲಿ ಹತ್ತಿ ನೂಲಿನ ಮತ್ತು ನೇಯ್ಗೆಯ ಉದ್ಯಮ ಕಡಿಮೆಯಾಗುವ ಬದಲು ಹೆಚ್ಚಾದವು. ಆದರೆ "ಕ್ರಿ.ಶ ೧೮೯೮ರಲ್ಲಿ ಸ್ಥಾಪನೆಗೊಂಡ ಗದಗ ಕಾಟನ್ ಆಂಡ್ ಸ್ಪಿನ್ನಿಂಗ್ ಮಿಲ್ಲಿನಿಂದಾಗಿ ಗದಗ ಮತ್ತು ರಾಣೆಬೆನ್ನೂರಿನಲ್ಲಿ ಕೈಮಗ್ಗಗಳು ಕುಸಿಯಲಾರಂಬಿಸಿದವು. ಇವುಗಳ ಜೊತೆಗೆ ಬಣ್ಣ ಹಾಕುವ ಉದ್ಯಮಗಳು ಕುಸಿಯಲಾರಂಭಿಸಿದವು."[೫೩] ಈ ಅಂಶಗಳು ಜಿಲ್ಲೆಯ ಕಾರ್ಮಿಕರ ಆರ್ಥಿಕ ದುಸ್ಥಿತಿಗೆ ಆಂಗ್ಲರ ಆರ್ಥಿಕ ವ್ಯವಸ್ಥೆ ಕಾರಣವಾಗಿರುವುದನ್ನು ಸೂಚಿಸುತ್ತದೆ. ಇದರ ಪರಿಣಾಮ ಹೋರಾಟ ಅನಿವಾರ್ಯವಾಗುವಂಥ ಸ್ಥಿತಿ ನಿರ್ಮಾಣವಾಯಿತು.

**ವ್ಯಾಪಾರ**

ಅನಾದಿಕಾಲದಿಂದಲೇ ವ್ಯಾಪಾರ ಮತ್ತು ವಾಣಿಜ್ಯ ಆರ್ಥಿಕ ಬೆಳವಣಿಗೆಗೆ ಪೂರಕವಾಗಿ ಬೆಳೆದುಕೊಂಡು ಬಂದಿದೆ. ಅಂದರೆ ಇತಿಹಾಸಪೂರ್ವ ಕಾಲದಿಂದಲೇ ವ್ಯಾಪಾರದ ಪ್ರಾಥಮಿಕ ಹಂತಗಳನ್ನು ಗುರುತಿಸಬಹುದು. ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದರ ಮೂಲಕ ನಿಗದಿತ ಮೌಲ್ಯಾಂಕನ ಪದ್ಧತಿ ಬಹುಶಃ ಆ ಕಾಲದಲ್ಲಿಯೇ ಪ್ರಾರಂಭವಾಯಿತು ಎನ್ನಬಹುದು. ಈ ದೃಷ್ಟಿಯಿಂದ ವ್ಯವಸಾಯ, ಕೈಗಾರಿಕೆಗಳ ಉತ್ಪಾದನೆ, ಉದ್ಯಮಗಳೆಲ್ಲವೂ ವಾಣಿಜ್ಯ ವ್ಯವಹಾರ ಆಗಿರುತ್ತವೆ ಎಂದು ಆರ್.ಎಸ್. ಪಂಚಮುಖಿಯವರು ಅಭಿಪ್ರಾಯಪಟ್ಟಿದ್ದಾರೆ."[೫೪] ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕೆಲ ಚಳುವಳಿಗಾರರು ತಾವು ಮಾಡುವ ವ್ಯಾಪಾರಿ ವೃತ್ತಿಯನ್ನು ಬಿಟ್ಟು ಚಳುವಳಿಗಳಲ್ಲಿ ಭಾಗವಹಿಸಿದ್ದನ್ನು ಕಾಣಬಹುದು

* ಹಾವೇರಿ ಜಿಲ್ಲೆಯ ಚಳುವಳಿಗಾರರಲ್ಲಿ ಪ್ರಮುಖ ಪಾತ್ರವಹಿಸಿದ ಹಿರೇಕೆರೂರು ತಾಲೂಕಿನ ನ್ಯಾಮತಿ ವೀರಭದ್ರಪ್ಪ ಇವರು ಮೂಲತಃ ಕಿರಾಣಿ ಅಂಗಡಿಯ ಮಾಲೀಕರು. ಇವರು ತಮ್ಮ ಊರಿನ ವ್ಯಾಪಾರವನ್ನು ಬಿಟ್ಟು ಸ್ವಾತಂತ್ರ್ಯ ಚಳುವಳಿಗೆ ಧುಮುಕಿದರು.

* ಜಿಲ್ಲೆಯ ರಾಣೆಬೆನ್ನೂರು ತಾಲೂಕಿನ ತುಮ್ಮಿನಕಟ್ಟಿಯಲ್ಲಿ ನೇಕಾರರ ಕುಟುಂಬಗಳು ಇದ್ದು ತೊಂದರೆಯಿಲ್ಲದೆ ಜೀವನ ಸಾಗಿಸುತ್ತಿದ್ದರು. ಈ ಸಂದರ್ಭದಲ್ಲಿ ಮುಂಬೈಯಿಂದ ವಿದೇಶಿ ಬಟ್ಟೆ ಬಂದಿದ್ದರಿಂದ ತುಮ್ಮಿನಕಟ್ಟಿ ಭಾಗದಲ್ಲಿ ನೇಯುವ ಮತ್ತು ನೂಲುವ ಕುಟುಂಬಗಳಿಗೆ ಜೀವನ ನಡೆಸುವುದು ತುಂಬ ಕಷ್ಟವಾಯಿತು ಎಂದು ತುಮ್ಮಿನಕಟ್ಟಿಯ ೬೨ ವರ್ಷದ ಶಿವಪ್ಪ ತಳವಾರ ಅವರ ಹೇಳಿಕೆಗಳು ಅಂದಿನ ಜನಜೀವನದ ಮೇಲಾದ ಆಂಗ್ಲರ ಆರ್ಥಿಕ ನೀತಿಯ ಪ್ರಭಾವವನ್ನು ಗಮನಿಸಬಹುದಾಗಿದೆ.

* ಜಿಲ್ಲೆಯ ಮತ್ತೊಂದು ಕಂಬಳಿ ನೇಯುವ ಪ್ರದೇಶವೆಂದರೆ ರಾಣೆಬೆನ್ನೂರು ತಾಲೂಕಿನ ಮೆಡ್ಲೇರಿ. ಈ ಊರು ಕುರಿಯ ಉಣ್ಣೆಯಿಂದ ನೇಯ್ದು ಸಿದ್ಧಪಡಿಸಿದ ಕಂಬಳಿಗಳಿಗೆ ಖ್ಯಾತಿ ಪಡೆದಿತ್ತು. ನಾಡಿನ ಎಲ್ಲ ಜನರು ಈ ಕಂಬಳಿಗಳನ್ನು ಬಳಸುತ್ತಿದ್ದು, ಅದು ಕೂಡ ವಿದೇಶಿ ಬಟ್ಟೆಗಳ ಅಬ್ಬರದ ರಭಸಕ್ಕೆ ನಲುಗಿಹೋಯಿತು. ನಂತರದಲ್ಲಿ ಕೆಲವೇ ಜನಕ್ಕೆ ಸೀಮಿತವಾಯಿತು. ಜಿಲ್ಲೆಯ ಕಂಬಳಿ ಉದ್ಯಮಕ್ಕೆ ಬಲವಾದ ಏಟು ಬಿದ್ದಿದ್ದರಿಂದ ಮೇಡ್ಲೇರಿ ಭಾಗದ ಜನರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದು ಸ್ಪಷ್ಟವಾಗುತ್ತದೆ.

* ಹಾವೇರಿಯಲ್ಲಿ ಸಾಮಾಜಿಕ ಕಳಕಳಿಯ ವಿಚಾರ, ಚರಕ ಸಂಘ ಸ್ಥಾಪನೆಯಾಗಬೇಕೆಂದು ನಿರ್ಧಾರವಾದಾಗ ವ್ಯಾಪಾರಿಗಳು ಸ್ವಾತಂತ್ರ್ಯ ಹೋರಾಟಗಾರರೊಂದಿಗೆ ಕೈ ಜೋಡಿಸಿದರು ಮತ್ತು ಹಾವೇರಿಯ ಹಣಕಾಸಿನ ನೆರವಿನೊಂದಿಗೆ ಚಳುವಳಿಗೆ ಸಹಕಾರ ನೀಡಿದರು.

* ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಹೋರಾಟಗಾರರಾದ ಹಾಗೂ ಹುತಾತ್ಮ ಮೈಲಾರ ಮಹದೇವಪ್ಪನ ದೊಡ್ಡಪ್ಪ ಗುಡ್ಡಪ್ಪ ವರು ವ್ಯಾಪಾರಕ್ಕೆ ತರಬೇತಿ ನೀಡಿ ಮನೆತನದ ಆರ್ಥಿಕ ಸ್ಥಿತಿ ಸುಧಾರಿಸಲು ಪ್ರಯತ್ನಿಸಿ, ವ್ಯಾಪಾರಕ್ಕೆಂದು ಮಹದೇವಪ್ಪನನ್ನು ದಾವಣಗೆರೆಗೆ ಕರೆದುಕೊಂಡು ಹೋದರು. ಆದರೆ ಮೈಲಾರ ಮಹದೇವಪ್ಪನವರು ಅಲ್ಲಿಂದಲೇ ಧಾರವಾಡಕ್ಕೆ ಹೋಗಿ 'ಭಾರತೀಯ ತರುಣ ಸಂಘ' ಸೇರಿದರು.

* ಜಿಲ್ಲೆಯ ಮತ್ತೊಬ್ಬ ಚಳುವಳಿಗಾರರಾದ ಮೆಣಸಿನಾಳ ತಿಮ್ಮನಗೌಡ ಇವರು ಲೇವಾದೇವಿ ವ್ಯವಹಾರ ಮಾಡುತ್ತಿದ್ದರು. ತಾವು ಕೊಡುವ ಹಣಕ್ಕಾಗಿ ಬೆಳ್ಳಿ, ಬಂಗಾರ, ಆಸ್ತಿ ಪತ್ರಗಳನ್ನು ಇಟ್ಟುಕೊಂಡು ವ್ಯವಹಾರ ನಡೆಸುತ್ತಿದ್ದರು. ನಂತರದಲ್ಲಿ ವ್ಯಾಪಾರವನ್ನು ಬಿಟ್ಟು ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿ ಚಳುವಳಿಗೆ ಹೊಸರೂಪ ಕೊಟ್ಟರು.

ಒಟ್ಟಾರೆ ಜಿಲ್ಲೆಯ ಚಳುವಳಿಗಾರರು, ವ್ಯಾಪಾರಿಗಳು ಸೇರಿ ಅಂದಿನ ಚಳುವಳಿಗೆ ಆರ್ಥಿಕ ಸಹಾಯ-ಸಹಕಾರ ನೀಡಿದ್ದಾರೆ. ಜಿಲ್ಲೆಯಲ್ಲಿ ನಡೆದ ವಿವಿಧ ಚಳುವಳಿಗಳಿಗೆ ಅಭೂತಪೂರ್ವ ಕಾಣಿಕೆ ನೀಡಿ ಅಂದಿನ ಸಾಮಾಜಿಕ ವ್ಯವಸ್ಥೆಯ ಬದಲಾವಣೆಗೆ ಕಾರಣೀಭೂತರಾದರು.

ಸ್ವಾತಂತ್ರ್ಯ ನಂತರ ಇತ್ತೀಚೆಗೆ ಜಿಲ್ಲೆಯ ಆರ್ಥಿಕ ಸ್ಥಿತಿಯನ್ನು ಗಮನಿಸುವುದಾದರೆ ಜಿಲ್ಲೆಯಲ್ಲಿ ಬ್ಯಾಡಗಿ ಮತ್ತು ರಾಣೆಬೆನ್ನೂರು ತಾಲೂಕು ಕೇಂದ್ರಗಳು ವ್ಯಾಪಾರದಲ್ಲಿ ರಾಷ್ಟ್ರ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿರುವುದನ್ನು ದಾಖಲೆಗಳಿಂದ ಅರಿಯಬಹುದು.

**ಬ್ಯಾಡಗಿ :** ಪ್ರಸಿದ್ಧ ವ್ಯಾಪಾರಿ ಕೇಂದ್ರ. ಹಿರೇಕೆರೂರು, ರಾಣೆಬೆನ್ನೂರು, ಬ್ಯಾಡಗಿ ಹಾಗೂ ಹಾವೇರಿ ತಾಲೂಕುಗಳಲ್ಲಿ ಆರ್ಥಿಕ ಬೆಳೆಯಾಗಿ ಬ್ಯಾಡಗಿ ಕಡ್ಡಿ ಮೆಣಸಿನಕಾಯಿಯನ್ನು ಬೆಳೆಯುತ್ತಾರೆ. ಈ ನೆಲ, ಜಲ, ವಾತಾವರಣದ ವಿಶಿಷ್ಟತೆಯಿಂದ ಖಾರ ಮತ್ತು ರುಚಿಯ ಗುಣವನ್ನು, ಕೆಂಪು ಬಣ್ಣವನ್ನು ಪಡೆದು ಖ್ಯಾತಿಯನ್ನು ಪಡೆಯಿತು. ಬಾಯಿಗೆ ಖಾರ, ಉದರಕ್ಕೆ ಸಿಹಿಯನ್ನು ಕೊಡುವ ವಿಶಿಷ್ಟ ಗುಣವುಳ್ಳದ್ದಾಗಿದೆ ಈ ತಳಿ. ಕೃಷಿ ವಿಜ್ಞಾನಿಗಳು ಸುಮಾರು ೨೭೦ ಮೆಣಸಿನಕಾಯಿ ತಳಿಗಳನ್ನು ಸಂಶೋಧಿಸಿದರೂ, ಇಂದಿಗೂ ಬ್ಯಾಡಗಿಯ ಈ ಕಡ್ಡಿ ಮೆಣಸಿನಕಾಯಿಯ ಪ್ರಖ್ಯಾತಿ ಮಾತ್ರ ಸ್ವಲ್ಪವೂ ಕಡಿಮೆಯಾಗದೇ ಇರುವುದು ವಿಶೇಷವೆನ್ನಬಹುದು.

ಸಾಂಬಾರ ಪದಾರ್ಥಗಳನ್ನು ತಯಾರಿಸುವಲ್ಲಿ ಖ್ಯಾತಿ ಗಳಿಸಿರುವ ಕಂಪನಿಗಳಾದ ಎಂ.ಟಿ.ಆರ್. ಮತ್ತು ಎಂ.ಡಿ.ಎಚ್. ಆಕಾಮ್ ಕಂಪನಿಗಳು ಇಲ್ಲಿಯ ಮೆಣಸಿನಕಾಯಿಯನ್ನು ಉಪಯೋಗಿಸುತ್ತಿರುವುದು ವಿಶೇಷ. ೧೫.೨.೧೯೪೮ರಿಂದ ಆರಂಭವಾದ ಈ ಮೆಣಸಿನಕಾಯಿ ಮಾರುಕಟ್ಟೆ ಇಂದು ತನ್ನ ವ್ಯಾಪಾರ ವಹಿವಾಟನ್ನು ವಿದೇಶಗಳಿಗೆ ವಿಸ್ತರಿಸಿದೆ. ಸದ್ಯ ೨೬೭ ಜನ ಖರೀದಿದಾರರು, ೩೬೩ ಜನ ದಲಾಲರು, ೪೨ ಜನ ತೂಕದಾರರು, ಸುಮಾರು ೫೦೦೦ಕ್ಕೂ ಹೆಚ್ಚು ಜನ ಗುಮಾಸ್ತರು, ೫೦೦ ಜನ ಹಮಾಲರು, ೫೦೦೦ಕ್ಕೂ ಹೆಚ್ಚು ಜನ ಕೂಲಿಕಾರರಿಗೆ ಈ ಮಾರುಕಟ್ಟೆ ಆಶ್ರಯ ನೀಡಿದೆ."[೫೫]

**ಜಿಲ್ಲೆಯ ಮತ್ತೊಂದು ವ್ಯಾಪಾರಿ ಕೇಂದ್ರ ರಾಣೆಬೆನ್ನೂರು**

ಹಾವೇರಿ ಜಿಲ್ಲೆಯ ನೆಲ, ಜಲ ವಿಶಿಷ್ಟವಾದದು. ರೈತರು ಸಾಂಪ್ರದಾಯಕ ಕೃಷಿಯನ್ನು ಮಾಡುತ್ತಿದ್ದರೂ ವಾಣಿಜ್ಯ ಬೆಳೆಯಾಗಿ ಹತ್ತಿ ಬೆಳೆಯು ಉದ್ದನೆಯ ನೂಲಿನ ಗುಣದಿಂದಾಗಿ ಜಾಗತಿಕ ಮಾರುಕಟ್ಟೆಯಲ್ಲಿ ಬೇಡಿಕೆ ಪಡೆದು ಪ್ರಮುಖ ಮಾರಾಟ ಕೇಂದ್ರಯೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ಮಾರುಕಟ್ಟೆಯಲ್ಲಿ  ೩೦೦ ಅಂಗಡಿಗಳಿದ್ದು, ೪೦ ಜನ ಖರೀದಿದಾರರು, ಸಾವಿರಾರು ಜನ ಗುಮಾಸ್ತರು, ೨೦೦೦ ಜನ ಹಮಾಲರು ಕಾರ್ಯನಿರ್ವಹಿಸುತ್ತಿದ್ದಾರೆ. ಇದೇ ರಾಣೆಬೆನ್ನೂರು ತಾಲೂಕಿನ ಕಮದೋಡ ಮತ್ತು ಹನುಮನಮಟ್ಟಿಯಲ್ಲಿ ೨ ರೈತರ ಸಹಕಾರಿ ನೂಲಿನ ಗಿರಣಿಗಳು ಕಾರ್ಯನಿರ್ವಹಿಸುತ್ತವೆ. ರಾಣೆಬೆನ್ನೂರಿನ ಒಂದು ದಿನದ ದಿನವಹಿ ೧ ಕೋಟಿ ರೂ ಎಂದರೆ ಮಾರುಕಟ್ಟೆಯ ಗುಣಮಟ್ಟ, ಅಲ್ಲಿಯ ವ್ಯಾಪಾರದ ವಿಸ್ತಾರತೆಯನ್ನು ಗ್ರಹಿಸಬಹುದು."[೫೬] ಇತ್ತೀಚೆಗೆ ೧೦ ವರ್ಷಗಳಿಂದ ವಾಣಿಜ್ಯ ಬೆಳೆಯಾದ ಗೋವಿನ ಜೋಳದ ವ್ಯಾಪಾರದಲ್ಲಿ ರಾಷ್ಟ್ರ ಮಟ್ಟದ ವ್ಯಾಪಾರ ವಹಿವಾಟು ನಡೆಸುತ್ತಿರುವುದು

ವಿಶೇಷ. ಹೀಗೆ ಎರಡು ತಾಲೂಕು ಕೇಂದ್ರಗಳು ವ್ಯಾಪಾರ ವಹಿವಾಟನಲ್ಲಿ ಮುಂಚೂಣಿಯಲ್ಲಿದ್ದು ಜಿಲ್ಲೆಯ ಆರ್ಥಿಕ ಸುಧಾರಣೆಗೆ ಸಹಾಯಕವಾಗಿವೆ.

ಹೀಗೆ ವ್ಯಾಪಾರ ವಹಿವಾಟು ಹಾವೇರಿ ಜಿಲ್ಲೆಯುದ್ದಗಲಕ್ಕೂ ಹರಡಿದ್ದು ಹಲವಾರು ವಿಧದಲ್ಲಿ ಭೌಗೋಳಿಕವಾಗಿ ಅಲ್ಲಿನ ಅವಶ್ಯಕತೆಗೆ ಅನುಗುಣವಾಗಿ ಬೆಳವಣಿಗೆ ಹೊಂದಿದ್ದವು, ಈ ಹಿನ್ನೆಲೆಯಲ್ಲಿ ವ್ಯಾಪಾರ ಜಿಲ್ಲೆಯ ಬೊಕ್ಕಸಕ್ಕೆ ಅಧಿಕ ಲಾಭ ತರುವ ಉದ್ಯಮವಾಗಿತ್ತೆಂದು ಹೇಳಬಹುದು. ಅಲ್ಲದೆ ಜಿಲ್ಲೆಯ ಶಾಸನಗಳ ಆಧಾರಗಳನ್ನಾಧರಿಸಿ ಅಂದಿನ ಕಾಲದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿ, ನೀರಾವರಿ, ಬೆಳೆಗಳು, ತೆರಿಗೆ, ಮಾರಾಟ ಹಾಗೂ ನಾಣ್ಯಗಳು ಚಲಾವಣೆಯಲ್ಲಿದ್ದು ಆರ್ಥಿಕ ವ್ಯವಸ್ಥೆಯು ಅತ್ಯುತ್ತಮ ರೀತಿಯಲ್ಲಿ ನಡೆಯುತ್ತಿತ್ತು ಎಂಬುದನ್ನು ತಿಳಿಯಬಹುದು. ಇಂತಹ ಆರ್ಥಿಕತೆಗೆ ಬ್ರಿಟೀಷ್ ಆಡಳಿತದ ಕರಾರು ನಿಬಂಧನೆಗಳು ವ್ಯತಿರಿಕ್ತ ಪರಿಣಾಮಗಳು ಉಂಟಾಗಿ ಅರಿತು ಜಿಲ್ಲೆಯ ಜನತೆ ಜಾಗೃತರಾಗಿ ಸ್ವಾತಂತ್ರ್ಯ ಚಳುವಳಿಗಳಲ್ಲಿ ತೊಡಗಿದ್ದುದು ಸ್ಪಷ್ಟವಾಗಿದೆ.

**ಕೊನೆ ಟಿಪ್ಪಣಿಗಳು**

೧. ಪಾಟೀಲ ಭೋಜರಾಜ, (ಜಿ. ಸಂ.) ಕರ್ನಾಟಕ ಗ್ರಾಮ ಚರಿತ್ರೆ ಕೋಶ: ಹಾವೇರಿ ಜಿಲ್ಲೆ ಸಂಪುಟ–೨, ವಿಸ್ತರಣೆ ಹಾಗೂ ಸಲಹಾ ಕೇಂದ್ರ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ೨೦೧೫. ಪುಟ ೧

೨. ಅದೇ, ಪುಟ xxxiv

೩. ಅದೇ, ಪುಟ xxxiv

೪. ಮನ್ವಾಚಾರ್ ಕಲವೀರ, ಲೇಖನ–೨೦೦೩, ಡೆಕ್ಕನ್ ಹೆರಾಲ್ಡ್, ನ್ಯೂಜ್ ಪೇಪರ್

೫. ಶಿವತಾರಕ್ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೬೯–೪೮

೬. ಕಾಮತ್ ಸೂರ್ಯನಾಥ (ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಕರ್ನಾಟಕ ಸರ್ಕಾರ ಬೆಂಗಳೂರು, ಪುಟ ೫೪

೭. ಅದೇ, ಪುಟ ೫೪

೮. ಪೂರ್ವೋಕ್ತ, ಪಾಟೀಲ ಭೋಜರಾಜ(ಜಿ. ಸಂ.), ಕರ್ನಾಟಕ ಗ್ರಾಮ ಚರಿತ್ರೆ ಕೋಶ: ಹಾವೇರಿ ಜಿಲ್ಲೆ ಸಂಪುಟ, ಪುಟ xxxv

೯. ಅದೇ, ಪುಟ xxxvi

೧೦. ಪೂರ್ವೋಕ್ತ, ಪಾಟೀಲ ಭೋಜರಾಜ(ಸಂ), ಕರ್ನಾಟಕ ಗ್ರಾಮ ಚರಿತ್ರೆ ಕೋಶ ಜಿಲ್ಲೆ, ಸಂಪುಟ–೨, ಪುಟ xxxvi

೧೧. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ ೬೨

೧೨. ಪೂರ್ವೋಕ್ತ, ಪಾಟೀಲ ಭೋಜರಾಜ(ಸಂ), ಕರ್ನಾಟಕ ಗ್ರಾಮ ಚರಿತ್ರೆ ಕೋಶ, ಪುಟ xxxvi

೧೩. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ, ೭೪

೧೪. ಧಾ.ಜಿ.ಶಾ.ಸೂ.ಶಾ.ಸಂ. ೧೮೧, ಪುಟ ೬೪

೧೫. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ ೭೪–೭೫

೧೬. ಅದೇ, ಪುಟ ೭೭ ಮತ್ತು ೮೦

೧೭. ಅದೇ, ಪುಟ ೮೪ ಮತ್ತು ೮೭

೧೮. ಅದೇ, ಪುಟ ೮೯

೧೯. ಕಲಬುರ್ಗಿ ಎಂ. ಎಂ., ಕರ್ನಾಟಕ ಶಾಸನ ಸೂಚಿ, ಧಾರವಾಡ ಜಿಲ್ಲೆ. ೧೯೭೫, ಪುಟ ೭೨

೨೦. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ ೮೯ ಮತ್ತು ೯೪

೨೧. ಅದೇ, ಪುಟ ೯೫ ಮತು ೯೭

೨೨. ತೆವರಮಳ್ಳಳ್ಳಿ ಚನ್ನಬಸವಣ್ಣ, ಸವಣೂರು ತಾಲೂಕಾ ದರ್ಶನ. ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೭. ಪುಟ ೭

೨೩. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ ೯೭

೨೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೮, ಪುಟ ೪೫೪

೨೫. ಧಾ.ಜಿ.ಶಾ.ಸೂ. ಶಾ.ಸಂ, ೧೮೮, ಪುಟ ೪೯

೨೬. ಧಾ.ಜಿ.ಶಾ.ಸೂ. ಶಾ.ಸಂ, ೨೮, ಪುಟ ೪೪

೨೭. ಧಾ.ಜಿ.ಶಾ.ಸೂ. ಶಾ.ಸಂ, ೧೫೫, ಪುಟ ೭೫ ಹಾಗೂ ಕೆ.ಆರ್.ಐ. ೧೯೫೩–೫೭ ಪುಟ ೭೩

೨೮. ಕ.ಇ. ಪುಟ ೫೩

೨೯. ಧಾ.ಜಿ.ಶಾ.ಸೂ. ಶಾ.ಸಂ, ೨೪೩, ಪುಟ ೭೯

೩೦. ಧಾ.ಜಿ.ಶಾ.ಸೂ. ಶಾ.ಸಂ, ೩೦೧, ಪುಟ ೬೮

೩೧. ಕ.ಇ. ಪುಟ ೪೨. ಐ.ಐ. ಪುಟ ೪೬೦–೬೫

೩೨. ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ಸರಕಾರ, ೧೯೯೫. ಪುಟ ೧೧೩

೩೩. ಅದೇ, ಪುಟ ೨೨೯

೩೪. ಎಫಿ, ಇಂ. ಸಂ. XV ಪುಟ, ೩೩೧–೩೬, ಧಾ.ಜಿ.ಶಾ.ಸೂ. ಶಾ.ಸಂ, ೪೨, ಪುಟ ೪೪

೩೫. ಧಾ.ಜಿ.ಶಾ.ಸೂ. ಶಾ.ಸಂ, ೨೮, ಪುಟ ೫೯

೩೬. ಕ.ಇ.ಸಂ.೨೬ ಕೆ.ಆರ್.ಐ ಪಿ.ಆರ್. ೧೯೪೭. ಪುಟ ೨೭

೩೭. ಧಾ.ಜಿ.ಶಾ.ಸೂ. ಶಾ.ಸಂ. ೧೦೧, ಪುಟ ೭೩

೩೮. ಧಾ.ಜಿ.ಶಾ.ಸೂ. ಶಾ.ಸಂ. ೨೦೨, ಪುಟ ೬೫

೩೯. ಧಾ.ಜಿ.ಶಾ.ಸೂ. ಶಾ.ಸಂ. ೪೬, ಪುಟ ೫೧

೪೦. ಧಾ.ಜಿ.ಶಾ.ಸೂ. ಶಾ.ಸಂ. ೧೨೩, ಪುಟ ೩೧

೪೧. ಕೆ.ಆರ್.ಐ. ಪಿ.ಆರ್. ೧೯೫೩–೫೭, ಪುಟ ೭೩

೪೨. ಕ.ಇ. ೪.೧ ಸಾತೇನಹಳ್ಳಿ, ೧೨೦೪

೪೩. ಕ.ಇ ೬.೪೭. ಹಂಸಬಾವಿ, ೧೨೩೯

೪೪. ಕ.ಇ. ೫. ಪುಟ ೨೩ ತಿಳವಳ್ಳಿ, ೧೧೨೯

೪೫. ಕ.ಇ. ೪.೧ ಸಾತೇನಹಳ್ಳಿ, ೧೨೦೪

೪೬. ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ ೯೭ ಮತ್ತು ೧೧೨

೪೭. ಅದೇ, ಪುಟ ೧೧೩

೪೮. ಅದೇ, ಪುಟ ೧೧೯

೪೯. ಎ.ಆರ್.ಐ. ೧೯೩೩–೩೪. ಇ.೧೧

೫೦. ಕ.ಇ. ೪.೧ ಸಾತೇನಹಳ್ಳಿ, ೧೨೦೪

೫೧. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ ೧೧೧ ಮತ್ತು ೧೨೦

೫೨. ದೇಸಾಯಿ ಗೋವಿಂದಮೂರ್ತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ೧೯೯೯, ಪುಟ ೧೧

೫೩. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೮, ಪುಟ ೩೩೪

೫೪. ಪಂಚಮುಖಿ ಆರ್.ಎಸ್., ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೧೯೬೭, ಪುಟ ೩೩

೫೫. ಡಾ. ಪಿ.ಟಿ. ಲಕ್ಕಣ್ಣನವರ(ಲೇ), ಕೃತಿ–ಹೆಬ್ಬಾಗಿಲು: ಹಾವೇರಿ ಜಿಲ್ಲಾ ಉತ್ಸವ ಹಾವೇರಿ(ಸಂ), ಕಮ್ಮಾರ ಲಿಂಗರಾಜ ಮತ್ತು ದುರ್ಗದ ಮಠ ಗಿರಿಜಾದೇವಿ. ೨೦೦೭

ಪುಟ ೭೧

೫೬. ಅದೇ, ಪುಟ ೭೪ ಮತ್ತು ೭೫



ಅಧ್ಯಾಯ : ಮೂರು

# ರಾಷ್ಟ್ರೀಯತೆಯ ಉಗಮ, ಬೆಳವಣಿಗೆ ಮತ್ತು ಪ್ರೇರಕ ಅಂಶಗಳು

## ಅಧ್ಯಾಯ : ಮೂರು

# ರಾಷ್ಟ್ರೀಯತೆಯ ಉಗಮ, ಬೆಳವಣಿಗೆ ಮತ್ತು ಪ್ರೇರಕ ಅಂಶಗಳು

ವ್ಯಾಪಾರಕ್ಕೆ ಬಂದ ಬ್ರಿಟಿಷರು ಹಂತ-ಹಂತವಾಗಿ ಭಾರತದ ರಾಜಕೀಯ ಚುಕ್ಕಾಣಿಯನ್ನೇ ಹಿಡಿದುಕೊಂಡರು. ನಂತರದಲ್ಲಿ ಇವರ ಆಳ್ವಿಕೆಯನ್ನು ಕೊನೆಗಾಣಿಸಲು ಭಾರತೀಯರು ಹಲವಾರು ವಿಧವಾದ ಹೋರಾಟಗಳನ್ನು ಹಮ್ಮಿಕೊಂಡರು. ಆ ಹೋರಾಟ ಕುರಿತು ಭಾರತೀಯ ಇತಿಹಾಸಕಾರ ಬಿಪಿನ್‌ಚಂದ್ರರು "ಭಾರತೀಯ ರಾಷ್ಟ್ರೀಯ ಹೋರಾಟದ ನಿಸ್ಸಂದೇಹವಾಗಿ ಆಧುನಿಕ ಸಮಾಜ ಕಂಡಿರುವ ಅತ್ಯಂತ ಮಹತ್ವದ ಚಳುವಳಿಗಳಲ್ಲಿ ಒಂದಾಗಿತ್ತು. ಎಲ್ಲ ವರ್ಗಗಳ ಹಾಗೂ ವಿಚಾರಧಾರೆಗಳ ಜನರನ್ನು ರಾಜಕೀಯ ಕ್ರಿಯೆಗೊಳಿಸಿ ಒಂದು ಶಕ್ತಿಶಾಲಿ ವಸಾಹತುಶಾಹಿ ಸಾಮ್ರಾಜ್ಯವನ್ನು ಮಣ್ಣು ಮುಕ್ಕಿಸಿದ ಚಳುವಳಿ ಆದಾಗಿತ್ತು"[೧] ಎಂದು ಅಭಿಪ್ರಾಯ ಪಡುತ್ತಾರೆ.

ಈ ರಾಷ್ಟ್ರೀಯ ಹೋರಾಟದ ಅಧ್ಯಯನಕ್ಕಿಂತ ಮೊದಲು ಇದರ ಜೀವಸೆಲೆಯಾದ ರಾಷ್ಟ್ರೀಯತೆಯ ಅಥವಾ ರಾಷ್ಟ್ರ ಪ್ರಜ್ಞೆಯ ಅರ್ಥ, ಉಗಮ, ಮಹತ್ವ ಮತ್ತು ರಾಷ್ಟ್ರೀಯತೆಯ ಬೆಳವಣಿಗೆಗೆ ಪ್ರೇರಕವಾದ ಅಂಶಗಳ ಬಗ್ಗೆ ತಿಳಿದುಕೊಳ್ಳುವುದು ಅವಶ್ಯ.

ರಾಷ್ಟ್ರೀಯತೆಯ ಕುರಿತಾದ ಚರ್ಚೆಯನ್ನು ರಾಷ್ಟ್ರೀಯತೆಯ ಕುರಿತು ಅಧಿಕಾರವಾಣಿಯಿಂದ ಮಾತನಾಡುವವರು ಎಂದೇ ಹೆಸರುವಾಸಿಯಾದ ಸಿ.ಜೆ.ಹೆಚ್. ಹೆಯ್ಸ್ ಅವರ ಅಭಿಪ್ರಾಯದೊಂದಿಗೆ ಪ್ರಾರಂಭಿಸಬಹುದು. "ರಾಷ್ಟ್ರೀಯತ್ವ ಮತ್ತು ದೇಶಪ್ರೇಮ ಇವೆರಡರ ಭಾವನಾತ್ಮಕ ಸಮ್ಮಿಳನವೇ ಆಧುನಿಕ ರಾಷ್ಟ್ರೀಯತೆಯಾಗಿದೆ"[೨] ಎಂದಿದ್ದಾರೆ.

"ರಾಷ್ಟ್ರೀಯತೆಯ ಬೆಳವಣಿಗೆಯು ಜನರನ್ನು ಏಕಮುಖವಾದ ರಾಜಕೀಯ ವ್ಯವಸ್ಥೆಯಲ್ಲಿ ಸಂಯೋಜಿಸುವ ಪ್ರಕ್ರಿಯೆಯಾಗಿದೆ."[೩] ಈ ಪ್ರಕ್ರಿಯೆ ಬ್ರಿಟಿಷರ ಸಾಮ್ರಾಜ್ಯಶಾಹಿತ್ವವನ್ನು ಕಿತ್ತೆಸೆಯುವ ಗುರಿ ಹೊಂದಿತ್ತು. ಒಂದೇ ಭಾಷೆ, ಒಂದೇ ಜನಾಂಗ ಮತ್ತು ಒಂದೇ ಪ್ರಾಂತ ಕೊರತೆಯಿಂದಾಗಿ ಭಾರತೀಯ ರಾಷ್ಟ್ರೀಯತೆಯ ಕಲ್ಪನೆ ಇತರ ದೇಶಗಳಿಗಿಂತ ವಿಭಿನ್ನ ಸ್ವರೂಪವನ್ನು ಹೊಂದಿತ್ತು. ಈ ವಿಭಿನ್ನತೆಯಲ್ಲೂ ಏಕತೆ ಒಡಮೂಡಲು ಮೂಲ ಕಾರಣ "ಭಾರತೀಯರಲ್ಲಿದ್ದ ಪ್ರಾಚೀನ

ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳ ಸಂರಕ್ಷಣೆಯ, ಸಂಕಲ್ಪ ಶಕ್ತಿಯು, ಪ್ರಪಂಚದ ಯಾವುದೇ ಅಭಿವೃದ್ಧಿಶೀಲ ರಾಷ್ಟ್ರಗಳಿಗಿಂತ ಬಲಶಾಲಿಯಾಗಿದ್ದುದಾಗಿದೆ"[೪] ಎಂದು ಎ.ಆರ್.ದೇಸಾಯಿಯವರು ಅಭಿಪ್ರಾಯಪಟ್ಟಿದ್ದಾರೆ.

### ೩.೧. ರಾಷ್ಟ್ರೀಯತೆಯ ಅರ್ಥ, ವ್ಯಾಖ್ಯೆ ಮತ್ತು ಮಹತ್ವ

ಸಾಮಾನ್ಯವಾಗಿ ಬಳಸಲ್ಪಡುವ 'ರಾಷ್ಟ್ರ', 'ರಾಷ್ಟ್ರೀಯತ್ವ' ಮತ್ತು 'ರಾಷ್ಟ್ರೀಯತೆ' ಇವುಗಳ ಅರ್ಥ ಮತ್ತು ವ್ಯತ್ಯಾಸವನ್ನು ತಿಳಿದುಕೊಳ್ಳುವುದು ಅವಶ್ಯಕ. 'ರಾಷ್ಟ್ರ' ಎಂಬುದು "ರಾಜಕೀಯವಾಗಿ ಸಾರ್ವಭೌಮತ್ವವನ್ನು ಪಡೆದ ಒಂದು ರಾಜ್ಯದಲ್ಲಿನ ಪ್ರಜೆಗಳನ್ನು ಉಲ್ಲೇಖಿಸುತ್ತದೆ ಎಂದು ಲೂಯಿಸ್ ಸ್ನೈಡರ್ ಅರ್ಥೈಸಿದರೆ ಅಂಥೋನಿ ಡಿ. ಸ್ಮಿತ್‌ರು ತಮ್ಮ 'ಥಿಯರಿಸ್ ಆಫ್ ನ್ಯಾಷನ್ಯಾಲಿಸಂ' ಗ್ರಂಥದಲ್ಲಿ 'ರಾಷ್ಟ್ರ' ಎಂದರೆ ಒಂದು ಜನಾಂಗೀಯ ಸಾಂಸ್ಕೃತಿಕ ಸಮೂಹ ಅಥವಾ ಜನತೆ"[೫] ಎಂದು ಅಭಿಪ್ರಾಯಪಡುತ್ತಾರೆ.

ರಾಷ್ಟ್ರ ಎಂಬ ಶಬ್ದದಿಂದ 'ರಾಷ್ಟ್ರೀಯತೆ' ಎಂಬ ಪದ ಬಂದಿದೆ. 'ರಾಷ್ಟ್ರ' ಎಂದರೆ ಸ್ವತಂತ್ರ ಸರಕಾರವುಳ್ಳ ಅಥವಾ ಇಚ್ಛಿಸುವ ಹಾಗೂ ಐಕ್ಯತೆಯ ಭಾವನೆಯಿಂದ ಕೂಡಿರುವ ಜನಸಮುದಾಯ ಎನ್ನಲಾಗಿದೆ."[೬] ರಾಷ್ಟ್ರೀಯತೆಯ ಕುರಿತು ಇನ್ನೋರ್ವ ಇತಿಹಾಸಕಾರ ಆರ್.ಎಸ್. ಚವನ್ ಪ್ರಕಾರ "ಒಂದೇ ಭಾಷೆಯನ್ನು ಮಾತನಾಡುವ ಏಕರೂಪದ ಐತಿಹಾಸಿಕ ಸಂಪ್ರದಾಯಗಳನ್ನು ಹೊಂದಿರುವ, ಯಾರು ತಮ್ಮದು ವಿಶಿಷ್ಟವಾದ ಸಾಂಸ್ಕೃತಿಕ ಸಮಾಜ ಎಂದು ತಮ್ಮಷ್ಟಕ್ಕೆ ತಾವೇ ತಿಳಿದಿರುವವರೋ ಆ ಜನರ ಸಮೂಹವನ್ನು ಸೂಚಿಸುವುದೇ 'ರಾಷ್ಟ್ರೀಯತೆ'ಯಾಗಿದೆ"[೭] ಎಂದಿರುವರು.

ಒಟ್ಟಿನಲ್ಲಿ ಬಹು ಜನಾಂಗ ಮತ್ತು ಸಂಸ್ಕೃತಿಯ ನೆಲೆಯಲ್ಲಿ ನೋಡಿದಾಗ ಬಹು ಭಾಷೆ, ಬಹು ಜನಾಂಗ ಮತ್ತು ಬಹು ಪ್ರಾಂತಗಳನ್ನು ಹೊಂದಿರುವ ರಾಷ್ಟ್ರವಾದ ಭಾರತದಲ್ಲಿ ಹೇಗೆ ರಾಷ್ಟ್ರೀಯತೆ ಮೂಡಿತು? ಎಂಬ ಪ್ರಶ್ನೆಗೆ ಭಾರತದಲ್ಲಿಯ ಪ್ರಬುದ್ಧವಾದ ಸಂಸ್ಕೃತಿಯೇ ರಾಷ್ಟ್ರೀಯತೆ ಬೆನ್ನೆಲುಬಾಯಿತು ಎಂಬುದು ವಿದ್ವಾಂಸರ ಅಭಿಮತವಾಗಿದೆ.

**ರಾಷ್ಟ್ರೀಯತೆಯ ಮಹತ್ವ** : ಭಾರತದಲ್ಲಿ ಮೇಲ್ನೋಟಕ್ಕೆ ಯಾವ ವಿಷಯದಲ್ಲಿಯೂ ಏಕತೆ ಇರದಿದ್ದರೂ ಬ್ರಿಟಿಷರ ಆಳ್ವಿಕೆಯನ್ನು ಕಿತ್ತೆಸೆಯಲು ರಾಷ್ಟ್ರೀಯ ಭಾವೈಕ್ಯತೆ ಮತ್ತು ಏಕತೆ ಪ್ರೇರಕ ಶಕ್ತಿಯಾಗಿತ್ತು. ವಿವಿಧ ಭಾಷೆ, ವಿವಿಧ ಧರ್ಮಗಳು, ಅಸಂಖ್ಯಾತ ಜಾತಿಗಳು ಇಷ್ಟೆಲ್ಲಾ ವಿಭಿನ್ನತೆಗಳಿದ್ದರೂ ಭಾರತದ ರಾಜಕೀಯ, ಆರ್ಥಿಕ ಮುಂತಾದ ಕ್ಷೇತ್ರಗಳಲ್ಲಿ ಪ್ರಗತಿಶೀಲ ರಾಷ್ಟ್ರವಾಗಬೇಕಾದರೆ ಸ್ವಾತಂತ್ರ್ಯ ಬೇಕಿತ್ತು, ದೇಶ ಸ್ವಾತಂತ್ರ್ಯ ಗಳಿಸಬೇಕಾದರೆ ದೇಶ ವ್ಯಾಪಿ ಹೋರಾಟ ಅನಿವಾರ್ಯವಾಗಿತ್ತು ಮತ್ತು ರಾಷ್ಟ್ರೀಯ ಭಾವೈಕ್ಯತೆ ಆ ನಿಟ್ಟಿನಲ್ಲಿ ರೂಪುಗೊಳ್ಳಬೇಕಾಯಿತು.

## ೩.೨. ರಾಷ್ಟ್ರೀಯತೆಯ ಉಗಮ, ಸ್ವರೂಪ ಮತ್ತು ಬೆಳವಣಿಗೆ

ರಾಷ್ಟ್ರೀಯತೆಯ ಉಗಮ, ಸ್ವರೂಪ ಮತ್ತು ಬೆಳವಣಿಗೆ ಕುರಿತು ಭಾರತೀಯ ಇತಿಹಾಸಕಾರರು ಅಭಿಪ್ರಾಯಪಡುವಂತೆ ರಾಷ್ಟ್ರೀಯತೆಯು "೧೮ನೇ ಶತಮಾನದ ದ್ವಿತೀಯಾರ್ಧಕ್ಕಿಂತ ಹಳೆಯದಲ್ಲ, ಎಲ್ಲ ನವೀನ ಹೋರಾಟಗಳಿಗೆ ಪ್ರಖರವಾದ ಸ್ಫೂರ್ತಿಯನ್ನು ನೀಡಿದ ಫ್ರೆಂಚ್ ಕ್ರಾಂತಿಯೇ ರಾಷ್ಟ್ರೀಯತೆಯ ಮೊದಲ ಕುರುಹು ಆಗಿದೆ."[೮] ಫ್ರೆಂಚ್ ಕ್ರಾಂತಿಯು ಸಹ ಭಾರತೀಯ ರಾಷ್ಟ್ರೀಯವಾದಿಗಳ ಮೇಲೆ ಪ್ರಭಾವ ಬೀರಿರುವುದನ್ನು ಅಲ್ಲಗಳೆಯುವಂತಿಲ್ಲ.

ಆಧುನಿಕ ದೃಷ್ಟಿಕೋನದಲ್ಲಿ ಬಳಸುವ 'ರಾಷ್ಟ್ರೀಯತೆ' ಪದವು ಭಾರತದಲ್ಲಿ "೧೯ನೇ ಶತಮಾನದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಿಂದ ಹುಟ್ಟಿಕೊಂಡಿತೆಂದು ಇತಿಹಾಸಕಾರ ಮೂಲಚಂದ್ ಅಭಿಪ್ರಾಯಪಡುತ್ತಾರೆ."[೯]

ಒಟ್ಟಿನಲ್ಲಿ ಭಾರತದಲ್ಲಿ ರಾಷ್ಟ್ರೀಯತೆಯು ಪ್ರಾಚೀನ ಕಾಲದಲ್ಲಿಯೇ ಉದಯಿಸಿರದೆ, ಅದೊಂದು ಮಾನವ ಇತಿಹಾಸದ ಆಧುನಿಕ ಕಾಲದ ವಿದ್ಯಮಾನವಾಗಿದೆ. ಭಾರತದಲ್ಲಿ ರಾಷ್ಟ್ರೀಯತೆಯ ಹುಟ್ಟಿನ ಬಗೆಗೆ ಎಷ್ಟೇ ವಿವಾದಗಳಿದ್ದರೂ, ಭಾರತದ ಪ್ರಜೆಗಳ ಮತ್ತು ಇಂಗ್ಲೀಷರ ಹಿತಾಸಕ್ತಿಗಳ ಸಂಘರ್ಷದ ಫಲವಾಗಿ ರಾಜಕೀಯ ರಾಷ್ಟ್ರೀಯತೆಯು ಹುಟ್ಟಿಕೊಂಡಿತು ಎಂಬುದು ಸಾಮಾನ್ಯವಾಗಿ ಎಲ್ಲರೂ ಒಪ್ಪುವಂತಹ ವಾದವಾಗಿದೆ.

ರಾಷ್ಟ್ರೀಯತೆಯು ಏಕಪ್ರಕಾರವಾಗಿ ರಾಷ್ಟ್ರಮಟ್ಟದಲ್ಲಿ ಬೆಳೆಯದೆ, ವಿಭಿನ್ನ ರೀತಿಯಲ್ಲಿಯೇ ಬೆಳೆಯತೊಡಗಿತು. "ಇಲ್ಲಿನ ವಿಭಿನ್ನ ಸಂಸ್ಕೃತಿಗಳ ಪರಿಣಾಮವಾಗಿ ಜನರು ಬೇರೆ ಬೇರೆ ಗುಂಪುಗಳಾಗಿ ತಮ್ಮ ತಮ್ಮ ಗುಂಪಿನ ಪ್ರಜ್ಞೆಯೊಂದಿಗೆ ಉಳಿದರು. ತಮ್ಮ ಸಮಾಜದ ಕ್ಷೇಮಾಭಿವೃದ್ಧಿಗಾಗಿ ಪರಕೀಯ ಆಳ್ವಿಕೆ ವಿರುದ್ಧದ ಹೋರಾಟ ಪ್ರಾರಂಭಿಸಿದರು. ವಿಭಿನ್ನ ವರ್ಗದ ಕೋಮಿನ ಧಾರ್ಮಿಕ ಜಾಗೃತಿಯನ್ನು ಮುಖಂಡರುಗಳು ತಮ್ಮ ಸ್ವಪ್ರಯೋಜನಕ್ಕಾಗಿ ಬಳಸಿಕೊಂಡರು."[೧೦] ಈ ರೀತಿಯಲ್ಲಿ ತಮ್ಮ ತಮ್ಮ ಸಮುದಾಯಗಳ ಅಭಿವೃದ್ಧಿಗೆ ಪ್ರಾಮುಖ್ಯತೆ ಕೊಡುವುದಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದರು. ನಂತರದಲ್ಲಿ ರಾಷ್ಟ್ರೀಯ ಪ್ರಜ್ಞೆ ಬೆಳೆದದ್ದು ವಿಶೇಷ; ಆ ಪ್ರಜ್ಞೆ ಬೆಳೆಯಲು ಕೆಲವು ಪ್ರೇರಕ ಅಂಶಗಳು ಕಾರಣವಾದದ್ದನ್ನು ಮರೆಯುವಂತಿಲ್ಲ.

## ೩.೩ ರಾಷ್ಟ್ರೀಯತೆಯ ಬೆಳವಣಿಗೆಗೆ ಪ್ರೇರಕವಾದ ಅಂಶಗಳು ಹಾಗೂ ರಾಷ್ಟ್ರೀಯ ಚಟುವಟಿಕೆಗಳ ಆರಂಭ

ಬ್ರಿಟಿಷರು ಸ್ಥಾಪಿಸಿದ್ದ ಶಾಂತಿ, ಕಾನೂನುಬದ್ಧವೆಂದು ತೋರುವ ಆಡಳಿತ, ಸಾರ್ವತ್ರಿಕ ಶಿಕ್ಷಣಕ್ಕೆ ಹಾಕಿದ ಬುನಾದಿ, ಬ್ರಾಹ್ಮಣೇತರರಿಗೆ ಸಾಕಷ್ಟು ಪ್ರಮಾಣದಲ್ಲಿ ನೌಕರಿ ಕೊಡುವಲ್ಲಿ ತೋರಿದ ಒಲವು, ಸುಧಾರಿಸಿದ ಸಾರಿಗೆ ಹಾಗೂ ಸಂಪರ್ಕ ವ್ಯವಸ್ಥೆ ಇವುಗಳು ಒಂದು ಕಡೆ ಬ್ರಿಟಿಷರಿಗೆ ಜನರ ಒಲವು ಬರುವಂತಿದ್ದವು, ಕೆಲ ಅಸಂತೋಷದ ಪ್ರಕರಣಗಳು ನಡೆದಾಗ ವಿರೋಧಿ ಭಾವನೆ ಉಂಟಾಗುತ್ತಿತ್ತು ಎಂಬುದನ್ನು ಅಲ್ಲಗಳೆಯುವಂತಿಲ್ಲ.

“ಆಂಗ್ಲರ ವಿವಿಧ ಕಾನೂನುಗಳು ಜಿಲ್ಲೆಯ ಗೃಹ ಕೈಗಾರಿಕೆಗಳು ನೆಲಕಚ್ಚಲು ಕಾರಣವಾದವು. ಜನತೆ ತಮ್ಮ ಮೂಲ ಉದ್ಯೋಗವನ್ನು ಬಿಟ್ಟಿದ್ದರಿಂದ ಕೆಲಸವಿಲ್ಲದೆ ಅಲೆಯಬೇಕಾದ ಸ್ಥಿತಿ ನಿರ್ಮಾಣವಾದಾಗ ಸಹಜವಾಗಿಯೇ ಇಂಗ್ಲೀಷರ ವಿರುದ್ಧ ನಿಲ್ಲುವಂಥ ವಾತಾವರಣ ನಿರ್ಮಾಣ ಮಾಡಿತು.”[೧೧] ಕಾರಣ ಸಾಮಾನ್ಯರ ಜೀವನ ನಿರ್ವಹಣೆಗೆ ಸರಕಾರದ ಈ ಅಂಶಗಳು ವಿರೋಧವಾಗಿದ್ದವು.

“ಮುಂಬೈ ಪ್ರಾಂತದಲ್ಲಿ ಹೊಸ ರೋಗವಾದ ಪ್ಲೇಗ್ ಇಡೀ ಮುಂಬೈ ಪ್ರಾಂತ(ಕರ್ನಾಟಕ ಈ ಪ್ರದೇಶವನ್ನು ಒಳಗೊಂಡಂತೆ, ೧೮೯೮ರ ಮುಂಬೈ ಸರಕಾರದ ಆಡಳಿತ ವರದಿಯಂತೆ)ಕ್ಕೆ ವ್ಯಾಪಿಸಿದಾಗ, ಜಿಲ್ಲೆಯ ಕರ್ಜಗಿ ಭಾಗದಲ್ಲಿ ೭೩೩ ಜನ, ಹಾನಗಲ್ಲು ಹೋಬಳಿಯಲ್ಲಿ ೫೯೧ ಜನ ಸಾವನ್ನಪ್ಪಿದರು. ಈ ರೋಗಕ್ಕೆ ಇಂಗ್ಲೀಷರೇ ಕಾರಣ ಎಂಬ ಮನೋಭಾವನೆ ಜನರಲ್ಲಿ ಮೂಡಹತ್ತಿತ್ತು. ಅಲ್ಲದೆ ಪ್ಲೇಗ್ ರೋಗದ ಪರಿಹಾರ ಕ್ರಮಗಳನ್ನು ಸರಕಾರ ತೆಗೆದುಕೊಳ್ಳದೆ ಹೋದಾಗ ಜನತೆ ತೀರಾ ಹಿಂಸಾತ್ಮಕವಾಗಿ ಉಗ್ರ ಪ್ರತಿಭಟನೆಗೆ ಇಳಿದರು. ಇದರ ಕುರಿತು ‘ಕೇಸರಿ’ ಪತ್ರಿಕೆಯಲ್ಲಿ ಟಿಳಕರು ಬರೆದ ಲೇಖನಗಳು ಉತ್ತರ ಕರ್ನಾಟಕದಲ್ಲಿ(ಟಿಳಕರ ಮತ್ತು ಅವರ ‘ಕೇಸರಿ’(೧೮೮೧)ಪತ್ರಿಕೆ) ರಾಷ್ಟ್ರೀಯ ಜಾಗೃತಿಗೆ ವಿಶೇಷ ಕಾರಣವಾಯಿತು.

ಬ್ರಿಟಿಷರ ವಿರೋಧಿ ಭಾವನೆ ರೈತರಲ್ಲೂ, ಕಸುಬುದಾರರಲ್ಲೂ, ಭೂಮಾಲೀಕರಲ್ಲೂ ಬೆಳೆಯುತ್ತಿರಲು, ಇದೇ ಕಾಲಕ್ಕೆ ಶಿಕ್ಷಣದ ಪ್ರಮಾಣ, ಪತ್ರಿಕೆಗಳ ಸಂಖ್ಯೆಯಲ್ಲಿಯೂ ಹೆಚ್ಚಳವಾಗಿ ನಗರ ಭಾಗಗಳಲ್ಲಿ ಶಿಕ್ಷಣವಂತರಲ್ಲಿ ರಾಷ್ಟ್ರೀಯ ಚಟುವಟಿಕೆಗಳು ಹರಡಲು ಕಾರಣವಾಯಿತು. ೧೮೮೫ರಲ್ಲಿ ಆರಂಭವಾದ ಕಾಂಗ್ರೆಸ್ ಮತ್ತು ಲೋಕಮಾನ್ಯರ ‘ಕೇಸರಿ’ ಇವುಗಳ ಪ್ರಭಾವದಿಂದ ವಿವಿಧ ಸ್ವರೂಪದ ಸಂಘ ಸಂಸ್ಥೆಗಳು ಹುಟ್ಟಿ ಸಭೆ, ಉತ್ಸವ ಮುಂತಾದ ಚಟುವಟಿಕೆಗಳು ರಾಷ್ಟ್ರೀಯತೆಯ ಘೋಷಣೆಗೆ ಕಾರಣವಾದವು.”[೧೨] ಪ್ಲೇಗ್ ರೋಗಕ್ಕೆ ಇಂಗ್ಲೀಷರೇ ಕಾರಣವೆಂಬುದು ಎರಡು ರೀತಿಯಲ್ಲಿ ಅರ್ಥೈಸಿಕೊಳ್ಳಬಹುದು, ಆ ರೋಗಕ್ಕೆ ಸರಕಾರ ಮುಂಜಾಗೃತ ಕ್ರಮ ತೆಗೆದುಕೊಳ್ಳದೇ ಇದ್ದದ್ದು ಹಾಗೂ ಒಂದುವೇಳೆ ರೋಗ ಬರಲು ಅವರೇ ಕಾರಣವೆಂದರೆ ಅನಕ್ಷರತೆಯಿಂದಾಗಿ ಯಾರೋ ಹೇಳಿದ್ದನ್ನು ಕೇಳಿ ಆ ರೀತಿಯಲ್ಲಿ ನಂಬಿರಬಹುದು. ಒಟ್ಟಾರೆ ಸರಕಾರದ ವಿರೋಧಿ ಭಾವನೆಗೆ ಇದು ಒಂದು ಪ್ರಮುಖ ಕಾರಣವಾಯಿತು.

**ರಾಷ್ಟ್ರೀಯ ಚಟುವಟಿಕೆಗಳ ಆರಂಭ**

ಅವಿಭಜಿತ ಧಾರವಾಡ ಜಿಲ್ಲೆಯು ಕರ್ನಾಟಕ ಇತಿಹಾಸದಲ್ಲಿ ಮಹತ್ವದ ಪಾತ್ರವಹಿಸಿದ ಜಿಲ್ಲೆ. ಶಾತವಾಹನರ ಕಾಲದಿಂದ ಕೊನೆಗೆ ಆದಿಲ್ ಷಾಹಿಗಳು, ಸವಣೂರಿನ ನವಾಬರವರೆಗೆ ಆಳ್ವಿಕೆಗೆ ಒಳಪಟ್ಟ ಈ ಪ್ರದೇಶ ಸಾಮಾನ್ಯವಾಗಿ ಎಂದೂ ಆಳರಸರ ವಿರುದ್ಧ ಧ್ವನಿಯೆತ್ತಲಿಲ್ಲ. ಇಂಥ ಪ್ರಜೆಗಳು ಈಗ ಒಂದು ಪ್ರಭುತ್ವದ ವಿರುದ್ಧ ಧ್ವನಿಯೆತ್ತಲು ಕಾರಣ ಬ್ರಿಟಿಷ್ ಸರಕಾರದ ಶೋಷಣಾ ನೀತಿಯೇ ಕಾರಣ. ಆದರೆ ಅವರು ಧ್ವನಿಯೆತ್ತಹೊರಟಿರುವುದು ಒಬ್ಬ ಸಾಮಾನ್ಯ

ರಾಜನ ಅಥವಾ ಒಬ್ಬ ಪಾಳೆಯಗಾರನ ವಿರುದ್ಧವಲ್ಲ, ಬದಲಾಗಿ ಇಡೀ ದೇಶವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿರುವ ಬ್ರಿಟಿಷರ ವಿರುದ್ಧ; ಆದರೆ ಅದಕ್ಕೆ ಅಪಾರ ಜನಸಂಖ್ಯೆಯ ಬೆಂಬಲವಿಲ್ಲದೆ ಆಗುವ ಕಾರ್ಯವಲ್ಲ. ಅದಕ್ಕಾಗಿ ದಿನಗಳು, ವರ್ಷಗಳು ಸಾಗಿ ನಂತರದಲ್ಲಿ ಅದಕ್ಕಾಗಿ ಜನತೆಗೆ ಚಳುವಳಿಗೆ ಭಾಗವಹಿಸುವಂಥ ರಾಜಕೀಯ ಕಾರ್ಯಚಟುವಟಿಕೆಗಳು ಪ್ರಾರಂಭವಾದವು.

ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ರಾಷ್ಟ್ರೀಯ ಚಳುವಳಿ ಪ್ರಾರಂಭವಾಗಿದ್ದ ವಿಚಾರವನ್ನು ಅಂದಿನ ಪ್ರಮುಖ ಚಳುವಳಿಗಾರರಾದ ಆಲೂರು ವೆಂಕಟರಾಯರು 'ನಾನು ಸುಮಾರು ೨೫ ವರ್ಷದವನಿದ್ದಾಗ ಕ್ರಿ.ಶ. ೧೮೯೫-೯೬ರ ಅವಧಿಯಲ್ಲಿ ರಾಷ್ಟ್ರೀಯ ಸಭೆ ಸ್ಥಾಪಿತವಾಯಿತು' ಎಂಬ ಅವರ ಹೇಳಿಕೆ ಸಾಹಿತ್ಯ ಮತ್ತು ಪತ್ರಿಕೆಗಳ ಪ್ರಭಾವವನ್ನು ಇಲ್ಲಿ ಗಮನಿಸಬಹುದು.

**ಸಾಹಿತ್ಯದಿಂದ ರಾಷ್ಟ್ರೀಯತೆಯ ಜಾಗೃತಿ**

ಸ್ವಾತಂತ್ರ್ಯ ಸಂಗ್ರಾಮಕ್ಕೆ ನೆರವಿತ್ತು ರಾಷ್ಟ್ರೀಯ ಸಮೀಕರಣಕ್ಕೆ ಪ್ರಚೋದನೆಯನ್ನು ನೀಡಿದ ಸಾಹಿತ್ಯದ ಪಾತ್ರ ತುಂಬಾ ಅಮೂಲ್ಯವಾದುದಾಗಿದೆ. ರಾಷ್ಟ್ರದ ಗಂಡಾಂತರ ಸಮಯಗಳಲ್ಲಿ ಪ್ರಚೋದಿಸುವ ಬರವಣಿಗೆಗಳನ್ನು ರಾಷ್ಟ್ರೀಯ ಸಾಹಿತ್ಯವೆಂದು ಎಲ್ಲರೂ ಸಾಮಾನ್ಯವಾಗಿ ಗುರುತಿಸುತ್ತಾ ಬಂದಿದ್ದಾರೆ. "ಜನಜಾಗೃತಿ ಸಮಾಜ ಸುಧಾರಣೆ, ವಿಚಾರಕ್ರಾಂತಿ ಮೊದಲಾದವುಗಳ ಮೂಲಕ ರಾಷ್ಟ್ರೀಯ ಐಕ್ಯತೆ ಹಾಗೂ ರಾಷ್ಟ್ರೀಯ ಪುನರುಜ್ಜೀವನವನ್ನು ಸಾಧಿಸಲು ರಚಿತವಾಗಿರುವ ಸಾಹಿತ್ಯವೆಲ್ಲ ರಾಷ್ಟ್ರೀಯ ಸಾಹಿತ್ಯವೆನಿಸಿಕೊಳ್ಳುತ್ತದೆ. ಇದು ಕವಿತೆ, ಕಥೆ, ನಾಟಕ, ಕಾದಂಬರಿ, ಪ್ರಬಂಧ, ಜೀವನಚರಿತ್ರೆ, ಮಹಾಕಾವ್ಯ"[೧] ಇತ್ಯಾದಿ ಯಾವ ರೂಪದಲ್ಲಿಯಾದರೂ ಇರಬಹುದು.

೨೦ನೇ ಶತಮಾನದ ಪ್ರಾರಂಭದಿಂದ ಕನ್ನಡದಲ್ಲಿ ರಾಷ್ಟ್ರೀಯ ಸಾಹಿತ್ಯ ವಿವಿಧ ರೀತಿಯಲ್ಲಿ ಹೊರಹೊಮ್ಮಿತು. ಕರ್ನಾಟಕದ ಅನೇಕ ಬರಹಗಾರರು ರಾಷ್ಟ್ರೀಯ ಸಾಹಿತ್ಯವನ್ನು ನಿರ್ಮಿಸಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಪ್ರಚೋದನೆ ನೀಡಿದರು. ಇವರಲ್ಲಿ "ನಾಡಿನ ಸಾಹಿತಿ, ಕವಿಗಳಾದ ಪಂಜೆ ಮಂಗೇಶರಾಯರು, ಗೋವಿಂದ ಪೈ, ಕುವೆಂಪು, ದ.ರಾ.ಬೇಂದ್ರೆ ಇವರು ಪ್ರಮುಖ ರಾಗಿದ್ದಾರೆ. ಪಂಜೆ ಮಂಗೇಶರಾಯ 'ಕವಿಶಿಷ್ಯ' ಎಂಬ ಕಾವ್ಯನಾಮದಿಂದ ೧೯೦೮ರಲ್ಲಿ 'ತೂಕಡಿಕೆಯನು ಕಳೆದೇಕೆ ಕುಳಿತೆ ಗೆಳೆಯ' ಎಂಬ ದೇಶಭಕ್ತಿಯ ಕವನವನ್ನು ರಚಿಸಿದರು. ಕುವೆಂಪು ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತು ದೇಶಭಕ್ತಿಗೀತೆಗಳನ್ನು ರಚಿಸಿದರು. 'ಪಾಂಚ್ಯಜನ್ಯ', 'ಮಹಾತ್ಮಾ ಗಾಂಧಿ', ಜಯಹೇ ಕರ್ನಾಟಕ ಮಾತೆ', 'ಸತ್ಯಾಗ್ರಹಿ' ಹೀಗೆ ರಾಷ್ಟ್ರೀಯತೆಯ ಕವನಗಳನ್ನು ರಚಿಸಿದರೆ, ದ.ರಾ. ಬೇಂದ್ರೆ 'ಮೂವತ್ತು ಮೂರು ಕೋಟಿ', 'ಏಳು ಕನ್ನಡ ರಾಣಿ' ಎಂಬ ಕವನಗಳನ್ನು ರಚಿಸಿ ನಾಡಿನಲ್ಲಿ ರಾಷ್ಟ್ರೀಯತೆಯ ಜಾಗೃತಿಯನ್ನು ಮೂಡಿಸಿದ್ದಾರೆ. ಅದೇ ರೀತಿ ಹುಯಿಲಗೋಳ ನಾರಾಯಣರ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಕನ್ನಡಿಗರಲ್ಲಿ ಸ್ವಾಭಿಮಾನ ಮೂಡಿಸುವಲ್ಲಿ ಸ್ವಾತಂತ್ರ್ಯದ ಕಿಚ್ಚು ಹಚ್ಚುವಲ್ಲಿ ಪ್ರಮುಖ ಪಾತ್ರವಹಿಸಿದವು.

ಗೋವಿಂದ ಪೈಯವರ 'ಗಿಳಿವಿಂಡು' ಕವನ ಸಂಗ್ರಹದಲ್ಲಿ ಸ್ವಾತಂತ್ರ್ಯ ಹೋರಾಟದ ಕೆಲವು ಗೀತೆಗಳನ್ನು ಕಾಣಬಹುದು. ವಿ.ಸೀ. ಅವರ 'ಮೃಗಶಾಲೆಯ ಸಿಂಹಗಳು' ಬಹು ಸೊಗಸಾಗಿ ಪರತಂತ್ರದ ಪಂಜರದಲ್ಲಿ ಸಿಕ್ಕಿಬಿದ್ದ ಅಸಹಾಯಕ ವಿಷಣ್ಣರಾದ ಜನತೆಯನ್ನು ಪ್ರತಿನಿಧಿಸುತ್ತದೆ."[೧೪] ಇದೇ ರೀತಿ ಗಳಗನಾಥರು ಮರಾಠಿ ಕಾದಂಬರಿಕಾರರಿಂದ ಸ್ಫೂರ್ತಿಪಡೆದು ಹಲವಾರು ಐತಿಹಾಸಿಕ ಕಾದಂಬರಿಗಳನ್ನು ಅನುವಾದಿಸಿದರು. ಅವರು ಕರ್ನಾಟಕ ಇತಿಹಾಸದ ಮೇಲೆ ಬೆಳಕು ಚೆಲ್ಲುವ 'ಕನ್ನಡಿಗರ ಕರ್ಮಕಥೆ', 'ಮಾಧವ ಕರುಣಾವಿಲಾಸ', 'ದುರ್ಗದ ಬಿಚ್ಚುಗತ್ತಿ', ಹಾಗೂ 'ಸತ್ವಸಾರ' ಮುಂತಾದ ಸ್ವಾತಂತ್ರ್ಯ ವೀರರ ರಸಭರಿತವಾದ ಕಾದಂಬರಿಗಳನ್ನು ರಚಿಸಿದರೆ, ಆಲೂರು ವೆಂಕಟರಾಯರು 'ಕರ್ನಾಟಕದ ಗತವೈಭವ'ದ ಮೂಲಕ ಕನ್ನಡಿಗರಲ್ಲಿ ರಾಷ್ಟ್ರಾಭಿಮಾನವನ್ನು, ನಾಡಿನ ವೈಭವವನ್ನು ಹಾಗೂ ಕನ್ನಡ ಪ್ರೇಮವನ್ನು ಉಜ್ವಲಗೊಳಿಸಿದರು. ಇವರ 'ಮಾಧವ ಕರುಣಾ ವಿಲಾಸ"[೧೫] ರಾಷ್ಟ್ರೀಯ ಸಾಹಿತ್ಯಕ್ಕೆ ಅತ್ಯಂತ ಹೆಮ್ಮೆಯ ಕಾಣಿಕೆಯಾಗಿದೆ.

"ತ.ರಾ.ಸು. ಅವರ 'ರಕ್ತ ತರ್ಪಣ'(೧೯೫೦); ಬಸವರಾಜ ಕಟ್ಟೀಮನಿಯವರ 'ಸ್ವಾತಂತ್ರ್ಯದೆಡೆಗೆ' (೧೯೪೬) ಹಾಗೂ 'ಮಾಡಿ ಮಡಿದವರು'(೧೯೫೦), ಇನಾಮಂದಾರ್‌ರವರ 'ಮೂರಾಬಟ್ಟೆ' (೧೯೪೬) ಮತ್ತು 'ವಿಜಯಯಾತ್ರೆ'(೧೯೪೮), ಶಿವರಾಮ ಕಾರಂತರ 'ಔದಾರ್ಯದ ಉರುಳಲ್ಲಿ'(೧೯೪೭), ಶ್ರೀರಂಗರ 'ಪುರುಷಾರ್ಥ' (೧೯೪೮), ಅ.ನ.ಕೃರವರ 'ಅಮರ ಆಗಸ್ಟ್', ಕೋ.ಚನ್ನಬಸಪ್ಪನವರ 'ಹಿಂದಿರುಗಿ ಬರಲಿಲ್ಲ', ಅನಂತನಾರಾಯಣರ 'ಪಯಣದ ಹಾದಿಯಲ್ಲಿ', ನಿರಂಜನರವರ 'ಚಿರಸ್ಮರಣ."[೧೬] ಮಿರ್ಜಿ ಅಣ್ಣಾರಾಯರ 'ರಾಷ್ಟ್ರಪುರುಷ', ಬಿಂದುಮಾಧವ ಬುರ್ಲಿಯವರ 'ಸೆರೆಮನೆಯ ಶೂರ."[೧೭] ಇನ್ನು ಮುಂತಾದ ಕಾದಂಬರಿಗಳು ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದವುಗಳಾಗಿವೆ. ಈ ಎಲ್ಲ ಕಾದಂಬರಿಗಳು ಪ್ರಕಟವಾದ ಕಾಲವನ್ನು ನೋಡಿದರೆ, ೧೯೪೬ರಷ್ಟು ಹಿಂದೆ ಒಂದೆರಡು ಬಿಟ್ಟರೆ, ಉಳಿದೆಲ್ಲವೂ ಸ್ವಾತಂತ್ರ್ಯೋದಯವಾದ ವರ್ಷದ ಮತ್ತು ಅನಂತರದಲ್ಲಿ ಪ್ರಕಟವಾಗಿವೆ. ಕಾರಣ ಸ್ವಾತಂತ್ರ್ಯ ಪೂರ್ವದಲ್ಲಿ ಈ ಬಗೆಯ ಬರವಣಿಗೆ ಅಪರಾಧವೆಂದು ಪರಿಗಣಿಸುವ ಆತಂಕದ ಪರಿಸ್ಥಿತಿ ಇತ್ತು ಎಂಬುದನ್ನು ಅಲ್ಲಗಳೆಯುವಂತಿಲ್ಲ.

ನಾಟಕಗಳು ಕೂಡ ರಾಷ್ಟ್ರೀಯ ಜಾಗೃತಿಯನ್ನು ಮೂಡಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. "೧೯೩೭ರಲ್ಲಿ ಪ್ರಕಟವಾದ ರಾಜರತ್ನಂ ಅವರ 'ಗಂಡುಗೊಡಲಿ' ಎಂಬ ನಾಟಕದ ಮೂಲಕ ಅದು ಬ್ರಿಟಿಷರ ಮೇಲಿನ ಆಕ್ರೋಶವನ್ನು ಅಭಿವ್ಯಕ್ತಪಡಿಸುತ್ತದೆ. ಕುವೆಂಪು ಅವರ 'ಬಲಿದಾನ' (೧೯೪೮) ನಾಟಕ ಕೂಡ ಸ್ವಾತಂತ್ರ್ಯ ಚಳುವಳಿಯ ವಸ್ತುವಾಗಿದೆ. ಪು.ತಿ.ನ. ಅವರ 'ವಿಕಟವಿಜಯ' ಎಂಬುದು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಜನತೆಯ ಹಂಬಲವನ್ನು ದೇಶೀಯ ರಾಜರ ಧರ್ಮ ಸಂಕಟವನ್ನು ಪ್ರಕಟಿಸುವ ಅಪರೂಪದ ಒಂದು ವೈಚಾರಿಕ ನಾಟಕವಾಗಿದೆ. ಶಿವಲಿಂಗಸ್ವಾಮಿ ಚಿಕ್ಕೋಡಿ, ನಲವಡಿ ಶ್ರೀಕಂಠಶಾಸ್ತ್ರಿ, ಕಂದಗಲ್ಲ ಹನುಮಂತರಾವ್, ಗರುಡ

ಸದಾಶಿವರಾವ್, ಏಣಗಿ ಬಾಳಪ್ಪ[೧೮] ಮುಂತಾದ ನಾಟಕಕಾರರು ರಾಷ್ಟ್ರೀಯತೆಯನ್ನು ಬಿಂಬಿಸುವ ನಾಟಕಗಳನ್ನು ಬರೆದು, ನಾಟಕಗಳನ್ನಾಡಿ ಜನರಲ್ಲಿ ರಾಷ್ಟ್ರೀಯ ಮನೋಭಾವವನ್ನು ಬೆಳೆಸಿರುವುದನ್ನು ಅಧ್ಯಯನದಿಂದ ಗಮನಿಸಲಾಗಿದೆ.

ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ನಾಟಕದ ಹೆಸರಿನಲ್ಲಿ ಕಲಾವಿದರ ತಂಡವೊಂದು ಮಾಡಿದ ವಿಧ್ವಂಸಕ ಕಾರ್ಯಗಳನ್ನು ಜಿಲ್ಲೆಯ ಹಿರೇಕೆರೂರು ತಾಲೂಕಿನ ಚಿಕ್ಕೇರೂರಲ್ಲಿ ನಡೆದ ಘಟನೆಯನ್ನು ನಾಟಕದ ಸಂಘದಲ್ಲಿದ್ದ ಕಲಾವಿದ ರಾಮಚಂದ್ರಪ್ಪ ಅರ್ಕಾಚಾರಿ(ಶಿಗ್ಗಾವಿ) ಸಂದರ್ಶನದಲ್ಲಿ ನೆನಪಿಸುವಂತೆ, ಚಿಕ್ಕೇರೂರಲ್ಲಿ ನಾಟಕ ತಾಲೀಮು ಮನೆ(ಆಗ ಹಳ್ಳಿಗಳಲ್ಲಿ ೨-೩ ತಿಂಗಳು ನಾಟಕದ ತಾಲೀಮು ಮಾಡುತ್ತಿದ್ದರು) ಆ ಮನೆಯಲ್ಲಿ ಚಳುವಳಿಗೆ ಸಂಬಂಧಿಸಿದ ವಿಚಾರಗಳನ್ನು ಚರ್ಚಿಸಿ, ವಿಧ್ವಂಸಕ ಕಾರ್ಯ ಮಾಡುತ್ತಿದ್ದು, ಒಮ್ಮೆ ರಾತ್ರಿ ೧೨ ಘಂಟೆಗೆ ಸಂಗೂರು ಕರಿಯಪ್ಪ, ಟಿ.ಆರ್. ನೆಶ್ವಿ ಭೇಟಿ ನೀಡಿದ್ದು ತಮಗೆ ಸಲಹೆ-ಸೂಚನೆಗಳನ್ನು ನೀಡಿದ್ದರು. ಅದರಂತೆ ಹಿರೇಕೆರೂರು-ಚಿಕ್ಕೇರೂರು ಮಧ್ಯ ಕಾರಿಕಟ್ಟಿ ಹತ್ತಿರವಿರುವ ಸೇತುವೆ ಧ್ವಂಸ ಮಾಡಿರುವುದು ನಾಟಕದ ತಂಡದಿಂದ ರಾಷ್ಟ್ರೀಯ ಹೋರಾಟದಲ್ಲಿಯ ಪಾತ್ರವನ್ನು ಗುರುತಿಸಲಾಗಿದೆ.

ಇದೇ ರೀತಿ ಹಾವೇರಿ ಜಿಲ್ಲೆ ಹಲವು ಚಳುವಳಿಗಾರರು ಹೇಳುವಂತೆ, ಮೈಲಾರ ಮಹದೇವಪ್ಪನ ಸ್ನೇಹಿತ ಮತ್ತು ಜಿಲ್ಲೆಯಲ್ಲಿ ಪ್ರಸಿದ್ಧ ಜಾನಪದ ಕವಿ ರಾಣೆಬೆನ್ನೂರಿನ ಸಮ್ಮದ್ ಸಾಹೇಬ ಬೆಳ್ಳೂಡಿ ಹಾಡಿದ ಲಾವಣಿ ಹೆಚ್ಚು ಪ್ರೇರಣೆ ನೀಡಿತ್ತು ಎನ್ನುತ್ತಾರೆ.

'ಕಾಂತನ ಕಳಕೊಂಡ ಕಾಮಿನಿಯಂತೆ ಭಾರತ ಹಾಕ್ವದು ಕಣ್ಣೀರ।
ಶಾಂತಿ ಸಮರದೊಳು ಗುಂಡಿನೇಟಿನೊಳು ಮಡಿದ ಮಹದೇವಪ್ಪ ಮೈಲಾರ' ॥ಪ॥

ಈ ಲಾವಣಿಯು ಅಂದು ಚಳುವಳಿಗಾರರಿಗೆ ಮತ್ತು ಸಾಮಾನ್ಯ ಜನತೆಗೆ ರಾಷ್ಟ್ರೀಯ ಪ್ರಜ್ಞೆ ಮೂಡಿಸಲು ಪ್ರೇರಣೆಯಾಗಿರುವುದನ್ನು ಹಲವು ಉಲ್ಲೇಖಗಳಿಗೆ ಚಳುವಳಿಗಾರರ ಹೇಳಿಕೆಗಳು ಸಾಕ್ಷಿಭೂತವಾಗಿವೆ.

ಹೀಗೆ ಸಾಹಿತ್ಯರಂಗವು ಕೂಡ ಸ್ವಾತಂತ್ರ್ಯ ಚಳುವಳಿಯಿಂದ ಪ್ರೇರೇಪಿತರಾದ ಸಾಹಿತಿಗಳು, ಕವಿಗಳು ಸ್ವಾತಂತ್ರ್ಯದ ಪರವಾದ ಲೇಖನಗಳನ್ನು ಹೊರತಂದರು. ಅವುಗಳಿಂದ ಸ್ಫೂರ್ತಿ ಪಡೆದ ಜನತೆಯಲ್ಲಿ ರಾಷ್ಟ್ರೀಯ ಜಾಗೃತಿ ಮೂಡಲು ಪ್ರೇರಣೆಯಾಯಿತು.

**ರಾಷ್ಟ್ರೀಯತೆಯ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ**

ಇಪ್ಪತ್ತು-ಮೂವತ್ತರ ದಶಕಗಳಲ್ಲಿ ಕರ್ನಾಟಕದ ಅದರಲ್ಲಿಯೂ ವಿಶೇಷತಃ ರಾಜಕೀಯದಲ್ಲಿ ಪತ್ರಿಕೆಗಳು ಬ್ರಿಟಿಷರನ್ನು ಕೆರಳಿಸುವಲ್ಲಿ ಮತ್ತು ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸುವಲ್ಲಿ ಅತ್ಯಂತ ಮಹತ್ವದ ಪಾತ್ರವಹಿಸಿವೆ. ಧಾರವಾಡದಿಂದ 'ಕರ್ಮವೀರ', 'ವಿಜಯ', 'ರಾಜಹಂಸ', 'ಕರ್ನಾಟಕ ವೃತ್ತ' ಹಾಗೂ ಹುಬ್ಬಳ್ಳಿಯಿಂದ 'ಲೋಕಮತ' ಮತ್ತು 'ತರುಣ ಕರ್ನಾಟಕ' ಪ್ರಕಟವಾಗುತ್ತಿದ್ದವು. ಖಾರವಾಗಿಯೇ ಬರೆಯುತ್ತಿದ್ದ ಕರ್ಮವೀರ ಕಾರ್ಯಾಲಯವನ್ನು ಜಪ್ತಿ ಮಾಡಿ ಸರಕಾರವು ಅದರ ಮುದ್ರಣವನ್ನು ಬಂದ್ ಮಾಡಿತು.

"ಕರ್ಮವೀರ ಪತ್ರಿಕೆಯಲ್ಲಿ 'ಭೂರಕ್ಕಸಾಯ ಸ್ವಾಹಾ' ಭೂರಕ್ಕಸರೆಂದರೆ ಬ್ಯುರಾಕ್ರಸಿ (ನೌಕರಶಾಹಿ) ಅನ್ನುವ ಉಗ್ರಲೇಖನ ಕಂಡು ಧಾರವಾಡ ಕಲೆಕ್ಟರ್ ಪೇಂಟರನು ಭಾರತ ದಂಡ ಸಂಹಿತೆ ೧೨೪(೪) ಕಲಂನನ್ವಯ ಆರ್.ಆರ್. ದಿವಾಕರ ಮೇಲೆ ರಾಜದ್ರೋಹದ ಖಟ್ಲೆ ಹಾಕಿದನು. ಗೋಲಿಬಾರಿನ ಖಟ್ಲೆಯ ಜೊತೆಗೆ ಈ ಖಟ್ಲೆಯೂ ನಡೆಯಿತು. ಆದರೆ ನ್ಯಾಯಾಲಯದಲ್ಲಿ ಈ ಉಗ್ರ ಲೇಖನವನ್ನು ದಿವಾಕರರೇ ಬರೆದಿದ್ದು ಎಂಬುವುದಕ್ಕೆ ಯಾವ ಪುರಾವೆಗಳು ಸಿಗದ ಕಾರಣ ಪೊಲೀಸರೇ ಆ ಖಟ್ಲೆಯನ್ನು ವಾಪಾಸು ಪಡೆದರು. ಆದರೂ ಇಂಥ ಲೇಖನವನ್ನು ದಿವಾಕರರು ಬಿಟ್ಟು ಬೇರೆ ಯಾರಿಂದಲೂ ಬರೆಯಲು ಸಾಧ್ಯವಿಲ್ಲವೆಂದು ವಾದಿಸಿದರು."[೧೯] ಆದರೆ ದಿವಾಕರರು ಈ ಉಗ್ರ ಲೇಖನ ಬರೆಯುವ ಶಕ್ತಿ ನನ್ನಲ್ಲಿ ಇರಬೇಕಿತ್ತು ಆದರೆ ನಾನು ಆ ಲೇಖನವನ್ನು ಬರೆದಿಲ್ಲ ಎಂದು ಸತ್ಯವನ್ನು ಹೇಳಿ ಮುಕ್ತರಾದರು. ಆ ಲೇಖನವನ್ನು ಬರೆದವರು ಆಲೂರು ವೆಂಕಟರಾಯರಾಗಿದ್ದರು.

"೧೯೨೧ರಲ್ಲಿ ಅಣ್ಣಾಚಾರ್ಯರು 'ವಿಜಯ' ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯಲ್ಲಿ ಮಧ್ವರಾವ ಕಬ್ಬೂರು, ರಂಗನಾಥ ದಿವಾಕರ, ಗೋವಿಂದಾಚಾರ್ಯ ಗುತ್ತಲ ಮೊದಲಾದವರು ಉಗ್ರ ಲೇಖನಗಳನ್ನು ಬರೆಯುತ್ತಿದ್ದರು. ಗೋವಿಂದಾಚಾರ್ಯ ಗುತ್ತಲ ಅವರು ೧೯೨೧ ಜುಲೈ ೨೧ರಂದು ನಡೆದ ಗೋಲಿಬಾರಿನ ಬಗ್ಗೆ 'ರಾಜಹಂಸ'ದಲ್ಲಿ ಲೇಖನವನ್ನು ಬರೆದರು. ಅದಕ್ಕೆ ಅವರಲ್ಲದೆ, ಪತ್ರಿಕೆಯ ಒಡೆಯರಾದ ವಾಮನರಾವ ಜಠಾರ, ಕರ್ಮವೀರ ಪತ್ರಿಕೆಯ ಮಧ್ವರಾವ ಕಬ್ಬೂರ ಮತ್ತು ದಿವಾಕರ ರಂಗರಾವ್, ವಿಜಯ ಪತ್ರಿಕೆಯ ಅಣ್ಣಾಚಾರ್ಯ ಹೊಸಕೇರಿ, 'ಕರ್ನಾಟಕ ವೃತ್ತ'ದ ಮುದವೀಡು ಕೃಷ್ಣರಾವ್ ಅವರನ್ನು ಸರಕಾರವು ಬಂಧಿಸಿತಲ್ಲದೆ ಸರಕಾರವನ್ನು ಟೀಕಿಸಿದ್ದಕ್ಕಾಗಿ ಅವರಿಗೆ ಒಂದು ವರ್ಷ ಶಿಕ್ಷೆ ವಿಧಿಸಲಾಯಿತು. ೧೯೨೯-೩೦ರಲ್ಲಿ ಹುಬ್ಬಳ್ಳಿಯಲ್ಲಿ ದಿನಪತ್ರಿಕೆಯಾಗಿ ಪ್ರಾರಂಭವಾದ 'ತರುಣ ಕರ್ನಾಟಕ' ಸ್ವಾತಂತ್ರ್ಯ ಹೋರಾಟಕ್ಕೆ ಪ್ರಬಲ ಬೆಂಬಲ ನೀಡುತ್ತಿತ್ತು. ಅದರ ಸಂಪಾದಕ ಎಸ್.ಎಸ್. ಪಾಟೀಲರು ಬರೆಯುತ್ತಿದ್ದ ಉಗ್ರ ಲೇಖನಗಳು ಸರಕಾರವನ್ನು ಸಾಕಷ್ಟು ರೊಚ್ಚಿಗೆಬ್ಬಿಸುತ್ತಿದ್ದುವು. ಒಮ್ಮೆ ಅವರ ಮುದ್ರಣಾಲಯದ ಮೇಲೆ ಪೊಲೀಸರು ದಾಳಿ ಮಾಡಿ ಅದಕ್ಕೆ ಕೀಲಿ ಹಾಕಿ ಎಸ್.ಎಸ್.ಪಾಟೀಲರನ್ನು ಜೈಲಿಗೆ ಕಳುಹಿಸಿದರು."[೨೦] ೧೯೩೭ರಲ್ಲಿ ದಿವಾಕರ ನಾಯಕತ್ವ ಮತ್ತು ಮೊಹರೆ ಹನುಮಂತರಾಯರ ಸಂಪಾದಕತ್ವದಲ್ಲಿ ಹುಬ್ಬಳ್ಳಿಗೆ ಬಂದ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಗಣನೀಯ ಬೆಂಬಲ ನೀಡಿತು. ಇದು ಕಾಂಗ್ರೆಸ್ ಮತ್ತು ಸ್ವಾತಂತ್ರ್ಯ ಚಳುವಳಿಯ ಮುಖಪತ್ರವೆಂದೇ ಪ್ರಸಿದ್ಧಿ ಪಡೆಯಿತು. 'ಕರ್ಮವೀರ' ಪತ್ರಿಕೆ ಸಂಯುಕ್ತ ಕರ್ನಾಟಕದ ಸಹೋದರ ಪತ್ರಿಕೆಯಾಗಿ ಪ್ರಕಟಣೆ ಆರಂಭಿಸಿದ ಮೇಲೂ ಪೊಲೀಸರು ಅದರ ಕಛೇರಿಯ ಮೇಲೆ ಒಮ್ಮೆ ದಾಳಿ ನಡೆಸಿದ ಬಗ್ಗೆ ನಿವೃತ ಶಿಕ್ಷಕ ಹಾಗೂ ಚಳುವಳಿಗಾರ ಪುಟ್ಟಪ್ಪ ಹರಬಿಮನಿ ಹಾಗೂ ದೇವೇಂದ್ರಪ್ಪ ವಿಭೂತಿ ಹಾಗೂ ಹಲವು ಚಳುವಳಿಗಾರರ ಹೇಳಿಕೆಗಳಿಂದ ಗುರುತಿಸಲಾಗಿದೆ.

ಹೀಗೆ ಚಳುವಳಿ ದಿನೇದಿನೇ ಬೆಳೆಯಲು ಅಂದಿನ ರಾಷ್ಟ್ರೀಯ ಕಲ್ಪನೆಯುಳ್ಳವರು ಒಂದೆಡೆಯಾದರೆ, ಮತ್ತೊಂದೆಡೆ ಪತ್ರಿಕೆಗಳು ಜನರ ಮೇಲೆ ಗಾಢವಾದ ಪರಿಣಾಮ ಬೀರಿದ್ದರಿಂದಲೇ ಚಳುವಳಿ ದಿನ ಬೆಳಗಾಗುತ್ತ ತನ್ನ ಸ್ವರೂಪವನ್ನು ವಿಸ್ತರಿಸಿಕೊಳ್ಳುತ್ತ ಹೆಮ್ಮರವಾಗಿ ಬೆಳೆದು ಕೊನೆಗೆ ಸ್ವಾತಂತ್ರ್ಯ ಪಡೆಯುವಲ್ಲಿ ಯಶಸ್ವಿಯಾಯಿತು.

**ಸಶಸ್ತ್ರ ಬಂಡಾಯಗಳಿಂದುಂಟಾದ ರಾಷ್ಟ್ರೀಯ ಜಾಗೃತಿ**

ಭಾರತದಲ್ಲಿ ರಾಷ್ಟ್ರೀಯ ಪ್ರಜ್ಞೆ ಕೇವಲ ಸ್ವಾತಂತ್ರ್ಯ ಹೋರಾಟದಿಂದಲೇ ಆರಂಭವಾಗಲಿಲ್ಲ. ೧೮೫೭ರಲ್ಲಿ ನಡೆದ ದಂಗೆಗಳು ಬ್ರಿಟಿಷರ ದೌರ್ಜನ್ಯದ ಆಳ್ವಿಕೆಯ ಬಗ್ಗೆ ಜನರಲ್ಲಿ ಸಾಕಷ್ಟು ತಿಳಿವಳಿಕೆಯನ್ನು ಹರಡುವ ಮೂಲಕ ಆಂಗ್ಲರಿಂದ ದೇಶವನ್ನು ವಿಮೋಚನೆಗೊಳಿಸುವ ದೃಷ್ಟಿಯುಳ್ಳ ರಾಷ್ಟ್ರೀಯ ಸ್ಫೂರ್ತಿಯನ್ನು ಮೊಳಗಿಸಿತು.

"ಸದರ್ನ್ ಮರಾಠಾ ಕಂಟ್ರಿಯ ಆಡಳಿತವನ್ನು ಬ್ರಿಟಿಷರು ವಹಿಸಿಕೊಂಡ ಪ್ರಾರಂಭದಲ್ಲಿ ಅಂದರೆ ೧೮೨೦-೧೮೩೦ರ ದಶಕದಲ್ಲಿ ಇವರ ಆಡಳಿತದ ಪ್ರತಿಭಟನಾರ್ಥವಾಗಿ ದಂಗೆಗಳಾದವು. ಅವುಗಳು ಕಿತ್ತೂರು(೧೮೨೪), ಸಿಂದಗಿ(೧೮೨೪), ನಿಪ್ಪಾಣಿ, ಖಾನಾಪೂರ, ವಿಜಾಪೂರ, ಸುರಪೂರ(೧೮೫೭), ಮುಧೋಳ ತಾಲೂಕಿನ ಹಲಗಲಿ(೧೮೫೭), ಮುಂಡರಗಿ(೧೮೫೮), ನರಗುಂದ(೧೮೫೮)"[೨೧] ಮುಂತಾದ ಕಡೆಗಳಲ್ಲಿ ದಂಗೆಗಳಾದವು. ಎಲ್ಲವೂ ಚಿಕ್ಕ ಪ್ರಮಾಣದ್ದವಾದರೂ ಬ್ರಿಟಿಷರಿಗೆ ಅವುಗಳ ಹಿನ್ನೆಲೆ ಹಾಗೂ ವ್ಯಾಪ್ತಿ ತಿಳಿಯುತ್ತಿಲ್ಲವಾದ್ದರಿಂದ ಅವರು ದಂಗೆಗಳನ್ನು ಅಡಗಿಸಲು ಅಮಾನವೀಯತೆಯನ್ನು ತೋರಿಸುತ್ತಿದ್ದರು.

ಬ್ರಿಟಿಷರ ಅಮಾನುಷ ಹಾಗೂ ಅತ್ಯಂತ ಅನಾಗರಿಕ ಕ್ರೌರ್ಯ ಕೃತ್ಯಗಳ ವಿಚಾರ ಕಾಲ ಕ್ರಮೇಣ ಭಾರತದ ಎಲ್ಲ ಭಾಗದ ಜನತೆಗೆ ತಿಳಿದಂತೆ ಹಾವೇರಿ ಜಿಲ್ಲೆಯ ಜನರಿಗೂ ತಿಳಿಯಿತು. ೧೮೫೭ರಲ್ಲಿ ಪ್ರಾರಂಭವಾದ ಸ್ವಾತಂತ್ರ್ಯ ಕ್ರಾಂತಿಯು ೨೦ನೇ ಶತಮಾನದ ಪ್ರಥಮಾರ್ಧದಲ್ಲಿ ಬೆಳೆದು ಬಲಿತುಕೊಂಡು ಸ್ವಾತಂತ್ರ್ಯದ ಹೋರಾಟಕ್ಕೆ ನಾಂದಿಯಾಯಿತು. ಈ ಬಂಡಾಯಗಳ ಪ್ರಭಾವದಿಂದ ಹಾವೇರಿ ಭಾಗದ ಜನರಲ್ಲಿ ರಾಷ್ಟ್ರೀಯತೆಯ ಮನೋಭಾವನೆ ಬೆಳೆದು ಮುಂದಿನ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಲು ಕಾರಣವಾಯಿತು.

**೩.೪. ರಾಷ್ಟ್ರೀಯತೆಯ ಜಾಗೃತಿ ಮತ್ತು ರಾಷ್ಟ್ರನಾಯಕರ ಪ್ರಭಾವ**

"೧೯೦೫ರಿಂದ ೧೯೧೦ರ ಅವಧಿಯಲ್ಲಿ ರಾಷ್ಟ್ರೀಯ ಜಾಗೃತಿ ಮತ್ತು ಸ್ವದೇಶಿ ಆಂದೋಲನದ ಅಲೆಗಳು ದೇಶವ್ಯಾಪಿ ಹರಡಿತು. ತೀಕ್ಷ್ಣ ಮತ್ತು ಏಕರೂಪತೆಯಲ್ಲಿ ಚಳುವಳಿ ಕರ್ನಾಟಕದ ಎಲ್ಲ ಭಾಗಗಳಲ್ಲಿ ಒಂದೇ ಸಮನಾಗಿರಲಿಲ್ಲ. ಮಹಾರಾಷ್ಟ್ರಕ್ಕೆ ಹೊಂದಿಕೊಂಡಿದ್ದ ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳ ಪಾತ್ರ ಇತರ ಭಾಗಗಳಿಗಿಂತ ಹಿರಿದಾಗಿತ್ತು ಎನ್ನಬಹುದು. ಕಾರಣ ಇವು ಮುಂಬಯಿ ಪ್ರಾಂತಗಳಾಗಿದ್ದವು. ಅಲ್ಲದೆ, ದೇಶಕ್ಕೆ ಸ್ಫೂರ್ತಿ ನೀಡುತ್ತಿದ್ದ ಪೂನಾದ ಲೋಕಮಾನ್ಯ ತಿಲಕರಿಗೆ ಸಮೀಪವಾಗಿದ್ದವು."[೨೨] ಹಾಗಾಗಿ ರಾಜಧಾನಿ ಮುಂಬಯಿ

ಮತ್ತು ಪೂನಾಗಳ ಪ್ರಭಾವ ಸುಲಭವಾಗಿ ಈ ಭಾಗದ ಮೇಲೆ ಆಗುತ್ತಿತ್ತು. ಬ್ರಿಟಿಷ್ ಆಡಳಿತದ ನೊಗವನ್ನು ಹೇಗೆ ಕಿತ್ತೊಗೆಯುವುದು ಎಂಬ ತೀವ್ರ ಆಕಾಂಕ್ಷೆ-ಇವು ಅಂದಿನ ದಿನಗಳ ಮಹತ್ವಪೂರ್ಣ ವಿಷಯಗಳಾಗಿದ್ದವು. ಸಭೆಗಳು, ಭಾಷಣಗಳು ಕರ್ನಾಟಕದ ಪತ್ರಿಕೆಗಳ ಲೇಖನಗಳು ಇವುಗಳಿಂದ ಈ ರೀತಿಯ ಪ್ರದರ್ಶಿತವಾಗುತ್ತಿತ್ತು. ಮುಖ್ಯವಾಗಿ ಬಟ್ಟೆ ಮತ್ತು ಸಕ್ಕರೆ ಮೊದಲಾದ ಬ್ರಿಟಿಷ್ ವಸ್ತುಗಳ ಬಹಿಷ್ಕಾರ, ಸ್ವದೇಶದಲ್ಲಿ ಸಿದ್ಧವಾದ ಸರಕುಗಳ ಬಳಕೆ, ಕೆಲವು ರಾಷ್ಟ್ರೀಯ ಶಾಲೆಗಳ ಸ್ಥಾಪನೆಯಾದವು. ಲೋಕಮಾನ್ಯ ತಿಲಕರು ೧೯೦೬ರಲ್ಲಿ ಬೆಳಗಾವಿ ಭೇಟಿಯ ಪರಿಣಾಮ ಚಳುವಳಿಗೆ ಮತ್ತಿಷ್ಟು ಪ್ರೋತ್ಸಾಹ ಸಿಕ್ಕತು ಮತ್ತು ಹಾವೇರಿ ಭಾಗದ ಪರಮಣ್ಣ ಹೊಸಮನಿ, ವೀರನಗೌಡ ಪಾಟೀಲ, ಟಿ.ಆರ್. ನೆಶ್ವಿ, ಸಂಗೂರ ಕರಿಯಪ್ಪ ಮುಂತಾದ ಸ್ಥಳೀಯ ನಾಯಕರುಗಳ ಉದಯವಾಯಿತು. ಬ್ರಿಟಿಷ್ ವಸ್ತ್ರ, ಸಕ್ಕರೆ, ಸೀಮೆ ಎಣ್ಣೆ ಇವು ಬಹಿಷ್ಕಾರವಾದವು. ಬೆಳಗಾವಿ, ಧಾರವಾಡ, ಹುಬ್ಬಳ್ಳಿ, ಹಾವೇರಿ, ಹಾನಗಲ್ಲು ಮುಂತಾದ ಕಡೆ ರಾಷ್ಟ್ರೀಯ ಶಾಲೆಗಳನ್ನು ಸ್ಥಾಪಿಸುವ ಕಾರ್ಯ ಆರಂಭವಾಯಿತು.

"೧೯೧೯ರಲ್ಲಿ ಹಾವೇರಿಯ ಪುರುಷೋತ್ತಮಾಚಾರ್ಯ ರಾಯಚೂರು ವಕೀಲರು, ಜಲಿಯನ್ ವಾಲಾಭಾಗ್ ಹತ್ಯಾಕಾಂಡ ಖಂಡಿಸಿ ಹಾವೇರಿ ಮತ್ತು ರಾಣೇಬೆನ್ನೂರುಗಳಲ್ಲಿ ಸಾರ್ವಜನಿಕ ಸಭೆ-ಸಮಾರಂಭಗಳ ಮೂಲಕ ರಾಷ್ಟ್ರೀಯ ಜಾಗೃತಿ ಕಾರ್ಯ ಮೂಡಿಸಿದವು."[೨೩] ಈ ವೇಳೆಗೆ ಜಿಲ್ಲೆಯಲ್ಲಿ ರಾಷ್ಟ್ರೀಯತೆಯ ಲಕ್ಷಣಗಳ ಛಾಯೆ ಮೂಡಿಲಾರಂಭಿಸಿ ಹಲವು ತರುಣರು ಚಳುವಳಿ ಕಡೆ ಮುಖ ಮಾಡತೊಡಗಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳ ಬಹುದಾಗಿದೆ.

೧೯೧೯ನೆಯ ಇಸ್ವಿ ಅತ್ಯಂತ ನಿರ್ಣಾಯಕ ವರ್ಷವಾಗಿತ್ತು. ಖಿಲಾಫತ್ ಚಳುವಳಿಯನ್ನು ಪರಿಣಾಮಕಾರಿಯಾಗಿ ಹಿಂದು-ಮುಸ್ಲಿಮರು ಹಿಂದೆ ಎಂದೂ ಸಂಭವಿಸದ ರೀತಿಯಲ್ಲಿ ಸಮೀಪಕ್ಕೆ ಬಂದರು. "ಈ ರಾಷ್ಟ್ರೀಯ ಆಂದೋಲನವನ್ನು ಹತ್ತಿಕ್ಕಲು ಸರಕಾರವು ಸ್ಥಳಿಯ ಅಧಿಕಾರಿಗಳಿಗೆ ಅನಿರ್ಬಂಧಿತ ಸ್ವೇಚ್ಛಾಧಿಕಾರ ಕೊಟ್ಟಿತು. ಕೇಂದ್ರ ಶಾಸನ ಸಭೆಗಳಲ್ಲಿ **ರೌಲಟ್ ಮಸೂದೆ** ಮಂಡಿಸಿದ್ದನ್ನು ಗಾಂಧಿ ಮತ್ತು ಕಾಂಗ್ರೆಸ್ ಪ್ರತಿಭಟಿಸಿದರು. ಇತ್ತ ಕ್ರಿ.ಶ. ೧೯೧೮ರಲ್ಲಿ **ರೌಲೆಟ್ ಕಾಯ್ದೆ** ಬಗ್ಗೆ ಚರ್ಚಿಸಲು ೧೯೧೮ನೇ ಆಗಸ್ಟ್‌ನಲ್ಲಿ ಹಾವೇರಿಯಲ್ಲಿ ಸಾರ್ವಜನಿಕ ಸಭೆ ಸೇರಿಸಿ ಆ ಘಟನೆಯನ್ನು ಖಂಡಿಸಲಾಯಿತು."[೨೪] ಇದು ಹಾವೇರಿ ಭಾಗದ ಜನಸಾಮಾನ್ಯರಿಗೆ, ಶಾಲಾ-ಕಾಲೇಜು ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರಿತು.

"೧೯೨೪ರಲ್ಲಿ ಕಾಂಗ್ರೆಸ್ಸಿನಲ್ಲಿಯ ಭಿನ್ನಮತ ಮತ್ತೆ ಗಾಂಧೀ ನೇತೃತ್ವದಲ್ಲಿ ಒಂದುಗೂಡಿ ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನ ಯಶಸ್ವಿಯಾದದ್ದು ಅದು ಕರ್ನಾಟಕದ (ಅದರಲ್ಲಿಯೂ ಧಾರವಾಡ, ಬೆಳಗಾವಿ ಜಿಲ್ಲೆಯ) ಸ್ವಾತಂತ್ರ್ಯದ ಕಿಚ್ಚನ್ನು ಹೆಚ್ಚಿಸಿತು. ಕ್ರಿ.ಶ. ೧೯೨೪ರ ಬೆಳಗಾಂವ ಅಧಿವೇಶನ ಜಿಲ್ಲೆಗೆ ಅತಿ ಪ್ರಾಮುಖ್ಯತೆ ವಹಿಸುತ್ತದೆ."[೨೫] ಕಾರಣ ಅಂದಿನ ಮುಂಬೈ ಕರ್ನಾಟಕ ಭಾಗದಲ್ಲಿ ಚಳುವಳಿ ಹೆಚ್ಚು ಚಟುವಟಿಕೆಗಳಿಂದ ಕೂಡಿದ್ದು, ಈಗ ಗಾಂಧೀಜಿ ಅಧ್ಯಕ್ಷತೆಯಲ್ಲಿಯ

ಕಾಂಗ್ರೆಸ್ ಸಮಾವೇಶ ಅಂದಿನ ಅವಿಭಜಿತ ಧಾರವಾಡ, ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಯಲ್ಲಿ ಚಳುವಳಿಗೆ ಮತ್ತಷ್ಟು ಪ್ರೇರಣೆಯಾಯಿತು.

"೧೯೦೮ರಲ್ಲಿ ತಿಲಕರಿಗೆ ವಿಧಿಸಲ್ಪಟ್ಟ ೬ ವರ್ಷಗಳ ಕ್ರೂರ ಶಿಕ್ಷೆ ಇಡೀ ಕರ್ನಾಟಕವನ್ನು ತಲ್ಲಣಗೊಳಿಸಿತು."[೨೬] ಹಾವೇರಿಯಲ್ಲಿ ತಿಲಕರ ಬಂಧನವನ್ನು ವಿರೋಧಿಸಿ ಶಾಲಾ-ಕಾಲೇಜುಗಳ ವಿದ್ಯಾರ್ಥಿಗಳು ಮುಷ್ಕರ ಹೂಡಿದರು.

ವೈಯಕ್ತಿಕ ಸತ್ಯಾಗ್ರಹದಲ್ಲಿ ಹಾವೇರಿ ಜಿಲ್ಲೆಯಲ್ಲಿ ಹೆಚ್ಚು ಚಳುವಳಿಗಾರರು ಭಾಗಿಗಳಾಗಿದ್ದರಿಂದ ಚಳುವಳಿಯು ಮತ್ತಿಷ್ಟು ಪ್ರಜ್ವಲಿಸಲು ಪ್ರೇರಣೆಯಾಯಿತು. ಜಿಲ್ಲೆಯಲ್ಲಿ ಟಿ.ಆರ್. ನೆಶ್ವಿ ವೀರಣಗೌಡ ಪಾಟೀಲ್, ಹಳ್ಳಿಕೇರಿ ಗುದ್ಲೆಪ್ಪ, ಕೆ.ಎಫ್. ಪಾಟೀಲ್, ಬಸವಕುಮಾರ ಮುಳಗುಂದಮಠ, ವೀರಭದ್ರಪ್ಪ ಮಾಳಿ, ರಾಯಪ್ಪ ನರಗುಂದ, ಪರಮಣ್ಣ ಹೊಸಮನಿ, ನಾಗರಾಜ ಬಸ್ತಿ, ಬಸವಣ್ಣೆಪ್ಪ ಹೆಸರೂರು, ಅಪ್ಪಣ್ಣರಾವ್ ದೇಸಾಯಿ, ಮೋತಿರಾವ್ ಕುಲಕರ್ಣಿ, ಅ.ನಾ.ಕುಂದಾಪುರ, ರಂಗಚಾರ್ಯ ಗದಗಕರ್ ಹೀಗೆ ಜಿಲ್ಲೆಯಲ್ಲಿ ಸುಮಾರು ೮೬ ಜನ ವೈಯಕ್ತಿಕ ಸತ್ಯಾಗ್ರಹ ಮಾಡಿ ಜಿಲ್ಲೆಯ ಜನಸಾಮಾನ್ಯರಿಗೆ ಪ್ರೇರಣೆಯಾದರು.

"ಲೋಕಮಾನ್ಯ ತಿಲಕರ 'ಹೋಂ ರೂಲ್' ಚಳುವಳಿಯ ಕರೆಗೆ ಕರ್ನಾಟಕದ ಬೆಳಗಾವಿ, ಧಾರವಾಡ, ಬಿಜಾಪುರ ಭಾಗಗಳು ಉತ್ಸಾಹಪೂರಿತವಾಗಿ ಓಗೊಟ್ಟಿತು. ಮೇ, ೧೯೧೬ರಲ್ಲಿ 'ಹೋಂ ರೂಲ್ ಲೀಗ್'ನ ಕರ್ನಾಟಕ ಶಾಖೆ ಗಂಗಾಧರ ರಾವ್ ದೇಶಪಾಂಡೆ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಸ್ಥಾಪಿಸಲ್ಪಟ್ಟಿತ್ತು."[೨೭] ಇದರ ಪರಿಣಾಮ ಹಾವೇರಿ ಜಿಲ್ಲೆಯಲ್ಲಿ ಸ್ವದೇಶಿ ಆಂದೋಲನದ ಆರಂಭದಲ್ಲಿ ಪುರುಷೋತ್ತಮಾಚಾರ್ಯ ರಾಯಚೂರು, ಚಿಮ್ಮಲಗಿ ಗುರುರಾಯರು, ಗುತ್ತಲದ ದತ್ತಾತ್ರೇಯ ನಾಡಿಗೇರ, ಗುರುಲಿಂಗಪ್ಪ ಬದಿ, ಮಳಿಯಪ್ಪ ಭಂಟನೂರು, ಹುಚ್ಚರಾವ್ ಕೆರೆಮತ್ತಿಹಳ್ಳಿ ಇವರು ಹೋಂ ರೂಲ್ ಚಳುವಳಿಯ ಕಾರ್ಯ ಚಟುವಟಿಕೆಗಳನ್ನು ಜಿಲ್ಲೆಯಾದ್ಯಂತ ನಡೆಸಿದರು. ಸಕ್ಕರೆ ಬಾಳಾಚಾರ್ಯರು ತಮ್ಮ ವಿಶಿಷ್ಟ(ಸಾಹಿತ್ಯ, ನಾಟಕ, ಕಾದಂಬರಿಗಳಿಂದ) ಶೈಲಿಯಿಂದ ಹೋಂ ರೂಲ್ ಚಳುವಳಿಯನ್ನು ಜಿಲ್ಲೆಯಲ್ಲಿ ಯಶಸ್ವಿಗೊಳಿಸಿದರು.

೧೯೩೦ರಲ್ಲಿ ಅಸಹಕಾರ ಚಳುವಳಿ ತುಂಬ ವ್ಯಾಪಕವಾಗಿ ಪರಿಣಮಿಸಿತು. "ಗಂಗಾಧರರಾವ್ ದೇಶಪಾಂಡೆ ಹುದ್ಲಿ ಆಶ್ರಮ, ಗುದ್ಲೆಪ್ಪ ಹಳ್ಳಿಕೇರಿ ಮತ್ತು ವೆಂಕಟೇಶ ಮಾಗಡಿ ಹೊಸರಿತ್ತಿ ಆಶ್ರಮ ಬ್ಯಾಡಗಿ ಹತ್ತಿರ ತಡಸ ಆಶ್ರಮ, ಪರಮಣ್ಣ ಹೊಸಮನಿ ಹಾವೇರಿಯಲ್ಲಿ ಗಾಂಧೀ ಆಶ್ರಮ. ಹೀಗೆ ಅನೇಕ ಕಡೆ ಆಶ್ರಮಗಳು ಪ್ರಾರಂಭವಾಗಿ ನೂರಾರು ಕಾರ್ಯಕರ್ತರು, ಲಕ್ಷಾಂತರ ಗ್ರಾಮೀಣ ಜನರ ನಡುವೆ ಚರಕದ ನೆರವಿನಿಂದ ಸ್ವರಾಜ್ಯ, ಸರಳ ಜೀವನ ಮೊದಲಾದ ಗಾಂಧೀಜಿ ಸಂದೇಶ ಹೊತ್ತು ಊರೂರು ತಿರುಗಿ ಜನಜಾಗೃತಿ ಮತ್ತು ಸ್ವರಾಜ್ಯದ ಹಸಿವು ಅಪಾಯ ಸ್ಥಿತಿಯಲ್ಲಿದೆ ಎಂಬ ಅರಿವು ಮೂಡಿಸಲಾಯಿಯಿತು."[೨೮] ಹಾವೇರಿ ಜಿಲ್ಲೆಯಲ್ಲಿ

ಹೀಗೆ ಹತ್ತು ಹಲವು ಸಂಘ, ಸಂಘಟನೆಗಳು ಮತ್ತು ಆಶ್ರಮಗಳಿದ್ದು ಅವೆಲ್ಲವುಗಳ ಉದ್ದೇಶ ಬರೀ ಚಳುವಳಿಯಲ್ಲ, ಚಳುವಳಿಯೊಂದಿಗೆ ಗ್ರಾಮೀಣ ಜನರ ಸಮಸ್ಯೆಗಳು, ಮೂಢನಂಭಿಕೆಗಳು, ಸ್ವಚ್ಛತೆ, ನೂಲುವುದು, ನೇಯುವುದು, ಅಸ್ಪೃಶ್ಯತಾ ನಿವಾರಣೆ ಹೀಗೆ ಸಾರ್ವಜನಿಕರಿಗೆ ಜಾಗೃತಿ ಮೂಡಿಸುವ ಕಾರ್ಯ ಮಾಡಿದ್ದನ್ನು ದಾಖಲೆ ಮತ್ತು ಹೇಳಿಕೆಗಳಿಂದ ದಾಖಲಿಸಲಾಗಿದೆ.

೧೯೩೧-೩೩ರ ಅವಧಿಯಲ್ಲಿ ಗಾಂಧೀಜಿಯವರ ಆಶಯದಂತೆ ಅಸ್ಪೃಶ್ಯತೆಯನ್ನು ತೊಡೆದು ಹಾಕುವ ಪಣತೊಟ್ಟಿದ್ದು ಮಾತ್ರವಲ್ಲದೆ, ಉದಾರ ಧನಸಹಾಯವನ್ನು ನೀಡುವ ಮೂಲಕ ಭವ್ಯ ಸಹಕಾರ ನೀಡಿತು. ವೀರನಗೌಡ ಪಾಟೀಲ ಮೊದಲಾದವರ ನೇತೃತ್ವದಲ್ಲಿ 'ಹರಿಜನ ಸೇವಕ ಸಂಘ' ರೂಪುಗೊಂಡಿತು. ಕರ್ನಾಟಕದ ಈ ಶಾಖೆ ಅಖಿಲ ಭಾರತ ಹರಿಜನ ಸೇವಕ ಸಂಘ ಅನುಸರಿಸುತ್ತಿರುವ ದಾರಿಯನ್ನು ಅನುಸರಿಸಿ ಸ್ಮರಣಾರ್ಹ ಕಾರ್ಯ ಮಾಡಿತ್ತು. ಮತ್ತೊಂದು ಸಾಮಾಜಿಕ ಅನಿಷ್ಟವಾದ ಅಸ್ಪೃಶ್ಯತೆಯನ್ನು ತೊಡೆದು ಹಾಕುವ ಕಾರ್ಯಕ್ಕಾಗಿ ಗಾಂಧೀಜಿ ಜಿಲ್ಲೆಯ ಬ್ಯಾಡಗಿ, ಹಾವೇರಿ, ಮೋಟೆಬೆನ್ನೂರು, ಕಾಕೋಳ, ರಾಣೆಬೆನ್ನೂರು ಅಕ್ಕಿಆಲೂರುಗಳಲ್ಲಿ ಸಂಚರಿಸಿದ್ದರಿಂದ ಜಿಲ್ಲೆಯಲ್ಲಿ ರಾಷ್ಟ್ರೀಯತೆಯ ಪ್ರಜ್ಞೆಯ ಜೊತೆ ಅಸ್ಪೃಶ್ಯತೆಯ ನಿವಾರಣಾ ಕಾರ್ಯ ಉತ್ಸಾಹದಿಂದ ನಡೆದ ಬಗ್ಗೆ ಆ ಭಾಗಗಳ ಚಳುವಳಿಗಾರರ ಹೇಳಿಕೆಗಳು ದಾಖಲೆಗಳಿಗೆ ಸಾಕ್ಷಿಭೂತವಾಗಿರುವುದನ್ನು ಗುರುತಿಸಲಾಗಿದೆ.

"೧೯೩೪ರಲ್ಲಿ ಬಿಹಾರದಲ್ಲಿ ಎಂದೂ ಕಂಡರಿಯದ ಭೂಕಂಪ ಸಂಭವಿಸಿ ಇಡೀ ಭಾರತವನ್ನೇ ತಲ್ಲಣಿಸಿದಾಗ ಎನ್.ಎಸ್.ಹರ್ಡೀಕರರ ನೇತೃತ್ವದಲ್ಲಿ ಕರ್ನಾಟಕದಿಂದ ೫೦ ಜನ ಸ್ವಯಂಸೇವಕರನ್ನು ಬಿಹಾರಕ್ಕೆ ಜನಸೇವೆಗಾಗಿ ಕರೆದುಕೊಂಡು ಹೋಗಿದ್ದು, ಅಲ್ಲಿ ರಾಜೇಂದ್ರ ಪ್ರಸಾದರವರ ಮನಸ್ಸನ್ನು ಗೆಲ್ಲುವ ಮಟ್ಟಕ್ಕೆ ಕರ್ನಾಟಕದ ಸ್ವಯಂಸೇವಕರು ಕಾರ್ಯನಿರ್ವಹಿಸಿದರು."[೨೯] ಈ ಕಾರ್ಯದಲ್ಲಿ ಗೋವಿಂದಾಚಾರ್ಯ ಅಗ್ನಿಹೋತ್ರಿ, ವಿನಾಯಕ ಗಣಪುಲೆ ಮುಂತಾದವರು ಜಿಲ್ಲೆಯಿಂದ ಬಿಹಾರದ ಜನಸೇವೆ ಮಾಡಿ ರಾಷ್ಟ್ರಮಟ್ಟದಲ್ಲಿ ಜಿಲ್ಲೆಯ, ನಾಡಿನ ಪ್ರತಿನಿಧಿಯಾಗಿ ಭಾಗವಹಿಸಿದ್ದು ವಿಶೇಷವಾಗಿತ್ತು.

೧೯೪೨ರಲ್ಲಿ ಗಾಂಧೀಜಿ **'ಮಾಡು ಇಲ್ಲವೆ ಮಾಡಿ'** ಸಂದೇಶ ಕೊಟ್ಟಾಗ ಜಿಲ್ಲೆಯಲ್ಲಿ ಇತರರು ಚಳುವಳಿಗೆ ಧುಮುಕಲು ಪ್ರೇರಣೆಯಾಗಿ ಹಾವೇರಿ, ಹಿರೇಕೆರೂರು, ರಾಣೆಬೆನ್ನೂರು, ಶಿಗ್ಗಾವಿ, ಬ್ಯಾಡಗಿ, ಸವಣೂರಿನ ಸ್ವಲ್ಪ ಭಾಗ ಮತ್ತು ಹಾನಗಲ್ಲು ಹೀಗೆ ಎಲ್ಲ ಭಾಗಗಳಲ್ಲಿ ಚಲೇಜಾವ್ ಚಳುವಳಿ ಇಡೀ ಜಿಲ್ಲೆಯನ್ನು ವ್ಯಾಪಿಸಿದ್ದು ಅಲ್ಲದೇ ಜಿಲ್ಲೆಯಲ್ಲಿ ನಾಲ್ಕುಜನ ಸ್ವಾತಂತ್ರ್ಯ ಹೋರಾಟಗಾರರು ಹುತಾತ್ಮರಾದರು.

**ಹಾವೇರಿ ಜಿಲ್ಲೆಯಲ್ಲಿ ನಡೆದ ರಾಜಕೀಯ ಪರಿಷತ್**

ರಾಜಕೀಯ ಪರಿಷತ್ ಸ್ವಾತಂತ್ರ್ಯ ಹೋರಾಟಗಾರರ ಮತ್ತೊಂದು ಜಾಗೃತಿ ಕಾರ್ಯಕ್ರಮ. ೧೯೨೪ರಲ್ಲಿ ಹಾವೇರಿಯಲ್ಲಿ ಜಿಲ್ಲಾ ರಾಜಕೀಯ ಪರಿಷತ್ ಸೇರಿ ಆ ಪರಿಷತ್ತಿನ ಅಧ್ಯಕ್ಷತೆಯನ್ನು

ಹರ್ಡೇಕರ್ ಮಂಜಪ್ಪ ವಹಿಸಿದ್ದರು. ಆ ಪರಿಷತ್ತಿಗೆ ರಂಗನಾಥ ದಿವಾಕರ, ಮುದವೀಡು ಕೃಷ್ಣರಾಯರು, ಹುಕ್ಕೇರಿಕರರು, ಕರಮರಕರ, ಕಬ್ಬೂರು ಡಾಕ್ಟರ್ ಅನಂತರಾವ್ ಜಾಲಿಹಾಳ್, ಗಂಗಾಧರರಾವ್ ದೇಶಪಾಂಡೆ ಇನ್ನೂ ಮುಂತಾದ ನಾಯಕರು ಬಂದಿದ್ದರು. ತಾಲೂಕು ಕಾಂಗ್ರೆಸ್ ಅಧ್ಯಕ್ಷರಾದ ಶಂಕ್ರಪ್ಪ ತಾಂಡೂರು, ಕಾರ್ಯದರ್ಶಿಯಾಗಿ ಗೋವಿಂದಾಚಾರ್ಯ ಅಗ್ನಿಹೋತ್ರಿ ಕಾರ್ಯನಿರ್ವಹಿಸುತ್ತಿದ್ದರು. ಈ ಪರಿಷತ್ತಿಗೆ ಹಾವೇರಿಯ ಹೊಸಮನಿ ಸಿದ್ದಪ್ಪ, ಗುತ್ತಲ, ನೆಗಳೂರು, ಅಗಡಿ ಮತ್ತು ಕನವಳ್ಳಿಯಿಂದ ಅನೇಕ ಜನ ಬಂದ ವಿವರವನ್ನು ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ನೆನಪಿಸಿಕೊಳ್ಳುತ್ತಾರೆ.

ಅಂದಿನ ರಾಜಕೀಯ ಪರಿಷತ್ ವೈಭವದಿಂದ ನಡೆದು ಈ ಭಾಗದಲ್ಲಿ ಕಾಂಗ್ರೆಸ್ಸನ್ನು ಸಂಘಟಿಸಿ, ಜಾತೀಯತೆ ತೊರೆದು ಒಗ್ಗಟ್ಟಾಗಿ ಕಾರ್ಯ ನಿರ್ವಹಿಸಬೇಕೆಂದು ನಾಯಕರುಗಳು ಮಾತನಾಡಿದ್ದು ವಿಶೇಷವಾಗಿತ್ತು. ಇದೇ ಅವಧಿಯಲ್ಲಿ ಹಾವೇರಿಯ ಚನ್ನಬಸಯ್ಯ ಹಾಲಯ್ಯಗೋಳ ಇವರು 'ಬಸವರಾಜ' ಪತ್ರಿಕೆಯನ್ನು ತಮ್ಮ ಮುದ್ರಣಾಲಯದಲ್ಲಿ ಹೊರಡಿಸಿ ಕಾಂಗ್ರೆಸ್ ಪ್ರಚಾರ ಕೈಗೊಂಡರು.

"ಧಾರವಾಡ ಜಿಲ್ಲಾ ೪ನೇ ರಾಜಕೀಯ ಪರಿಷತ್ ೧೯೨೪ರಲ್ಲಿ ಮತ್ತೆ ಹಾವೇರಿ ಜಿಲ್ಲೆಯ ಹಾನಗಲ್ಲಿನಲ್ಲಿ ನಡೆಯಿತು. ಮೋತಿರಾವ್ ಭೀಮರಾವ್ ಕುಲಕರ್ಣಿಯವರ ಹೊಲದಲ್ಲಿ ಹಾಕಿದ ವೇದಿಕೆಯ ಅಧ್ಯಕ್ಷತೆಯನ್ನು ಶ್ರೀನಿವಾಸ ಕೌಜಲಗಿ ವಹಿಸಿದ್ದರು. ಗಂಗಾಧರರಾವ್ ದೇಶಪಾಂಡೆ, ಮುದವೀಡು ಕೃಷ್ಣರಾವ್, ಸದಾಶಿವ ಕಾರ್ನಾಡ್ ಇನ್ನೂ ಮುಂತಾದವರು ಭಾಗವಹಿಸಿದರೆ, ಹಾನಗಲ್ಲಿನ ನರಸಿಂಹರಾವ್ ದೇಸಾಯಿಯವರ ನಾಯಕತ್ವದಲ್ಲಿ ಮಲ್ಲಪ್ಪ ಅಕ್ಕಿಯವರ ಸ್ವಾಗತಾಧ್ಯಕ್ಷರಾಗಿ ಯಶಸ್ವಿಯಾಗಿ ನೆರವೇರಿದ ಬಗ್ಗೆ ಮತ್ತು ಹಾನಗಲ್ಲು ಭಾಗದ ಜನತೆಗೆ ಸ್ವಾತಂತ್ರ್ಯ ಸಂಗ್ರಾಮದ ಜಾಗೃತಿಯನ್ನು ಮೂಡಿಸುವಲ್ಲಿ ಪ್ರಮುಖ ಪಾತ್ರವಹಿಸಿದ ಬಗ್ಗೆ ಹಾನಗಲ್ಲಿನ ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಹೇಳಿಕೆಯಿಂದ ಗಮನಿಸಲಾಗಿದೆ.

**ಗುತ್ತಲ ಭಾಗದಲ್ಲಿ ರಾಷ್ಟ್ರೀಯ ಜಾಗ್ರತಿ ಕಾರ್ಯ**

ದತ್ತಾತ್ರೇಯ ವೆಂಕಟೇಶ ನಾಡಿಗೇರ ಗುತ್ತಲದ ಭಾಗದಲ್ಲಿ ರಾಷ್ಟ್ರೀಯ ಜಾಗೃತಿ ಮೂಡಿಸಬೇಕೆಂದು ರಾಜಕೀಯ ಪರಿಷತ್ತಿನ ಸಭೆ ಕರೆದರು. ಹಾವೇರಿಯ ಶಾಲಾ ಶಿಕ್ಷಕರಾಗಿದ್ದ ವೆಂಕಟೇಶ ತಿರುಕೋ ಕುಲಕರ್ಣಿ, ಬಂಡೋ ಕೋನೇರಿ ವಿಜಾಪುರ, ಸಕ್ಕರೆ ಬಾಳಾಚಾರ್ಯ, ಲಕ್ಷ್ಮಣ ಗುರುನಾಥ ನಾಡಿಗೇರ, ನಿಂಗಪ್ಪ ದ್ಯಾಮಪ್ಪ ಯರವಿನತಲಿ ಈ ಗುರುಗಳು ಗುತ್ತಲ ಭಾಗದಲ್ಲಿ ರಾಷ್ಟ್ರೀಯತೆಯನ್ನು ಪ್ರಸಾರ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದವರು. ಇದೇ ಭಾಗದಲ್ಲಿ ಗಳಗನಾಥರ ಕಾದಂಬರಿಗಳು, ಲೋಕಮಾನ್ಯರ 'ಕೇಸರಿ' ಪತ್ರಿಕೆ, 'ಚಿತ್ರಮಯ ಜಗತ'(ಮರಾಠಿ) ಹಾಗೂ ನಾಥ ಮಾಧವರ 'ಮರಾಠಾ ಛತ್ರಪತಿ ಇತಿಹಾಸ' ಪರಾಂಜಪೆಯವರ 'ಮರಾಠ ಆಣೆ ಇಂಗ್ರಜು' ಎನ್ನುವ ಪುಸ್ತಕಗಳನ್ನು ಗುತ್ತಲದ ಅನೇಕ ಗಣ್ಯನಾಯಕರು ತರಿಸಿ,

ಆ ಭಾಗದ ತರುಣರಿಗೆ ಓದಲು ಸಿಕ್ಕ ಫಲ ರಾಷ್ಟ್ರೀಯ ಪ್ರಜ್ಞೆ ಮೂಡಲು ಕಾರಣವಾದ ಬಗ್ಗೆ ನೆಗಳೂರಿನ ಚಳುವಳಿಗಾರ ಪರಮಣ್ಣ ಹರಕಂಗಿ ಅಭಿಪ್ರಾಯಪಡುತ್ತಾರೆ.

"ಶಾಲಾ ಶಿಕ್ಷಕರ ಕೀರ್ತನಗಳಿಂದ ಸುತ್ತಮುತ್ತಲಿನ ಹಳ್ಳಿಗಳ ಜನರಲ್ಲಿಯೂ ರಾಷ್ಟ್ರೀಯತ್ವವು ಬರಲು ಕಾರಣರಾದವರಲ್ಲಿ ಗಳಗನಾಥ ಊರಿನ ಸರ್ವೇ ಇನಾಮ್‌ದಾರರಾದ ನೀಲಕಂಠ ಶಾಸ್ತ್ರಿ ಇನಾಮ್‌ದಾರ, ಹಾವನೂರಿನ ಪೊಲೀಸ್ ಪಾಟೀಲ, ಶ್ರೀಪಾದಗೌಡ ಯಲ್ಲೋಗುಡ್ಡೂ ಕುಲಕರ್ಣಿ(ಸಂ.ಸದ್ಬೋದ ಚಂದ್ರಿಕೆ), ಬಿ.ಪ. ಕಾಳೆ, ಪಾಂಡುರಂಗ ವಿಠಲ ಕಾನಿಟಕರ, ನರಸಿಂಹ ಗಣೇಶ ಕುಲಕರ್ಣಿ ಪ್ರಮುಖರು."[೨೦] ಅಲ್ಲದೇ, ೧೯೨೧ರವರೆಗೆ ಗುತ್ತಲ ಭಾಗದಲ್ಲಿ ಯುವಕರಿಗೆ ರಾಷ್ಟ್ರೀಯ ಕಾರ್ಯಗಳನ್ನಾಗಲಿ, ಜನಜಾಗೃತಿ ಕಾರ್ಯಗಳನ್ನಾಗಲಿ ತಾವು ಯಾವ ರೀತಿ ಮಾಡಬೇಕೆಂದು ಮಾರ್ಗದರ್ಶನವಿರಲಿಲ್ಲ. ಈ ಅವಧಿಯಲ್ಲಿ ದತ್ತಾತ್ರೇಯ ವೆಂಕಟೇಶ ನಾಡಿಗೇರ ಹಾನಗಲ್ಲಗೆ ಹೋಗಿ ಅಲ್ಲಿಯ ವ್ಯಾಯಾಮ ಶಾಲೆಯ ಕಾರ್ಯಗಳನ್ನು ಅವಲೋಕಿಸಿ, ಆ ಶಾಲೆಯ ಗುರುಗಳಾದ ಅನಂತ ಭಟ್ಟ ಕುಂದಾಪುರರನ್ನು ಹಾನಗಲ್ಲಿನಿಂದ ಗುತ್ತಲಕ್ಕೆ ಬಂದಾಗ ಅವರನ್ನು ಅದ್ದೂರಿಯಾಗಿ ಬರಮಾಡಿಕೊಳ್ಳಲಾಯಿತು.

ನಂತರ ಗುತ್ತಲದಲ್ಲಿ ನಡೆದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ನರಸಿಂಹ ಗಣೇಶ ಕುಲಕರ್ಣಿ ವಹಿಸಿದ್ದರು. ಸಭೆಯು ಗುತ್ತಲದಲ್ಲಿ ವ್ಯಾಯಾಮ ಶಾಲೆ ತೆರೆಯಲು ನಿರ್ಧರಿಸಿತು. ಗುತ್ತಲದಲ್ಲಿ ಪ್ರಾರಂಭವಾದ ವ್ಯಾಯಾಮ ಶಾಲೆಯಲ್ಲಿ ಲಾಠಿ, ಭಾಲಾ, ಜಂಬಿಯಾ, ಲೇಝಿಂ, ಮಲ್ಲಕಂಬ, ಡಬಲ್‌ಬಾರ್, ಈಸುವುದು ಹೀಗೆ ಮುಂತಾದ ಶಿಕ್ಷಣವನ್ನಲ್ಲದೆ ಆಸನ, ಪ್ರಾಣಾಯಾಮ, ಸೂರ್ಯ ನಮಸ್ಕಾರ, ಭಜನೆ ಮುಂತಾದ ಆತ್ಮೋನ್ನತಿಯ ಹಾಗೂ ಝೇಂಡಾವಂದನ, ರಾಷ್ಟ್ರೀಯ ನಾಯಕರ ಚಾರಿತ್ರಿಕ ಕಥನ ಮುಂತಾದ ಕಾರ್ಯಕ್ರಮಗಳು ನಡೆಯುತ್ತಿದ್ದವು. ಪ್ರತಿ ಸೋಮವಾರ ಗುತ್ತಲದ ಸಂತೆ ಸೇರಿದ ಸುತ್ತಮುತ್ತಲಿನ ಗ್ರಾಮಸ್ಥರು ವ್ಯಾಯಾಮ ಶಾಲೆಯ ಕಾರ್ಯಕ್ರಮಗಳನ್ನು ನೋಡಿ ತೃಪ್ತಿಪಡುವುದರೊಂದಿಗೆ ಅವರಿಗೂ ರಾಷ್ಟ್ರೀಯ ಜಾಗೃತಿ ಮೂಡಿಸುವಲ್ಲಿ ಶಾಲಾ ತರುಣರು ಯಶಸ್ವಿಯಾಗುತ್ತಿದ್ದರು. ಅಲ್ಲದೆ ಬಿಡುವಿನ ವೇಳೆಯಲ್ಲಿ ಸುತ್ತಲಿನ ಗ್ರಾಮಗಳಿಗೆ ಹೋಗಿ ಜಾಗೃತಿ ಮೂಡಿಸಿ ಬರುತ್ತಿದ್ದರು. ಈ ಕಾರ್ಯಕ್ರಮಗಳು ಗುತ್ತಲ ಭಾಗದಲ್ಲಿ ರಾಷ್ಟ್ರೀಯ ಜಾಗೃತಿಗೆ ಮತ್ತಷ್ಟು ಪ್ರೇರಣೆಯಾಯಿತು. ನಂತರ ಈ ಭಾಗದಲ್ಲಿ ಎನ್.ಎಸ್..ಹರ್ಡೀಕರ್, ಮುದವೀಡು ಕೃಷ್ಣರಾಯರು, ಬುರ್ಲಿ ಮಾಧವರಾಯರು, ಕರಗುದರಿ ಮುಂತಾದವರು ಬಂದುದರಿಂದ ರಾಷ್ಟ್ರೀಯತೆಗೆ ಮತ್ತಿಷ್ಟು ಚಾಲನೆ ದೊರೆಯಿತು ಎಂಬುದನ್ನು ಅದೇ ಭಾಗದ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಪರಮಣ್ಣ ಹರಕ್ಕಂಗಿ ಅವರು ನೆನಪಿಸಿ ಕೊಳ್ಳುತ್ತಾರೆ.

"ದತ್ತಾತ್ರೇಯ ವೆಂಕಟೇಶ ನಾಡಿಗೇರರು ಧನಶೆಟ್ಟಿ ವಾಚನಾಲಯವನ್ನು ಸ್ಥಾಪಿಸಿ, ಸಾವಿರಾರು ಪುಸ್ತಕಗಳನ್ನು, ವರ್ತಮಾನ ಪತ್ರಿಕೆಗಳನ್ನು ಸಂಗ್ರಹಿಸಿ, ಜನಸಾಮಾನ್ಯರಿಗೆ ಒದಗಿಸಿದ್ದು ಕೂಡ

ರಾಷ್ಟ್ರೀಯ ಜಾಗೃತಿಕಾರ್ಯ ಮೂಡಿಸಲು ಪ್ರೋತ್ಸಾಹ ನೀಡಿತು. ಗುತ್ತಲದ ಸದಾಶಿವ ವಿನಾಯಕ ಕಾನಿಟಕರ, ಮಾಧವ ರಾಮಚಂದ್ರ ಕಾನಿಟಕರ, ಕೋನ್ಹೇರಿ ಭಗವಂತ ನಾಡಿಗೇರ ಈ ಮೂರು ಜನ ಚಿಕ್ಕವಯಸ್ಸಿನ ಸತ್ಯಾಗ್ರಹಿಗಳು ಗುತ್ತಲದ ಪೋಲೀಸ್ ಆಫೀಸಿನ ಮೇಲೆ ರಾಷ್ಟ್ರಧ್ವಜ ಹಾರಿಸಿದರು. ಇದನ್ನು ಗಂಭೀರವಾಗಿ ಪರಿಗಣಿಸಿದ ಧಾರವಾಡ ಜಿಲ್ಲಾ ಎಸ್.ಪಿ. ಸ್ವತಃ ಬಂದು ಆ ಮೂರು ಜನ ಅಪ್ರಾಪ್ತ ಯುವಕರನ್ನು ಬಂಧಿಸಿದರು ಹಾಗೂ ಅವರಿಗೆ ೬ ತಿಂಗಳ ಶಿಕ್ಷೆಯಾಯಿತು."[೩೧] ಇದು ಗುತ್ತಲದ ಭಾಗದಲ್ಲಿ ರಾಷ್ಟ್ರೀಯ ಜಾಗೃತಿಗೆ ಮತ್ತಷ್ಟು ಪ್ರೇರಣೆಯಾಯಿತೆಂಬುದನ್ನು ಆ ಭಾಗದ ಹಲವು ಚಳುವಳಿಗಾರರ ಹೇಳಿಕೆಗಳಿಂದ ಗುರುತಿಸಲಾಗಿದೆ.

**ಹಾವೇರಿ ಜಿಲ್ಲೆಯಲ್ಲಿ ಉಪ್ಪಿನ ಸತ್ಯಾಗ್ರಹ**

ದಿನಾಂಕ ೧.೬.೧೯೩೦ರಂದು ರಾಣೆಬೆನ್ನೂರು ತಾಲೂಕಿನಲ್ಲಿ ಉಪ್ಪಿನ ಸತ್ಯಾಗ್ರಹ ನಡೆಯಿತು. ರಾಣೆಬೆನ್ನೂರು ತಾಲೂಕಿನ ಹೂಲಿಹಳ್ಳಿ, ಅಸುಂಡಿ, ಹಲಗೇರಿ, ಗುಡ್ಡದ ಆನವೇರಿ ಮುಂತಾದ ಗ್ರಾಮಗಳಲ್ಲಿ ಉಪ್ಪಿನ ಸತ್ಯಾಗ್ರಹ ಮಾಡಿ ಜನಗಳ ವಿಶ್ವಾಸ ಗಳಿಸಿ ಬರಲಾಯಿತು. ಕರ್ನಾಟಕ ಸತ್ಯಾಗ್ರಹ ಮಂಡಳಿಯಿಂದ ರಾಣೆಬೆನ್ನೂರು ತಾಲೂಕಿನಲ್ಲಿ ಉಪ್ಪಿನ ಸತ್ಯಾಗ್ರಹ ನಡೆಸಲು ಸ್ವಾಮಿ ವಿಶ್ವೇಶ್ವರ ಸರಸ್ವತಿ ಎಂಬುವವರನ್ನು ರಾಣೆಬೆನ್ನೂರಿಗೆ ಕಳುಹಿಸಿ ಕೊಡಲಾಯಿತು. ತರುಣ ಸತ್ಯಾಗ್ರಹಿಗಳಲ್ಲಿ ಮೇರೆ ಮೀರಿದ ಉತ್ಸಾಹ ತುಂಬಿ ತುಳುಕುತ್ತಿತ್ತು. ಸತ್ಯಾಗ್ರಹಿಗಳ ಅಭಿಲಾಷೆಯಂತೆ ರಂಗನಾಥ ನಾಯಕ್ ನಾಯಕತ್ವದಲ್ಲಿ ಎಲ್ಲ ಸತ್ಯಾಗ್ರಹಿಗಳು ರಾಣೆಬೆನ್ನೂರು ತಾಲೂಕಿನ ಹುಲ್ಲತಿ ಗ್ರಾಮದ ಹಳ್ಳಕ್ಕೆ ಹೋದರು. ಅತ್ತ ರಾಣೆಬೆನ್ನೂರಿನ ಪೋಲೀಸರು ಉಪ್ಪಿನ ಸತ್ಯಾಗ್ರಹಿಗಳನ್ನು ಬಂಧಿಸಲು ಹಾವೇರಿಯ ಹಳ್ಳದ ಕಡೆ ಹೋದರು. ಪೋಲೀಸರು ಪುನಃ ರಾಣೆಬೆನ್ನೂರಿಗೆ ಬರುವ ವೇಳೆಗೆ ಸತ್ಯಾಗ್ರಹಿಗಳು ಉಪ್ಪಿನ ಸತ್ಯಾಗ್ರಹ ಮಾಡಿ ರಾಣೆಬೆನ್ನೂರಲ್ಲಿ ಮಾರಾಟ ಮಾಡಿ ಹೊರಟುಹೋಗಿದ್ದ ಬಗ್ಗೆ ರಾಣೆಬೆನ್ನೂರಿನ ಚಳುವಳಿಗಾರರಾದ ಶಿವಪ್ಪ ಅಸುಂಡಿ ಹಾಗೂ ಮಿನ್ನಪ್ಪ ಹಳ್ಳಿ ಇವರು ಹೆಮ್ಮೆಯಿಂದ ಹೇಳುತ್ತಾರೆ.

"ಕರ್ಜಗಿಯ ಪರಮಣ್ಣ ಹೊಸಮನಿ ಉಪ್ಪಿನ ಸತ್ಯಾಗ್ರಹಕ್ಕೆ ಅಂಕೋಲೆಗೆ ಹಾವೇರಿ ಭಾಗದಿಂದ ಹೋಗುವವರಿಗೆ ವ್ಯವಸ್ಥೆ ಮಾಡಿದರು. ತಾವು ಹಾವೇರಿಯಲ್ಲಿ ಸವುಳು ಮಣ್ಣಿನಿಂದ ಉಪ್ಪು ತಯಾರಿಸಿ ಬಹಿರಂಗವಾಗಿ ಮಾರಾಟಮಾಡಿ ಉಪ್ಪಿನ ಕಾಯ್ದೆ ಭಂಗ ಮಾಡಿದರು."[೩೨] ಹಾವೇರಿಯಲ್ಲಿ ಈ ಅವಧಿಯಲ್ಲಿ ಸಿದ್ದಪ್ಪ ಹೊಸಮನಿ ದೇಶದಲ್ಲಿ ನಡೆಯುವ ಬೆಳವಣಿಗೆ ಕಂಡು ಕಾಂಗ್ರೆಸ್ ಸೇರಿದ್ದು ಮತ್ತೊಂದು ವಿಶೇಷವಾಗಿದೆ.

**ಗಾಂಧೀಜಿ ಮತ್ತು ಹಾವೇರಿ**

ಸ್ವಾತಂತ್ರ್ಯ ಹೋರಾಟದಲ್ಲಿ ದೇಶದ ಜನತೆಗೆ ಸ್ವಾತಂತ್ರ್ಯದ ಕಿಚ್ಚು ಹಚ್ಚಿದ ಗಾಂಧೀಜಿ ಅವಿಭಜಿತ ಧಾರವಾಡ ಜಿಲ್ಲೆಯ ಜನತೆಯ ವಿಚಾರದಲ್ಲೂ ಅವರ ಪ್ರಭಾವವನ್ನು ಮರೆಯುವಂತಿಲ್ಲ. "ಜನಸಾಮಾನ್ಯರು ಗಾಂಧೀಜಿಯಲ್ಲಿ ಏನು ಕಂಡರು? ಗಾಂಧೀಜಿ ಮಾತುಗಳಲ್ಲಿ ಅವರು ಅಚಲ ವಿಶ್ವಾಸ ತಳೆದದ್ದೇಕೆ? ಇಂತಹ ಪ್ರಶ್ನೆಗಳಿಗೆ ಉತ್ತರ ನೀಡುವುದು ಕಷ್ಟ. ಆದರೆ

ನೊಂದ ಭಾರತೀಯರು ಅವರಲ್ಲಿ ಒಬ್ಬ ಅವತಾರ ಪುರುಷನನ್ನು ಕಂಡರು."[೩] ಪ್ರತಿ ಚಳುವಳಿಗಾರನ ಹೇಳಿಕೆಯು ಗಾಂಧೀಜಿ ಮೇಲಿನ ಗೌರವಕ್ಕೆ ಉತ್ತರ ದೊರೆಯದಿದ್ದರೂ ಆಂಗ್ಲರನ್ನು ಹೊಡೆದೋಡಿಸಲು ಅವರ ನಾಯಕತ್ವದಿಂದ ಮಾತ್ರ ಸಾಧ್ಯ ಎಂಬುದನ್ನು ಚಳುವಳಿಗಾರರ ಹೇಳಿಕೆಗಳಿಂದ ಗುರುತಿಸಲಾಗಿದೆ.



೧೯೩೪ರಲ್ಲಿ ಹಾವೇರಿಗೆ ಗಾಂಧೀಜಿ ಬಂದಾಗ ಹೊಸಮನಿ ಸಿದ್ಧಪ್ಪ, ರಾಮರಾಯ ಹುಕ್ಕೇರಿಕರ್, ವೀರನಗೌಡ ಪಾಟೀಲ, ಕೆ.ಎಫ್. ಪಾಟೀಲ್ ಇವರ ನಾಯಕತ್ವದಲ್ಲಿ ಬಹುದೊಡ್ಡ ಸಭೆ ನಡೆಯಿತು. ಹರ್ಡೇಕರ್ ಮಂಜಪ್ಪ ಗಾಂಧೀಜಿ ಭಾಷಣವನ್ನು ಕನ್ನಡಕ್ಕೆ ಭಾಷಾಂತರಿಸುತ್ತಿದ್ದರು. ಈ ಸಭೆಯಲ್ಲಿ ಗಾಂಧೀಜಿ ಅಸ್ಪೃಶ್ಯರನ್ನು 'ಹರಿಜನ' 'ಹರಜನ' ಮತ್ತು 'ಶಿವಜನ'ರೆಂದು ಕರೆಯಲು ಹೇಳಿದರು ಹಾಗೂ ಹಾವೇರಿಯಲ್ಲಿ ಮಹಿಳೆಯರು ತಮ್ಮ ಆಭರಣಗಳನ್ನು ವೀಳ್ಯದೆಲೆಯಲ್ಲಿಟ್ಟು ಗಾಂಧೀಜಿಗೆ ಅರ್ಪಿಸಿದರು. ಗುದ್ಲೆಪ್ಪ ಹಳ್ಳಿಕೇರಿ, ಮಹದೇವಪ್ಪ ಮೈಲಾರ, ವೆಂಕಟೇಶ ಮಾಗಡಿ, ಎನ್.ಬಿ. ಹಿರೇಮಠ ಮುಂತಾದವರ ಪರಿಶ್ರಮದ ಫಲವಾಗಿ ಈ ಜಾಗೃತಿ ಸಮಾರಂಭ ಎದ್ದು ಕಾಣುವಂತಿತ್ತು, ಕಾರಣ ಸುತ್ತಮುತ್ತಲಿನ ಹಳ್ಳಿಗಳಿಂದ ಜನರು ತಂಡೋಪತಂಡವಾಗಿ ಬಂದಿದ್ದರು ಎಂದು ಬ್ಯಾಡಗಿಯ ಷಡಕ್ಷರಪ್ಪ ಮಹಾರಾಜಪೇಟೆ, ಹಾವೇರಿಯ ನಾರಾಯಣ ರಾಮಚಂದ್ರ ಕರ್ಪೂರ ಇನ್ನೂ ಹಲವು ಚಳುವಳಿಗಾರರ ಹೇಳಿಕೆಗಳಿಂದ ಗುರುತಿಸಲಾಗಿದೆ.

ನಂತರದಲ್ಲಿ ಬ್ಯಾಡಗಿಯ ವಿಶಾಲ ಮೈದಾನದಲ್ಲಿ ಸಾರ್ವಜನಿಕ ಸಭೆಯಲ್ಲಿ ನಿಧಿ ಸಂಗ್ರಹವಾದರೆ, ಕಲ್ಲನಗೌಡ ಪಾಟೀಲ ಕಾಕೋಳದಲ್ಲಿ ಜನತೆಗೆ ಗಾಂಧೀಜಿ ದರ್ಶನ ಮಾಡಿಸಿದರು. ರಾಣೆಬೆನ್ನೂರಿನಲ್ಲಿ ಹರಿಜನ ನಿಧಿ ೧೫೫೧/-ರೂ, ಬಿಹಾರ ಭೂಕಂಪ ಪರಿಹಾರ ನಿಧಿಗೆ ೧೦೦೧/-ರೂ. ಅರ್ಪಿಸಿದರು. ಇಲ್ಲಿ ಗಾಂಧೀಜಿ ಪ್ರಭಾವವನ್ನು ಗುರುತಿಸುವಂತೆ, ಇಲ್ಲಿಯ ಜನತೆ ಭೂಕಂಪದಿಂದ ನರಳುತ್ತಿರುವ ಬಿಹಾರದ ಜನತೆಗೆ ಸ್ಪಂದಿಸಿದ ರೀತಿಯನ್ನು ಗಮನಿಸಿದರೆ, ದೇಶ ಸಾಂಪ್ರದಾಯಕವಾಗಿ ರಾಷ್ಟ್ರೀಯ ಭಾವೈಕ್ಯತೆಯನ್ನು ಸಾಧಿಸುವ ಕಡೆ ಜಿಲ್ಲೆಯ ಜನತೆಯಲ್ಲಿದ್ದ ಮನಸ್ಥಿತಿಯನ್ನು ರಾಣೆಬೆನ್ನೂರಿನ ಚಳುವಳಿಗಾರ ಮಿನ್ನಪ್ಪ ಹಳ್ಳಿ ನೆನಪಿಸಿಕೊಳ್ಳುತ್ತಾರೆ. ಈ ಜಿಲ್ಲೆಯ ಜನತೆ ದೂರದ ಬಿಹಾರದ ಜನರ ಕಷ್ಟಕ್ಕೆ ಸ್ಪಂದಿಸಿದ್ದು ಈ ಭಾಗದ ಜನತೆಯ ಸಹಾಯ, ಸಹಕಾರದ ಗುಣಕ್ಕೆ ಕನ್ನಡಿಯೆಂಬುದನ್ನು ನಿರ್ವಿವಾದ.

"೨೩-೨-೧೯೪೩ರಂದು ಗಾಂಧೀಜಿ ಉಪವಾಸ ನಿಮಿತ್ತ ಹಾವೇರಿಯಲ್ಲಿ ಶಾಲಾ-ಕಾಲೇಜು ವಿದ್ಯಾರ್ಥಿಗಳು ಪ್ರಚಂಡ ಮೆರವಣಿಗೆ ಮಾಡಿದ್ದರಿಂದ ಅನೇಕ ವಿದ್ಯಾರ್ಥಿಗಳನ್ನು ಬಂಧಿಸಲಾಯಿತು. ೩.೪.೧೯೪೩ರಂದು ಹಾವೇರಿ ತಾಲೂಕಿನ ಅಗಡಿ ಗ್ರಾಮದ ಶಾಲೆಯ ಫಲಕವನ್ನು ಸುಡಲಾಯಿತು. ಆ ಕಾರ್ಯಕ್ಕಾಗಿ ಮಹದೇವ ಲಕ್ಷ್ಮಣ ಕುಲಕರ್ಣಿ ಮತ್ತು ಕೆ.ವಿ.ಟೇಂಬೆ ಅವರನ್ನು ಬಂಧಿಸಿ ಸೆರೆಮನೆಗೆ ಕಳುಹಿಸಲಾಯಿತು. ಇದೇ ವೇಳೆಗೆ ಹಾವೇರಿಯ ಕನ್ನಡ ಶಾಲೆಯ ರೆಕಾರ್ಡ್‌ಗಳಿಗೆ ಅದೇ ಶಾಲೆಯ ವಿದ್ಯಾರ್ಥಿಗಳು ಬೆಂಕಿಯಿಟ್ಟರು. ಈ

ಕಾರಣಕ್ಕಾಗಿ ೬ ವಿದ್ಯಾರ್ಥಿಗಳನ್ನು ಬಂಧಿಸಿ, ಅವರಿಗೆ ೬ ತಿಂಗಳ ಶಿಕ್ಷೆಯಾಯಿತು."[೬೪] ಈ ಘಟನೆ ಜಿಲ್ಲೆಯ ವಿದ್ಯಾರ್ಥಿಗಳು ಚಳುವಳಿಯಲ್ಲಿ ಪಾಲ್ಗೊಳ್ಳುವಲ್ಲಿಯ ಅವರ ಕಾಳಜಿ ಹಾಗೂ ಅವರ ರಾಷ್ಟ್ರೀಯತೆಯ ಸಂಕೇತವಾಗಿರುವುದನ್ನು ಗುರುತಿಸಲಾಗಿದೆ.

೧೯೩೨ರಲ್ಲಿ ಗಾಂಧೀಜಿ ಬಂಧನವಾದಾಗ ಇತ್ತ ಹಾವೇರಿಯಲ್ಲಿ ಸಿದ್ದಪ್ಪ ಹೊಸಮನಿ, ಪರಮಣ್ಣ ಹೊಸಮನಿ, ವೆಂಕಟೇಶ ಮಾಗಡಿ ಮೊದಲಾದವರ ಬಂಧನವಾಯಿತು. ಹಾಗೂ ಹಾವೇರಿ ತಾಲೂಕು ಕಾಂಗ್ರೆಸ್ ಕಮಿಟಿಯನ್ನು ಅಕ್ರಮವೆಂದು ಸಾರಿ ಕಾಂಗ್ರೆಸ್ ಆಫೀಸನ್ನು ವಶಪಡಿಸಿಕೊಳ್ಳಲಾಯಿತು. ಹಾವೇರಿ ನಗರಸಭೆಯ ಮೇಲಿನ ಧ್ವಜವನ್ನು ಕಿತ್ತುಹಾಕಲಾಯಿತು. ಜಿಲ್ಲಾ ಕಾಂಗ್ರೆಸ್ ಆದೇಶದಂತೆ ಜನರು ೨೬ ಜನವರಿ, ೧೯೩೨ರಂದು ಸ್ವಾತಂತ್ರ್ಯ ದಿನ ಆಚರಿಸಬೇಕೆಂದಾಗ ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟರು ಹಾವೇರಿಯಲ್ಲಿ ೧೪೪ನೇ ಕಲಂ ಜಾರಿ ಮಾಡಿದರು. ಡಿ.ಎಸ್.ಪಿ ಚೆನ್ನಮುಳಗುಂದ ೨ ದಿನಗಳ ಮುಂಚಿತವಾಗಿಯೇ ಹಾವೇರಿಗೆ ಬಂದು ಯಾರು ಬಿಳಿ ಟೋಪಿಗಳನ್ನು ಧರಿಸಬಾರದೆಂದು, ಎಲ್ಲೂ ರಾಷ್ಟ್ರಧ್ವಜ ಹಾರಿಸಬಾರದೆಂದು ಕಟ್ಟಾಜ್ಞೆ ಮಾಡಿದನು. ಆದರೆ ರಾಮಕೃಷ್ಣ ಗಣಪುಲೆ ೧೨ ಜನ ಜೊತೆಗಾರರೊಂದಿಗೆ ಸೇರಿ ಹಾವೇರಿಯ ಮಧ್ಯಭಾಗದಲ್ಲಿರುವ ದೊಡ್ಡ ಹೊಂಡದಲ್ಲಿ ಇಡೀ ಊರಿಗೆ ಕಾಣುವಂತೆ ದೊಡ್ಡ ಧ್ವಜವನ್ನು ನಿಲ್ಲಿಸಿ, ಜನವರಿ ೨೬ ರಂದು ಅಲ್ಲಿಂದಲೇ ಮೆರವಣಿಗೆ ಹೊರಡಿಸಿದರು. ಡಿ.ಎಸ್.ಪಿ ಮೆರವಣಿಗೆ ನಿಲ್ಲಿಸಲು ಲಾಠಿ ಚಾರ್ಜ್ ಮಾಡಿಸಿದನು. ಅನೇಕರಿಗೆ ಗಾಯಗಳಾದವು, ಎಲ್ಲರನ್ನು ಬಂಧಿಸಿ ಜೈಲಿಗೆ ಕಳುಹಿಸಲಾಯಿತು. ಅಲ್ಲದೇ ಅದೇ ದಿನ ಮೆರವಣಿಗೆಗೆ ಸಂಬಂಧಿಸಿದಂತೆ ಮತ್ತೆ ೩೦ ಜನರನ್ನು ಬಂಧಿಸಿದ ಬಗ್ಗೆ ಶಿಗ್ಗಾವಿಯ ಚಳುವಳಿಗಾರ ರಾಮಚಂದ್ರಪ್ಪ ಗುರುರಾಯಪ್ಪ ಅರ್ಕಾಚಾರಿ ಅವರ ಹೇಳಿಕೆಯು ಕೆಲ ಕೃತಿಗಳಲ್ಲಿಯ ಉಲ್ಲೇಖಗಳಿಗೆ ಪೂರಕವಾಗಿದೆ.

**ಹಾವೇರಿಯಿಂದ ರಾಷ್ಟ್ರೀಯ ಚಳುವಳಿಗಾಗಿ, ಜಾಗೃತಿಗಾಗಿ ಬೇರೆ ಬೇರೆ ಕಡೆ ಚಳುವಳಿಕಾರರನ್ನು ಕಳುಹಿಸಿಕೊಟ್ಟಿದ್ದು :**

ಸ್ವಾತಂತ್ರ್ಯ ಹೋರಾಟದಲ್ಲಿ ಹಾವೇರಿ ಜಿಲ್ಲೆಯಿಂದ ವಿವಿಧ ಭಾಗಗಳಿಗೆ ಹಾಗೂ ಜಿಲ್ಲೆಯಾಚೆಗೆ ವಿವಿಧ ಚಳುವಳಿಗಾಗಿ ಕಳುಹಿಸಿಕೊಟ್ಟಂಥ ಘಟನೆಗಳನ್ನು ಗಮನಿಸಲಾಗಿದೆ.

"೫.೫.೧೯೩೦ಕ್ಕೆ ಗೋವಿಂದಾಚಾರ್ಯ ಅಗ್ನಿಹೋತ್ರಿ ನೇತೃತ್ವದಲ್ಲಿ ಅಂಕೋಲೆಯ ಸತ್ಯಾಗ್ರಹಕ್ಕಾಗಿ ೧೩ ಜನ ಸ್ವಯಂಸೇವಕರ ತಂಡವನ್ನು ಕಳುಹಿಸಿಕೊಟ್ಟರು. ೨೮.೮.೧೯೩೦ರಂದು ಗುತ್ತಲದ ಕೃಷ್ಣ ದೇಶಪಾಂಡೆ ಭೀಮರೆಡ್ಡಿ ಜಟ್ಟಪ್ಪನವರ ಇವರ ನೇತೃತ್ವದಲ್ಲಿ ೬ ಜನ ಸತ್ಯಾಗ್ರಹಿಗಳನ್ನು ಸತ್ಯಾಗ್ರಹ ಮಾಡುವುದಕ್ಕಾಗಿ ಹುಬ್ಬಳ್ಳಿಯ ಸತ್ಯಾಗ್ರಹ ಶಿಬಿರಕ್ಕೆ ಕಳುಹಿಸಿ ಕೊಡಲಾಯಿತು"[೬೫] ಎಂಬುದು ಗಮನಾರ್ಹ.

ಹಾವೇರಿಯಿಂದ ವಿರುಪಾಕ್ಷಪ್ಪ ಅಂಗಡಿ, ವಿನಾಯಕ ಗಣಪುಲೆ ಮತ್ತು ಕಲವೀರಪ್ಪ ಮಾಸೂರ ಈ ಮೂರು ಜನ ವಿದ್ಯಾರ್ಥಿಗಳು(ಸ್ನೇಹಿತರು) ವಿದ್ಯಾಭ್ಯಾಸಕ್ಕಾಗಿ ಉತ್ತರ ಪ್ರದೇಶದ

ವೃಂದಾವನದ ಪ್ರೇಮ ಮಹಾವಿದ್ಯಾಲಯಕ್ಕೆ ಹೋಗಿ, ಅಲ್ಲಿ ಚಳುವಳಿಗಳಲ್ಲಿ ಭಾಗಿಗಳಾಗಿ ಜೈಲು ಸೇರಿ, ಬಿಡುಗಡೆಯಾದವರು. ನಂತರ ವಿನಾಯಕ ಗಣಪುಲೆ ಮತ್ತು ಕಲವೀರಪ್ಪ ಮಾಸೂರ ಹಾವೇರಿಗೆ ಹಿಂದಿರುಗಿ ಬಂದರೆ, ವಿರುಪಾಕ್ಷಪ್ಪ ಅಂಗಡಿ ಅಲ್ಲಿಯೇ ಉಳಿದು ಕ್ರಾಂತಿಕಾರಿ ಸಂಘ ಸೇರಿ ವಿವಿಧ ಚಟುವಟಿಕೆಗಳಲ್ಲಿ ಭಾಗಿಯಾಗಿ ೧೦ ವರ್ಷಗಳ ಕಾಲ ಶಿಕ್ಷೆಗೆ ಗುರಿಯಾದರು ಎಂಬುದನ್ನು ಹಾವೇರಿಯ ಹಲವು ಚಳುವಳಿಗಾರರ ಹೇಳಿಕೆಗಳು ದಾಖಲೆಗಳಿಗೆ ಸಾಕ್ಷಿಭೂತವಾಗಿದೆ.

೧೯೩೨ರಲ್ಲಿ ಕರಿಯಪ್ಪ ಸಂಗೂರು ಕರಬಂದ ಚಳುವಳಿ ಮಾಡುವ ಸಲುವಾಗಿ ಶಿರ್ಸಿ ಸಿದ್ದಾಪುರ ಭಾಗದಲ್ಲಿ ಹಳ್ಳಿ ಹಳ್ಳಿಗಳಲ್ಲಿ ಸುತ್ತಿ ಜನರಿಗೆ ಗಾಂಧೀಜಿ ಸಂದೇಶವನ್ನು ತಿಳಿಸಿ, ಚಳುವಳಿಗೆ ಪ್ರೇರೇಪಿಸಿದರು. ಆ ಭಾಗದಲ್ಲಿ ಕರಬಂದ ಚಳುವಳಿಯಲ್ಲಿ ಹರಾಜಾದ ಜಪ್ತಿ ಮಾಲನ್ನು ಕೊಂಡ ಜನರ ಮನೆಗಳ ಎದುರು ಉಪವಾಸ ಸತ್ಯಾಗ್ರಹ ಮಾಡಲು, ಅನೇಕ ಸ್ತ್ರೀಯರನ್ನು ಹುರಿದುಂಬಿಸಿದರು. ಈ ಭಾಗದಲ್ಲಿ ಇವರು ಚಳುವಳಿಗೆ ಪ್ರಚೋದನೆ ನೀಡಿದ್ದಕ್ಕಾಗಿ ಕರಿಯಪ್ಪ ಸಂಗೂರರು ೩೦ ತಿಂಗಳು ಜೈಲು ಶಿಕ್ಷೆ ಅನುಭವಿಸಿದರು. ಹಾವೇರಿಯ ಗುಡ್ಡೋ ಸುಬ್ಬಾಜಿ ಕುಲಕರ್ಣಿ ಅಂಕೋಲೆಯಲ್ಲಿಯ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಶಿರ್ಸಿ, ಹೊನ್ನಾವರ ಭಾಗದಲ್ಲಿ ಭೂಗತ ಕಾರ್ಯಗಳನ್ನು ಮಾಡಿದ್ದಕ್ಕಾಗಿ ಅದಕ್ಕಾಗಿ ಹೊನ್ನಾವರದಲ್ಲಿ ಒಂದು ತಿಂಗಳ ಸೆರೆಮನೆ ಮತ್ತು ೨೫ ರೂ.ಗಳ ದಂಡದ ಶಿಕ್ಷೆಯನ್ನು ಕಾರವಾರದಲ್ಲಿ ಅನುಭವಿಸಿ ಬಂದ ವಿವರವನ್ನು ಆ ಭಾಗದ ನೆಗಳೂರಿನ ಚಳುವಳಿಗಾರ ದೇವೇಂದ್ರ ವಿಭೂತಿ ಹೇಳಿಕೆಯಿಂದ ತಿಳಿಯಲಾಗಿದೆ.

೧೯೨೩ರಲ್ಲಿ ನಾಗಪುರ ಧ್ವಜ ಸತ್ಯಾಗ್ರಹದಲ್ಲಿ ಅವಿಭಜಿತ ಧಾರವಾಡ ಜಿಲ್ಲೆಯಿಂದ ನಾ.ಸು. ಹರ್ಡೀಕರ್ ನೇತೃತ್ವದಲ್ಲಿ ೨೫ರಿಂದ ೩೦ ಜನ ಸ್ವಯಂಸೇವಕರನ್ನು ಕಳುಹಿಸಿಕೊಡುವ ಸಂದರ್ಭದಲ್ಲಿ ಶಿಗ್ಗಾವಿ ತಾಲೂಕಿನಿಂದ ಅನಂತಭಟ್ಟ ಹುರುಳಿಕುಪ್ಪಿ ಎಂಬುವವರನ್ನು ಹುಬ್ಬಳ್ಳಿ ಮಾರ್ಗವಾಗಿ ಕಳುಹಿಸಿಕೊಟ್ಟಾಗ, ಆ ತಂಡ ಶಿಗ್ಗಾವಿ ಮಾರ್ಗವಾಗಿ ಬರುವಾಗ ಶಿಗ್ಗಾವಿಯಲ್ಲಿಯೇ ಇವರನ್ನು ೭ ದಿನಗಳ ಕಾಲ ಬಂಧಿಸಿಟ್ಟಿರುವ ವಿವರವನ್ನು ಅದೇ ಭಾಗದ ಚಳುವಳಿಗಾರ ರಾಮಚಂದ್ರಪ್ಪ ಅರ್ಕಾಚಾರಿ ಹೇಳಿಕೆಯಿಂದ ತಿಳಿಯುತ್ತದೆ.

"೧೯೨೯ರಲ್ಲಿ ಲಾಹೋರ್ ಕಾಂಗ್ರೆಸ್ ಅಧಿವೇಶನಕ್ಕೆ ಶಿಗ್ಗಾವಿ ತಾಲೂಕಿನಿಂದ ಅನಂತ ಕೇಶವಭಟ್ಟ ಹುರುಳಿಕುಪ್ಪಿ ಮತ್ತು ನೀಲಕಂಠರಾವ್ ಹಳೇಪೇಟೆ ಇವರನ್ನು ಹಾವೇರಿ ಭಾಗದ ಪ್ರತಿನಿಧಿಗಳೆಂದು ಕಳುಹಿಸಿಕೊಟ್ಟಿತ್ತು."[೬] ೧೯೩೯ರ ತ್ರಿಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಚುನಾಯಿತ ಕೆ.ಪಿ.ಸಿ.ಸಿ. ಸದಸ್ಯರಾಗಿ, ಶಿಗ್ಗಾವಿ ತಾಲೂಕಿನ ಪ್ರತಿನಿಧಿಯಾಗಿ ಅನಂತಭಟ್ಟ ಹುರುಳಿಕುಪ್ಪಿ ಭಾಗವಹಿಸಿ ಬಂದರು."[೭] ಹೀಗೆ ಜಿಲ್ಲೆಯ ಚಳುವಳಿಗಾರರು ಬರೀ ಜಿಲ್ಲೆಯಲ್ಲಿ ಅಷ್ಟೇ ಅಲ್ಲದೆ ರಾಷ್ಟ್ರೀಯ ಕಾಂಗ್ರೆಸ್ ನಡೆಸಿದ ಎಲ್ಲ ಅಧಿವೇಶನಗಳಿಗೆ ಹೋಗಿ ಭಾಗವಹಿಸಿ ನಿದರ್ಶನವಿದೆ.

ಗುತ್ತಲದ ದತ್ತಾತ್ರೇಯ ವೆಂಕಟೇಶ ನಾಡಗೇರ ಇವರು ಲಾವಣಿ ಹೇಳುವಲ್ಲಿ ಖ್ಯಾತಿ ಪಡೆದಿದ್ದು, ಇವರನ್ನು ಅಂಕೋಲೆಯಲ್ಲಿ ನಡೆಯುವ ಉಪ್ಪಿನ ಸತ್ಯಾಗ್ರಹಕ್ಕೆ ಕಳುಹಿಸಿಕೊಡಲಾಯಿತು. ಅಲ್ಲಿ ೪೫ ದಿನಗಳ ಕಾಲ ಇದ್ದು, ಇವರ "ತಕ್ಕಡಿ ಹಿಡುಕೊಂಡು" ಎಂಬ ಲಾವಣಿ ಅಲ್ಲಿಯ ಚಳುವಳಿಗೆ ಇನ್ನೂ ಪ್ರೇರೇಪಿಸುಂತೆ ಮಾಡವಲ್ಲಿ ಅವರು ಯಶಸ್ವಿಯಾದರು. ಅಲ್ಲಿ ಇವರ ಬಂಧನವಾಗಿ ೪ ತಿಂಗಳ ಶಿಕ್ಷೆಯಾಗಿ ಕಾರವಾರದಲ್ಲಿ ಅನುಭವಿಸಿ ಗುತ್ತಲಕ್ಕೆ ಬಂದರು."[೬೮] ಹೀಗೆ ಚಳುವಳಿಗಾರರು ಗಡಿ/ಜಿಲ್ಲೆಯ ಬೇಧವಿಲ್ಲದೆ ಬೇರೆ ಬೇರೆ ಭಾಗಗಳಲ್ಲಿಯೂ ತಮ್ಮ ಕಾರ್ಯಸಾಧಿಸಿ ಬಂದಿರುವುದನ್ನು ಗಮನಿಸಿದರೆ, ಜಿಲ್ಲೆಯ ಚಳುವಳಿಗಾರರಿಗೆ ತಮ್ಮ ಕಾರ್ಯ ಮುಖ್ಯವಾಗಿತ್ತೆ ವಿನಃ ಅವರು ಎಲ್ಲಿ ಕಾರ್ಯ ಮಾಡಬೇಕೆಂಬುದು ಮುಖ್ಯವಾಗಿರಲಿಲ್ಲ ಎಂಬುದನ್ನು ದೃಢವಾಗುತ್ತದೆ.

**ಹಾವೇರಿಯ ಮೀನುಗಾರರಲ್ಲಾದ ಜಾಗೃತಿ**

ಬ್ರಿಟಿಷ್ ಸರಕಾರದ ವಿರುದ್ಧ ಒಂದು ಸಮುದಾಯ ತನ್ನದೇ ಸಂಘಟನೆಯ ಮೂಲಕ ಯಶಸ್ವಿಯಾದ ವಿಶಿಷ್ಟ ಘಟನೆಯೊಂದು ಹಾವೇರಿಯಲ್ಲಿ ನಡೆಯಿತು. "ಹಾವೇರಿಯ ದೊಡ್ಡ ಹೊಂಡದಲ್ಲಿದ್ದ ಮೀನುಗಳನ್ನು ಜಾಲಗಾರರು ಹಿಡಿದು ಮಾರಿ ತಮ್ಮ ಜೀವನ ನಡಸುತ್ತಿದ್ದರು. ಆದರೆ ಆ ಹೊಂಡವನ್ನು ಹಣದಾಸೆಗಾಗಿ ಬ್ರಿಟಿಷ್ ಸರಕಾರ ಲಿಲಾವು ಮಾಡಿ ಗುತ್ತಿಗೆದಾರ ನೊಬ್ಬನಿಗೆ ಕೊಟ್ಟಿತು. ಗುತ್ತಿಗೆದಾರನು ಮೀನುಗಳನ್ನು ಹಿಡಿಯಲು ಬರುವ ಜಾಲಗಾರರಿಗೆ ಹಣ ಕೊಟ್ಟು ಮೀನುಗಳನ್ನು ಹಿಡಿಯಲು ಹೇಳಿದನು. ನಮ್ಮ ಪೂರ್ವಜರಿಂದ ಇದೇ ಹೊಂಡದಲ್ಲಿ ಮೀನುಗಳನ್ನು ಹಿಡಿದು ಜೀವನ ಸಾಗಿಸುತ್ತ ಬಂದಿದ್ದೇವೆ ಈಗ ಯಾಕೆ ಹಣ ಕೊಡಬೇಕು? ನಾವು ಹಣ ಕೊಡುವುದಿಲ್ಲ ಎಂದು ಮೀನು ಹಿಡಿಯುತ್ತಿದ್ದರು. ಆದರೂ ಜಾಲಗಾರರು ಹಾವೇರಿಯ ಮಾಮಲೇದಾರರ ಹತ್ತಿರ ಹೋಗಿ ತಮಗೆ ಮೊದಲಿನಂತೆ ಮುಕ್ತವಾಗಿ ಮೀನುಗಳನ್ನು ಹಿಡಿಯಲು ಅನುಮತಿ ನೀಡಬೇಕೆಂದು ಕೇಳಿಕೊಂಡರು. ಅವಕಾಶ ಕೊಡುವುದಿಲ್ಲವೆಂದಾಗ ಮೀನುಗಾರರು ಎಲ್ಲರೂ ಸೇರಿ ಪ್ರತಿ ಸೋಮವಾರ ಹೊಂಡಕ್ಕೆ ಬಂದು ಸತ್ಯಾಗ್ರಹ ಮಾಡಿ ಮೀನುಗಳನ್ನು ಹಿಡಿಯಲು ಪ್ರಾರಂಭಿಸಿದರು. ಗುತ್ತಿಗೆದಾರ ಶಾಂತಪ್ಪನು ಈ ವಿಷಯವನ್ನು ಸರಕಾರದ ಗಮನಕ್ಕೆ ತಂದು ಪೊಲೀಸ್ ರಕ್ಷಣೆ ಕೊಡಬೇಕೆಂದು ಕೇಳಿದನು. ಸ್ಥಾನಿಕ ಪೊಲೀಸರಿಗೆ ಈ ಜಾಲಗಾರರನ್ನು ತಡೆಯುವುದು ಸಾಧ್ಯವಾಗದೆ ಹೋದಾಗ, ಜಿಲ್ಲಾ ವರಿಷ್ಠ ಅಧಿಕಾರಿಗಳಿಗೆ ತಿಳಿಸಿದರು. ಕೂಡಲೇ ಪೊಲೀಸ್ ವರಿಷ್ಠಾಧಿಕಾರಿ ಹಾಲೆಂಡೆ ಧಾರವಾಡ ದಿಂದ ಹೆಚ್ಚಿನ ಪೊಲೀಸರನ್ನು ಕರೆದುಕೊಂಡು ತಾನೇ ಹಾವೇರಿಗೆ ಬಂದನು.

ಪೊಲೀಸ್ ಅಧಿಕಾರಿ ಬರುವ ಸುದ್ದಿ ತಿಳಿದು ರಾಣೆಬೆನ್ನೂರು, ಹಿರೇಕೆರೂರು ತಾಲೂಕಿನ ಜಾಲಗಾರರೆಲ್ಲ ಅಂದು ಹಾವೇರಿಯ ದೊಡ್ಡ ಹೊಂಡದ ಹತ್ತಿರ ಸೇರಿದರು. ಮೀನುಗಾರರ ಸಂಖ್ಯೆ ಏರುತ್ತಲೇ ಹೋಯಿತು. ಪೊಲೀಸರಿಗೆ ನಿಯಂತ್ರಿಸಲು ಸಾಧ್ಯವಾಗದಷ್ಟು ಜನ ಬರುವುದನ್ನು ಗಮನಿಸಿದ ಹಾಲೆಂಡ್ ಪೊಲೀಸರಿಗೆ 'ಫಾಯರ್' ಎಂದು ಆದೇಶ ಕೊಡುತ್ತಿದ್ದಂತೆ, ಹಾಲೆಂಡ್‌ನ

ಹಿಂದುಗಡೆಯಿಂದ ಹಾರಿ ಬಂದ ಮೀನುಗಾರರು ಹಾಲೆಂಡ್‌ನ ಮೇಲೆರಗಿ ಕೈಯಲ್ಲಿಯ ಪಿಸ್ತೂಲನ್ನು ಕಿತ್ತುಕೊಂಡು ನೆಲಕ್ಕೆ ಕೆಡವಿ ನಿಷ್ಕ್ರೀಯನನ್ನಾಗಿ ಮಾಡಿದರು. ತಕ್ಷಣ ಅಸಿಸ್ಟಂಟ್ ಕಲೆಕ್ಟರ್ ಮೇಹರ್ ಪರಿಸ್ಥಿತಿ ಮತ್ತಿಷ್ಟು ಗಂಭೀರವಾಗಬಹುದೆಂದು ವರಿಷ್ಠಾಧಿಕಾರಿ ಹಾಲೆಂಡ್‌ರನ್ನು ಕರೆದುಕೊಂಡು ಬೇರೆಡೆ ಹೋದರು. ತಮ್ಮ ಅಧಿಕಾರಿ ಹೋದ ಮೇಲೆ ಪೋಲೀಸರು ನಿಷ್ಕ್ರೀಯರಾಗಿ ಹಿಡಿದ ಬಂದೂಕುಗಳನ್ನು ಹಾಗೆಯೇ ಹಿಡಿದುಕೊಂಡು ನಿಂತರೆ, ಮೀನುಗಾರರು ಕೇಕೆ ಹಾಕುತ್ತ ಮೀನುಗಳನ್ನು ಹಿಡಿದರು. ಅಂದಿನಿಂದ ಆ ಹೊಂಡದಲ್ಲಿ ಜಾಲಗಾರರಿಗೆ ಮುಕ್ತವಾಗಿ ಮೀನು ಹಿಡಿಯಲು ಅನುಕೂಲವಾಯಿತು. ಮರುವರ್ಷ ಸರಕಾರ ಲಿಲಾವು ಮಾಡಲು ಪ್ರಯತ್ನಿಸಿತು. ಆದರೆ ಲಿಲಾವನ್ನು ಹಿಡಿಯಲು ಯಾವ ಗುತ್ತಿಗೆದಾರನು ಮುಂದೆ ಬರಲಿಲ್ಲ."[೫೯]

ಈ ಘಟನೆಯನ್ನು ಗಮನಿಸಿದರೆ, ಅವರೆಲ್ಲರೂ ಗಾಂಧೀವಾದಿಗಳೆಂದು ಹೇಳಲಾಗದು. ಆದರೆ ಅವರು ಮೊದಲು ಪ್ರಯೋಗಿಸಿದ ಅಸ್ತ್ರ ಮಾತ್ರ ಅಹಿಂಸಾ ಸತ್ಯಾಗ್ರಹವೇ. ಈ ಘಟನೆಯ ಮೂಲಕ ಚಳುವಳಿಗಾರರಿಗೆ ಮೀನುಗಾರರು ಪ್ರೇರಣೆಯಾದರು ಅಥವಾ ಚಳುವಳಿಕಾರರ ಪ್ರೇರಣೆಯು ಮೀನುಗಾರರ ಮೇಲಾಯಿತೋ ಎಂಬುದಕ್ಕಿಂತ ಈ ಭಾಗದಲ್ಲಿ ಯಾವುದೇ ಚಳುವಳಿ ನಡೆದರೂ ಅಹಿಂಸಾ ನೀತಿಗೆ ಮೊದಲ ಆದ್ಯತೆ ನೀಡುತ್ತಿತ್ತು ಎಂಬುದಕ್ಕೆ ಸಾಕ್ಷಿಯಾಗಿದೆ.

ಹಾವೇರಿಯಲ್ಲಿ ೧೯೨೯ರಲ್ಲಿ ಪ್ರತಿ ತಿಂಗಳ ಕಡೇ ರವಿವಾರ ತಪ್ಪದೆ ಧ್ವಜವಂದನೆಯ ಕಾರ್ಯಕ್ರಮ ಮಾಡಲು ತೀರ್ಮಾನಿಸಲಾಯಿತು. ಗೋವಿಂದಾಚಾರ್ಯ ಅಗ್ನಿಹೋತ್ರಿ ನೇತೃತ್ವದಲ್ಲಿ ೧೯೩೦ ಜನವರಿ ೨೬ನೇ ದಿವಸ ಮೊದಲನೆಯ ಸ್ವಾತಂತ್ರ್ಯ ದಿನಾಚರಣೆ ನಡೆಸಲಾಯಿತು. ೧೯೩೧ ಜನವರಿ ೨೬ರಂದು ಸ್ವಾತಂತ್ರ್ಯ ದಿನದ ಧ್ವಜವಂದನೆಯ ಕಾಲಕ್ಕೆ ಹಾವೇರಿಯ ಮಧ್ಯದಲ್ಲಿರುವ ದ್ಯಾಮವ್ವನ ಕಟ್ಟೆಯ ಹತ್ತಿರ ಜನರ ಮೇಲೆ ಲಾಠಿ ಚಾರ್ಜ್ ಮಾಡಲಾದ ವಿವರ ಹಾವೇರಿಯ ಚಳುವಳಿಗಾರರ ಹೇಳಿಕೆಯಿಂದ ತಿಳಿಯುತ್ತದೆ.

"೧೯೩೨ ಜನವರಿ ೨೬ರ ಸ್ವಾತಂತ್ರ್ಯ ದಿನದಂದು ಚಳುವಳಿಗಾರರು ಸರಕಾರಿ ಆಜ್ಞೆಯನ್ನು ಉಲ್ಲಂಘಿಸಿ ಮೆರವಣಿಗೆ, ಸಭೆಗಳನ್ನು ಜರುಗಿಸಿದರು. ಆ ಕಾರಣಕ್ಕೆ ಲಾಠಿ ಚಾರ್ಜ್ ಮಾಡಲಾಗಿ ಅನೇಕ ಸತ್ಯಾಗ್ರಹಿಗಳಿಗೆ ಏಟುಗಳು ಬಿದ್ದವು. ಆಗ ರಾಮಕೃಷ್ಣ ಗಣಪುಲೆ, ಚನ್ನಬಸಯ್ಯ ಹಾಲಯ್ಯಗೋಳ ಮೊದಲಾದ ೮ ಜನರನ್ನು ಬಂಧಿಸಿ ಶಿಕ್ಷಿಸಲಾಯಿತು. ಅದೇ ದಿನ ಪುನಃ ಸಾಯಂಕಾಲ ಹಾವೇರಿಯಲ್ಲಿ ಪ್ರಚಂಡ ಮೆರವಣಿಗೆ ಮಾಡಲಾಯಿತು, ಆಗ ಪೋಲೀಸರು ಲಾಠಿಯಿಂದ ನಿರ್ದಯವಾಗಿ ಬಡಿದ ಪರಿಣಾಮ ಶೇಖರಪ್ಪ ಹಿಂಚಿಗೇರಿ ಎಂಬುವವರಿಗೆ ಬಲವಾದ ಏಟುಗಳು ಬಿದ್ದು ೩ ದಿನಗಳ ಕಾಲ ಮೂರ್ಛೆ ಹೋದರು."[೬೦] ಇಲ್ಲಿ ಆಗುತ್ತಿರುವ ಲಾಠಿ ಚಾರ್ಜ್‌ಗಳು ಚಳುವಳಿಗಾರರಿಗೆ ಭಯ ಹುಟ್ಟಿಸುವ ಬದಲು ಮತ್ತಷ್ಟು ಪ್ರೇರಣೆ ದೊರೆಯುವಂತಹ ವಾತಾವರಣವಿದ್ದ ಬಗೆಯನ್ನು ಗಮನಿಸಬಹುದಾಗಿದೆ.

**ಜಿಲ್ಲೆಯಲ್ಲಿ ರಾಷ್ಟ್ರನಾಯಕರ ಪ್ರಭಾವ**

ಹಾವೇರಿ ಜಿಲ್ಲೆಯ ಚಳುವಳಿಯಲ್ಲಿ ಪ್ರಭಾವ ಬೀರಿದ ರಾಷ್ಟ್ರನಾಯಕರಲ್ಲಿ ಮೊದಲಿಗರೆಂದರೆ ಲೋಕಮಾನ್ಯ ಬಾಲಗಂಗಾಧರ ತಿಲಕರು. ಇವರು ಜನ ಭಾಷೆಯಲ್ಲಿ, ಜನತೆಗೆ ತಿಳಿಯುವಂತೆ, ದಿನ ಬಳಕೆಯ ಉಪಮಾನ ಕೊಡುವುದರ ಮೂಲಕ ಮಾತನಾಡುತ್ತಿದ್ದರು. "೧೯೦೬ರಲ್ಲಿ ತಿಲಕರು ಬೆಳಗಾವಿಗೆ ಬಂದಾಗ ತಮ್ಮ ಭಾಷಣದಿಂದ ಜನತೆಯನ್ನು ರಾಷ್ಟ್ರೀಯ ಚಳುವಳಿಯಲ್ಲಿ ಭಾಗಿಗಳಾಗುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದರು. ಜನತೆಗೆ ಗೋಕಾಕದ ಬಟ್ಟೆ ಗಿರಣಿಯ ಉದಾಹರಣೆ ಕೊಟ್ಟು, ವಿದೇಶಿ ಬಹಿಷ್ಕಾರ ತತ್ವವನ್ನು ವಿವರಿಸಿದರು."[೪೧] ಇದು ಜನಸಾಮಾನ್ಯರು ಸ್ವದೇಶಿ ಚಳುವಳಿಗೆ ಧುಮುಕಲು ಪ್ರೇರೇಪಿರುವುದನ್ನು ಅಲ್ಲಗಳೆಯುವಂತಿಲ್ಲ.

"೧೯೧೬ರಲ್ಲಿ ಮುಂಬಯಿ ಪ್ರಾಂತೀಯ ರಾಜಕೀಯ ಪರಿಷತ್ತು ಬೆಳಗಾವಿಯಲ್ಲಿ ಸಭೆ ಸೇರಿ ಅಲ್ಲಿ ಹೋಂ ರೂಲ್ ಶಾಖೆಯನ್ನು ಸ್ಥಾಪಿಸಿತು. ಗಂಗಾಧರರಾವ್ ದೇಶಪಾಂಡೆ ಈ ಪರಿಷತ್ತಿನ ಹೊಣೆ ಹೊತ್ತಿದ್ದರು. ಆ ಪರಿಷತ್ತಿಗೆ ಮುಂಬಯಿಯ ಪ್ರಾಂತದ ದಾದಾ ಸಾಹೇಬ ಖೋಪರ್ಡೆ, ತಿಲಕರು, ನರಸೋಪಂತ ಕೇಳಕರ, ಶಿವರಾಂ ಪಂತ ಪರಾಂಜಪೆ ಮೊದಲಾದ ನಾಯಕರುಗಳು ಭಾಗವಹಿಸಿದ್ದರು."[೪೨] ಇದರಿಂದ ಆ ನಾಯಕರುಗಳ ಭಾಷಣದ ಪ್ರಭಾವ ಈ ಭಾಗಕ್ಕೆ ಆದ ಬಗ್ಗೆ ಹಾನಗಲ್ಲಿನ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಅವರ ಹೇಳಿಕೆಯಿಂದ ತಿಳಿಯುತ್ತದೆ.

ರಾಜಹಂಸ ಕಾರ್ಯಾಲಯವೆಂದರೆ ಆಗಿನ ಕಾಲಕ್ಕೆ ಸ್ಥಾನಿಕ ಮುಂದಾಳುಗಳು ಕೂಡುವ ಕೇಂದ್ರ ಸ್ಥಾನವಾಗಿತ್ತು. ಈ ಕಾರ್ಯಾಲಯಕ್ಕೆ "೧೯೧೬ರಲ್ಲಿ ತಿಲಕರು ಭೇಟಿ ನೀಡಿದರು. ೧೯೨೧ರಲ್ಲಿ ಲಾಲಾ ಲಜಪತರಾಯರು ಮತ್ತು ಶೌಕತ್ ಅಲಿ, ೧೯೨೩ರಲ್ಲಿ ಸಿ. ರಾಜಗೋಪಾಲ ಚಾರಿ, ರಾಮದಾಸ ಗಾಂಧೀ, ೧೯೨೮ರಲ್ಲಿ ಜಯರಾಮದಾಸ ದೌಲತರಾಮ, ೧೯೩೮ರಲ್ಲಿ ಜಿ.ವಿ. ಮಾಲವಣಕರ ಹೀಗೆ ರಾಷ್ಟ್ರೀಯ ನಾಯಕರುಗಳು ಈ ಕಾರ್ಯಾಲಯಕ್ಕೆ ಭೇಟಿ ನೀಡಿದ್ದಾರೆ."[೪೩] ಇದರಿಂದ ಸ್ಥಳಿಯ ನಾಯಕರುಗಳಿಗೆ ತಮ್ಮ ನಾಯಕರೊಂದಿಗೆ ಹತ್ತು ಹಲವು ವಿಷಯಗಳನ್ನು ಚರ್ಚಿಸಲು ಅನುಕೂಲವಾದರೆ, ಜನಸಾಮಾನ್ಯರಿಗೆ ನಾಯಕರುಗಳ ಭಾಷಣಗಳು ಚಳುವಳಿಗೆ ಧುಮುಕಲು ಪ್ರೇರಣೆ ನೀಡುತ್ತಿದ್ದವು ಎಂಬುದನ್ನು ಗುರುತಿಸಬಹುದು.

**ಗಾಂಧೀಜಿ**

ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹತ್ವದ ಪಾತ್ರವಹಿಸಿದ ಗಾಂಧೀಜಿ ಹಾವೇರಿ ಜಿಲ್ಲೆಯ ಚಳುವಳಿಗಾರರ ಮೇಲೆ ಬೀರಿದ ಪ್ರಭಾವವನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ. "೧೯೨೦ರ ಅಕ್ಟೋಬರ್‌ನಲ್ಲಿ ಗಾಂಧೀಜಿ ಶೌಕತ್ ಅಲಿಯೊಂದಿಗೆ ಬೆಳಗಾವಿಗೆ ಆಗಮಿಸಿದರು. ಗಾಂಧೀಜಿಯವರ ಭಾಷಣವನ್ನು ಗಂಗಾಧರರಾವ್ ದೇಶಪಾಂಡೆಯವರು, ಶೌಕತ್ ಅಲಿಯವರ ಭಾಷಣವನ್ನು ಶ್ರೀನಿವಾಸ ಕೌಜಲಗಿಯವರು ಕನ್ನಡಕ್ಕೆ ಭಾಷಾಂತರಿಸಿ ಜನತೆಗೆ ಆ ನಾಯಕರ

ವಿಚಾರಗಳನ್ನು ತಿಳಿಸಿದರು."[೪೪] ಈ ಸಭೆಯು ಮುಗಿದ ನಂತರ ಗಾಂಧೀಜಿ ಮಹಿಳಾ ಸಭೆಯನ್ನು ನಡೆಸಿದರು.

ಬೆಳಗಾವಿಯ ಮಾರುತಿ ದೇವಸ್ಥಾನದಲ್ಲಿ-"ದೇಶದ ಆಗುಹೋಗುಗಳ ಬಗ್ಗೆ, ರಾಷ್ಟ್ರೀಯ ವಿದ್ಯಮಾನಗಳ ಬಗ್ಗೆ ಮಹಿಳೆಯರು ಅರಿತುಕೊಳ್ಳಬೇಕು. ನೀವು ಉನ್ನತ ವಿದ್ಯಾಭ್ಯಾಸ ಮಾಡಬೇಕಾಗಿಲ್ಲ, ದೊಡ್ಡ ದೊಡ್ಡ ಗ್ರಂಥಗಳನ್ನು ಓದಬೇಕಿಲ್ಲ, ೫೦ ವರ್ಷದ ಹಿಂದೆ ನಮ್ಮ ಸ್ತ್ರೀಯರು ಎಲ್ಲರೂ ರಾಟಿ ತಿರುಗಿಸುತ್ತಿದ್ದರು, ಕೈನೂಲಿನ ಬಟ್ಟೆ ಉಡುತ್ತಿದ್ದರು, ಆದರೆ ನಾವು ಸ್ವದೇಶಿ ಧರ್ಮವನ್ನು ಕೈಬಿಟ್ಟೆವೋ ಅಂದೇ ನಮ್ಮ ಪತನ ಆರಂಭವಾಯಿತು. ನಾವು ಗುಲಾಮರಾದೆವು. ನೀವು ಪ್ರತಿಯೊಬ್ಬರು ದಿನವೂ ಒಂದು ಘಂಟೆ ಹೊತ್ತು ನೂತು ಆ ನೂಲನ್ನು ದೇಶಕ್ಕೆ ದಾನ ಕೊಡಬೇಕು ಎಂದು ಬೇಡುತ್ತೇನೆ. ಲೋಕಮಾನ್ಯ ತಿಲಕರು 'ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು' ಎಂದು ಹೇಳಿದ್ದಾರೆ, ಆ ಮಂತ್ರವನ್ನು ಜಪಿಸಲು ನಾವು ಶಾಲೆಗಾಗಲಿ, ಶಾಸನ ಸಭೆಗಳಿಗಾಲಿ ಹೋಗಬೇಕಾದ್ದಿಲ್ಲ, ಬದಲಾಗಿ ರಾಟಿ ನಮಗೆ ಬೇಕಾದ ಸ್ವರಾಜ್ಯವನ್ನು ಕೊಡುತ್ತದೆ"[೪೫] ಎಂಬ ಹೇಳಿಕೆ ಈ ಭಾಗದ ಸ್ವದೇಶಿ ಚಳುವಳಿಯ ಪ್ರೇರಣೆಗೆ ಸಾಕ್ಷಿಯಾಗಿದೆ. ಕಾರಣ ಜಿಲ್ಲೆಯಲ್ಲಿ ಸ್ವದೇಶಿ ಚಳುವಳಿ ಪ್ರಭಾವವು ಹಾಗೂ ಹಲವು ಘಟನೆಗಳೇ ಅದಕ್ಕೆ ಸಾಕ್ಷಿಯಾಗಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ಬೆಳಗಾವಿಯ ಅಧಿವೇಶನ**

ಕಾಕಿನಾಡಲ್ಲಿ ನಡೆದ ಅಖಿಲ ಭಾರತೀಯ ಕಾಂಗ್ರೆಸ್ ಅಧಿವೇಶನದಲ್ಲಿ ಮುಂದಿನ ಅಧಿವೇಶನ ಎಲ್ಲಿ? ಎಂಬ ರಾಷ್ಟ್ರ ನಾಯಕರ ಪ್ರಶ್ನೆಗೆ ಬಿಜಾಪುರಕ್ಕೆ ಶ್ರೀನಿವಾಸರಾಯರು, ಮಂಗಳೂರಿಗೆ ಸದಾಶಿವ ಕಾರ್ನಾಡರು, ಬೆಳಗಾವಿಗೆ ಗಂಗಾಧರರಾಯ ದೇಶಪಾಂಡೆಯವರು ತಮ್ಮ ತಮ್ಮ ಭಾಗಗಳಲ್ಲಿ ಸಭೆ ನಡೆಸಲು ಕೇಳಿಕೊಂಡಾಗ ಎಲ್ಲ ರಾಷ್ಟ್ರ ನಾಯಕರ ಅಭಿಪ್ರಾಯ ಪಡೆದ ಅಂದಿನ ಸಭೆಯ ಅಧ್ಯಕ್ಷರಾದ ಮೌಲಾನಾ ಮಹಮ್ಮದ್ ಅಲಿ ಮುಂದಿನ ಕಾಂಗ್ರೆಸ್ ಅಧಿವೇಶನ ಬೆಳಗಾವಿಯಲ್ಲಿ ನಡೆಯಲು ಒಪ್ಪಿಗೆ ನೀಡಿದರು.

೧೯೨೪ರ ಬೆಳಗಾವಿಯ ಕಾಂಗ್ರೆಸ್‌ನ ಸಭೆಗೆ ಮತ್ತೊಂದು ಹೆಮ್ಮೆ ಪಡುವಂಥ ವಿಷಯ ಕೇಳಿಬಂತು; ಅದೇನೆಂದರೆ ಗಾಂಧೀಜಿ ಈ ಸಭೆಯ ಅಧ್ಯಕ್ಷತೆ ವಹಿಸಿಕೊಳ್ಳಲು ಒಪ್ಪಿದ್ದು ಕರ್ನಾಟಕ ಪ್ರಾಂತೀಯರಿಗೆ ಸಂತೋಷದ ಸಂಗತಿಯಾಗಿತ್ತು. ಗಾಂಧೀಜಿ ಕಾಂಗ್ರೆಸ್ಸಿನ ಸಭೆಯ ಅಧ್ಯಕ್ಷತೆ ವಹಿಸಿಕೊಂಡಿದ್ದು ಮತ್ತು ಕರ್ನಾಟಕಕ್ಕೆ ಅಖಿಲ ಭಾರತದ ಸಭೆ ನಡೆಸುವ ಅವಕಾಶ ಸಿಕ್ಕಿದ್ದು ಒಂದೇ ಬಾರಿ. ಈ ವಿಷಯ ಅಂದು ಕಾಂಗ್ರೆಸ್ಸಿನ ಸ್ವಯಂಸೇವಕರಿಗೆ ಅತೀವ ಉತ್ಸಾಹವಾಗಿತ್ತು ಎಂಬುದನ್ನು ಶಿಗ್ಗಾವಿ ಭಾಗದ ಚಳುವಳಿಕಾರ ರಾಮಚಂದ್ರ ಅರ್ಕಾಚಾರಿಯವರು ಹೆಮ್ಮೆಯಿಂದ ಹೇಳುತ್ತಾರೆ.

"ಗಾಂಧೀಜಿ ಬೆಳಗಾವಿ ಸಭೆಯ ಅಧ್ಯಕ್ಷತೆಯ ಭಾಷಣ ಮಾಡಿದ್ದು ಕಡಿಮೆ; ಬದಲಾಗಿ ಭಾಷಣದ ಪ್ರತಿಯನ್ನು ಮುಂಚಿನ ದಿನವೇ ಸಾರ್ವಜನಿಕವಾಗಿ ಹಂಚಲಾಗಿತ್ತು. ಹೀಗಾಗಿ

ಗಾಂಧೀಜಿ 'ನಾನು ಮಾತನಾಡುವುದು ಏನು? ಎಂಬುದು ನಿಮ್ಮ ಪ್ರತಿಯಲ್ಲಿದೆ. ನಾನು ಕಡಿಮೆ ಮಾತನಾಡುತ್ತೇನೆ. ನನ್ನ ಮಾತು ಒಂದೇ ನೀವು ಯಾರನ್ನು ಪ್ರತಿನಿಧಿಸಲು ಬಂದಿದ್ದೀರೋ ಅವರ ಪ್ರತಿನಿಧಿಗಳು ನಿಜವಾಗಿ ಆಗಿದ್ದರೆ, ನಾವು ನೂಲಬಯಸುತ್ತೇವೆ ಎಂದಷ್ಟೇ ಯೋಚಿಸಿ, ಇದನ್ನು ಒಪ್ಪಿ, ಇಲ್ಲವಾದಲ್ಲಿ ಗಾಂಧೀ ಹುಚ್ಚನೆಂದು ತಿರಸ್ಕರಿಸಿಬಿಡಿ. ಆದರೆ ಮತ್ತೊಮ್ಮೆ ಯೋಚಿಸಿ"[೪೬] ಗಾಂಧೀಜಿ ಜನತೆಗೆ ಚಳುವಳಿಗೆ ಕೇಳಿಕೊಂಡಿರುವುದಕ್ಕಿಂತ ಆವೇಶದಂತೆ ಮಾತನಾಡುತ್ತಾ ಜನತೆಯನ್ನು ಪ್ರೇರೇಪಿಸಿದ್ದಾರೆ. ಅಲ್ಲದೆ, ಜಿಲ್ಲೆಯ ಚಳುವಳಿಗಾರರು ಗಾಂಧೀಜಿಯ ಈ ಹೇಳಿಕೆಯನ್ನು ಕಾರ್ಯರೂಪಕ್ಕೆ ತಂದಿರುವುದನ್ನು ಅವರ ಅಂದಿನ ಕಾರ್ಯಗಳು, ಅವರ ಹೇಳಿಕೆಗಳು, ದಾಖಲೆಗಳಿಂದ ತಿಳಿಯುತ್ತದೆ.

**ಗಾಂಧೀಜಿ ಹಾವೇರಿಗೆ :** ಗಾಂಧೀಜಿ ಹಾವೇರಿ ಭಾಗದ ಜನತೆಗೆ ಮತ್ತು ಚಳುವಳಿಗಾರರಿಗೆ ಉತ್ಸಾಹ ತುಂಬಲು, ಅಸ್ಪೃಶ್ಯತಾ ನಿವಾರಣೆ, ನಿಧಿ ಸಂಗ್ರಹ ಕಾರ್ಯಕ್ಕಾಗಿ ಜಿಲ್ಲೆಯ ವಿವಿಧ ಭಾಗಗಳಲ್ಲಿ ಸಂಚರಿಸಲು "೧೯೩೪ರ ಮಾರ್ಚ್‌ನಲ್ಲಿ ಪ್ರವಾಸ ಕೈಗೊಂಡರು. ಅವರು ಹಾವೇರಿಯಲ್ಲಿ ಹರಿಜನ ಶಾಲೆ ಮತ್ತು ಸಾರ್ವಜನಿಕ ಧರ್ಮಶಾಲೆ ಪ್ರಾರಂಭಿಸಲು ಚಾಲನೆ ನೀಡಿದರು. ಆಗ ಚಿತ್ರದುರ್ಗದ ವೀರಶೈವ ಜಗದ್ಗುರು ಮುರುಘಸ್ವಾಮಿಗಳು ಬಂದಿದ್ದು, ಅವರು ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಇಲ್ಲ ಎಂದು ಗಾಂಧೀಜಿ ಮಾತಿಗೆ ಸಮ್ಮತಿ ನೀಡಿದರು.

ಈ ಸಭೆಗೆ ಜಿಲ್ಲೆಯ ಸುಮಾರು ೩೦,೦೦೦ ಜನರು ಸೇರಿದ್ದರು. ಗಾಂಧೀಜಿ ಭಾಷಣವನ್ನು ಹರ್ಡೇಕರ್ ಮಂಜಪ್ಪ ಕನ್ನಡಕ್ಕೆ ಅನುವಾದಿಸುತ್ತಿದ್ದರು. ನೆರೆದ ಜನತೆಗೆ ಉತ್ಸಾಹ, ಸಂಭ್ರಮಗಳು ಮೇರೆ ವೀರಿದ್ದವು."[೪೭] ಹಾವೇರಿಯ ಸಭೆಗೆ ಜಿಲ್ಲೆಯ ಟಿ.ಆರ್.ನೆಶ್ವಿ, ವೀರನಗೌಡ ಪಾಟೀಲ್, ಕೆ.ಎಫ್.ಪಾಟೀಲ್, ಪರಮಣ್ಣ ಹೊಸಮನಿ, ಸಂಗೂರು ಕರಿಯಪ್ಪ, ಗೋವಿಂದಾಚಾರ್ಯ ಅಗ್ನಿಹೋತ್ರಿ, ವಿನಾಯಕ ಗಣಪುಲೆ ಹೀಗೆ ಜಿಲ್ಲೆಯ ನಾಯಕರ ಪರಿಶ್ರಮವಿತ್ತು. ಜಿಲ್ಲೆಯ ವಿವಿಧ ಭಾಗಗಳಿಂದ ಸಹಸ್ರ ಸಂಖ್ಯೆಯಲ್ಲಿ ಬಂದ ಜನತೆ ಆ ಸಭೆಗೆ ಸಾಕ್ಷಿಯಾದರೆ, ಜಿಲ್ಲೆಯ ಚಳುವಳಿಗೆ ಮತ್ತಷ್ಟು ವೇಗ ಪಡೆಯಲು ಅನುಕೂಲವಾಯಿತು.

ಗಾಂಧೀಜಿ ಮೋಟೆಬೆನ್ನೂರಿಗೆ "೧೯೩೪ ಮಾರ್ಚ್ ೧ ರಂದು ಶಿಷ್ಯೆ ಮೀರಾಬೆನ್ ಅವರೊಂದಿಗೆ ಆಗಮಿಸಿದರು. ಮೋಟೆಬೆನ್ನೂರಿನ ಕೋಟೆಬೈಲಿನಲ್ಲಿ ಸಮಾರಂಭ ಏರ್ಪಡಿಸಲಾಗಿತ್ತು. ಕೆ.ಎಫ್.ಪಾಟೀಲ್, ಉಕ್ಕುಂದ ಲಿಂಗರಾಜ, ಹಾವನೂರ ಬಸಪ್ಪ ಇವರ ನೇತೃತ್ವದಲ್ಲಿ, ಸಭೆ ನಡೆದು ವೇದಿಕೆಯಲ್ಲಿ ಸಿದ್ದಮ್ಮ, ಗಾಂಧೀಜಿ ಮತ್ತು ಮೀರಾಬೆನ್ ಉಪಸ್ಥಿತರಿದ್ದರು. ಆ ಸಭೆಯಲ್ಲಿ ಊರಿನ ಹರಿಜನ ನಾಯಕರು ತಮ್ಮ ಊರಿನಲ್ಲಿ ಅಸ್ಪೃಶ್ಯತೆಯಿಲ್ಲ, ಶಾಲೆಯಲ್ಲಿ ನಮ್ಮ ಮಕ್ಕಳಿಗೆ ಯಾವ ಭೇದಭಾವವಿಲ್ಲ, ನಮ್ಮ ಊರಿನ ಹೊಂಡ–ಕೆರೆಗಳಲ್ಲಿ ಯಾರಿಗೂ ನಿರ್ಬಂಧವಿಲ್ಲ ಎಂದು ಹೇಳಿದ್ದು ಗಾಂಧೀಜಿಗೆ ಅತೀವ ಸಂತೋಷವನ್ನುಂಟುಮಾಡಿತು."[೪೮] ಈ ವೇಳೆಗೆ ಹಾವೇರಿ ಜಿಲ್ಲೆಯಲ್ಲಿ ಅಸ್ಪೃಶ್ಯತಾ ನಿವಾರಣೆ ಬಗ್ಗೆ ಜಾಗೃತಿ ಮೂಡಿದ ಸ್ಪಷ್ಟನೆಯಂತಿದೆ.

"ಗಾಂಧೀಜಿ ಬ್ಯಾಡಗಿಗೆ ಭೇಟಿ ನೀಡಿದಾಗ ಅಲ್ಲಿಯ ಜನತೆ ಆತ್ಮೀಯವಾಗಿ ಸ್ವಾಗತಿಸಿದರು. ಬ್ಯಾಡಗಿಯಲ್ಲಿ ತಮಗೆ ಕೊಟ್ಟ ಕಾಣಿಕೆಗಳನ್ನು ಹರಾಜು ಮಾಡಲಾಯಿತು. ಬ್ಯಾಡಗಿಯ ಭೇಟಿಯ ನಂತರ ಕೆ.ಎಫ್. ಪಾಟೀಲ್ ಕಾಕೋಳದ ಜನತೆಗೆ ಗಾಂಧೀಜಿಯನ್ನು ಪರಿಚಯಿಸಿದರು."[೨೯] ಈ ಘಟನೆ ಬ್ಯಾಡಗಿ ಹಾಗೂ ರಾಣೇಬೆನ್ನೂರು ಭಾಗಗಳಲ್ಲಿ ಚಳುವಳಿಗೆ ಹೆಚ್ಚಿನ ಪ್ರೇರಣೆಯಾಗಿರುವುದನ್ನು ಗಮನಿಸಬಹುದು.

ಬೆಳಗಾವಿಯ ಮಿಶನ್ ಸ್ಕೂಲಿನ ವಿದ್ಯಾರ್ಥಿಗಳ ನಿಧಿ ಸ್ವೀಕರಿಸಿದ ಗಾಂಧೀಜಿ "ನಿಮಗೆ ನನ್ನ ಧನ್ಯವಾದ, ಹರಿಜನ ಸೇವೆ ಸಾಮಾಜಿಕ ಕಾರ್ಯ, ಈ ಕಾರ್ಯಗಳನ್ನು ವಿದ್ಯಾರ್ಥಿಗಳಲ್ಲದೆ ಮತ್ಯಾರು ಮಾಡಬೇಕು? ವಿದ್ಯಾರ್ಥಿಗಳು ತಮ್ಮ ಬಿಡುವಿನ ಸಮಯದಲ್ಲಿ ಹರಿಜನ ಕೇರಿಗೆ ಹೋಗಿ ಸ್ವಚ್ಛತಾ ಕಾರ್ಯ ಮಾಡಿ ಹರಿಜನ ಬಂಧುಗಳಿಗೆ ನೈರ್ಮಲ್ಯವನ್ನು ಕಲಿಸಬೇಕು ಇದೇ ನಿಜವಾದ ವಿದ್ಯೆ"[೩೦] ಎಂದು ವಿದ್ಯಾರ್ಥಿಗಳ ಕಾಯಕದ ಬಗ್ಗೆ ನೆನಪಿಸಿದ್ದರು.

"೧೯೩೪ರಲ್ಲಿ ಬೆಳಗಾವಿಯ ಹುದಲಿ ಆಶ್ರಮದಲ್ಲಿ ಇದ್ದ ಗಾಂಧೀಜಿಗೆ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನ ವೀರಭದ್ರಪ್ಪ ನ್ಯಾಮತಿಯನ್ನು ಕರೆದೊಯ್ದು ವೀರಭದ್ರಪ್ಪ ಮಾಡಿದ ಹರಿಜನ ಕಾರ್ಯಗಳೊಂದಿಗೆ ಪರಿಚಯಿಸಿದರು ವೀರನಗೌಡ ಪಾಟೀಲರು. ಅವರೆಲ್ಲರೂ ಸಂತೋಷ ಪಟ್ಟರೆ, ವೀರಭದ್ರಪ್ಪ ಆ ನಾಯಕರುಗಳ ಪ್ರೇರಣೆಯಿಂದಾಗಿ ಹಿರೇಕೆರೂರು ತಾಲೂಕಿನ ಹರಿಜನ ಸಂಘದ ಅಧ್ಯಕ್ಷನಾಗಿ ಹರಿಜನರಿಗೆ ಸರಕಾರದಿಂದ ಮತ್ತು ಸಾರ್ವಜನಿಕರಿಂದ ಸಿಗುವ ಹಕ್ಕಿನ ಬಗ್ಗೆ ವಿಶ್ಲೇಷಿಸಿ ವಿಶೇಷ ಆಸ್ಥೆಯಿಂದ ದುಡಿದಿದ್ದುದರ ಬಗ್ಗೆ ವೀರಭದ್ರಪ್ಪ ಹೆಮ್ಮೆಯಿಂದ ಉಲ್ಲೇಖಿಸಿರುತ್ತಾರೆ."[೩೧]

**ಜವಾಹರಲಾಲ ನೆಹರು** : ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಭಾವ ಬೀರಿದ ಮತ್ತೊಬ್ಬ ರಾಷ್ಟ್ರೀಯ ನಾಯಕರೆಂದರೆ ನೆಹರೂರವರು. ಇವರು ಅಖಿಲ ಭಾರತೀಯ ಹಿಂದೂಸ್ತಾನಿ ಸೇವಾದಳದ ಅಧ್ಯಕ್ಷರಾಗಿದ್ದು, ಡಾ. ಎಸ್.ಎನ್. ಹರ್ಡೀಕರರು ಕಾರ್ಯಾಧ್ಯಕ್ಷರಾಗಿದ್ದರು. ಇವರ ಆಮಂತ್ರಣದ ಮೇರೆಗೆ ಹುಬ್ಬಳ್ಳಿ, ಜಕ್ಕಲಿ ಮತ್ತು ಬಾಗಲಕೋಟೆಗೆ ಬಂದು ಈ ಭಾಗದ ಚಳುವಳಿಗೆ ಪ್ರೇರಣೆ ನೀಡಿದರು.

"೧೯೩೧ರ ಡಿಸೆಂಬರ್ ೧೭ಕ್ಕೆ ನೆಹರು ಆಗಮಿಸಿದರು. ಅಂದು ಅವರನ್ನು ತೆರೆದ ವಾಹನದಲ್ಲಿ ಮೆರವಣಿಗೆ ಮಾಡಲಾಯಿತು. ಕರ್ನಾಟಕ ಪ್ರೆಸ್ಸಿನ ಆವರಣದಲ್ಲಿ ಜವಾಹರಲಾಲರು ಸಂಪೂರ್ಣ ಸ್ವಾತಂತ್ರ್ಯ ಸಂದೇಶವನ್ನು ಸಾರಿದರು. ೧೯೩೧ ಡಿಸೆಂಬರ್ ೧೮ರಂದು ಸಾಯಂಕಾಲ ಗುಳಕವ್ವನ ಕೆರೆಯಲ್ಲಿ ಹಿಂದೂಸ್ತಾನಿ ಸೇವಾದಳದ ಸ್ವಯಂಸೇವಕರಿಗೆ ಪ್ರಮಾಣ ಪತ್ರ ವಿತರಣೆ ಸಮಾರಂಭವಿತ್ತು. ಸಮಯ ಹೆಚ್ಚಾಗುತ್ತಿದ್ದರೂ ಸ್ವತಃ ತಾವೇ ಪ್ರತಿಯೊಬ್ಬ ಸ್ವಯಂ ಸೇವಕರಿಗೆ ಪ್ರಮಾಣ ಪತ್ರ ಕೊಟ್ಟು ಕೈ ಕುಲುಕಿ ಕಳುಸುತ್ತಿದ್ದರು. ಇದರಿಂದ ಪ್ರತಿ ಸ್ವಯಂ ಸೇವಕನಿಗೂ ಹುಮ್ಮಸ್ಸು ಹೆಚ್ಚಾಯಿತೆಂದು ಅಂದಿನ ಸ್ವಯಂಸೇವಕ ಗುರುನಾಥ ಜೋಶಿಯವರು ಉಲ್ಲೇಖಿಸುತ್ತಾರೆ.

ನೆಹರೂ ಹುಬ್ಬಳ್ಳಿ ಕಾರ್ಯಕ್ರಮ ಮುಗಿಸಿ ಬಾಗಲಕೋಟೆಗೆ ಹೋಗುವ ಕಾರ್ಯಕ್ರಮವಿದ್ದು, ಅದು ಗದಗ ಮಾರ್ಗವಾಗಿ ಹೋಗಬೇಕಾಗಿದ್ದರಿಂದ ದಾರಿ ಮಧ್ಯದ ಅಂದಾನೆಪ್ಪ ದೊಡ್ಡಮೇಟಿ ಅವರ ಊರು ಜಕ್ಕಲಿ ಗ್ರಾಮಕ್ಕೆ ಹೊರಟರು. ಆಗಲೇ ಜಕ್ಕಲಿ ಸುತ್ತಮುತ್ತಲಿನ ಗ್ರಾಮಗಳಿಂದ ಸುಮಾರು ೫೦,೦೦೦ ಜನಸೇರಿದ್ದು ವಿಶೇಷವಾಗಿತ್ತು. ಗ್ರಾಮೀಣ ಪ್ರದೇಶವಾದರೂ ಅಷ್ಟೊಂದು ಜನತೆ ಸೇರಿದ್ದು ಚಳುವಳಿಯ ಪ್ರಭಾವ ಪ್ರಬಲವಾಗಿತ್ತು."[೫೨] ಜಿಲ್ಲೆಯಲ್ಲಿ ರಾಷ್ಟ್ರೀಯತೆಯ ಉತ್ಸಾಹ ಹೆಚ್ಚಿತ್ತು ಎಂಬುದನ್ನು ಈ ಘಟನೆಗಳಿಂದ ಗ್ರಹಿಸಬಹುದು.

**ಸುಭಾಸ್‌ಚಂದ್ರ ಬೋಸ್** : ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ಉತ್ಸಾಹ ತುಂಬಿದ ರಾಷ್ಟ್ರೀಯ ನಾಯಕರಲ್ಲಿ ನೇತಾಜಿ ಒಬ್ಬರು. "೧೯೩೯ರವರೆಗೆ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷ ಪದವಿಯನ್ನು ಅಲಂಕರಿಸಿದ್ದ ಸಿದ್ದಪ್ಪ ಹೊಸಮನಿ ೧೯೩೯ರಲ್ಲಿ ಅಧ್ಯಕ್ಷ ಪದವಿಯನ್ನು ಧಿಕ್ಕರಿಸಿ ನೇತಾಜಿ ಸುಭಾಸ್‌ಚಂದ್ರ ಬೋಸರು ಹೊಸದಾಗಿ ಸ್ಥಾಪಿಸಿದ್ದ 'ಫಾರ್ವರ್ಡ್ ಬ್ಲಾಕ್' ಸೇರಿ ಆ ಸಂಸ್ಥೆಯ ಕರ್ನಾಟಕ ಪ್ರಾಂತ ಅಧ್ಯಕ್ಷರೆಂದು ಅಧಿಕಾರ ವಹಿಸಿಕೊಂಡರು. ಬೆಳಗಾವಿಯ ಎ.ಎ.ಮುಂಡರಗಿ ಹಾಗೂ ಕಾಕೋಳದ ಕೆ.ಎಫ್.ಪಾಟೀಲ್ ಜೊತೆಗೂಡಿ 'ಫಾರ್ವರ್ಡ್ ಬ್ಲಾಕ್' ಸಂಸ್ಥೆಯನ್ನು ಸಂಘಟಿಸಿದರು.

ಸುಭಾಸ್‌ಚಂದ್ರ ಬೋಸರು ಹಾವೇರಿಗೆ ಬಂದು ಸಿದ್ದಪ್ಪ ಹೊಸಮನಿಯನ್ನು ಕಂಡು ಹೋದರು. ನಂತರದಲ್ಲಿ ತಮ್ಮ 'ಫಾರ್ವರ್ಡ್ ಬ್ಲಾಕ್' ಪತ್ರಿಕೆಯಲ್ಲಿ ಪ್ರಕಟಿಸಿದ ಪ್ರಶಂಸಾತ್ಮಕ ಅಗ್ರಲೇಖನದಲ್ಲಿ ಹೊಸಮನಿ ವ್ಯಕ್ತಿತ್ವದ ಹಿರಿಮೆಯನ್ನು ಉಲ್ಲೇಖಿಸಲಾಗಿದೆ. ಈ ಘಟನೆ ಹಾವೇರಿ ಜಿಲ್ಲೆಯ ಚಳುವಳಿಗಾರರ ಸಂಘಟನೆಯ ನಾಯಕತ್ವವನ್ನು ವ್ಯಕ್ತಪಡಿಸುತ್ತದೆ ಎಂದು ಚಳುವಳಿಗಾರರಾದ ರಾಮಚಂದ್ರಪ್ಪ ಕರ್ಪೂರ ಹಾಗೂ ಪರಮಣ್ಣ ಹರಕ್ಕಂಗಿ ಹೇಳುತ್ತಾರೆ.

"೧.೭.೧೯೨೧ರಂದು ಧಾರವಾಡದಲ್ಲಿ ನಡೆದ ಗೋಲಿಬಾರ್ ಘಟನೆ ಮುಂಬಯಿಯಲ್ಲಿ ಎ.ಐ.ಸಿ.ಸಿ ಸಭೆಯಲ್ಲಿ ಪ್ರಸ್ತಾಪವಾಗಿ ಆ ಪ್ರಕರಣದ ವಿಚಾರಣೆ ನಡೆಸಬೇಕೆಂದು ನಿರ್ಣಯಿಸಲಾಯಿತು. ಅದಕ್ಕಾಗಿ ಅಬ್ಬಾಸ್ ತಯ್ಯಾಬ್‌ಜಿ ಅವರ ನೇತೃತ್ವದಲ್ಲಿ ವಿಚಾರಣೆ ಸಮಿತಿ ಏರ್ಪಟ್ಟಿತು. ಅಲ್ಲಿ ಮುಖಂಡರಲ್ಲಿ ಯಾರಾದರೂ ಎರಡು ಜನ ಧಾರವಾಡಕ್ಕೆ ಹೋಗಿ ಬಂಧನದಲ್ಲಿದ್ದ ಆರೋಪಿಗಳನ್ನು ಕಂಡುಬಂದರೆ, ಅವರಿಗೆಲ್ಲ ಸಮಾಧಾನವಾಗುತ್ತದೆ ಎಂದು ಗಾಂಧೀಜಿ ಸಭೆಯಲ್ಲಿ ಪ್ರಸ್ತಾಪ ಮಾಡಿದಾಗ ಎಲ್ಲರೂ ಒಪ್ಪಿ ಲಾಲಾ ಲಜಪತ್‌ರಾಯ ಮತ್ತು ಶೌಕತ್ ಅಲಿ ಅವರನ್ನು ಕಳುಹಿಕೊಡಲಾಯಿತು. ಅವರು ಬಂದಾಗ ಅವರೊಂದಿಗೆ ಗಂಗಾಧರರಾವ್ ದೇಶಪಾಂಡೆಯಿದ್ದು, ಕೈದಿಗಳ ಯೋಗಕ್ಷೇಮ ವಿಚಾರಿಸಲಾಯಿತು."[೫೩] ಇದು ಗೋಲಿಬಾರ್ ಪ್ರಕರಣದ ಕೈದಿಗಳಿಗೆ ಹೊಸ ಹುಮ್ಮಸ್ಸು ತುಂಬಿತು. ಹೀಗೆ ಜಿಲ್ಲೆಯ ಚಳುವಳಿಗೆ ರಾಷ್ಟ್ರನಾಯಕರ ಆಗಮನದಿಂದ ವಿವಿಧ ರೀತಿಯಲ್ಲಿ ಪ್ರಭಾವ ಬೀರಿದ್ದನ್ನು ಹಾಗೂ ನಾಯಕರುಗಳ ಪ್ರೇರಣಾತ್ಮಕ ಮಾತುಗಳನ್ನು ಪಾಲಿಸಿದ ಬಗ್ಗೆ ಅಧ್ಯಯನದಲ್ಲಿ ಗುರುತಿಸಲಾಗಿದೆ.

### ೩.೫. ಚಳುವಳಿಗಳಲ್ಲಿ ಸಂಘ, ಸಂಘಟನೆ ಮತ್ತು ಆಶ್ರಮಗಳ ಪಾತ್ರ

ಹಾವೇರಿ ಜಿಲ್ಲೆಯಲ್ಲಿ "೧೯೨೪ರಿಂದ ೧೯೨೮ರವರೆಗೆ ಕಾಂಗ್ರೆಸ್ ನಾಯಕರು ತಮ್ಮ ಸಂಘಟನೆಯ ಕಾರ್ಯವನ್ನು ಹುಮ್ಮಸ್ಸಿನಿಂದ ನಡೆಸಿದರು. ಹಾವೇರಿ ಭಾಗದ ಅಗಡಿ, ದೇವಗಿರಿ, ಗುತ್ತಲ, ಕರ್ಜಗಿ, ಹೊಸರಿತ್ತಿ, ಕನವಳ್ಳಿ, ಹಾವನೂರ, ಕೊರಡೂರು ಹೀಗೆ ಮೊದಲಾದ ಹಳ್ಳಿಗಳಲ್ಲಿ ಕಾಂಗ್ರೆಸ್ ಶಾಖಾ ಕಛೇರಿಗಳು ಪ್ರಾರಂಭವಾದವು. ಹೊಸರಿತ್ತಿಯಲ್ಲಿ ಗುದ್ಲೆಪ್ಪ ಹಳ್ಳಿಕೇರಿ ನೇತೃತ್ವದಲ್ಲಿ ಗಾಂಧೀ ಆಶ್ರಮ ಪ್ರಾರಂಭಿಸಿದರೆ, ಹಾವೇರಿಯಲ್ಲಿ ಪರಮಣ್ಣ ಹೊಸಮನಿ ನೂಲುವ, ನೇಯುವ ಕೆಲಸಕ್ಕಾಗಿ ಆಶ್ರಮವೊಂದನ್ನು ಹಾವೇರಿಯ ಹೊರಭಾಗದಲ್ಲಿ ಪ್ರಾರಂಭಿಸಿದರು. 'ತರುಣ ಸಂಘ'ವನ್ನು ಹಾವೇರಿಯಲ್ಲಿ ಕೆಲ ತರುಣರು ಸೇರಿಕೊಂಡು ಚನ್ನವೀರಪ್ಪ ಹೇರೂರು ನಾಯಕತ್ವದಲ್ಲಿ ಸ್ಥಾಪಿಸಿದರು. ಯುವಕರಿಗೆ ಮಾನಸಿಕ ಮತ್ತು ದೈಹಿಕ ಶಕ್ತಿಯ ಉದ್ದೇಶವಿಟ್ಟುಕೊಂಡಿದ್ದರ ಜೊತೆಗೆ ರಾಷ್ಟ್ರೀಯತೆಯ ಜಾಗೃತಿಯನ್ನು ಮೂಡಿಸುವ ಸಲುವಾಗಿ ಹಾವೇರಿಯ ನಾರಾಯಣಾಚಾರ್ಯ ಆನವಟ್ಟಿ ಹನುಮಾನ್ ವ್ಯಾಯಾಮ ಶಾಲೆಯನ್ನು ಪ್ರಾರಂಭಿಸಿದರು. ಚನ್ನಬಸಯ್ಯ ಹಾಲಯ್ಯಗೋಳ ಇವರು ಬಸವೇಶ್ವರ ವ್ಯಾಯಾಮ ಶಾಲೆಯ ಅಡಿಗಲ್ಲನ್ನು ಇರಿಸಿದರು. ತರುಣರಲ್ಲಿ ಜಾಗೃತಿಯನ್ನುಂಟು ಮಾಡುವುದೇ ಇವರ ಉದ್ದೇಶವಾಗಿತ್ತು."[೫೪] ಈ ಎಲ್ಲ ಸಂಘಟನೆಗಳ ಉದ್ದೇಶ ಯುವಕರನ್ನು ರಾಷ್ಟ್ರೀಯತೆಯ ಕಾರ್ಯಕ್ಕೆ ದೈಹಿಕ ಮತ್ತು ಮಾನಸಿಕವಾಗಿ ಸನ್ನದ್ಧರನ್ನಾಗಿ ಮಾಡುವ ಉದ್ದೇಶವಿತ್ತು.

೧೯೨೯ಕ್ಕೆ ಹಾವೇರಿಯಲ್ಲಿ ಸ್ವಯಂಸೇವಕ ಶಿಬಿರವನ್ನು ಪ್ರಾರಂಭಿಸಬೇಕೆಂದು ನಿರ್ಣಯಿಸಿ, ಸುಮಾರು ೪೦ ಜನ ಸ್ವಯಂಸೇವಕರು ಆ ಸಂಘಟನೆಯನ್ನು ಸೇರಿದರು. ಆ ಶಿಬಿರದ ಸಂಪೂರ್ಣ ವ್ಯವಸ್ಥೆಯನ್ನು ಗೋವಿಂದಾಚಾರ್ಯ ಅಗ್ನಿಹೋತ್ರಿ ವಹಿಸಿದ್ದರು. ಬಿಂದುಮಾಧವ ಬುರ್ಲಿ ಶಿಬಿರದ ಮೇಲ್ವಿಚಾರಣೆ ಮಾಡುತ್ತಿದ್ದರು. ಶಿಬಿರದಲ್ಲಿ ಸ್ವಯಂಸೇವಕರು ಹಳ್ಳಿ ಹಳ್ಳಿಗಳಿಗೆ ಸಂಚರಿಸಿ ಅಸ್ಪೃಶ್ಯತಾ ನಿವಾರಣೆ, ನೂಲುವುದು, ನೇಯುವುದು, ಸ್ವದೇಶಿ ಪ್ರಚಾರ ಮುಂತಾದ ವಿಧಾಯಕ ಕಾರ್ಯಕ್ರಮಗಳನ್ನು ಮಾಡುವುದರ ಮೂಲಕ ಜನರಿಗೆ ರಾಷ್ಟ್ರೀಯತೆಯ ಬೀಜ ಬಿತ್ತುವ ಕಾರ್ಯವನ್ನು ಮಾಡಿದ ಬಗ್ಗೆ ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ವಿವರಿಸುತ್ತಾರೆ.

"ಸ್ವಯಂಸೇವಕರು ಹಾವೇರಿ ಭಾಗದ ಪ್ರತಿ ಹಳ್ಳಿಗಳಲ್ಲಿ ಸಂಚರಿಸಿ ಒಳ್ಳೆ ಶಿಸ್ತಿನಿಂದ ತಮ್ಮ ಕೆಲಸವನ್ನು ಪ್ರಾರಂಭಿಸಿದರು. ಹೊಸರಿತ್ತಿಯ ಗಾಂಧೀ ಆಶ್ರಮದ ಕೆಲಸಗಾರರು ಹಳ್ಳಿ ಹಳ್ಳಿಗಳಲ್ಲಿ ದೇಶಾಭಿಮಾನವನ್ನು ಬೆಳೆಸಲು ನೂಲುವುದು, ಖಾದಿಧಾರಣೆಗೆ ಜನರ ಮನವೊಲಿಸುವ ಪ್ರಯತ್ನ ಮಾಡುತ್ತಿದ್ದರು."[೫೫] ಹಳ್ಳಿಗರನ್ನು ಖಾದಿಧಾರಿಗಳನ್ನಾಗಿ ಮಾಡುವಲ್ಲಿ ಸ್ವಯಂಸೇವಕ ಕಾರ್ಯಕರ್ತರು ಮಾಡಿರುವ ಕಾರ್ಯ ಅತ್ಯಂತ ಮಹತ್ವದ್ದು.

ಜಿಲ್ಲೆಯಲ್ಲಿ "೧೯೩೪ರಲ್ಲಿ ಹಾವೇರಿಯ ಕೆಲವು ತರುಣರು ವಿರುಪಾಕ್ಷಪ್ಪ ಗುರುಬಸಪ್ಪ ಅಂಗಡಿ ಇವರ ನೇತೃತ್ವದಲ್ಲಿ ಒಂದು ಕ್ರಾಂತಿಕಾರಿ ಸಂಘವನ್ನು ಸ್ಥಾಪಿಸಿದರು. ಪ್ರಸಂಗ

ಬಂದಾಗ ಕ್ರಾಂತಿ ನಡೆಸಲು ಸಿದ್ಧರಾಗಬೇಕೆಂದು ಕಾಂಗ್ರೆಸ್ಸಿನಲ್ಲೇ ಇದ್ದು ಕೆಲಸ ಮಾಡುವ ಶಿಸ್ತಿನ ತರುಣರ ಒಂದು ಗುಂಪು ತನ್ನದೇಯಾದ ಒಂದು ಸಂಘಟನೆಯನ್ನು ಸ್ಥಾಪಿಸಿಕೊಂಡಿತು."[೫೭] ಹಾವೇರಿಯಲ್ಲಿ ಕ್ರಾಂತಿದಳದ ಸಂಘಟನೆಯ ಕಾರ್ಯವನ್ನು ರಾಮಕೃಷ್ಣ ಪುರುಷೋತ್ತಮ ಗಣಪುಲೆ, ಜಿನ್ನಪ್ಪ ಹಳ್ಳಿ, ವಿರುಪಾಕ್ಷಪ್ಪ ಕಡ್ಲಿ, ನಾರಾಯಣಚಾರ್ಯ ಆನವಟ್ಟಿ, ಶಾಂತರಾಮ ಅವಧಾನ ಇನ್ನೂ ಮುಂತಾದ ತರುಣರು ಈ ಗುಪ್ತ ಕ್ರಾಂತಿದಳದ ಸದಸ್ಯರಾಗಿ ನೋಡಿಕೊಳ್ಳುತ್ತಿದ್ದರು. ಈ ಸಂಘಟನೆಯಿಂದ ಯಾವುದೇ ರೀತಿಯ ರಕ್ತಪಾತ ನಡೆದ ಬಗ್ಗೆ ವಿವರಗಳು ಲಭ್ಯವಿಲ್ಲ. ದಾಖಲೆಗಳು ಹಾಗೂ ಚಳುವಳಿಗಾರರ ಹೇಳಿಕೆಗಳಿಂದ ಇದು ದೃಢವಾಗುತ್ತದೆ.

"೧೯೩೪-೩೫ರಲ್ಲಿ ಹೊಸರಿತ್ತಿಯಲ್ಲಿ ಗಾಂಧೀ ಆಶ್ರಮವನ್ನು ಹಳ್ಳಿಕೇರಿ ಗುದ್ಲೆಪ್ಪ ಹಾಗೂ ಮಹದೇವಪ್ಪ ಮೈಲಾರ ಇವರ ನೇತೃತ್ವದಲ್ಲಿ ಪ್ರಾರಂಭಿಸಲಾಯಿತು. ಹಾಲಗಿ ಗ್ರಾಮವನ್ನು ಕೇಂದ್ರೀಕರಿಸಿ ಸಫಾಯಿ, ನೂಲುವುದು, ಹಂಜಿ ಹೊಡೆಯುವುದು ಮತ್ತು ಸೇವಾ ದಳದ ಸಂಘಟನೆ ಮುಂತಾದ ವಿಧಾಯಕ ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಯಿತು. ಸ್ವತಃ ಮಹದೇವಪ್ಪ ಅರಳಿ ಹೊಡೆಯುವುದನ್ನು, ನೂಲುವುದನ್ನು ಕಲಿತು ಬಂದಿದ್ದರು."[೫೮] ಹೀಗೆ ಹಾವೇರಿ, ಗುತ್ತಲ, ಹಾಲಗಿ, ಅಗಡಿ, ನೆಗಳೂರು, ಹೊಸರಿತ್ತಿ ಮುಂತಾದ ಗ್ರಾಮಗಳಲ್ಲಿ ಆಶ್ರಮದ ಮೂಲಕ ರಾಷ್ಟ್ರೀಯ ಜಾಗೃತಿ ಕಾರ್ಯ ಆರಂಭವಾಯಿತು.

ಜಿಲ್ಲೆಯ ಶಿಗ್ಗಾವಿ ಭಾಗದಲ್ಲಿ ನೀಲಕಂಠರಾವ್ ದಿಗಂಬರಾವ್ ಹಳೆಪೇಟಿ ಇವರ ಮನೆಯಲ್ಲಿ ಶಾಲೆ ಬಿಟ್ಟು ಬಂದವರು ಹಾಗೂ ದೇಶ ಪ್ರೇಮಿಗಳ ಸಭೆ ನಡೆಯಿತು. ಶಿಗ್ಗಾವಿ ತಾಲೂಕಿನಿಂದ ಅಸಹಕಾರ ಚಳುವಳಿಯಲ್ಲಿ ಧುಮುಕಿದವರಲ್ಲದೆ ಸ್ವದೇಶಿ ಚಳುವಳಿಯಲ್ಲಿದ್ದವರೂ, ದೇಶಪ್ರೇಮಿಗಳಾದ ೧೦ರಿಂದ ೧೫ ಜನರಿದ್ದು, ಇವರಿಂದ ತಾಲೂಕು ಕಾಂಗ್ರೆಸ್ ಕಮಿಟಿ ಸ್ಥಾಪನೆಯಾಯಿತು. ಅದರಲ್ಲಿ ಹೇಜೀಬ ಬಾಬೂರಾವ್, ಗುಂಡೇರಾವ್ ಸವಣೂರ, ಕ್ಯಾಲಕೊಂಡ ತಿಪ್ಪಣ್ಣಾ, ಹಳೆಪೇಟಿ ಬಂಧುಗಳು, ಬಡ್ನಿ ಹನುಮಂತರಾವ್ ಹಳೆಪೇಟಿ, ನೀಲಕಂಠರಾವ್ ಕಾರ್ಯದರ್ಶಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಇವರೆಲ್ಲರೂ ಶಿಗ್ಗಾವಿ, ಸವಣೂರು ಭಾಗಗಳಲ್ಲಿ ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಿಕೊಳ್ಳುವುದು, ಖಾದಿ ಪ್ರಚಾರ, ಚರಕಾ, ಸೆಟ್ಲಮಗ್ಗ ಹಾಕಿಸುವುದು, ಚಹ, ಸೆರೆ ನಿಷೇಧ ಪ್ರಚಾರ ಇತ್ಯಾದಿಗಳನ್ನು ನಡೆಸುವುದು ಮತ್ತು ದೇಶಭಕ್ತ ಮುಖಂಡರನ್ನು ಕರೆಯಿಸಿ ಭಾಷಣಗಳ ಮೂಲಕ ತಾಲೂಕಿನಲ್ಲಿ ಸಾಕಷ್ಟು ಪ್ರಚಾರ ಮಾಡತೊಡಗಿದರು. ಹೇಜೀಬ ಬಂಧುಗಳ ಪ್ರಯತ್ನದಿಂದಾಗಿ ಮಾರುತಿ ವಾಚನಾಲಯ, ಖಾದಿ ಅಂಗಡಿಗಳು ಸ್ಥಾಪಿತವಾದವು. ಪ್ರೌಢರಿಗೆ ರಾತ್ರಿಶಾಲೆ ಪ್ರಾರಂಭಿಸಿ, ಓದುಬರಹ ಕಲಿಸುವುದು, ತಾಲೂಕಿನಲ್ಲಿ ದೊಡ್ಡ ಊರುಗಳಾದ ತಡಸ, ಧುಂಡಸಿ, ಸೋಮಾಪುರ, ಕಳಸ, ಹುಲಗೂರು, ಹುರುಳಿಕುಪ್ಪಿ ಮುಂತಾದ ಊರುಗಳಲ್ಲಿ ಕಾಂಗ್ರೆಸ್ ಮತ್ತು ಇತರ ವಿಧಾಯಕ ಚಟುವಟಿಕೆಗಳನ್ನು ಪ್ರಚಾರ ಮಾಡಿದ ಬಗ್ಗೆ ಪರಮಣ್ಣ ಹರಕ್ಕಂಗಿ, ಸುಬ್ಬಣ್ಣಾಚಾರ್ಯ ಅಕ್ಕಿವಳಿ ಹಾಗೂ ಗುಡ್ಡಪ್ಪ ಹರಿಜನ ಮೊದಲಾದ ಚಳುವಳಿಗಾರರ ನೆನಪಿಸಿಕೊಳ್ಳುತ್ತಾರೆ.

"ಶಿಗ್ಗಾವಿ ಭಾಗದಲ್ಲಿ ಯಶಸ್ವಿ ಅರಣ್ಯ ಸತ್ಯಾಗ್ರಹ ನಂತರ ಸರಕಾರ ತನಗಾದ ಅವಮಾನವನ್ನು ಸರಿಪಡಿಸಿಕೊಳ್ಳಲು ಮತ್ತು ತಮ್ಮ ಪ್ರಭುತ್ವವನ್ನು ಉಳಿಸಿಕೊಳ್ಳಲು ಜಮಿನ್ದಾರರ, ಗೌಡ–ಶಾನಭೋಗರ, ದೇಸಾಯಿ–ಕುಲಕರ್ಣಿಗಳ, ಪ್ರಮುಖ ರೈತರನ್ನು ಆ ದರ್ಬಾರಿಗೆ ಆಹ್ವಾನಿಸಲಾಗಿತ್ತು. ಈ ವಿಷಯ ತಿಳಿದ ಶಿಗ್ಗಾವಿ ಭಾಗದ ಚಳುವಳಿಗಾರರು ಆ ದರ್ಬಾರನ್ನು ಯಶಸ್ವಿಯಾಗದ ಹಾಗೆ ಮಾಡಲು ನಿರ್ಧರಿಸಿ ಕಾಂಗ್ರೆಸ್ ಕಮಿಟಿ ಮತ್ತು ಸೇವಾದಳದ ಕಾರ್ಯಕರ್ತರು ಸೇರಿ ಸುತ್ತಮುತ್ತಲಿನ ಎಲ್ಲ ಗ್ರಾಮಗಳಿಂದ ಸ್ವಯಂಸೇವಕರನ್ನು ಕರೆಯಿಸಿ ಆ ದರ್ಬಾರ್ ಯಶಸ್ವಿಯಾಗದ ಹಾಗೆ ನೋಡಿಕೊಂಡಿದ್ದು ಅಂದಿನ ಚಳುವಳಿಗಾರರ ಸಂಘಟನೆಗೆ ಸಾಕ್ಷಿಯಾಗಿದೆ"[೫೮] ಹಾಗೂ ಚಳುವಳಿಕಾರರು ಜನರಿಗೆ ದೇಶಾಭಿಮಾನವನ್ನು ತುಂಬಿಸುವುದರ ಜೊತೆ ಸರಕಾರದ ಕಾರ್ಯಕ್ರಮವನ್ನು ವಿಫಲಗೊಳಿಸುವಲ್ಲಿ ಮಹತ್ವದ ಪಾತ್ರವಹಿಸಿರುವುದು ಗಮನಾರ್ಹ.

"೧೯೨೫ರಲ್ಲಿ ಕೆ.ಪಿ.ಸಿ.ಸಿ ಕಾರ್ಯದರ್ಶಿಯಾದ ರಂಗನಾಥ ದಿವಾಕರರು 'ಕರ್ಮವೀರ'ದ ಮುಖಾಂತರ ಜನ ಜಾಗೃತಿಗೆ ಶ್ರಮಿಸಿದರು. ಅಲ್ಲದೆ ಗಾಂಧೀಜಿ **'ಯಂಗ್ ಇಂಡಿಯಾ'** ಮತ್ತು ೧೯೩೩ರ ನಂತರ ಬಂದ 'ಹರಿಜನ' ಪತ್ರಿಕೆಯಲ್ಲಿ ಬರುತ್ತಿದ್ದ ಲೇಖನಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸುತ್ತಿದ್ದು, ನಾಡಿನ ಜನತೆಯನ್ನು ಪ್ರೇರೇಪಿಸುವಂತೆ ಮಾಡುತ್ತಿದ್ದರು. ಅಷ್ಟೇ ಅಲ್ಲದೆ ಆ ಪತ್ರಿಕೆಗಳನ್ನು ಮುಂಚಿತವಾಗಿಯೇ ತಮಗೆ ಕಳುಹಿಸಿಕೊಡಬೇಕೆಂದು ಮಹದೇವ ದೇಸಾಯಿಗೆ ಕೇಳಿಕೊಂಡಿದ್ದು, ಅದರಂತೆ ಅವರು ಕೂಡ ಗಾಂಧೀಜಿ ಲೇಖನಗಳನ್ನು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವಾಗಲೇ ಕನ್ನಡದಲ್ಲಿಯೂ ಪ್ರಕಟವಾಗುವಂತೆ ವ್ಯವಸ್ಥೆ ಮಾಡಿದರು."[೫೯] ಅಂದರೆ ಗಾಂಧೀಜಿ ಲೇಖನಗಳು ಕನ್ನಡ ಭಾಷೆಯಲ್ಲಿ ದೊರೆತರೆ ಚಳುವಳಿಗೆ ಮಗದಷ್ಟು ಪ್ರೇರಣೆಯಾಗುವುದೆಂಬ ಅವರ ಕಳಕಳಿ ಸಮಯೋಚಿತವಾಗಿತ್ತು.

**ತಡಸ ಆಶ್ರಮ ಹಾಗೂ ಭಾರತೀಯ ತರುಣ ಸಂಘ**

ವೀರನಗೌಡ ಪಾಟೀಲ್ ಸ್ನೇಹಿತರು ಸೇರಿ ಕ್ರಿ.ಶ. ೧೯೨೭ರಲ್ಲಿ ಭಾರತೀಯ ತರುಣ ಸಂಘ ಸ್ಥಾಪಿಸಿದರು. ಪ್ರಾರಂಭದಲ್ಲಿ ಗುದ್ಲೆಪ್ಪ ಹಳ್ಳಿಕೇರಿ, ನಿಜಗುಣಾಚಾರ್ಯ ಬಿ.ಹಿರೇಮಠ, ಲಿಂಗರಾಜು ಮುದ್ದಣ್ಣವರ, ಎಸ್.ಎಸ್. ಕಜ್ಜರಿ ಇದರ ಸದಸ್ಯರು. ಸ್ವಾತಂತ್ರ್ಯ ಸೇನಾನಿಗಳನ್ನು ಸಿದ್ಧಗೊಳಿಸುವುದು, ಜನರಲ್ಲಿ ರಾಷ್ಟ್ರಪ್ರಜ್ಞೆ ಮೂಡಿಸುವುದು, ಗುಲಾಮಗಿರಿ ಬೋಧಿಸುವ ಶಾಲಾ–ಕಾಲೇಜುಗಳ ಶಿಕ್ಷಣಕ್ಕೆ ಬಹಿಷ್ಕಾರ ಹಾಕುವುದು, ಗ್ರಾಮಗಳಲ್ಲಿ ಸ್ವಚ್ಚತೆಯ ಜಾಗೃತಿ ಮೂಡಿಸುವುದು ಇತ್ಯಾದಿ ಇದರ ಉದ್ದೇಶಗಳಾಗಿದ್ದವು. ನಂತರದಲ್ಲಿ ಟಿ.ಆರ್. ನೆಶ್ವಿ, ವೀರನಗೌಡ ಪಾಟೀಲ್, ನ್ಯಾಮತಿ ವೀರಭದ್ರಪ್ಪ, ವೆಂಕಟೇಶ ಮಾಗಡಿ ಮುಂತಾದವರು ಈ ಸಂಘದ ಸದಸ್ಯರಾದರು.

ಬ್ಯಾಡಗಿಯ ಸುಪ್ರಸಿದ್ಧ ವರ್ತಕರೂ, ಕಾಂಗ್ರೆಸ್ ಕಾರ್ಯಕರ್ತರಾಗಿದ್ದ ರಾಮಣ್ಣ ಬೆಟಗೇರಿ ತಡಸದಲ್ಲಿ ಸ್ವಾತಂತ್ರ್ಯ ಸೇನಾನಿಗಳಿಗಾಗಿ ಆಶ್ರಮ ಕಟ್ಟಲು ತಮ್ಮದೇಯಾದ ೪೪ ಎಕರೆ ಜಮೀನನ್ನು ಸಂಘಕ್ಕೆ ಬಿಟ್ಟುಕೊಟ್ಟ ಚಳುವಳಿಗಾರರು ಒಂದೆಡೆ ಸೇರಿ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಲು ಅನುವು ಮಾಡಿಕೊಟ್ಟ ವಿವರವನ್ನು ಹಲವು ಚಳುವಳಿಗಾರರು ನೆನಪಿಸಿಕೊಳ್ಳುತ್ತಾರೆ.

"ಭಾರತೀಯ ತರುಣ ಸಂಘ'ವು ಈ ಆಶ್ರಮದ ಮುಖಾಂತರ ಸುತ್ತಮುತ್ತಲಿನ ಗ್ರಾಮಗಳಲ್ಲಿ ತನ್ನ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸಿತ್ತು. ಗ್ರಾಮೋದ್ಯೋಗ, ಖಾದಿ, ನೂಲುವುದು, ಮುಂತಾದ ರಚನಾತ್ಮಕ ಕಾರ್ಯಕ್ರಮಗಳು ಪ್ರಚಾರವಾಗತೊಡಗಿದವು. ಕಾಂಗ್ರೆಸ್ ಕಾರ್ಯಕರ್ತರು ಹಳ್ಳಿಯ ಜನರನ್ನು ಪ್ರೋತ್ಸಾಹಿಸಿ ಅಂಕು ಡೊಂಕು ರಸ್ತೆಗಳನ್ನು ಸರಿಪಡಿಸಿ ಕೊಳಚೆ ಪ್ರದೇಶಗಳನ್ನು ನಿರ್ಮೂಲಗೊಳಿಸಿದರು. ಪ್ರತಿದಿನ ಮುಂಜಾನೆ ಪ್ರಭಾತ ಫೇರಿ ಹೊರಡಿಸಿ ಜನರಲ್ಲಿ ದೇಶಾಭಿಮಾನ ತರುವಲ್ಲಿ ಯಶಸ್ವಿಯಾದರು. ನಾಗವಂದ ಗ್ರಾಮದಲ್ಲಿ ಹರಿಜನರಿಗೆ ಹೊಂಡದ ನೀರು ಬಳಸಲು ಮುಕ್ತದ್ವಾರ ಮಾಡಿಸಿದರು. ಚಿಕ್ಕಪುಟ್ಟ ರೋಗಗಳಿಗೆ ಔಷಧಿಯನ್ನು ವಿತರಿಸಿದರು."[೬೦] ಆಶ್ರಮ ವಾಸಿಗಳು ಸಾಮಾಜಿಕ ಕಾರ್ಯಗಳನ್ನು ಮಾಡುವ ಮೂಲಕ ಹಳ್ಳಿಗರಲ್ಲಿ ರಾಷ್ಟ್ರೀಯ ಜಾಗೃತಿ ಕಾರ್ಯಕ್ಕೆ ಚಾಲನೆ ನೀಡಿದ್ದನ್ನು ಗಮನಿಸಲಾಗಿದೆ.

ಟಿ.ಆರ್. ನೆಶ್ವಿ ನೇತೃತ್ವದಲ್ಲಿ ಆಶ್ರಮ ಭರದಿಂದ ನಡೆಯತೊಡಗಿತು. ರಾಮಣ್ಣ ಬೆಟಗೇರಿ ಕನಸು ನನಸಾಗತೊಡಗಿತು. ಆದರೆ ಸ್ವಾತಂತ್ರ್ಯ ಚಳುವಳಿ "೧೯೪೨ರಲ್ಲಿ ಉಗ್ರ ಸ್ವರೂಪ ತಾಳಿದ ಕಾಲದಲ್ಲಿ ಪೊಲೀಸರು ಆಶ್ರಮವನ್ನು ನಾಶ ಮಾಡಿದರು."[೬೧] ಆದರೆ ಆಶ್ರಮ ಈ ವೇಳೆಗಾಗಲೇ ತನ್ನ ಉದ್ದೇಶಿತ ಕಾರ್ಯವನ್ನು ಸಾಧಿಸಿಯಾಗಿತ್ತು.

**ಆಶ್ರಮದ ಕಡ್ಡಾಯ ಕಾರ್ಯಗಳು** : ನ್ಯಾಮತಿ ವೀರಭದ್ರಪ್ಪ ತಡಸ ಆಶ್ರಮದಿಂದಲೇ ತರುಣರಲ್ಲಿ ದೇಶಾಭಿಮಾನ ತುಂಬಿ ಹೋರಾಟಕ್ಕೆ ಅಣಿಗೊಳಿಸುವುದು, ಬೆಳಗ್ಗೆ ಮತ್ತು ಸಂಜೆ ಆಶ್ರಮದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಕಡ್ಡಾಯವಾಗಿ ನಡೆಸುವುದು, ನೂಲುವುದು, ನೇಯುವುದು, ಸ್ವಚ್ಛತಾ ಕಾರ್ಯಕ್ರಮಗಳನ್ನು ಹಳ್ಳಿ ಹಳ್ಳಿಗಳಿಗೆ ಹೋಗಿ ಜನರಿಗೆ ತಿಳಿಸಿ ಜಾಗೃತಗೊಳಿಸುವುದು. ಜನರಲ್ಲಿ ಮನೆಮಾಡಿಕೊಂಡಿದ್ದ ಮೂಢನಂಬಿಕೆ, ಕಂದಾಚಾರಗಳನ್ನು ಹೋಗಲಾಡಿಸುವುದು, ಜನರನ್ನು ಸಾಕ್ಷರರನ್ನಾಗಿಸುವುದು, ಹರಿಜನ ಕೇರಿಯ ಸ್ವಚ್ಛತೆ, ಅಸ್ಪೃಶ್ಯತಾ ನಿವಾರಣೆಗೆ ಕಾರ್ಯಕ್ರಮ ಹಾಕುವುದು - ಇವು ಆಶ್ರಮವಾಸಿಗಳಿಗೆ ಕಡ್ಡಾಯದ ಕಾರ್ಯಗಳಾಗಿದ್ದವು. ಅಂದು ಚಳುವಳಿಗಾರರು ಬರೀ ಸ್ವಾತಂತ್ರ್ಯ ಹೋರಾಟವಲ್ಲ, ಅದರೊಂದಿಗೆ ಸಮಾಜಕ್ಕೆ ಕಂಟಕವಾಗಿದ್ದ ಕೆಲ ಕಂದಾಚಾರ, ಮೂಢನಂಬಿಕೆಗಳನ್ನು ಹಳ್ಳಿಗರಿಂದ ಹೋಗಲಾಡಿಸುವ ಕಾರ್ಯವನ್ನು ಮಾಡಿರುವುದು ಸ್ತುತ್ಯಾರ್ಹ.

ಈ ಆಶ್ರಮಕ್ಕೆ "ರೈತರು, ಧನಿಕರು, ಉದಾರಿಗಳು ಮತ್ತು ಸುತ್ತಮುತ್ತಲಿನ ಗ್ರಾಮಗಳ ಜನ ಭತ್ತ, ರಾಗಿ, ಶೇಂಗಾ, ಜೋಳ, ಮೆಣಸಿನಕಾಯಿ, ಬೆಲ್ಲ, ತರಕಾರಿ, ಹಣ್ಣು, ಹಾಲು, ಮೊಸರು, ಮಜ್ಜಿಗೆ ಹೀಗೆ ಎಲ್ಲವನ್ನು ತಂದು ಕೊಡುತ್ತಿದ್ದರು."[೬೨] ಇದು ಚಳುವಳಿಗಾರರ ಹೋರಾಟಕ್ಕೆ ಸ್ಫೂರ್ತಿ ನೀಡಿತು.

"ತಡಸದ ಆಶ್ರಮದಲ್ಲಿ ಬಹುಕಾಲ ಕಳೆದವರಲ್ಲಿ ಧಾರವಾಡ ಜಿಲ್ಲೆಯ ಪ್ರಮುಖ ಹೋರಾಟಗಾರರಾದ ವೆಂಕಟೇಶ ಮಾಗಡಿ ಒಬ್ಬರು. ಇವರು ಆಶ್ರಮದ ಸುತ್ತಮುತ್ತಲಿನ

ಗ್ರಾಮಗಳಲ್ಲಿ ಹತ್ತು ಹಲವು ಜಾಗೃತಿ ಕಾರ್ಯಗಳನ್ನು ಮಾಡಿದ್ದಾರೆ. ಇವರು ೧೯೩೧ರಲ್ಲಿ ಚಳುವಳಿ ಸ್ವಲ್ಪ ಸ್ಥಗಿತವಿದ್ದ ಕಾಲದಲ್ಲಿ ಆಶ್ರಮಕ್ಕೆ ಬಂದು, ಈ ಭಾಗದಲ್ಲಿನ ಹಳ್ಳಿಗಳಿಗೆ ಹೋಗಿ ರಾಷ್ಟ್ರೀಯತೆಯ ಪ್ರಜ್ಞೆ ಮೂಡಿಸಿ ಸ್ವಚ್ಛತೆಯ ಆದ್ಯತೆಗೆ ಕರೆ ನೀಡಿದರು."[೬೩] ಅದರಿಂದ ಹೇಗೆ ರೋಗ-ರುಜಿನಗಳನ್ನು ತಡೆಯಬಹುದು ಎಂಬುದರ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಿದರು.

**ಹೊಸರಿತ್ತಿ ಆಶ್ರಮ** : ಹಾವೇರಿ ಜಿಲ್ಲೆಯ ಮತ್ತೊಂದು ಪ್ರಮುಖ ಆಶ್ರಮ ಹೊಸರಿತ್ತಿ ಆಶ್ರಮ. ೧೯೩೪ರಲ್ಲಿ ೨೦ ರಿಂದ ೩೦ ಜನ ತರುಣರು ಸೇರಿಕೊಂಡು ಹೊಸರಿತ್ತಿ ಗಾಂಧೀ ಆಶ್ರಮವನ್ನು ಸ್ಥಾಪಿಸಿಕೊಂಡು ಖಾದಿ ಗ್ರಾಮೋದ್ಯೋಗದ ಕೆಲಸ ಮಾಡುತ್ತ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವಿಧಾಯಕ ಕಾರ್ಯಗಳನ್ನು ಮಾಡಿದ್ದರು. ಆಶ್ರಮಕ್ಕೆ ಗುದ್ಲೆಪ್ಪ ಹಳ್ಳಿಕೇರಿ ಅಧ್ಯಕ್ಷರಾಗಿದ್ದು, ವೆಂಕಟೇಶ ಮಾಗಡಿ ಕಾರ್ಯದರ್ಶಿಗಳಾಗಿದ್ದರು. ಹೊಸರಿತ್ತಿ, ಕೊರಡೂರು, ಶಿರಮಾಪುರ, ಯಲಗಚ್ಚು ಮುಂತಾದ ನಾಲ್ಕರಿಂದ ಐದು ಗ್ರಾಮಗಳಲ್ಲಿ ಖಾದಿ ಕಾರ್ಯ ಮಾಡಲಾಗುತ್ತಿತ್ತು. ಸುಮಾರು ೨೦೦ ಕುಟುಂಬಗಳು ಖಾದಿ ಗ್ರಾಮೋದ್ಯೋಗವನ್ನೇ ಆಧರಿಸಿ ಸ್ವಾವಲಂಬನೆಯ ಜೀವನ ನಡೆಸುತ್ತಿದ್ದವು. ಕೇವಲ ೧೦೦ರಿಂದ ೧೫೦ ಜನ ಸದಸ್ಯರಿದ್ದ ಈ ಆಶ್ರಮ ಸದಸ್ಯರುಗಳೆಂದರೆ ಆ ಭಾಗದಲ್ಲಿ ಗೌರವವಿರುವಂತಹ ವಾತಾವರಣ ನಿರ್ಮಾಣವಾಗಿತ್ತು ಎಂಬ ಆ ಭಾಗದ ಚಳುವಳಿಗಾರರ ಹೇಳಿಕೆಗಳು ಸಾಕ್ಷಿಯಾಗಿವೆ. ಇದೇ ರೀತಿ ಗುತ್ತಲದ ದತ್ತಾತ್ರೇಯ ವೆಂಕಟೇಶ ನಾಡಗೇರ "ಗ್ರಾಮ ಸಂಘಟನಾ ಮಂಡಲ" ಎಂಬ ಸಂಸ್ಥೆಯನ್ನು ಸ್ಥಾಪಿಸಿ, ವಿವಿಧ ರಾಷ್ಟ್ರೀಯ ಕಾರ್ಯಗಳನ್ನು ಮಾಡುತ್ತಿದ್ದರು. ಇವರ ಕಾರ್ಯಕ್ಕೆ ಹಣಮಂತ ನರಸಿಂಹ ಕರ್ಪೂರರು ತಮ್ಮ ಮನೆಯನ್ನೇ ಬಿಟ್ಟುಕೊಟ್ಟಿದ್ದರು. ಈ ಸಂಘಟನೆಯ ವಿವಿಧ ಚಟುವಟಿಕೆಗಳಿಂದ ಸುತ್ತಮುತ್ತಲಿನ ಗ್ರಾಮಗಳಿಗೆ ಜಾಗೃತಿ ಕಾರ್ಯ ಹಾಗೂ ರಾಷ್ಟ್ರೀಯ ಭಾವನೆ ಬೆಳೆಯಿತು.

"೧೯೩೨ರಲ್ಲಿ ಗಾಂಧೀಜಿ ಬಂಧನವನ್ನು ವಿರೋಧಿಸಿ ಚಳುವಳಿ ನಡೆದಾಗ ಪೊಲೀಸರು, ಗುತ್ತಲದ ಗ್ರಾಮ ಸಂಘಟನಾ ಮಂಡಲವನ್ನು ನ್ಯಾಯಬಾಹಿರ ಸಂಸ್ಥೆ ಎಂದು ಸಾರಿ, ಕಚೇರಿಯಲ್ಲಿದ್ದ ಕಾಗದ ಪತ್ರಗಳನ್ನು ಸಾಮಾನುಗಳನ್ನು ಜಪ್ತಿ ಮಾಡಿ, ಮಂಡಲ ಮನೆಗೆ ಕೀಲಿಹಾಕಿ, ಎರಡು ಜನ ಪೊಲೀಸರನ್ನು ಆ ಮನೆ ಕಾಯಲು ನೇಮಿಸಿದರು. ದತ್ತಾತ್ರೇಯ ವೆಂಕಟೇಶ ನಾಡಗೇರಗೆ ಶಿಕ್ಷೆಯಾಗಿ ೧೦೦ ರೂ. ದಂಡ ಕೊಡದಿದ್ದಕ್ಕೆ, ಆ ದಂಡದ ವಸೂಲಿಗಾಗಿ ಫೌಜುದಾರನು ನಾಡಗೇರ ಮನೆಗೆ ಬಂದು ಮನೆಯ ಎಲ್ಲಾ ವಸ್ತುಗಳನ್ನು ಚೆಲ್ಲಾಪಿಲ್ಲಿಯಾಗಿ ಚೆಲ್ಲಾಡಿ, ಅವರ ವೃದ್ಧ ತಾಯಿಯನ್ನು ನೂಕಿದಾಗ ಅಲ್ಲಯೇ ಇದ್ದ ಸದಾಶಿವ ಕಾನಿಟ್‌ರ ಎಂಬ ಯುವಕ, 'ನೀವು ನಿಮ್ಮ ಕರ್ತವ್ಯ ಮಾಡಿ; ಆ ತಾಯಿಗೇಕೆ ತೊಂದರೆ ಕೊಡುತ್ತೀರಿ. ಇನ್ನೂ ನಾನು ಸುಮ್ಮನಿರುವುದಿಲ್ಲ'ವೆಂದು ಹೇಳಿದ್ದಕ್ಕೆ ಆ ಯುವಕನನ್ನು ಬಂಧಿಸಿ, ಅವನಿಗೂ ೬ ತಿಂಗಳ ಶಿಕ್ಷೆಯನ್ನು ವಿಧಿಸಲಾಯಿತು."[೬೪] ಇಲ್ಲಿ ಸರಕಾರದ ಅಥವಾ ಅಧಿಕಾರಿಯ ದರ್ಪ ಒಂದೆಡೆಯಾದರೆ, ಚಳುವಳಿಗಾರ ಸಿಗದ ಕಾರಣ ಅವರ ವೃದ್ಧ

ತಾಯಿಯನ್ನು ಹಿಂಸಿಸುವ ಚಿತ್ರಣ ಹಾಗೂ ಚಳುವಳಿಗಾರ ಅಲ್ಲದಿದ್ದರೂ, ಚಳುವಳಿಗಾರನೊಬ್ಬನ ತಾಯಿಯನ್ನು ಹಿಂಸಿಸುವುದನ್ನು ಸಹಿಸಿಕೊಳ್ಳದ ಸಾಮಾನ್ಯ ವ್ಯಕ್ತಿ ಹೇಗೆ ಭಾವನಾತ್ಮಕವಾಗಿ, ಸಾರ್ವಜನಿಕವಾಗಿ, ಅಪರೋಕ್ಷವಾಗಿ ಹೇಗೆ ಚಳುವಳಿಗಳಲ್ಲಿ ಭಾಗಿಗಳಾಗುತ್ತಿದ್ದರು. ಬೆಂಬಲ ಕೊಡುತ್ತಿದ್ದರು ಎಂಬುದಕ್ಕೆ ಈ ಘಟನೆ ಸಾಕ್ಷಿಯಾಗಿದೆ.

"ರಾಣೆಬೆನ್ನೂರಿನಲ್ಲಿ ಪಿ.ಆರ್. ರಂಗನಾಥ ನಾಯಕರಿಗೆ ಧಾರವಾಡದಿಂದ ಚಳುವಳಿಯ ನಾಯಕ ಹಿರೇಮಠರಿಂದ ೧೬.೬.೧೯೨೯ ರಂದು ಪತ್ರದ ಮೂಲಕ ಬಂದ ಸಂದೇಶದಂತೆ ರಾಣೆಬೆನ್ನೂರು, ಹಿರೇಕೆರೂರು, ಹಾವೇರಿ, ಹಾನಗಲ್ಲು ಈ ತಾಲೂಕುಗಳಲ್ಲಿ "ಭಾರತೀಯ ತರುಣ ಸಂಘ"ವನ್ನು ಸ್ಥಾಪಿಸಬೇಕೆಂಬ ಸಲಹೆಯಂತೆ ಹಿರೇಕೆರೂರಲ್ಲಿ ಎಸ್.ಎಸ್. ಕಜ್ಜರಿಯವರನ್ನು ಬ್ಯಾಡಗಿಯಲ್ಲಿ ಲಿಂಗರಾಜ ಮುದ್ದಣ್ಣವರ ಮೊದಲಾದ ತರುಣರ ಸಹಾಯದಿಂದ ತರುಣ ಸಂಘಗಳನ್ನು ಸ್ಥಾಪಿಸಲಾಯಿತು."[೬೮] ಕಾಂಗ್ರೆಸ್ಸಿನ ಆದೇಶದಂತೆ ಈ ಕಾರ್ಯವನ್ನು ಇವರು ಮಾಡಿದ್ದು, ಅಂದಿನ ಚಳುವಳಿಗೆ ಹೆಚ್ಚಿನ ಪ್ರೇರಣೆಗೆ ಅವಕಾಶ ಕೊಟ್ಟಂತಾಯಿತು.

**ಸ್ವಯಂ ಸೇವಾದಳ**(ಶಿಬಿರ) : ೧೯೨೯ಕ್ಕೆ ಹಾವೇರಿಯಲ್ಲಿ ಸ್ವಯಂಸೇವಕ ಶಿಬಿರವೊಂದನ್ನು ಪ್ರಾರಂಭಿಸಬೇಕೆಂದು ನಿರ್ಣಯವಾಯಿತು. ಸಂಘಟನೆ ಮಾಡಲು ಚರ್ಚಿಸಲು ಸುಮಾರು ೪೦ ಜನ ಸ್ವಯಂಸೇವಕರು ಮುಂದೆ ಬಂದರು. ಈ ಸ್ವಯಂಸೇವಾ ಶಿಬಿರಕ್ಕೆ ಸೇರಿದ ಸ್ವಯಂಸೇವಕರು ಹಳ್ಳಿ ಹಳ್ಳಿಗಳಿಗೆ ಹೋಗಿ ಅಸ್ಪೃಶ್ಯತೆಯ ನಿವಾರಣಾ ಕಾರ್ಯದ ಜೊತೆ ಗ್ರಾಮೀಣ ಭಾಗದವರಿಗೆ ನೂಲುವುದು, ನೇಯುವುದು, ಸ್ವದೇಶಿ ವಸ್ತುಗಳನ್ನು ಬಳಸುವಂತೆ ಮನವೊಲಿಸಿದರು. ಹೀಗೆ ವಿವಿಧ ಕಾರ್ಯಗಳನ್ನು ಮಾಡುತ್ತ, ಗ್ರಾಮೀಣ ಭಾಗದ ಜನತೆಯನ್ನು ಸ್ವದೇಶಿ ಚಳುವಳಿಗೆ ಪ್ರೇರೇಪಿಸುವುದು ಇವರ ಪ್ರಮುಖ ಆದ್ಯತೆಯಾದ ವಿವರವನ್ನು ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ವಿವರಿಸುತ್ತಾರೆ.

"ಸ್ವಯಂಸೇವಕರು ಹಾವೇರಿಯಲ್ಲಿ ಸೆರೆ-ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಪ್ರಾರಂಭ ಮಾಡಿದರು. ಮುಂಜಾನೆ ಶಿಬಿರದ ಸ್ವಯಂಸೇವಕರು ಮೆರವಣಿಗೆಯೊಂದಿಗೆ ಶಾಂತತೆ ಮತ್ತು ಶಿಸ್ತಿನಿಂದ ಹಾಡು ಹೇಳುತ್ತಾ ಸೆರೆ, ಸೇಂದಿ ಅಂಗಡಿಗಳ ಮುಂದೆ ಹೋಗಿ ಕೈ ಮುಗಿದು ನಿಂತು ಪಿಕೆಟಿಂಗನ್ನು ಪ್ರಾರಂಭಿಸುತ್ತಿದ್ದರು. ರಾತ್ರಿ ೮ ಘಂಟೆಯವರೆಗೆ ನಿಂತು ಮತ್ತೆ ಶಾಂತತೆಯಿಂದ ಮನೆಗೆ ಮರಳುತ್ತಿದ್ದರು."[೬೯] ಸುಮಾರು ಒಂದು ವರ್ಷದವರೆಗೂ ದೀರ್ಘಕಾಲ ನಡೆಯಿತು, ಹೀಗೆ ತಿಂಗಳುಗಳು, ವರ್ಷದವರೆಗೂ ಪಿಕೆಟಿಂಗ್ ಮಾಡುತ್ತಿದ್ದು ಅವರ ದಿಟ್ಟತನ, ಸಂಯಮ, ಅವರ ದೃಢ ಮನೋಸ್ಥಿತಿಯ ಪರಿಚಯವಾಗುತ್ತದೆ.

**ಹಿರೇಕೆರೂರ ತಾಲೂಕು ರೈತ ಪರಿಷತ್**

ಹಾವೇರಿ ಜಿಲ್ಲೆಯಲ್ಲಿ ಹಿರೇಕೆರೂರು ತಾಲೂಕಿನಲ್ಲಿ ಒಂದು ಅಪರೂಪದ ಘಟನೆಯೊಂದು ನಡೆಯಿತು. "ಅದು ಬ್ರಿಟಿಷರ ಆಳ್ವಿಕೆಯಲ್ಲಿ ರೈತ ಸಂಘಟನೆ ಮಾಡಿ ಬ್ರಿಟಿಷ್ ಸರಕಾರದಿಂದ

ಸುಮಾರು ೪೬,೦೦೦ ರೂ.ಗಳ ನೀರು ಸಾರಿಗೆ ಸೂಟ್ ಮಾಡಿಸಿಕೊಂಡ ಘಟನೆ ಜಿಲ್ಲೆಯಲ್ಲಿ ನಡೆದದ್ದು ವಿಶೇಷವಾಗಿದೆ."೬ ಈ ಘಟನೆಯ ಕರ್ತೃ ಟಿ.ಆರ್. ನೇಶ್ವಿ ಇವರು ಪುಣೆಯಲ್ಲಿ ಕೃಷಿ ಪದವಿಯನ್ನು ಪಡೆದವರಾಗಿದ್ದು ಕೃಷಿಕರ ಸಂಕಷ್ಟವನ್ನು ಅರಿತವರಾಗಿದ್ದರು, ಹಳ್ಳಿ ಹಳ್ಳಿಗಳಲ್ಲಿ ರೈತರ ಹೊಲಗಳಿಗೆ ಹೋಗಿ ಬೆಳೆಗಳು ಹಾಳಾಗಿರುವುದನ್ನು ಕಂಡರು. ಪ್ರತಿ ಹಳ್ಳಿಯ ರೈತರು ಮತ್ತು ರೈತ ಮುಖಂಡರನ್ನು ಭೇಟಿ ಮಾಡಿ ಸರಕಾರಕ್ಕೆ ಕಂದಾಯ ಕಟ್ಟುವುದು ನಿಮ್ಮಿಂದ ಆಗದ ಮಾತು; ಕಾರಣ ನಿಮಗೆ ಯಾವ ಬೆಳೆಯೂ ಬಂದಿಲ್ಲ, ಹಾಗಾಗಿ ನೀವುಗಳು ಸಂಘಟಿತರಾಗಿ ರೈತ ಸಂಘಟನೆ ಮಾಡಿಕೊಂಡರೆ ಸರಕಾರಕ್ಕೆ ಆ ಸಂಘಟನೆಯಿಂದ ಮನವರಿಕೆ ಮಾಡಿಕೊಡಬಹುದು. ಇಲ್ಲದಿದ್ದರೆ ಸರಕಾರ ನಿಮ್ಮನ್ನು ಕಂದಾಯ ಕಟ್ಟಿಸಿಕೊಳ್ಳದೆ ಬಿಡುವುದಿಲ್ಲ ಎಂದು ಹೇಳುತ್ತ, ರೈತರನ್ನು ಸಂಘಟಿಸುವ ಕಾರ್ಯ ಮಾಡಿದ ಬಗ್ಗೆ ಅದೇ ಭಾಗದ ಹಿರೇಅಣಜಿಯ ಚಳುವಳಿಗಾರ ಮಳ್ಳಪ್ಪ ಕೊಪ್ಪದ ಹಾಗೂ ಪುಟ್ಟಪ್ಪ ಹರಬಿ ಹೇಳುತ್ತಾರೆ.

ಟಿ.ಆರ್. ನೇಶ್ವಿ ಅವರ ಸತತ ಪರಿಶ್ರಮದಿಂದ ಜಿಲ್ಲೆಯಲ್ಲಿ ಮೊದಲ ಬಾರಿಗೆ ಹಿರೇಕೆರೂರು "ತಾಲೂಕಾ ರೈತ ಸಮಾವೇಶವನ್ನು ೨೫.೧.೧೯೩೧ರಂದು ಹಂಸಬಾವಿಯಲ್ಲಿ 'ರೈತ ಸಮಾವೇಶ' ಮಾಡಿದರು. ಈ ಸಮಾವೇಶದ ಅಧ್ಯಕ್ಷತೆಯನ್ನು ಹುಬ್ಬಳ್ಳಿಯ ಪಾವಟೆ ವಕೀಲರು ವಹಿಸಿದ್ದರು. ಆ ಸಮಾವೇಶ ಯಶಸ್ವಿಯಾಗಿ ನಡೆದು ಸಮಾವೇಶದಲ್ಲಿ 'ಸರಕಾರ ಭೀಕರ ಬರಗಾಲ ಸ್ಥಿತಿ ಅರಿತು ಕಂದಾಯ ಸೂಟ್ ಮಾಡಿದರೆ ಸರಿ, ಮಾಡದಿದ್ದರೆ ರೈತರು ಯಾವ ಪರಸ್ಥಿತಿಯಲ್ಲಿಯೂ ಕರ ಕಟ್ಟಬಾರದು ಎಂದು ನಿರ್ಣಯವಾಯಿತು, ಅಲ್ಲಿ ಸೇರಿದ್ದ ಸುಮಾರು ಮೂರು ಸಾವಿರಕ್ಕೂ ಹೆಚ್ಚು ರೈತರು ಜೈಕಾರ ಹಾಕುವುದರೊಂದಿಗೆ ಒಪ್ಪಿಗೆ ನೀಡಿದರು."೮

"ಬ್ರಿಟಿಷ್ ಸರಕಾರದ ವಿರುದ್ಧ ಒಂದು ಸಂಘಟನೆ ಮಾಡುವುದು, ಬಹಿರಂಗವಾಗಿ ಸರಕಾರಕ್ಕೆ ಸವಾಲು ಹಾಕುವುದು ಅಷ್ಟು ಸುಲಭದ ಕಾರ್ಯವಲ್ಲ, ಅಂಥ ಒಂದು ಘಟನೆಗೆ ಹಾವೇರಿ ಜಿಲ್ಲೆ ಸಾಕ್ಷಿಯಾಯಿತು. ಸರಕಾರ ಕರ ಕಟ್ಟಲು ಒತ್ತಾಯಪಡಿಸಿದರೂ ರೈತರು ಕಂದಾಯ ಕಟ್ಟಲಿಲ್ಲ. ಇಲ್ಲಿ ಚಳುವಳಿ ನಾಯಕರು ಹಾಗೂ ರೈತರ ಗಟ್ಟಿ ನಿರ್ಧಾರವನ್ನು ಸ್ಮರಿಸುವಂತಹದ್ದು."೯ ಹೀಗೆ ಸ್ಥಳಿಯವಾಗಿ ರೈತರನ್ನು ಸಂಘಟಿಸುವ ಕಾರ್ಯವನ್ನು ಟಿ.ಆರ್. ನೇಶ್ವಿ ಮಾಡಿದರು.

ಹೀಗೆ ಜಿಲ್ಲೆಯ ಒಂದು ಭಾಗದಲ್ಲಿ ರೈತರ ಸಂಘಟನೆ ಯಶಸ್ವಿಯಾಗಿ ತನ್ನ ಕಾರ್ಯಸಾಧಿಸಿತು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಮಳವಳ್ಳಿ ಗ್ರಾಮ ಮರಿಸ್ವಾಮಿ ಹಿರೇಮಠ ಎಂಬುವವರು ಟಿ.ಆರ್. ನೇಶ್ವಿಯನ್ನು ತಮ್ಮಲ್ಲಿಯೂ ಬಂದು ಈ ರೀತಿಯ ರೈತ ಸಂಘಟನೆಗೆ ಮಾರ್ಗದರ್ಶನ ನೀಡಬೇಕೆಂದು ಕೇಳಿಕೊಂಡಿದ್ದು ಹಿರೇಅಣಜಿ ಚಳುವಳಿಗಾರ ಪುಟ್ಟಪ್ಪ ಹರಬಿ ನೆನಪಿಸಿಕೊಳ್ಳುತ್ತಾರೆ. ಆ ಮೂಲಕ ಒಂದು ಸಂಘಟನೆ ಗಡಿ ಜಿಲ್ಲೆ/ತಾಲೂಕುಗಳಿಗೆ

ಪ್ರೇರಣೆಯಾಗಿರುವುದನ್ನು ಗಮನಿಸಲಾಗಿದೆ. ಅಲ್ಲದೆ ಜಿಲ್ಲೆ ಚಳುವಳಿ ಕಾಲದಲ್ಲಿ ರೈತ ಸಂಘಟನೆಯ ಮೂಲಕ ಪ್ರಭುತ್ವದ ವಿರುದ್ಧ ನಿಂತಿರುವುದು ವಿಶೇಷ.

**ಜಿಲ್ಲೆಯಲ್ಲಿ ಕ್ರಾಂತಿಕಾರಿಗಳ ಸಂಘ**

"೧೯೩೪ರಲ್ಲಿ ಎಲ್ಲೆಡೆ ಚಳುವಳಿಗಳು ಶಾಂತವಾದಾಗ ಹಾವೇರಿಯ ಕೆಲವು ತರುಣರು ಸೇರಿಕೊಂಡು ವಿರುಪಾಕ್ಷಪ್ಪಾ ಗುರುಬಸಪ್ಪ ಅಂಗಡಿ ನೇತೃತ್ವದಲ್ಲಿ ಒಂದು ಕ್ರಾಂತಿಕಾರಿ ಸಂಘವನ್ನು ಸ್ಥಾಪಿಸಿದರು. ಪ್ರಸಂಗ ಬಂದಾಗ ಕ್ರಾಂತಿಗೆ ಸಿದ್ಧರಾಗಬೇಕೆಂದು ನಿರ್ಣಯಿಸಿದರು. ಅದು ಕಾಂಗ್ರೆಸ್ಸಿನಲ್ಲಿಯೇ ಇದ್ದುಕೊಂಡು ಕೆಲಸ ಮಾಡುವ ಶಿಸ್ತಿನ ತರುಣರ ಒಂದು ಗುಂಪು ರಚಿತವಾಯಿತು".[೨೦] ಅದರ ಹಿನ್ನೆಲೆಯನ್ನು ಗಮನಿಸುವುದಾದರೆ: ಹಾವೇರಿಯಿಂದ ವಿರುಪಾಕ್ಷಪ್ಪಾ ಅಂಗಡಿ, ವಿನಾಯಕ ಗಣಪುಲೆ ಮತ್ತು ಕಲವೀರಪ್ಪ ಮಾಸೂರು ಈ ಮೂವರು ಸ್ನೇಹಿತರು ಉತ್ತರ ಪ್ರದೇಶದ ವೃಂದಾವನದ ಪ್ರೇಮ ಮಹಾವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ೧೯೩೨ರ ಜನವರಿ ೨೬ಕ್ಕೆ ಚಳುವಳಿ ಆರಂಭವಾದಾಗ ಆ ವಿದ್ಯಾಲಯವನ್ನು ಮುಚ್ಚಲಾಯಿತು. ಅಲ್ಲಿ ನಡೆದ ಚಳುವಳಿಯಲ್ಲಿ ಇವರು(ಹಾವೇರಿಯ ವಿದ್ಯಾರ್ಥಿಗಳು) ಭಾಗಿಗಳಾಗಿ ಬಂಧಿಸಲ್ಪಟ್ಟು ಮಥುರಾ ಕಾರಾಗೃಹದಲ್ಲಿ ೩ ತಿಂಗಳ ಶಿಕ್ಷೆ ಅನುಭವಿಸಿದರು. ಆ ಸೆರೆಮನೆಯಲ್ಲಿಯೇ ಕೆಲವು ಚಳುವಳಿಗಾರರ ಪರಿಚಯವಾಯಿತು, ಅಂಥವರಲ್ಲಿ ಕ್ರಾಂತಿಕಾರರ ಅನುಪಮ ದೇಶಭಕ್ತ, ಪರಾಕ್ರಮಿಗಳಾದ ಭಗತ್ ಸಿಂಗ್ ಹಾಗೂ ಅವರ ತಂಡದ ಸದಸ್ಯರ ಪರಿಚಯ ಅಷ್ಟೆ ಅಲ್ಲ ಹೇಗೆ ಕ್ರಾಂತಿ ಮಾಡಬೇಕು ಎಂದು ಆಡಿದ ಮಾತುಗಳು ವಿರುಪಾಕ್ಷಪ್ಪಾ ಅಂಗಡಿ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದವು. ಅವರಿಂದ ಆಕರ್ಷಿತರಾದರು. ನಂತರ ಇವರು **"ಹಿಂದುಸ್ಥಾನ ಸಮಾಜವಾದಿ ಪ್ರಜಾತಾಂತ್ರಿಕ ಸಂಸ್ಥೆ"** ಎಂಬ ಕ್ರಾಂತಿಕಾರಕ ಸಂಸ್ಥೆಯ ಸದಸ್ಯರಾಗಿದ್ದರು. ನಂತರ ಮರಳಿ ಹಾವೇರಿಗೆ ಬಂದಾಗ ಇವರ ಸ್ನೇಹಿತ ವರ್ಗ ಇವರನ್ನು ಅದ್ದೂರಿಯಾಗಿ ಬರಮಾಡಿಕೊಂಡಿತು."[೨೧] ಇವರ ಮುಖ್ಯ ಉದ್ದೇಶ ಕ್ರಾಂತಿಕಾರಿ ದಳದ ಸಂಘಟನೆಯಾಗಿತ್ತು.

ವಿರುಪಾಕ್ಷಪ್ಪ ಗುರುಬಸಪ್ಪ ಅಂಗಡಿ ಈ ಹಿಂದೆ ೧೯೩೨ರಲ್ಲಿ ಉತ್ತರ ಪ್ರದೇಶದ ಮಥುರಾ ಜೈಲಿನಲ್ಲಿ ಇದ್ದಾಗ ಅವರಿಗೆ ಬಂಗಾಲೀ ಕ್ರಾಂತಿಕಾರಿಗಳ ಪರಿಚಯವಿತ್ತು. ಅವರಿಂದ ಬಾಂಬ್ ತಯಾರಿಸುವುದನ್ನು ತರಬೇತಿ ಪಡೆಯಲು ಸೈಕಲ್ ಮೇಲೆ ಪ್ರವಾಸಿಯಂತೆ ಉತ್ತರ ಪ್ರದೇಶಕ್ಕೆ ಹೊರಟುಹೋದರು. ಅಲ್ಲಿಂದಲೇ ಸಾಂಕೇತಿಕ ಅಕ್ಷರಗಳ ಮೂಲಕ ಪತ್ರ ಬರೆದು ಬಾಂಬ್ ತಯಾರಿಸುವ ರಹಸ್ಯವನ್ನು ಸ್ನೇಹಿತರಿಗೆ ತಿಳಿಸುತ್ತಿದ್ದರು. ವಿರುಪಾಕ್ಷಪ್ಪ ಅಂಗಡಿ ಒಂದು ವರ್ಷ ಕಾಲ ಉತ್ತರ ಪ್ರದೇಶ ಮತ್ತು ಬಂಗಾಳದಲ್ಲಿ ಇದ್ದು ಬಾಂಬ್ ತಯಾರಿಸುವ ಪೂರ್ಣ ತರಬೇತಿ ಪಡೆದು ಹಾವೇರಿಗೆ ಬಂದು ಗುಪ್ತ ಸಂಘಟನೆಯನ್ನು ಮುಂದುವರಿಸಿದ ಬಗ್ಗೆ ನೆಗಳೂರಿನ ದೇವೇಂದ್ರಪ್ಪ ವಿಭೂತಿ ಹಾಗೂ ಆ ಭಾಗದ ಹಲವು ಚಳುವಳಿಗಾರರ ಹೇಳಿಕೆಯಿಂದ ತಿಳಿಯುತ್ತದೆ.

ಹಾವೇರಿಯಲ್ಲಿ ವಿರುಪಾಕ್ಷಪ್ಪ ಅಂಗಡಿ ಅವರ ಮೂಲಕ ಬಾಂಬ್ ತಯಾರಿಸುವುದನ್ನು ಅನೇಕರು ಕಲಿತು ಚಳುವಳಿ ಆರಂಭವಾಗುವುದನ್ನು ಯುವಕರು ಕಾಯುತ್ತಿದ್ದರು. ಆದರೆ ಈ ವೇಳೆಗೆ ವಿರುಪಾಕ್ಷಪ್ಪಾ ಅಂಗಡಿಗೆ ಬಂಗಾಲದ ಕ್ರಾಂತಿಕಾರ ಸಂಘದಿಂದ ಅಲಹಬಾದಿಗೆ ಬರಬೇಕೆಂದು ತುರ್ತು ಕರೆ ಬಂದು ಅವರು ಅಲ್ಲಿಗೆ ಹೋದರು. ಅಲ್ಲಿ ೧೯೩೬ರಿಂದ ೧೯೩೮ರವರೆಗೆ 'ಹಿಂದುಸ್ತಾನ ಸೋಶಿಯಲಿಸ್ಟ್ ರಿಪಬ್ಲಿಕನ್ ಪಾರ್ಟಿಯ' ಉತ್ತರ ಪ್ರದೇಶದ ಪ್ರಾಂತೀಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು."[೨] ಹಾವೇರಿಯ ಒಬ್ಬ ಚಳುವಳಿಗಾರ ಉತ್ತರ ಪ್ರದೇಶದ ಒಂದು ಸಂಘಟನೆಯ ಅಧ್ಯಕ್ಷನಾಗಿರುವುದು ಅವರ ಸಂಘಟನಾ ಚಾತುರ್ಯಕ್ಕೆ ಸಾಕ್ಷಿ.

"ಉತ್ತರ ಪ್ರದೇಶದಲ್ಲಿ ಪ್ರವಾಸಿಯಂತೆ ಸೈಕಲ್ ಮೇಲೆ ತಿರುಗುತ್ತ ಚಳುವಳಿಯ ಬಗ್ಗೆ ಪ್ರಚಾರ ಮಾಡುತ್ತ, ಲೇಖನಿಗಳಿಂದ ವಿದ್ಯಾರ್ಥಿಗಳಲ್ಲಿ, ತರುಣರಲ್ಲಿ, ರೈತರಲ್ಲಿ ಕ್ರಾಂತಿಕಾರಿ ಸಂಘ ಕಟ್ಟಲು ಉತ್ತೇಜಿಸುತ್ತಿದ್ದರು."[೩]

"೧೯೩೮ರ ಕೊನೆಯಲ್ಲಿ ಪಿಪರಿಡೀಕ ಒಳಸಂಚಿನಲ್ಲಿ ವಿರುಪಾಕ್ಷಪ್ಪ ಅಂಗಡಿ ಅಲಹಾಬಾದನಲ್ಲಿ ಬಂಧಿಸಲ್ಪಟ್ಟು ಒಂದು ಮೇಲ್ ಗಾಡಿಯನ್ನು ಲೂಟಿ ಮಾಡುವ ಹಾಗೂ ಬ್ರಿಟಿಷ್ ಸರಕಾರದ ವಿರುದ್ಧ ಬಂಡಿನ(ಪ್ರಚೋದನೆ) ತಯಾರು ಮಾಡುವ ಆರೋಪದಲ್ಲಿ ಇವರಿಗೆ ಉತ್ತರಪ್ರದೇಶದ ಗಾಝಿಪುರ ಜಿಲ್ಲೆಯ ಪಿಪರಿಡೀಕ ಸೆಶನ್ಸ್ ಜಡ್ಜರು ೩೯೭೧ ಸಿ.ಸಿ ಕಲಮಿನ ಪ್ರಕಾರ ೧೮.೧೨.೧೯೩೯ರಂದು ೯ ವರ್ಷಗಳ ಕಠಿಣ ಶಿಕ್ಷೆ ಮತ್ತು ೫೦೦ ರೂ. ದಂಡ, ದಂಡ ಕೊಡದಿದ್ದರೆ ೧ ವರ್ಷ ಶಿಕ್ಷೆ ಎಂದು ಶಿಕ್ಷೆ ವಿಧಿಸಿ ಬರೇಲಿ ಜೈಲ್‌ನಲ್ಲಿ ೧೦ ವರ್ಷಗಳ ಜೈಲು ಶಿಕ್ಷೆಗೆ ಹಾಕಲಾಯಿತು. ಆದರೆ ರಾಷ್ಟ್ರೀಯ ನಡುಗಾಲ ಸರಕಾರ ಬಂದ ಬಳಿಕ ೧೯೪೬ ಏಪ್ರಿಲ್ ತಿಂಗಳಲ್ಲಿ ಅನ್ಯ ಕ್ರಾಂತಿಕಾರಿ ಬಂಧಿಗಳೊಡನೆ ಇವರನ್ನು ಬಿಡುಗಡೆಗೊಳಿಸಲಾಯಿತು,"[೪] ಹಾವೇರಿ ಜಿಲ್ಲೆಯ ಚಳುವಳಿಗಾರರಲ್ಲಿ ಅತಿ ಹೆಚ್ಚು ಶಿಕ್ಷೆಗೆ ಒಳಗಾದವರು ಎಂಬುದು ನಿರ್ವಿವಾದ.

"ವಿರುಪಾಕ್ಷಪ್ಪ ಅಂಗಡಿ ಉತ್ತರ ಭಾರತಕ್ಕೆ ಹೋದ ನಂತರ ಹಾವೇರಿಯ ಕ್ರಾಂತಿದಳದ ಸಂಘಟನೆಯ ಕಾರ್ಯವನ್ನು ರಾಮಕೃಷ್ಣ ಗಣಪುಲೆ, ಜಿನ್ನಪ್ಪ ಕೆಂಚಪ್ಪ ಹಳ್ಳಿ, ವಿರೂಪಾಕ್ಷಪ್ಪ ಕಡ್ಲಿ, ನಾರಾಯಣಚಾರ್ಯ ಆನವಟ್ಟಿ, ಶಾಂತರಾಮ ಅವಘಾನ ಮೊದಲಾದ ತರುಣರು ಮಾಡುತ್ತಿದರು. ಹಾವೇರಿ ಭಾಗದ ಅನೇಕ ತರುಣರು ಈ ಕ್ರಾಂತಿದಳದ ಸದಸ್ಯರಾಗಿದ್ದರು."[೫] ಈ ತರುಣರು ತಯಾರಿಸುವ ಬಾಂಬ್‌ಗಳು ಅಪಾಯಕಾರಿಯಾಗಿರದೆ, ಸಪ್ಪಳದ ಹೊಗೆ ಬರುವಹಾಗೆ ಬಾಂಬ್‌ಗಳನ್ನು ತಯಾರಿಸುತ್ತಿದ್ದರು. ಕಾರಣ ಅವುಗಳಿಂದ ಸಾರ್ವಜನಿಕರಿಗಾಗಲಿ, ಅಧಿಕಾರಿಗಳಿಗಾಗಲಿ ಪ್ರಾಣಹಾನಿಯಾಗಬಾರದೆಂಬುದು ಇವರ ಉದ್ದೇಶವಾಗಿದ್ದರಿಂದ ಆ ರೀತಿಯ ಬಾಂಬ್‌ಗಳನ್ನು ತಯಾರಿಸುತ್ತಿದ್ದರು.

ಹಾವೇರಿ ಭಾಗದ ಇನ್ನೊಬ್ಬ ಕ್ರಾಂತಿದಳದ ಸದಸ್ಯನೆಂದರೆ "ಯಲ್ಲಾಪುರದ ನಿಂಗನಗೌಡ್ರ ದೊಡ್ಡಗೌಡ್ರ ಇವರು ತಮ್ಮ ಹೊಲದಲ್ಲಿಯೇ ಗುಪ್ತವಾಗಿ ದೊಡ್ಡದಾದ ಮನೆಯೊಂದನ್ನು ನಿರ್ಮಿಸಿ, ಚಳುವಳಿಗಾರರು ಯಾರೇ ಯಾವುದೇ ಭಾಗದವರು, ಯಾವ ಸಂದರ್ಭದಲ್ಲಿಯೂ ಬಂದರೂ ಊಟದ ವ್ಯವಸ್ಥೆಯಿರುತ್ತಿತ್ತು."[೭೬] ಅದು ಅವರು ತಮ್ಮ ಸ್ವಂತ ಖರ್ಚಿನಲ್ಲಿ ಮಾಡುತ್ತಿದ್ದರು. ನಿಂಗಪ್ಪ ದೊಡ್ಡಗೌಡರರ ಉದಾರತೆ, ರಾಷ್ಟ್ರಪ್ರೇಮ, ಮತ್ತೊಬ್ಬರಿಗೆ ಪ್ರೇರಣೆ ಯಾಗುವಂತಹ ಕಾರ್ಯಮಾಡಿ, ಚಳುವಳಿಗಾರರಿಗೆ ಊಟ, ವಸತಿಯೊಂದಿಗೆ ಅನ್ನ ನೀಡಿದ ಅನ್ನದಾತರಾಗಿದ್ದು ವಿಶೇಷವೆನ್ನಬಹುದು.

ಹಾವೇರಿ ಭಾಗದ ರಾಣೆಬೆನ್ನೂರು ತಾಲೂಕಿನ "ಮೆಣಸಿನಾಳದ ತಿಮ್ಮನಗೌಡರ ನಾಯಕತ್ವದ ತಂಡದ ಸದಸ್ಯರು ಸಾಮಾನ್ಯವಾಗಿ ಖಂಡಿಬಾಗೂರು(ಮಾಸೂರು ಹತ್ತಿರ), ಮೆಣಸಿನಾಳ ಮತ್ತು ಸುಣಕಲ್ ಬಿದರಿ ಇಲ್ಲಿ ತಯಾರಿಸಲಾಗುವ ಬಾಂಬ್‌ಗಳು ಸಾಮಾನ್ಯವಾಗಿ ದೇಶೀಯ ಬಾಂಬ್‌ಗಳನ್ನು ತಯಾರಿಸುತ್ತಿದ್ದರು. ಈ ತಂಡದಲ್ಲಿ ಬಾಂಬ್ ತಯಾರಿಸುವ ತರಬೇತಿ ಪಡೆದವರೆಂದರೆ ಸಂಗೂರು ಕರಿಯಪ್ಪ."[೭೭]

ಸಂಗೂರು ಕರಿಯಪ್ಪ, ಮೆಣಸಿನಾಳ ತಿಮ್ಮನಗೌಡರು ಇವರು ನಿರ್ಮಿಸಿರುವ ಬಾಂಬ್‌ಗಳು ಮತ್ತು ಹಾವೇರಿಯ ಕ್ರಾಂತಿಕಾರಿ ಸಂಘದವರು ನಿರ್ಮಿಸುವ ಬಾಂಬ್‌ಗಳು ಒಂದೇ ಕಡೆ ತಯಾರಾಗುತ್ತಿರಲಿಲ್ಲ ಎಂಬುದನ್ನು ಗಮನಿಸಬಹುದು. ಮಹದೇವಪ್ಪ ಮೈಲಾರ ಹುತಾತ್ಮನಾದ ಮೇಲೆ ಹಾವೇರಿ ಭಾಗದ ಬಾಂಬ್ ತಯಾರಿಸುವವರನ್ನು ಬಂಧಿಸಿದಾಗ ಸಂಗೂರು ಕರಿಯಪ್ಪನವರ ಪ್ರಸ್ತಾಪವಿರಲಿಲ್ಲ. ಸಂಗೂರು ಕರಿಯಪ್ಪ ರಾಣೆಬೆನ್ನೂರು ತಾಲೂಕಿನ ಸುಣಕಲ್ ಬಿದರಿ ಗ್ರಾಮದ ಬಸಮ್ಮ ಕೂಸುಗೂರು ಅವರ ಹೊಲದಲ್ಲಿ ಬಾಂಬ್‌ಗಳನ್ನು ಕಟ್ಟುವಾಗ(ಬಾಂಬ್‌ಗಳನ್ನು ಒಣಗಿಸಿ, ನಂತರ ಅವುಗಳನ್ನು ಚೀಲಕ್ಕೆ ತುಂಬಿಸಿಕೊಳ್ಳುವಾಗ) ಬಾಂಬ್ ಸ್ಫೋಟಗೊಂಡು ತಮ್ಮ ಒಂದು ಕೈಯನ್ನು ಕಳೆದುಕೊಂಡರು. ಈ ಘಟನೆಯಿಂದ ಬೇರೆ ಬೇರೆಯಾಗಿಯೇ ಕಾರ್ಯ ನಿರ್ವಹಿಸುತ್ತಿದ್ದರು ಎಂಬುದನ್ನು ಗುರುತಿಸಲಾಗಿದೆ. ಆದರೆ ಗಮನಿಸಬೇಕಾದ ಅಂಶವೆಂದರೆ ಯಾರೇ ಬಾಂಬ್ ಕಟ್ಟಿದರೂ, ಜಿಲ್ಲೆಯಲ್ಲಿ ಬಾಂಬ್ ಪ್ರಕರಣದಿಂದ ಸಾಮಾನ್ಯರಿಗೆ ಮತ್ತು ಅಧಿಕಾರಿಗಳಿಗೆ ಯಾವುದೇ ಸಾವು–ನೋವಿನ ಪ್ರಕರಣಗಳು ಘಟಿಸಲಿಲ್ಲ ಎಂಬುದು ಗಮನಾರ್ಹ. ಆದರೂ ತಿಮ್ಮನಗೌಡ ಮೆಣಸಿನಾಳ ಹಾಗೂ ಕರಿಯಪ್ಪ ಸಂಗೂರ ಇವರ ವಿಚಾರದಲ್ಲಾದ ಘಟನೆಗಳನ್ನು ಮರೆಯುವಂತಿಲ್ಲ.

ಒಟ್ಟಾರೆ ರಾಷ್ಟ್ರೀಯ ಹೋರಾಟದಲ್ಲಿ ಹಾವೇರಿ ಜಿಲ್ಲೆಯ ಚಳುವಳಿಗಾರರ ವಿವಿಧ ರೀತಿಯ ಕೊಡುಗೆಯನ್ನು ಗಮನಿಸುವುದರೊಂದಿಗೆ ಚಳುವಳಿಯ ನಾಯಕರು ರಾಷ್ಟ್ರೀಯತೆಯ ಜ್ವಾಲೆಯನ್ನು ಜಿಲ್ಲೆಯ ಗ್ರಾಮೀಣ ಪ್ರದೇಶಕ್ಕೆ ಮುಟ್ಟಿಸುವ ಕಾರ್ಯ ಮಾಡಿರುವುದನ್ನು ಗುರುತಿಸಲಾಗಿದೆ.

## ಕೊನೆ ಟಿಪ್ಪಣಿಗಳು


೧. ಚಂದ್ರ ಬಿಪಿನ್, ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್ ೧೮೫೭–೧೯೪೭, ನ್ಯೂಡಲ್ಲಿ, ೧೯೮೯, ಪುಟ ೧೩

೨. ಹೇಯ್ಸ್. ಸಿ.ಜೆ.ಎಚ್., ಎಸ್ಸೆಸ್ ಆನ್ ನ್ಯಾಷನ್ಯಾಲಿಸಂ, ನ್ಯೂಯಾರ್ಕ್, ೧೯೨೬, ಪುಟ ೨೯

೩. ಕಾನ್, ಹೆನ್ಸ್, ದಿ ಐಡಿಯಾ ಆಫ್ ನ್ಯಾಷನ್ಯಾಲಿಸಂ, ಎ ಸ್ಟಡಿ ಇನ್ ಒರಿಜಿನ್ಸ್ ಆಂಡ್ ಬ್ಯಾಗ್ರೌಂಡ್, ನ್ಯೂಯಾರ್ಕ್, ೧೯೪೬, ಪುಟ ೧೫

೪. ದೇಸಾಯಿ ಎ.ಆರ್., ಸೋಶಿಯಲ್ ಬ್ಯಾಗ್ರೌಂಡ್ ಆಫ್ ಇಂಡಿಯನ್ ನ್ಯಾಷನ್ಯಾಲಿಸಂ, ಬಾಂಬೆ, ೧೯೬೬. ಪುಟ ೫

೫. ಸ್ನೈಡರ್ ಲೂಯಿಸ್ ಎಲ್., ದಿ ಮೀನಿಂಗ್ ಆಫ್ ನ್ಯಾಷನ್ಯಾಲಿಸಂ, ನ್ಯೂಯಾರ್ಕ್, ೧೯೪೫, ಪುಟ ೬೨

೬. ಗುಬ್ಬಣ್ಣನವರ ಶಿವಾನಂದ, ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ, ಧಾರವಾಡ, ೧೯೭೨, ಪುಟ ೨೫

೭. ಚವಣ್ ಆರ್.ಎಸ್., ನ್ಯಾಷನ್ಯಾಲಿಸಂ ಇನ್ ಏಶಿಯಾ, ನ್ಯೂಡೆಲ್ಲಿ, ೧೯೪೦, ಪುಟ ೪

೮. ಕಾನ್ ಹೆನ್ಸ್, ದಿ ಐಡಿಯಾ ಆಫ್ ನ್ಯಾಷನ್ಯಾಲಿಸಂ. ನ್ಯೂಯಾರ್ಕ್, ೧೯೪೦, ಪುಟ ೩

೯. ಮೂಲ್ ಚಂದ್, ನ್ಯಾಷನ್ಯಾಲಿಸಂ ಆಂಡ್ ಇಂಟರ್‌ನ್ಯಾಷನ್ಯಾಲಿಸಂ ಆಫ್ ಗಾಂಧಿ ನೆಹರು ಆಂಡ್ ಟ್ಯಾಗೋರ್, ನ್ಯೂಡೆಲ್ಲಿ, ೧೯೯೮ ಪುಟ ೪೩

೧೦. ಕೆಡೋರಿಯಾ ಎಲೀ, ನ್ಯಾಷನ್ಯಾಲಿಸಂ ಇನ್ ಏಶಿಯಾ ಆಂಡ್ ಆಫ್ರಿಕಾ. ಇಂಡನ್, ಪುಟ ೬೯

೧೧. ಕಾಮತ್ ಸೂರ್ಯನಾಥ(ಸಂ), ರಾಜ್ಯ, ಧಾರವಾಡ ಜಿಲ್ಲಾ ಗ್ಯಾಸೆಟಿಯರ್. ೧೯೯೫, ಪುಟ ೧೧೯

೧೨. ಅದೇ, ಪುಟ ೧೨೧

೧೩. ಶಿವರುದ್ರಪ್ಪ ಜಿ.ಎಸ್., ನವೋದಯ ಹೊಸಗನ್ನಡ ಸಾಹಿತ್ಯ ಸಮೀಕ್ಷೆ ಮತ್ತು ವಿಮರ್ಶೆ ಮೈಸೂರು, ೧೯೭೬–೧೯೮೦. ಪುಟ ೧೯

೧೪. ಪೂರ್ವೋಕ್ತ, ಹಾಲಪ್ಪ ಗ.ಸ., ರಾಷ್ಟ್ರಧರ್ಮದ್ರಷ್ಟಾರ ಹರ್ಡೇಕರ್ ಮಂಜಪ್ಪ, ಪುಟ ೮೭ ಮತ್ತು ೮೯

೧೫. ಪೂರ್ವೋಕ್ತ, ಪುಟ ೮೯

೧೬. ಅದೇ, ಪುಟ ೯೦

೧೭. ಪೂರ್ವೋಕ್ತ, ಶಿವರುದ್ರಪ್ಪ ಜಿ.ಎಸ್., ನವೋದಯ ಹೊಸಗನ್ನಡ ಸಾಹಿತ್ಯ ಸಮೀಕ್ಷೆ ಮತ್ತು ವಿಮರ್ಶೆ, ಪುಟ ೭೨

೧೮. ಅದೇ, ಪುಟ ೭೪

೧೯. ದಾನಿ ಸುರೇಂದ್ರ, ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಮ, ಬುರ್ಲಿಬಿಂದು ಮಾಧವ ಸ್ಮಾರಕ ಪ್ರತಿಷ್ಠಾನ, ಹುಬ್ಬಳ್ಳಿ, ೧೯೮೮, ಪುಟ ೨೦ ಮತ್ತು ೨೦೧

೨೦. ಅದೇ, ಪುಟ ೨೦೫

೨೧. ಕಾಮತ್ ಸೂರ್ಯನಾಥ, ಇತಿಹಾಸ ದರ್ಶನ, ಸಂ-೮, ಬೆಂಗಳೂರು, ೧೯೯೩, ಪುಟ ೧೭೪

೨೨. ಕರ್ನಾಟಕ ಪರಂಪರೆ(ಸಂ-೨), ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರಕಾರ, ಬೆಂಗಳೂರು, ೧೯೭೦. ಮೂಲ ಲೇಖಕರು-ಶ್ರೀ ಆರ್.ಆರ್. ದಿವಾಕರ ಅನುವಾದ-ವಿ.ಎಸ್. ನಾರಾಯಣರಾವ್, ಪುಟ ೪೯೧

೨೩. ಅದೇ, ಪುಟ ೪೯೨

೨೪. ಕಾಮತ್ ಸೂರ್ಯನಾಥ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೧. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮, ಪುಟ ೭೫೯

೨೫. ಪೂರ್ವೋಕ್ತ, ಕರ್ನಾಟಕ ಪರಂಪರೆ, ಸಂ. ೨, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಪುಟ ೪೯೪

೨೬. ಪಾಟೀಲ್ ಭೋಜರಾಜ, ಸ್ವಾತಂತ್ರ್ಯೋಧ ಟಿ.ಆರ್. ನೆಶ್ವಿ, ನೆಶ್ವಿ ಪ್ರಕಾಶನ, ಹಂಸಬಾವಿ, ೧೯೯೮. ಪುಟ ೪೨

೨೭. ಪೂರ್ವೋಕ್ತ, ಕರ್ನಾಟಕ ಪರಂಪರೆ (ಸಂ-೨), ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು, ಪುಟ ೪೯೫ ಮತ್ತು ೪೯೬

೨೮. ದೇವೇಂದ್ರಪ್ಪ ವಿಭೂತಿ ಅವರ ಹೇಳಿಕೆ.

೨೯. ಪೂರ್ವೋಕ್ತ, ಕರ್ನಾಟಕ ಪರಂಪರೆ (ಸಂ), ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರಕಾರ, ಪುಟ ೫೦೩

೩೦. ಕಾಮತ್ ಸೂರ್ಯನಾಥ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೪೦೦ ಮತ್ತು ೩೯೭

೩೧. ನೆಗಳೂರಿನ ಚಳುವಳಿಗಾರ ಪರಮಣ್ಣ ಹರಕಂಗಿ ಸಂದರ್ಶನದಲ್ಲಿ ನೀಡಿದ ವಿವರಣೆ

೩೨. ನೆಗಳೂರಿನ ದೇವೇಂದ್ರಪ್ಪ ಅವರ ಹೇಳಿಕೆ.

೩೩. ನಾರಾಯಣರಾವ್ ಎನ್.ಪಿ., ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, ೧೯೯೧, ೯೬, ೯೯ ೨೦೦೬, ೦೮ ೧೦ ೨೦೧೧, ಪುಟ ೧೫೬

೩೪. ಪೂರ್ವೋಕ್ತ, ಕಾಮತ್ ಸೂರ್ಯನಾಥ (ಸಂ)., ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೭೬೩ ಮತ್ತು ೨೯೭

೩೫. ಅದೇ, ಪುಟ ೭೬೧ ಮತ್ತು ೭೭೫

೩೬. ಪೂರ್ವೋಕ್ತ, ಕಾಮತ್ ಸೂರ್ಯನಾಥ. (ಸಂ): ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೭೮೬ ಮತ್ತು ೮೯೯

೩೭. ಚಳುವಳಿಗಾರ ನಾರಾಯಣ ಕರ್ಪೂರ ಅವರ ಹೇಳಿಕೆ

೩೮. ದೇವೇಂದ್ರಪ್ಪ ವಿಭೂತಿ ಅವರ ಹೇಳಿಕೆ.

೩೯. ಪೂರ್ವೋಕ್ತ, ದಾನಿ ಸುರೇಂದ್ರ, ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಾಮ, ಪುಟ ೧೧೩

೪೦. ಪೂರ್ವೋಕ್ತ, ಕಾಮತ್ ಸೂರ್ಯನಾಥ (ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೭೬೧

೪೧. ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಗಾಂಧೀ ಮತ್ತು ಕರ್ನಾಟಕ. ಶ್ರೀ ಎಚ್.ಆರ್. ದಾಸೇಗೌಡ, ಕಾರ್ಯದರ್ಶಿ, ಕರ್ನಾಟಕ ರಾಜ್ಯ ಗಾಂಧಿ ಸ್ಮಾರಕ ನಿಧಿ, ಬೆಂಗಳೂರು, ೧೯೭೦, ೨೦೦೮, ಪುಟ ೪

೪೨. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೧೦೦೨

೪೩. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೫೮೬, ೫೯೮

೪೪. ಪೂರ್ವೋಕ್ತ, ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಗಾಂಧೀ ಮತ್ತು ಕರ್ನಾಟಕ, ಪುಟ ೩೨

೪೫. ಅದೇ, ಪುಟ ೩೪, ೩೫, ಮತ್ತು ೩೯

೪೬. ಅದೇ. ಪುಟ ೫೦ ಮತ್ತು ೬೩

೪೭. ಶಿಗ್ಗಾವಿಯ ಚಳುವಳಿಗಾರ ರಾಮಚಂದ್ರ ಅರ್ಕಾಚಾರಿ ಅವರ ಹೇಳಿಕೆ

೪೮. ಸಂಕಮ್ಮ ಜಿ., ಸಂಕಣ್ಣನವರ, ಹೋರಾಟದ ಒಂದು ನೋಟ, ಸಿದ್ದಮ್ಮ ಮಹದೇವಪ್ಪ ಮೈಲಾರ ಬದುಕು-ಬರಹ, ಸಮೃದ್ಧಿ ಪ್ರಕಾಶನ, ಬ್ಯಾಡಗಿ, ೨೦೧೨, ಪುಟ ೪೮

೪೯. ಬ್ಯಾಡಗಿಯ ಚಳುವಳಿಗಾರ ಷಡಕ್ಷರಪ್ಪ ಮಹಾರಾಜಪೇಟೆ ಅವರ ಹೇಳಿಕೆ

೫೦. ಪೂರ್ವೋಕ್ತ, ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಗಾಂಧೀ ಮತ್ತು ಕರ್ನಾಟಕ, ಪುಟ ೨೫೦ ಮತ್ತು ೨೫೩

೫೧. ಮೂಡಿ ವ್ಹಿ.ಎಂ., ಹಿರೇಕೆರೂರು ತಾಲೂಕಿನ ಗಾಂಧೀ, ಪ್ರಕಾಶನ ಅನಸೂಯಕ್ಕ ಶಂಭುಲಿಂಗಪ್ಪ ಜವಳಿ, ಹುಬ್ಬಳ್ಳಿ, ೧೯೯೮, ಪುಟ ೪ ಮತು ೨೨

೫೨. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೧. ಪುಟ ೬೨೦, ೬೯೨ ಮತ್ತು ೬೯೩

೫೩. ಪೂರ್ವೋಕ್ತ, ಸಿದ್ದವ್ವನಹಳ್ಳಿ ಕೃಷ್ಣಶರ್ಮ:(ಸಂ) ಗಾಂಧೀ ಮತ್ತು ಕರ್ನಾಟಕ, ಪುಟ ೪೦

೫೪. ಚಳುವಳಿಕಾರ ಪರಮಣ್ಣ ಹರಕಂಗಿ ಅವರ ಹೇಳಿಕೆ

೫೫. ಹಾಲಗಿಯ ಫಕ್ಕೀರಯ್ಯ ಹಾಲಯ್ಯ ಕುಲಕರ್ಣಿ ಅವರ ಹೇಳಿಕೆ

೫೬. ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಅವರ ಹೇಳಿಕೆ

೫೭. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೧, ಪುಟ ೭೭೬ ಮತ್ತು ೭೯೨

೫೮. ಹಾನಗಲ್ಲನ ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕೀವಳಿ ಅವರ ಹೇಳಿಕೆ

೫೯. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೨೮೦

೬೦. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ಟಿ.ಆರ್. ನೆಶ್ವಿ, ಪುಟ ೫೧

೬೧. ಅದೇ, ಪುಟ ೫೨

೬೨. ಪೂರ್ವೋಕ್ತ, ಮೂಡಿ ವ್ಹಿ.ಎಂ., ಹಿರೇಕೆರೂರು ತಾಲೂಕಿನ ಗಾಂಧೀ, ಪುಟ ೪ ಮತ್ತು ೫

೬೩. ಬ್ಯಾಡಗಿ ತಾಲೂಕಿನ ಚಳುವಳಿಕಾರ ಮಳ್ಳಪ್ಪ ಸಿದ್ದಪ್ಪ ಕೊಪ್ಪದ ಸಂದರ್ಶನದ ವಿವರಣೆ

೬೪. ಚಳುವಳಿಕಾರ ಪುಟ್ಟಪ್ಪ ಹರಭಿ ನೀಡಿದ ವಿವರ

೬೫. ರಾಣೇಬೆನ್ನೂರಿನ ಚಳುವಳಿಕಾರ ಮಿನ್ನಪ್ಪಹಳ್ಳಿ ಸಂದರ್ಶನದಲ್ಲಿ ಹೇಳಿರುವುದು

೬೬. ದೇವೇಂದ್ರಪ್ಪ ವಿಭೂತಿ ಸಂದರ್ಶನದಲಿ ನೀಡಿದ ವಿವರ

೬೭. ಬಿ.ಜಿ.ಬಣಕಾರ ಸಂದರ್ಶನದಲ್ಲಿ ನೀಡಿದ ವಿವರ

೬೮. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ಟಿ.ಆರ್. ನೆಶ್ವಿ, ಪುಟ ೧೮

೬೯. ಅದೇ, ಪುಟ ೨೯

೭೦. ಬಿ.ಜಿ. ಬಣಕಾರ ಸಂದರ್ಶನದಲ್ಲಿ ಅವರ ಹೇಳಿಕೆ

೭೧. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೩೯೬

೭೨. ಅದೇ, ಪುಟ ೭೭೫

೭೩. ಹಾನಗಲ್ಲು ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕೀವಳ್ಳಿ ಅವರ ಹೇಳಿಕೆ

೭೪. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೩೯೬

೭೫. ಅದೇ, ಪುಟ ೭೭೬

೭೬. ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ನೀಡಿದ ವಿವರ

೭೭. ರಾಣೆಬೆನ್ನೂರಿನ ಚಳುವಳಿಗಾರ ಮಿನ್ನಪ್ಪ ಹಳ್ಳಿ ಹಾಗೂ ಮಳ್ಳಪ್ಪ ಕೊಪ್ಪ ನೀಡಿದ ವಿವರ



ಅಧ್ಯಾಯ : ನಾಲ್ಕು

# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ವಿವಿಧ ಆಯಾಮಗಳು

೪.೧. ಬ್ರಾಹ್ಮಣೇತರ ಚಳುವಳಿ
೪.೨. ಹೋಂ ರೂಲ್ ಲೀಗ್ ಚಳುವಳಿ
೪.೩. ಖಿಲಾಫತ್ ಚಳುವಳಿ
೪.೪. ಅಸಹಕಾರ ಚಳುವಳಿ
೪.೫. ಸ್ವದೇಶಿ ಚಳುವಳಿ
೪.೬. ಕರ ನಿರಾಕರಣೆ ಚಳುವಳಿ
೪.೭. ಉಪ್ಪಿನ ಸತ್ಯಾಗ್ರಹ ಅಥವಾ ಕಾಯ್ದೆ ಭಂಗ ಚಳುವಳಿ
೪.೮. ಅರಣ್ಯ ಸತ್ಯಾಗ್ರಹ
೪.೯. ವೈಯಕ್ತಿಕ ಸತ್ಯಾಗ್ರಹ
೪.೧೦. ಭಾರತ ಬಿಟ್ಟು ತೊಲಗಿ ಚಳುವಳಿ

## ಅಧ್ಯಾಯ : ನಾಲ್ಕು

# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ವಿವಿಧ ಆಯಾಮಗಳು

ಭಾರತವು ಸಂಪೂರ್ಣವಾಗಿ ಇಂಗ್ಲೀಷರ ಆಳ್ವಿಕೆಗೆ ಒಳಗಾದದ್ದು ೧೯ನೇ ಶತಮಾನದ ಮಧ್ಯಭಾಗದಲ್ಲಿ. ಹೀಗೆ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಪೂರ್ಣ ಅಧೀನವಾದ ನಂತರ ಭಾರತವನ್ನು ಸ್ವತಂತ್ರಗೊಳಿಸುವ ಸಲುವಾಗಿ ನಡೆದ ಹೋರಾಟವು ಸುದೀರ್ಘವಾದುದು. "ಬ್ರಿಟಿಷ್ ಆಳರಸರಿಗೆ ಆರಂಭದಿಂದ ಗೆಲುವಾದರೂ ಅವರು ನಿರಾತಂಕವಾಗಿ ಆಳಲು ಎಂದೂ ಸಾಧ್ಯವಾಗಲಿಲ್ಲ. ಅವರೊಡನೆ ಸಂಘರ್ಷವೂ ದೇಶವ್ಯಾಪಿಯಾಗಿ, ವಿವಿಧ ರಂಗಗಳಲ್ಲಿ ನಡೆಯಿತು."[೧] ಭಾರತೀಯ ಆಳರಸರು ಆರಂಭದಿಂದ ತಮ್ಮ ಅಧಿಪತ್ಯಕ್ಕಾಗಿ ಹೋರಾಡಿದರೆ, ನಂತರದಲ್ಲಿ ಆ ಹೋರಾಟ ವಿಶಾಲಾರ್ಥ ಪಡೆದು ದೇಶದ ಸ್ವಾತಂತ್ರ್ಯಕ್ಕಾಗಿ ನಡೆಯಿತು; ಹಲವು ರೀತಿಯ ಚಳುವಳಿಗಳು ನಡೆದವು. ಚಳುವಳಿ ಮತ್ತು ಕ್ರಾಂತಿ ಶಬ್ದಗಳ ವಿವರಣೆಯನ್ನು ಸಂಶೋಧಕ ಎಂ.ಚಿದಾನಂದ ಮೂರ್ತಿಯವರು ಉಲ್ಲೇಖಿಸಿರುವಂತೆ– "ಮರಾಠಿಯಿಂದ ಸ್ವೀಕೃತವಾಗಿರುವ ಕನ್ನಡ ಪದ 'ಚಳುವಳಿ' ತನ್ನ ಮೂಲ ಅರ್ಥವನ್ನೇ ಉಳಿಸಿಕೊಂಡಿದೆ. ಚಳುವಳಿಯು 'Movement' ಪದದ ಸಂವಾದಿ ಪದ. ಅದರ ಸಂಸ್ಕೃತ ಮೂಲ 'ಚಲನ–ವಲನ' 'ಚಲನ' ಎಂದರೆ ಚಲಿಸುವಿಕೆ, 'ವಲನ'ಕ್ಕೂ ಅದೇ ಅರ್ಥವಿದೆ. 'Movement' ಪದದ ಮೂಲ 'Move' ಎಂಬುದು ಸ್ಪಷ್ಟ. ಚಳುವಳಿಗಳು ಸಾಮೂಹಿಕ ಸಾಮಾಜಿಕ ಪ್ರತಿಭಟನಾತ್ಮಕವಾಗಿದ್ದರೂ ಅವು ಸಾಮಾನ್ಯವಾಗಿ ಹಿಂಸೆಗೆ ತಿರುಗುವುದಿಲ್ಲ. 'ಕ್ರಾಂತಿ'ಯು ಒಂದು ವ್ಯವಸ್ಥೆಯನ್ನು ಬುಡಮೇಲು ಮಾಡುವ ,ಅದನ್ನು ಕಿತ್ತೊಗೆದು ಹೊಸ ವ್ಯವಸ್ಥೆಯನ್ನು ತರುವ ಸಾಮೂಹಿಕ ಕ್ರಿಯೆಯಾಗಿದ್ದರೆ 'ಚಳುವಳಿ'ಯು ಇರುವ ವ್ಯವಸ್ಥೆಯನ್ನು ಮಾರ್ಪಾಡುಗೊಳಿಸಿ ಅದರ ಉತ್ತಮೀಕರಣಕ್ಕೆ ಸಾಮಾಜಿಕ ಸುಧಾರಣೆಗೆ ಗಮನಕೊಡುತ್ತದೆ.

ಒಂದು ಸಮಾಜ ತನಗಾಗುತ್ತಿರುವ ಶೋಷಣೆಯಿಂದ ಮುಕ್ತವಾಗಲು ತೀವ್ರವಾದ ರಾಜಕೀಯ ಅಥವಾ ಸಾಮಾಜಿಕ ಹೋರಾಟ ನಡೆಸುವುದು ಕ್ರಾಂತಿಯ ಧ್ಯೇಯ, ಅಂತಹ ಹೋರಾಟಗಳಲ್ಲಿ ಅನೇಕ ಬಾರಿ ರಕ್ತಪಾತವಾಗುವುದುಂಟು. ಶೋಷಿತ ಸಮಾಜಕ್ಕೆ ತನಗೆ ಒಳಿತಾಗುವುದು

ಮುಖ್ಯವೇ ಹೊರತು ಅದಕ್ಕಾಗಿ ರಕ್ತಪಾತದಂತಹ ಅನುಸರಿಸುವ ಮಾರ್ಗ ಮುಖ್ಯವಲ್ಲ. 'ಕ್ರಾಂತಿ' ಎಂದರೆ ಮುಂದೆ ನುಗ್ಗು, ಆಕ್ರಮಿಸು, ಘರ್ಷಣೆಯಲ್ಲಿ ತೊಡಗು ಎಂದು ಅರ್ಥ; ಅದು ಇಂಗ್ಲಿಷಿನ 'ರೆವಲ್ಯೂಷನ್' ಪದಕ್ಕೆ ಸಮನಾರ್ಥಕ ಪದ."[೨]

ನಮ್ಮ ದೇಶದ ಸ್ವಾತಂತ್ರ್ಯ ಹೋರಾಟಕ್ಕಾಗಿ ಹತ್ತು ಹಲವು ಚಳುವಳಿಗಳು ನಡೆದಿವೆ. ಹಾವೇರಿ ಜಿಲ್ಲೆಗೆ ಅನ್ವಯಿಸಿ ಬ್ರಾಹ್ಮಣೇತರ, ಹೋಂ ರೂಲ್, ಖಿಲಾಪತ್, ಅಸಹಕಾರ ಚಳುವಳಿ, ವೈಯಕ್ತಿಕ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಉಪ್ಪಿನ ಸತ್ಯಾಗ್ರಹ, ಭಾರತ ಬಿಟ್ಟು ತೊಲಗಿ ಹೀಗೆ ಮುಂತಾದ ಚಳುವಳಿಗಳು ನಡೆದಿದ್ದು ಆ ಚಳುವಳಿಗಳಲ್ಲಿ ಜಿಲ್ಲೆಯ ಚಳುವಳಿಗಾರರು ತಮ್ಮದೇಯಾದ ಕೊಡುಗೆ ನೀಡಿರುವುದನ್ನು ವಿಶ್ಲೇಷಿಸಲಾಗಿದೆ.

### ೪.೧. ಬ್ರಾಹ್ಮಣೇತರ ಚಳುವಳಿ

ಭಾರತೀಯ ಸಮಾಜದಲ್ಲಿ ಕಂಡು ಬರುವ ಹಲವು ವೈವಿಧ್ಯತೆಗಳಲ್ಲಿ ಜಾತಿ ವೈವಿಧ್ಯತೆ ಅತ್ಯಂತ ವಿಶಿಷ್ಟವಾದುದು. "ಹತ್ತಾರು ಶತಮಾನಗಳಿಂದ ಜಾತಿಯನ್ನು ತೊಡೆದುಹಾಕಲು ಜಾತಿ ಮೀರಿದ ಸಮಾನಭಾವವನ್ನು ಜನರಲ್ಲಿ ಬಿತ್ತಲು ನಡೆದ ಪ್ರಯತ್ನಗಳೆಲ್ಲ ನಿರರ್ಥಕ ಎಂದು ಹೇಳಲಾಗದಿದ್ದರೂ ಯಶಸ್ವಿಯಂತೂ ಆಗಿಲ್ಲ. ಬ್ರಿಟಿಷರ ಆಳ್ವಿಕೆಯು ಜಾತಿ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿ ಅವುಗಳಿಗೆ ರಾಜಕೀಯ ರೂಪ ನೀಡಿತು; ಅದರಿಂದಾಗಿ ತಾತ್ಕಾಲಿಕ ಉದ್ದೇಶಗಳಿಗಾಗಿ ಹಲವು ಜಾತಿಗಳು ಒಂದುಗೂಡುವ ಪ್ರಕ್ರಿಯೆ ಆರಂಭವಾಯಿತು."[೩]

ರಾಷ್ಟ್ರೀಯ ಚಳುವಳಿ ಪ್ರಬಲವಾಗುತ್ತ ಬಂದ ಹಾಗೆ ಬ್ರಿಟಿಷರು ತಮಗೆ ಬೆಂಬಲ ನೀಡುವ ಗುಂಪುಗಳಿಗಾಗಿ ಗಮನಿಸತೊಡಗಿದರು. ಅವರಿಗೆ ಸುಲಭವಾಗಿ ದೊರೆತವರೆಂದರೆ ಮತೀಯ ಅಸಮಾಧಾನವಿದ್ದವರು ಹಾಗೂ ವಿದ್ಯಾವಂತ ಗುಂಪುಗಳು ರಾಜಕೀಯವಾಗಿ ಬ್ರಿಟಿಷರಿಗೆ ಕೆಲಕಾಲ ಅನುಕೂಲವಾಯಿತೆಂಬುದನ್ನು ಅಲ್ಲಗಳೆಯುವಂತಿಲ್ಲ. ಆಗ-ಜಾತಿ ವ್ಯವಸ್ಥೆಯನ್ನೇ ತೊಡೆದುಹಾಕುವ ಪ್ರಯತ್ನಗಳಿಗಿಂತಲೂ ತಮ್ಮ ಜಾತಿಯವರಿಗೆ ಹೆಚ್ಚಿನ ಸೌಕರ್ಯ ದೊರಕಿಸಿಕೊಡುವುದೇ ಜಾತಿ ಚಳುವಳಿಗಳ ಗುರಿಯಾಗಿತ್ತು.

"ಜಾತೀಯ ಚಳುವಳಿಗಳು ಮೊದಲು ನಡೆದಿದ್ದು ಮುಂಬಯಿ ಹಾಗೂ ಮದ್ರಾಸ್ ಪ್ರಾಂತಗಳಲ್ಲಿ. ಭಾಷಾವಾರು ನೋಡಿದರೆ ಮಹಾರಾಷ್ಟ್ರ, ಕರ್ನಾಟಕದ ಉತ್ತರ ಭಾಗ ಮೈಸೂರು ಸಂಸ್ಥಾನ ಮದ್ರಾಸ್ ಪ್ರಾಂತದಿಂದ ಪ್ರಭಾವಿತವಾಯಿತು. ೧೯೦೦ರಿಂದ ಈಚೆಗೆ ಕೊಲ್ಲಾಪುರದ ಷಾಹು ಮಹಾರಾಜರು ಬ್ರಾಹ್ಮಣೇತರ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದವರು. ಇವರು ರಾಷ್ಟ್ರೀಯ ನಾಯಕರಿಗೆ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಲು ಬ್ರಾಹ್ಮಣೇತರರಿಗೆ ಬೆಂಬಲವಾಗಿ ನಿಂತು ಶಿಕ್ಷಣ ಹಾಗೂ ಹಾಸ್ಟೆಲ್ ಸೌಲಭ್ಯ ಒದಗಿಸಲು ಮುಂದಾಗಿದ್ದರಲ್ಲದೆ, ೧೯೦೨ರಲ್ಲಿ ಸಂಸ್ಥಾನ ಸರ್ಕಾರದ ನೌಕರಿಗಳಲ್ಲಿ ಶೇ. ೫೦ನ್ನು ಬ್ರಾಹ್ಮಣೇತರರಿಗೆ ಮೀಸಲಿರಿಸಿದರು. ಇದೇ ಮುಂದೆ ಮದ್ರಾಸ್, ಮುಂಬಯಿ ಪ್ರಾಂತಗಳಲ್ಲಿ ಮತ್ತು ಮೈಸೂರು ಸಂಸ್ಥಾನದಲ್ಲಿ ಜಾರಿಗೆ ಬಂತು."[೪]

ಈ ಹಿನ್ನೆಲೆಯಲ್ಲಿ ಪ್ರಾರಂಭವಾದ 'ಹೋಂ ರೂಲ್ ಲೀಗ್' ಚಳುವಳಿಯಲ್ಲಿ ಬ್ರಾಹ್ಮಣರು ಮುಂದಾಳುಗಳಾದದ್ದು ಇತರರ ಶಂಕೆಗೆ ಕಾರಣವಾಯಿತು. ಬ್ರಾಹ್ಮಣರೆಲ್ಲ ಈಗಾಗಲೇ ಆಡಳಿತ ಯಂತ್ರವನ್ನು ತಮ್ಮ ಹಿಡಿತಕ್ಕೆ ತಂದುಕೊಂಡು ರಾಜಕೀಯ ಅಧಿಕಾರವನ್ನು ತಮ್ಮ ವಶ ಮಾಡಿಕೊಳ್ಳಲು ಹವಣಿಸುತ್ತಿದ್ದಾರೆ ಎಂದು ಭಾವಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಹಾಗಾಗಿಯೇ 'ಜಸ್ಟಿಸ್ ಪಕ್ಷ' ಸ್ಥಾಪನೆಯಾಯಿತು."[೫] ಮುಂದೆ ಅದು ಮದ್ರಾಸ್ ಪ್ರಾಂತದಲ್ಲಿ ಅಧಿಕಾರಕ್ಕೆ ಬಂದು ಸರಕಾರದ ಎಲ್ಲ ಇಲಾಖೆಗಳಲ್ಲಿ ಬ್ರಾಹ್ಮಣರು ಶೇ. ೫೦ಕ್ಕಿಂತ ಹೆಚ್ಚಿರಕೂಡದು ಎಂದು ಕಾಯ್ದೆ ಮಾಡಿದ್ದು, ದಕ್ಷಿಣ ಭಾಗದ ಇತರ ಪ್ರಾಂತಗಳಿಗೂ ಅದು ತನ್ನ ಪ್ರಭಾವ ಬೀರಿತು.

ಹೀಗೆ ಬ್ರಾಹ್ಮಣ-ಬ್ರಾಹ್ಮಣೇತರ ನಾಯಕರುಗಳ ಮಧ್ಯ ಭಿನ್ನಾಭಿಪ್ರಾಯಗಳು ಘಟಿಸಿದ ವಿವರವನ್ನು ಗಮನಿಸಿದರೆ-

"ಮರಾಠಾ ಪೇಶ್ವೆ ೨ನೇ ಬಾಜೀರಾಯನ ದುರಾಡಳಿತ, ಬ್ರಾಹ್ಮಣರಿಗೆ ಆಡಳಿತದಲ್ಲಿ ನೀಡಿದ್ದ ಹೆಚ್ಚಿನ ಸ್ಥಾನಮಾನ, ಮರಾಠಿ ಭಾಷೆಗೆ ನೀಡಿದ ಮಹತ್ವ ಇವೆಲ್ಲವುಗಳಿಂದ ಮುಂಬೈ ಕರ್ನಾಟಕ ಪ್ರದೇಶದ ಬಹುಜನರು ಬ್ರಿಟಿಷರ ಆಡಳಿತವನ್ನು ಸ್ವಾಗತಿಸುವಂತಿತ್ತು. ಕೆಲ ಬ್ರಾಹ್ಮಣ ಬುದ್ಧಿಜೀವಿಗಳು ಬ್ರಿಟಿಷರ ದುರಾಡಳಿತವನ್ನು ಟೀಕಿಸಿ ಸ್ವಾತಂತ್ರ್ಯದ ಬಯಕೆಯನ್ನು ವ್ಯಕ್ತಪಡಿಸಿದಾಗ ಬ್ರಾಹ್ಮಣೇತರರು ಬ್ರಾಹ್ಮಣರು ಕಳೆದುಹೋದ ಪೇಶ್ವೆಯ ರಾಜ್ಯವನ್ನು ಮತ್ತೆ ಪಡೆಯಲು ನಡೆಸುತ್ತಿರುವ ಪಿತೂರಿಯೇ ಈ ಸ್ವಾತಂತ್ರ್ಯದ ಬೇಡಿಕೆ"[೬] ಎಂದು ಮಾತನಾಡುವ ಸನ್ನಿವೇಶ ನಿರ್ಮಾಣವಾಯಿತು.

ಇದಕ್ಕೆ ಸ್ಪಷ್ಟನೆಯೆಂಬಂತೆ ಸರಕಾರವೂ ಬ್ರಾಹ್ಮಣ-ಬ್ರಾಹ್ಮಣೇತರರಲ್ಲಿ ವೈಷಮ್ಯ ಹೆಚ್ಚಿಸಲು ಪ್ರಯತ್ನಿಸುತ್ತಿದ್ದ ವಿವರ ಧಾರವಾಡದ ಗೋಲಿಬಾರ್ ಪ್ರಕರಣದಲ್ಲಿ ಸ್ಪಷ್ಟವಾಗಿ ಕಂಡುಬಂತು. ಧಾರವಾಡ ಜಿಲ್ಲಾಧಿಕಾರಿಯಾದ ಪೇಂಟರ "ಗೋಲಿಬಾರ್ ಪ್ರಕರಣದಲ್ಲಿ ಖೊಟ್ಟಿ ಖಟ್ಲೆ ರಚಿಸುವಾಗ ೨೯ ಜನರನ್ನು ಕೈದು ಮಾಡಿದ್ದರೂ ಲಿಂಗಾಯತರ ಪೈಕಿ ಒಬ್ಬರನ್ನು ಸಹ ಕೈದು ಮಾಡಲಿಲ್ಲ. ಕಾರಣ ಆ ಅಧಿಕಾರಿಗೆ ಲಿಂಗಾಯತ ಸಾಕ್ಷಿದಾರರ ಸಹಾಯ ಬೇಕಿತ್ತು, ಪೇಂಟರ ಕೈದು ಮಾಡಲ್ಪಟ್ಟ ೨೯ ಜನರಲ್ಲಿ ೧೫ ಜನ ಬ್ರಾಹ್ಮಣರು, ೧೩ ಜನ ಮುಸಲ್ಮಾನರು, ಒಬ್ಬ ಮರಾಠಿಗರಿದ್ದು ಈ ವಿಷಯದಲ್ಲಿ ಪೇಂಟರ ಅಪ್ಪಟ ರಾಜಕಾರಣ ಮಾಡಿದ್ದನು. ನ್ಯಾಯಾಲಯ ದಲ್ಲಿಯೂ ಅದೇ ರೀತಿ ಘಟನೆ ಸಂಭವಿಸಿತು. ನ್ಯಾಯಾಧೀಶರು(ವಾಟರ್ ಫೀಲ್ಡರ್) ನ್ಯಾಯನಿರ್ಣಯ ಕೊಡುವಾಗ ಸಾಕ್ಷಿದಾರ ೧೯ ಜನರಲ್ಲಿ ೧೩ ಜನ ಸಾಕ್ಷಿಗಳು ಲಿಂಗಾಯತರಿದ್ದರು ಮತ್ತು ದೇಸಾಯಿಯವರು ಬ್ರಾಹ್ಮಣರಾಗಿದ್ದರಿಂದ ಅವರ ಪುರಾವೆಯನ್ನು ನಂಬುವಾಗ ಎಚ್ಚರಿಕೆ ತೋರಬೇಕಾಗಿದೆ, ಸಾಕ್ಷಿದಾರರಲ್ಲಿ ಅನೇಕರು ಕೇವಲ ಬ್ರಾಹ್ಮಣರ ಹೆಸರನ್ನೇ ಹೇಳಿದ್ದಾರೆ ಎಂಬ ನ್ಯಾಯಾಧೀಶರ ಹೇಳಿಕೆಯು ಲಿಂಗಾಯತ ಸಮಾಜದ ನಾಯಕರು ಸ್ವಾಭಾವಿಕವಾಗಿಯೇ ಸಿಟ್ಟಿಗೆದ್ದರು"[೭] ಮತ್ತು ಸಾರ್ವಜನಿಕ ಸಭೆ ನಡೆಸಿ ಈ ವಿಚಾರವನ್ನು ತೀವ್ರವಾಗಿ ಖಂಡಿಸಿದರು. ಈ ಘಟನೆ ಆಂಗ್ಲರ ಒಡೆದಾಳುವ ನೀತಿಗೆ ಸಾಕ್ಷಿಯಾಗಿದೆ.

೧೮೮೩ರಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ೧೮೯೩ರಲ್ಲಿ ಬೆಳಗಾವಿ ಮತ್ತು ಧಾರವಾಡದಲ್ಲಿ ಮರಾಠಾ ವಿದ್ಯಾ ಪ್ರಸಾರಕ ಮಂಡಳ ಸಂಸ್ಥೆ, ವೀರಶೈವರು ಬರೀ ಒಕ್ಕಲುತನ ಅವಲಂಬಿಸದೆ ವ್ಯಾಪಾರ ಉದ್ದಿಮಗಳಲ್ಲಿ ಆಸಕ್ತಿ ವಹಿಸಬೇಕೆಂದು ಕೆ.ಎಲ್.ಇ ವಿದ್ಯಾಭಿವೃದ್ಧಿ ಸಂಸ್ಥೆಯ ಸದಸ್ಯರಾದ ಸಿರಸಂಗಿ ಲಿಂಗರಾಜರು ಕರೆಕೊಟ್ಟರು. ಇದನ್ನು ಗಮನಿಸಿದರೆ, ದೊಡ್ಡ ದೊಡ್ಡ ಸಮುದಾಯದ ನಾಯಕರ ಈ ಕರೆ ತಮ್ಮ ತಮ್ಮ ಸಮುದಾಯದ ಅಭಿವೃದ್ಧಿ ವಿಚಾರದಲ್ಲಿ ಸರಿ ಎನಿಸಿದರೂ, ರಾಷ್ಟ್ರೀಯತೆಯ ವಿಚಾರ, ಚಳುವಳಿಯ ವಿಚಾರದಲ್ಲಿ ಉಳಿದ ಸಮುದಾಯಗಳು ಇದನ್ನೇ ಅನುಸರಿಸಿದ್ದು, ಬ್ರಿಟಿಷರೊಂದಿಗಿನ ಹೋರಾಟಕ್ಕಿಂತ ತಮ್ಮ ಸಮುದಾಯಗಳ ಅಭಿವೃದ್ಧಿ ನಾಯಕರಿಗೆ ಮುಖ್ಯವಾಗಿತ್ತು ಎಂಬುದನ್ನು ಗಮನಿಸಬಹುದು.

"ಮೇ ೧೯೧೫ರಲ್ಲಿ ಬೆಳಗಾವಿಯಲ್ಲಿ ನಡೆದ ನಾಮದೇವ ಶಿಂಪಿ ಸಮಾಜ ಸಮ್ಮೇಳನ, ೧೯೧೫ರಲ್ಲಿ ಮರಾಠಿ ಶಿಕ್ಷಣ ಸಮಾಜದ ಸಮ್ಮೇಳನ, ೧೯೧೭ರಲ್ಲಿ ಮುರುಘರಾಜೇಂದ್ರ ಪ್ರಸಾದನಿಲಯ ಆರಂಭ, ೧೯೧೬ರಲ್ಲಿ ಮದ್ರಾಸ್ಸಿನ ಜಸ್ಟಿಸ್ ಪಕ್ಷ ಸ್ಥಾಪನೆ, ೧೯೧೭ರಲ್ಲಿ ಮೈಸೂರಿನ 'ಪ್ರಜಾಮಿತ್ರ ಮಂಡಳಿ."[೮] ಹೀಗೆ ಬ್ರಾಹ್ಮಣೇತರರ ವಿವಿಧ ಜಾತಿಯ ನಾಯಕರುಗಳು ತಮ್ಮ ತಮ್ಮ ಜಾತಿಯ ಸಂಘಟನೆಯನ್ನು ಮಾಡಿದ್ದು ಮತ್ತು ತಮ್ಮ ತಮ್ಮ ಸಮುದಾಯದ ಶೈಕ್ಷಣಿಕ, ಸಾಮಾಜಿಕ, ವಾಣಿಜ್ಯ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಲು ತಮ್ಮದೇ ಆದ ಸಂಘಟನೆ ಮಾಡಿಕೊಳ್ಳಲು ಉತ್ಸುಕರಾಗಿರುವುದಲ್ಲದೆ ಬ್ರಾಹ್ಮಣ–ಬ್ರಾಹ್ಮಣೇತರರ ಮಧ್ಯೆ ಹಲವು ವಿಕೋಪಕ್ಕೆ (ನ್ಯಾಯಾಲಯದವರೆಗೂ)ಹೋದ ಘಟನೆಗಳು ಸಾಕ್ಷಿಯಾಗಿವೆ.

**ವ್ಯತಿರಿಕ್ತವಾದ ಬದಲಾವಣೆ** : ಹಾವೇರಿ ಜಿಲ್ಲೆಯಲ್ಲಿ ಇದಕ್ಕೆ ಅಪವಾದವೆಂಬಂತೆ ಮೇಲಿನ ಘಟನೆಗಳಿಗೆ ವ್ಯತಿರಿಕ್ತವಾದ ರೀತಿಯಲ್ಲಿ ರಾಷ್ಟ್ರೀಯ ಆಂದೋಲನ ಆರಂಭವಾಗಿರುವುದನ್ನು ಗುರುತಿಸಲಾಗಿದೆ. ಕಾಂಗ್ರೆಸ್ ಅಂದರೆ ಬ್ರಾಹ್ಮಣರು, ಬ್ರಾಹ್ಮಣರೆಂದರೆ ಕಾಂಗ್ರೆಸ್ ಎಂಬಂತಹ ಸಂದರ್ಭದಲ್ಲಿ ಜಿಲ್ಲೆಯಲ್ಲಿ ಎಲ್ಲರೂ ಕಾಂಗ್ರೆಸ್ಸನ್ನು ಸೇರಬೇಕೆಂದು, ರಾಷ್ಟ್ರೀಯ ಜಾಗೃತಿ ಮೂಡಿಸುವಂತಹ ಕಾರ್ಯಕ್ಕೆ ಚಾಲನೆ ಕೊಟ್ಟವರು ಕರ್ಜಗಿಯ ಪರಮಣ್ಣ ಹೊಸಮನಿ.

"೧೯೨೩ರಿಂದಲೇ ಕರ್ಜಗಿಯಲ್ಲಿ ಸ್ವಯಂಸೇವಕ ಸಂಘ, ವಾಚನಾಲಯ ಸ್ಥಾಪಿಸಿ ಸಮಾಜ ಸೇವೆ ಕೈಕೊಂಡು, ಅಧ್ಯಾಪಕ ವೃತ್ತಿ ಬಹಿಷ್ಕರಿಸಿ ಹಾವೇರಿಗೆ ಬಂದು ಒಂದು ಆಶ್ರಮ ಕಟ್ಟಿ ಗಾಂಧೀ ಪ್ರಣೀತ ಚಟುವಟಿಕೆ ನಡೆಸಿದರು. ಊರೂರು ಸುತ್ತಿ ಹೋದಲ್ಲೆಲ್ಲ ಲಿಂಗಾಯತ ಗಣ್ಯರನ್ನು ಕಂಡು ಕಾಂಗ್ರೆಸ್ ಸೇರಲು ವಿನಂತಿಸುತ್ತಿದ್ದರು."[೯] ಸಮುದಾಯಗಳ ಅಭಿವೃದ್ಧಿಯಲ್ಲಿ ಎಲ್ಲ ಸಮುದಾಯಗಳ ನಾಯಕರು ತೊಡಗಿದರೆ, ಪರಮಣ್ಣ ಹೊಸಮನಿ ಕಾಂಗ್ರೆಸ್ ಪರ ಪ್ರಚಾರಕ್ಕೆ ಹೊರಟ್ಟಿದ್ದು ಬಹುಶಃ ಜಿಲ್ಲೆಯಲ್ಲಿ ಇವರೇ ಮೊದಲಿಗರು.

ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿ ಲಿಂಗಾಯತರನ್ನು ಕಾಂಗ್ರೆಸ್ಸಿಗೆ ಸೇರಿಸಿಕೊಳ್ಳಲು ಪ್ರಯತ್ನಿಸುತ್ತಿರುವಾಗ ಬೆಳಗಾವಿ ಜಿಲ್ಲೆಯ ಅಥಣಿಯಲ್ಲಿ ಆ ಊರಿನ ಗಣ್ಯ ವಕೀಲರಾದ

ರಾವಸಾಹೇಬ ಸ್ವಲಬಸಣ್ಣಾ ಮಂಗಸೂಳಿ ಬ್ರಾಹ್ಮಣ ಮುಖಂಡರಾಗಿದ್ದು ಅವರನ್ನು ಕಾಂಗ್ರೆಸ್ಸಿಗೆ ಸೇರಲು ಕೇಳಿದಾಗ 'ಈಗ ಬ್ರಿಟಿಷರು ನಮ್ಮ ಜನರಿಗೆ ಒಳ್ಳೊಳ್ಳೆ ಹುದ್ದೆಗಳನ್ನು, ದೊಡ್ಡ ದೊಡ್ಡ ಪದವಿಗಳನ್ನು ನಮ್ಮ ಮಕ್ಕಳಿಗೆ ಸ್ಕಾಲರ್‌ಶಿಪ್ ಕೊಟ್ಟು ನಮಗೆ ಒಳ್ಳೆಯದನ್ನೇ ಮಾಡುತ್ತಿದ್ದಾರೆ ಇಂಥ ಸಂದರ್ಭದಲ್ಲಿ ನಾವು ಕಾಂಗ್ರೆಸ್‌ಗೆ ಸೇರಿದರೆ, ನಾವು ಕಡೆತನಕ ಹಿಂದುಳಿಯಬೇಕಾಗುತ್ತದೆ. ಆದ್ದರಿಂದ ನಮ್ಮ ಜನ ಈಗಿನ ಸುಸಂಧಿಯನ್ನೇ ಕಳೆದುಕೊಳ್ಳಬಾರದು, ನೀವು ಈ ಚಳುವಳಿಯನ್ನು ಬಿಟ್ಟು ಮನೆಗೆ ಹೋಗಿರಿ"[೧೦] ಎಂಬ ಹೇಳಿಕೆ ಅಂದಿನ ಕೆಲವರ ಮನೋಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಆದರೆ ಪರಮಣ್ಣ ಹೊಸಮನಿ ತಮ್ಮ ಕಾರ್ಯವನ್ನು ಮುಂದುವರೆಸಿದ್ದು, ಅವರ ಸ್ವಾತಂತ್ರ್ಯದ ಉತ್ಸಾಹಕ್ಕೆ ಕನ್ನಡಿಯಂತಿದೆ. "ಪರಮಣ್ಣ ಹೊಸಮನಿ ಕಾಂಗ್ರೆಸ್ ಪ್ರಚಾರಕ್ಕಾಗಿ ಹೊಳೆಆಲೂರಿಗೆ ಹೋದಾಗ ಬ್ರಾಹ್ಮಣೇತರ ಊರ ಮುಖಂಡರು ಮತ್ತು ಸಾಮಾನ್ಯ ಜನರ ಮಾತುಗಳಲ್ಲಿ ಅಂದಿನ ಜ್ಯಾತಿವ್ಯವಸ್ಥೆ ಅನಾವರಣಗೊಳುತ್ತದೆ. ಸ್ವಾತಂತ್ರ್ಯದ ಪ್ರಚಾರವು ಬ್ರಾಹ್ಮಣರ ನಾಟಕವಾಗಿದೆ. ಇದುವರೆಗೆ ಬ್ರಾಹ್ಮಣರು ಸರಕಾರದ ಎಲ್ಲಾ ಖಾತೆಗಳಲ್ಲಿ ಸೇರಿ ಉಳಿದ ಸಮಾಜದವರಿಗೆ ವಿದ್ಯಾಭ್ಯಾಸ ಮಾಡಲಿಕ್ಕೂ, ಸರಕಾರದ ದೊಡ್ಡ ದೊಡ್ಡ ಸ್ಥಾನಗಳನ್ನು ಪಡೆಯಲಿಕ್ಕೂ ಆಸ್ಪದ ಕೊಡದೇ ಮೆರೆದಾಡಿದವರು. ಈಗ ಬ್ರಿಟಿಷ್ ಸರಕಾರವು ಹಿಂದುಳಿದವರಿಗೆ ಶಿಕ್ಷಣಕ್ಕೆ ಉತ್ತೇಜನ ಕೊಟ್ಟಿದ್ದರಿಂದ ಬ್ರಾಹ್ಮಣರಿಗೆ ಸಹಿಸಲಾಗುತ್ತಿಲ್ಲ. ಸ್ವರಾಜ್ಯದ ಸೋಗು ತೆಗೆದು ಕಾಂಗ್ರೆಸ್‌ನಲ್ಲಿ ಸೇರಿ ತಮ್ಮ ಕುತಂತ್ರ ನಡೆಸಿದ್ದಾರೆ. ಇಷ್ಟು ದಿನ ಅವರು ಮೆರೆದಿದ್ದು ಸಾಕು; ನಮ್ಮ ಹಾಗೆ ಹೊಲದಲ್ಲಿ ದುಡಿಯಲಿ, ಆಗ ನಾವು ಕಾಂಗ್ರೆಸ್ ಸೇರುತ್ತೇವೆ, ಹಾಗಾಗುವವರೆಗೂ ನಾವು ಸರಕಾರದಿಂದ ಸಿಗುವ ಸವಲತ್ತುಗಳನ್ನು ಪಡೆಯುತ್ತ ಸರಕಾರಕ್ಕೆ ಸಹಾಯ ಮಾಡುತ್ತೇವೆ"[೧೧] ಎಂಬ ಊರ ಜನಗಳ ಒಟ್ಟಾಭಿಪ್ರಾಯ ಬ್ರಾಹ್ಮಣ ದ್ವೇಷದ ಜ್ವಾಲೆಯು ಬಹಿರಂಗವಾಯಿತು.

ಪರಮಣ್ಣ ಹೊಸಮನಿ ಗದಗದಲ್ಲಿ ಭಾಷಣ ಮುಗಿಸಿ ರೈಲಿನಲ್ಲಿ ಬರುವಾಗ ಗಾಡಿಯಲ್ಲಿ ಕಾಂಗ್ರೆಸ್ಸು ಬ್ರಾಹ್ಮಣರ ಸಂಸ್ಥೆ ಎಂದು ದೂಷಿಸಿ ಮಾತನಾಡುತ್ತಿದ್ದುದು ಪರಮಣ್ಣಗೆ ಸಹಿಸಿಕೊಳ್ಳಲಾಗಲಿಲ್ಲ. ಏಕೆ ನೀವು ಕಾಂಗ್ರೆಸ್‌ನ್ನು ಒಂದು ವರ್ಗದ ಪಕ್ಷವೆಂದು ಹಿಯಾಳಿಸುತ್ತೀರಿ. "ನಾನು ಲಿಂಗಾಯಿತನೇ ಆದರೂ ನಾನು ಅಪ್ಪಟ ಕಾಂಗ್ರೆಸ್‌ನ ಸ್ವಯಂಸೇವಕ ಎಂದು ಆವೇಷದಿಂದ ಹೇಳಿದಾಗ, ಒಬ್ಬ ಪಿಸುಮಾತಿನಲ್ಲಿ ಪರಮಣ್ಣ ಹೊಸಮನಿಗೆ 'ಇವನೆಂಥಾ ಲಿಂಗಾಯತ, ಇವನೆಲ್ಲೋ ಬ್ರಾಹ್ಮಣರಿಗೆ ಹುಟ್ಟಿದ ಲಿಂಗಾಯತನಿರಬೇಕು' ಎಂದು ಮಾತನಾಡಿದ್ದನ್ನು ಕೇಳಿ ತಡೆಯಲಾರದ ಕೋಪ; ಆದರೆ ಅಹಿಂಸಾ ನೀತಿಯನ್ನು ಪಾಲಿಸುತ್ತಿದ್ದರಿಂದ ಕೇಳಿಯೂ ಕೇಳದ ಹಾಗೆ ಅನಿವಾರ್ಯವಾಗಿ ಮತ್ತು ಕಾಂಗ್ರೆಸನ್ನು ಸಮರ್ಥಿಸಿಕೊಂಡು ಸುಮ್ಮನಾದರು."[೧೨] ಆದರೂ ಆ ಮಾತು ಅವರನ್ನು ಬಹಳ ದಿನಗಳವರೆಗೆ ಕಾಡಿದ್ದು ಸುಳ್ಳಲ್ಲ. ಇದರಿಂದ ಪರಮಣ್ಣ ಹೊಸಮನಿ ತಮ್ಮ ಕಾರ್ಯವನ್ನು ಮುಂದುವರೆಸಿದ್ದು ಅವರ ವ್ಯಕ್ತಿತ್ವಕ್ಕೆ ಧಕ್ಕೆ ಆಗುವಂತಿದ್ದರೂ ತಮ್ಮ ಕಾರ್ಯದಿಂದ ಹಿಂದಿರುಗದೆ ಇದ್ದದ್ದು ವಿಶೇಷವಾಗಿ ಕಂಡುಬಂದಿದೆ.

"ಮಾಂಟೆಗ್ಯು-ಜೇಮ್ಸ್‌ಫರ್ಡ್ ಸುಧಾರಣೆಯಂತೆ ಕಾಯ್ದೆ ಮಂಡಳಕ್ಕೆ ಚುನಾವಣೆ ನಡೆದಾಗ ಕಾಂಗ್ರೆಸ್ ಚುನಾವಣೆಯನ್ನು ಬಹಿಷ್ಕರಿಸಿತ್ತು. ಆದರೆ ಬ್ರಾಹ್ಮಣೇತರ ಪಕ್ಷದಿಂದ ಧಾರವಾಡ

ಜಿಲ್ಲೆಯಿಂದ ಕಂಬಳಿ ಸಿದ್ದಪ್ಪ ಮತ್ತು ಸಿ.ಎಸ್. ಹುಲಕೋಟಿಯವರು ಸ್ಪರ್ಧಿಸಿದ್ದರು. ಪ್ರಚಾರಕ್ಕೆ ಅವರೆಲ್ಲರು ಬ್ರಾಹ್ಮಣೇತರ ಪರಿಷತ್ತಿನ ಅಧ್ಯಕ್ಷರಾದ ಹೊಸಮನಿ ಸಿದ್ದಪ್ಪನವರ ಮನೆಗೆ ಬಂದಾಗ, ಅದೇ ಮನೆಯಲ್ಲಿ ಇದ್ದ, ಅಪ್ಪಟ್ಟ ಕಾಂಗ್ರೆಸ್ಸಿಗ ಪರಮಣ್ಣ ಹೊಸಮನಿ ಎಲ್ಲ ನಾಯಕರನ್ನು ಆದರದಿಂದ ಬರಮಾಡಿಕೊಂಡರು. ಅಣ್ಣನ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನೀವಾರು ಕಾಂಗ್ರೆಸ್ ವಿರುದ್ಧ ಚುನಾವಣೆಗೆ ಸ್ಪರ್ಧಿಸಬಾರದೆಂದು ಹೇಳಿದರು."[೧೩] ಪರಮಣ್ಣ ಅಂದಿನ ಸಭೆಯಲ್ಲಿ ಆ ಎಲ್ಲ ನಾಯಕರನ್ನು ಕಾಂಗ್ರೆಸ್ಸಿಗೆ ಬರಬೇಕೆಂದು ಕೇಳಿಕೊಂಡಿದ್ದು ಅವರ ಸ್ವಾತಂತ್ರ್ಯದ ಉತ್ಸಾಹ ಅನಾವರಣಗೊಂಡಿದೆ.

"ಬ್ರಾಹ್ಮಣ-ಬ್ರಾಹ್ಮಣೇತರರ ಮಧ್ಯೆ ಕಂದಕವೇರ್ಪಟ್ಟಾಗ ಜಿಲ್ಲೆಯ ಮತ್ತೊಬ್ಬ ನಾಯಕ ಇಂಥ ಸಂದರ್ಭದಲ್ಲಿ ಕಾಂಗ್ರೆಸ್ ಸೇರಿದ ಘಟನೆ ನಡೆಯಿತು. ಉತ್ತರ ಕರ್ನಾಟಕದ ಬಹುಸಂಖ್ಯಾತ ವೀರಶೈವರು ಕಾಂಗ್ರೆಸ್ ಪಕ್ಷ ಸೇರಲು ಬಯಸುತ್ತಿರಲಿಲ್ಲ. ಇಂಥ ಸನ್ನಿವೇಶದಲ್ಲಿ ಪುಣೆಯಲ್ಲಿ ಬಿ.ಎಸ್.ಸಿ. ಪದವೀಧರರಾಗಿ ಬಂದಿದ್ದ ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದ ವೀರನಗೌಡ ಪಾಟೀಲ್ ಈಗಾಗಲೇ ಬೆಳಗಾವಿಯಲ್ಲಿ ಕೆ.ಎಲ್.ಇ. ಸೊಸೈಟಿಯ ಸಂಸ್ಥಾಪಕ ಸದಸ್ಯರಾಗಿ ಹಾಗೂ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿ, ಭಿನ್ನಾಭಿಪ್ರಾಯದಿಂದಾಗಿ ತಮ್ಮ ಹುದ್ದೆಗೆ ರಾಜೀನಾಮೆ ನೀಡಿ ಕಾಂಗ್ರೆಸ್ ಸೇರಿದ್ದರು. ಅವರು ಮುಖ್ಯವಾಗಿ ಕಾಂಗ್ರೆಸ್‌ನಿಂದ ದೂರ ಉಳಿದಿದ್ದ ವೀರಶೈವ ಲಿಂಗಾಯತರನ್ನು ಕಾಂಗ್ರೆಸ್‌ಗೆ ಸೇರಿಸುವ ಕಾರ್ಯಕ್ಕೆ ಮುಂದಾಗಿದ್ದರು. ಈ ವೇಳೆಗೆ ಪುಣೆಯಲ್ಲಿ ಕೃಷಿ ಪದವಿ ಪಡೆದು ಬಂದಿದ್ದ ಟಿ.ಆರ್.ನೆಶ್ವಿಯನ್ನು ಕಂಡು ಅವರನ್ನು ೧೯೨೯ರಲ್ಲಿ ಕಾಂಗ್ರೆಸ್‌ಗೆ ಸೇರಿಸಿಕೊಳ್ಳುವಲ್ಲಿ ಯಶಸ್ವಿಯಾದರು."[೧೪] ಇದು ಕಾಂಗ್ರೆಸ್ಸಿಗೆ ಸಂಕಷ್ಟದ ಕಾಲದಲ್ಲಿ ಸಹಾಯವಾಯಿತೆನ್ನಬಹುದು.

ಧಾರವಾಡ ಪ್ರದೇಶದಲ್ಲಿ ಕಾಂಗ್ರೆಸ್‌ನಿಂದ ಪ್ರತ್ಯೇಕವಾಗಿ ಸಂಘಟಿತರಾಗಿದ್ದ ಧಾರವಾಡದ 'ಭಾರತೀಯ ಯುವಕ ಸಂಘ'ದ ಹಳ್ಳಿಕೇರಿ ಗುದ್ಲೆಪ್ಪ ಮತ್ತು ಸಿದ್ಧಲಿಂಗಯ್ಯ ಕಜ್ಜರಿಸ್ವಾಮಿ ಅವರು ೧೯೨೭-೨೮ರ ವೇಳೆ ಹುರುಪಿನಿಂದ ಚಟುವಟಿಕೆ ನಡೆಸುತ್ತಿದ್ದರು. "೧೯೩೦ರ ಮೇ ತಿಂಗಳಲ್ಲಿ ಬೆಳಗಾವಿಯಲ್ಲಿ ನಡೆದ ಬ್ರಾಹ್ಮಣೇತರ ಸಮುದಾಯದ ಒಂದು ಸಭೆಯಲ್ಲಿ ಕಾಂಗ್ರೆಸ್‌ನ್ನು ಸೇರಲು ತಮ್ಮ ಸಂಗಡಿಗರಿಗೆ ಬ್ರಾಹ್ಮಣೇತರ ನಾಯಕರು ಕರೆ ನೀಡಿದರು. ಅದೇ ವರ್ಷ ಆಗಸ್ಟ್ ೩೦ರಂದು ಹಾವೇರಿಯಲ್ಲಿ ಹರ್ಡೀಕರ್ ಮಂಜಪ್ಪ ಅವರ ನೇತೃತ್ವದಲ್ಲಿ ಸೇರಿದ್ದ ವೀರಶೈವ ಮಹಾಸಭಾ ಕೂಡ ಇಂಥದ್ದೇ ನಿರ್ಣಯ ಕೈಗೊಂಡಿತು. ಕಾಂಗ್ರೆಸ್ ಎಂದರೆ ಬ್ರಾಹ್ಮಣರ ಪಕ್ಷವಲ್ಲ ಎಂಬ ಅಪವಾದದಿಂದ ಪಾರಾಗಲು ಇದರಿಂದ ಸಾಧ್ಯವಾಯಿತು. ಅಲ್ಲಿಂದ ಮುಂದೆ ಕಾಂಗ್ರೆಸ್ ಜನಸಮುದಾಯಗಳ ಪಕ್ಷವೆನಿಸಿಕೊಂಡಿತು. ಇಂಥ ಬದಲಾದ ವಾತಾವರಣದಲ್ಲಿ ಹಾವೇರಿಯ ಸಿದ್ದಪ್ಪ ಹೊಸಮನಿ ಅವರು ಕೆ.ಪಿ.ಸಿ.ಸಿಯ (೧೯೩೪) ಅಧ್ಯಕ್ಷರಾದರು."[೧೫] ಇದರಿಂದ ಹಾವೇರಿ ಜಿಲ್ಲೆಯಲ್ಲಿ ಈ ಮೊದಲೇ ಹೇಳಿಕೊಳ್ಳುವಂಥ ಭಿನ್ನಾಭಿಪ್ರಾಯ ಇರದಿದ್ದರೂ, ಸ್ವಲ್ಪ ಪ್ರಮಾಣದಲ್ಲಿ ಬ್ರಾಹ್ಮಣೇತರ ಸಂಘಟನೆಯಲ್ಲಿ

ಗುರುತಿಸಿಕೊಂಡಿದ್ದ ಸಿದ್ದಪ್ಪ ಹೊಸಮನಿ ಕಾಂಗ್ರೆಸ್‌ಗೆ ಸೇರುವುದರೊಂದಿಗೆ ಜಿಲ್ಲೆಯಲ್ಲಿ ರಾಷ್ಟ್ರೀಯತೆ ಮತ್ತು ಸ್ವಾತಂತ್ರ್ಯದ ಹೋರಾಟಕ್ಕೆ ಹೆಚ್ಚಿನ ವೇಗ ದೊರೆಯಿತು ಎಂಬುದನ್ನು ಗಮನಿಸಲಾಗಿದೆ. ಧಾರವಾಡ ಜಿಲ್ಲೆಯ ಇತರ ಭಾಗಗಳಲ್ಲಿ ನಡೆದ ಸಮುದಾಯಗಳ ಕಲಹದ ಘಟನೆಗಳು ಹಾವೇರಿ ಜಿಲ್ಲೆಯಲ್ಲಿ ಯಾವುದೇ ಘಟನೆಗಳು ನಡೆದ ಮಾಹಿತಿ - ದಾಖಲೆಗಳು ದೊರೆಯುವುದಿಲ್ಲ ಹಾಗೂ ಜಿಲ್ಲೆಯ ಚಳುವಳಿಗಾರರ ಹೇಳಿಕೆಗಳು ಸಾಕ್ಷಿಭೂತವಾಗಿವೆ.

### ೪.೨. ಹೋಂ ರೂಲ್ ಲೀಗ್ ಚಳುವಳಿ

ಬಾಲಗಂಗಾಧರ ತಿಲಕರು ಒಂದನೇ ಜಾಗತಿಕ ಯುದ್ಧದ ನಂತರ ಬೇರೆಯದೇ ಆದ ಒಂದು ಸಾಮಾಜಿಕ ಚಳುವಳಿಯ ಅಗತ್ಯತೆಯನ್ನು ಮನಗಂಡರು. ಕಾರಣ ಕಾಂಗ್ರೆಸ್ ಯಾವುದೇ ಚಳುವಳಿಗೆ ಮುಂದಾಗದೆ ಮೌನವಹಿಸಿತ್ತು.

"ಮೊದಲನೆಯ ವಿಶ್ವಯುದ್ಧವು ಏಷ್ಯಾದ ಜನರ ಮೇಲಿನ ಪಶ್ಚಿಮ ದೇಶಗಳ ಜನಾಂಗೀಯ ಶ್ರೇಷ್ಠತೆಯ ಕಲ್ಪನೆಯನ್ನು ನಾಶ ಮಾಡಿತು. ಯುದ್ಧವು ಭಾರತೀಯ ಬಡವರ ನೋವುಗಳನ್ನು ಹೆಚ್ಚಿಸಿತು. ಅಧಿಕ ತೆರಿಗೆ ಭಾರ ಮತ್ತು ದಿನನಿತ್ಯದ ಜೀವನಾವಶ್ಯಕ ವಸ್ತುಗಳ ಬೆಲೆ ಗಗನಕ್ಕೇರುವುದು ಎಂದಷ್ಟೇ ತಿಳಿದಿತ್ತು. ಇವುಗಳನ್ನು ಪ್ರತಿಭಟಿಸಲು ಅವರು ಯಾವುದೇ ಕ್ರಾಂತಿಕಾರಿ ಚಳುವಳಿಯನ್ನು ಸೇರಲೂ ಸಿದ್ಧರಾಗುತ್ತಿದ್ದರು. ಆದರೆ ಸಾಮೂಹಿಕ ಚಳುವಳಿಯನ್ನು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ನೇತೃತ್ವದಲ್ಲಿ ನಡೆಸಲು ಸಾಧ್ಯವಿರಲಿಲ್ಲ. ಕಾರಣ ಆ ವೇಳೆಗೆ ಅದು ಸೌಮ್ಯವಾದಿಗಳ ನಾಯಕತ್ವದಲ್ಲಿ ಯಾವುದೇ ರಾಜಕೀಯ ಕಾರ್ಯಕ್ರಮಗಳಿಲ್ಲದ, ಒಂದು ನಿರಾಸಕ್ತಿ ಜಡ ರಾಜಕೀಯ ಸಂಸ್ಥೆಯಾಗಿ ಉಳಿದಿತ್ತು. ಹಾಗಾಗಿ ಹೋಂರೂಲ್ ಲೀಗ್ ಚಳುವಳಿಗೆ ತಿಲಕರು ಮುಂದಾದರು.

ಲೋಕಮಾನ್ಯ ತಿಲಕರ ನಾಯಕತ್ವದಲ್ಲಿ, ಮತ್ತೊಂದು ಭಾರತೀಯ ಸಂಸ್ಕೃತಿ ಮತ್ತು ಜನತೆಯ ಅಭಿಮಾನಿಯಾಗಿದ್ದ ಇಂಗ್ಲೀಷ್ ಮಹಿಳೆ ಅನಿಬೆಸೆಂಟ್ ಮತ್ತು ಜಿ. ಸುಬ್ರಹ್ಮಣ್ಯ ಅಯ್ಯರ್ ಅವರ ನಾಯಕತ್ವದಲ್ಲಿ ಈ ಎರಡು ಹೋಂ ರೂಲ್ ಲೀಗ್ ಚಳುವಳಿಗಳು ಜೊತೆಜೊತೆಯಾಗಿಯೇ ಸಹಕಾರದಿಂದ ನಡೆದವು. ಈ ಅವಧಿಯಲ್ಲಿಯೇ ತಿಲಕರ ಜನಪ್ರಿಯ ಉದ್ಘೋಷ ಪ್ರಕಟಗೊಂಡಿದ್ದು **ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು ಮತ್ತು ನಾನು ಅದನ್ನು ಪಡದೇ ತೀರುತ್ತೇನೆ** ಎಂಬ ತಿಲಕರ ಸ್ವರಾಜ್ಯದ ಈ ಕೂಗು ಭಾರತದ ಉದ್ದಗಲಕ್ಕೂ ಪ್ರತಿಧ್ವನಿಸಿತು."[೧೬]

"ತಿಲಕರು ಸ್ವರಾಜ್ಯ ಎಂಬ ಶಬ್ದಕ್ಕೆ ಬದಲು ಹೋಂ ರೂಲ್ ಪದ ಬಳಸಿದರು. ಭಾರತೀಯರಿಗೆ ತಮ್ಮನ್ನು ತಾವೇ ಆಳಿಕೊಳ್ಳುವ ಅವರಿಗಿರುವ ಹಕ್ಕನ್ನು ಅವರಿಗೆ ಜ್ಞಾಪಿಸುವುದೇ ಹೋಂ ರೂಲ್ ಚಳುವಳಿಯ ಉದ್ದೇಶವಾಗಿತ್ತು. ಇದು ಐರಿಷ್ ಹೋಂರೂಲ್ ಚಳುವಳಿಯಿಂದ ಸ್ಫೂರ್ತಿ ಪಡೆದಿತ್ತು."[೧೭] ಇದರಿಂದ ಭಾರತೀಯ ಜನಸಾಮಾನ್ಯರಿಗೆ ಹೋಂ ರೂಲ್ ಲೀಗ್‌ನ ಉದ್ದೇಶ, ಸ್ಪಷ್ಟತೆ ಕಾಣುವಂತಾಯಿತು.

"ತಿಲಕರು ಈ ಚಳುವಳಿಯ ಪ್ರಚಾರಕ್ಕಾಗಿ ಧಾರವಾಡ, ಹುಬ್ಬಳ್ಳಿ, ಗದಗಗಳಿಗೂ ಫೆಬ್ರವರಿ ೧೮, ೧೯೧೭ಕ್ಕೆ ಆಗಮಿಸಿ ಹೋಂ ರೂಲ್ ಲೀಗ್‌ನ ಶಾಖೆಗಳನ್ನು ಪ್ರಾರಂಭಿಸಿದರು. ಆಲೂರು ವೆಂಕಟರಾವ್, ಮುದವೀಡು ಕೃಷ್ಣರಾವ್, ಕಡಪದ ರಾಘವೇಂದ್ರರಾವ್ ಹಾಗೂ ಗದಿಗೆಯ್ಯ ಹೊನ್ನಾಪೂರಮಠ ಇನ್ನೂ ಮುಂತಾದವರು ಈ ಚಳುವಳಿಗೆ ಬೆಂಬಲವಾಗಿ ನಿಂತರು. ಧಾರವಾಡದಲ್ಲಿ ಈ ಚಳುವಳಿಯ ಶಾಖೆ ಆರಂಭವಾದಾಗ ಅದನ್ನು **'ಕರ್ನಾಟಕ ಪ್ರಾಂತೀಯ ಹೋಂ ರೂಲ್ ಲೀಗ್'** ಎಂದು ಕರೆಯಬೇಕು ಮತ್ತು ಅದರ ಪ್ರಕಾರ ಸಾಹಿತ್ಯವೆಲ್ಲ ಕನ್ನಡದಲ್ಲಿ ಇರಬೇಕೆಂದು ಆಲೂರು ವೆಂಕಟರಾವ್‌ರ ಹೇಳಿದಾಗ ಈ ನಿಲುವನ್ನು ಸಮರ್ಥಿಸಿಕೊಂಡು ಐತಿಹಾಸಿಕ ಮಹತ್ವದ್ದು ಎಂದಿರುವ ರಂಗನಾಥ ದಿವಾಕರರು ಜನರ ಭಾಷೆಯಲ್ಲಿಯೇ ಪ್ರಚಾರ ಮಾಡದೆಯೇ ಯಾವ ಚಳುವಳಿಯೂ ಯಶಸ್ವಿಯಾಗದು ಎಂಬ ದೃಷ್ಟಿ ಹಾಗೂ ಭಾಷಾವಾರು ಪ್ರಾಂತ ರಚನೆಗೆ ನಾಂದಿಯಾಗುವಂಥ ಈ ಕ್ರಮ ಇಂಥ ನಿಲುವಿಗೆ ಕಾರಣವೆಂದಿದ್ದಾರೆ."[೧೮] ಮುಂದೆ ಕರ್ನಾಟಕ ಏಕೀಕರಣಕ್ಕೆ ಈ ಚಳುವಳಿಯು ಮುನ್ನುಡಿ ಬರೆಯಿತು.

"೧೯೧೬ರಲ್ಲಿ ತಿಲಕರು ಧಾರವಾಡಕ್ಕೆ ಬಂದಾಗ, ಅವರಿಗೆ ಸಾರ್ವಜನಿಕ ಭಾಷಣ ಮಾಡಲು ಸರ್ಕಾರ ಅವಕಾಶ ಮಾಡಿಕೊಡಲಿಲ್ಲ. ಆಗ ತಿಲಕರು ಕಂಡುಕೊಂಡ ಕ್ರಮವೆಂದರೆ ತಮ್ಮ ಭಾಷಣವು ಇಂದಿನ ಮಾಳಮಡ್ಡಿ (ರೈಲ್ವೇ ಸ್ಟೇಶನ್ ಹತ್ತಿರ) ಹತ್ತಿರ ಇದ್ದ ಬಳ್ಳಾರಿ ರಾಮರಾವ್(ವಕೀಲರು) ಅವರ ಮನೆಯ ಆವರಣದಲ್ಲಿ ನಡೆದ ಬಗ್ಗೆ ದಿವಾಕರ ಉಲ್ಲೇಖಿಸುತ್ತಾರೆ. ಹುಬ್ಬಳ್ಳಿಯಲ್ಲಿಯೂ ತಿಲಕರು ಭಾಷಣ ಮಾಡಲು ಆಯ್ದುಕೊಂಡ ಸ್ಥಳವೆಂದರೆ, ಹುಬ್ಬಳ್ಳಿಯ ಊರ ಹೊರಗಿನ ಪಿಂಜರಾಪೋಲ್ (ಸಿದ್ಧಾರೂಢ ಆಶ್ರಮದ ಹತ್ತಿರ) ಬಯಲು ಪ್ರದೇಶದಲ್ಲಿ ಭಾಷಣ ಮಾಡಿದರು. ಆ ಸಭೆಯ ಅಧ್ಯಕ್ಷತೆಯನ್ನು ಸಿದ್ಧಾರೂಡ ಮಠದ ಶ್ರೀಗಳು ವಹಿಸಿದ್ದರು."[೧೯] ರಾಷ್ಟ್ರೀಯ ಚಳುವಳಿಗೆ ಮಠದ ಶ್ರೀಗಳು ಭಾಗಿಯಾಗಿದ್ದರಿಂದ ಚಳುವಳಿಯು ಜನಸಾಮಾನ್ಯರನ್ನು ಎಚ್ಚರಿಸಿತು.

"ಇದೇ ಅವಧಿಯಲ್ಲಿ ಹಾವೇರಿ ಭಾಗದ ಶಾಂತಕವಿಗಳು(ಸಕ್ಕರಿ ಬಾಳಾಚಾರ್ಯ) ಹೋಂ ರೂಲ್ ಲೀಗ್‌ನ ಪರವಾಗಿ ಜಿಲ್ಲೆಯ ಮತ್ತು ಜಿಲ್ಲೆಯ ಆಚೆಗೆ ಪ್ರಚಾರ ಕಾರ್ಯ ಕೈಗೊಂಡರು. ಅವರು ಮುಖ್ಯವಾಗಿ ಹರಿಕಥೆಗಳನ್ನು ರಚಿಸಿ, ಅವುಗಳನ್ನು ಹೇಳುತ್ತಾ ಜನಸಾಮಾನ್ಯರನ್ನು ಚಳುವಳಿಗೆ ಪ್ರೇರೇಪಿಸುತ್ತಿದ್ದರು. ಅವರು ಹೇಳುವ ಹರಿಕಥೆಗಳಲ್ಲಿ 'ವಿದ್ಯಾರಣ್ಯ' ಹರಿಕಥೆ ತುಂಬ ಜನಪ್ರಿಯವಾಗಿತ್ತು."[೨೦] ಇವರು ಕವಿ–ನಾಟಕಕಾರ ಮತ್ತು ಕಾದಂಬರಿಕಾರರು. ತಮ್ಮ ಸಾಹಿತ್ಯದಿಂದಲೇ ಜಿಲ್ಲೆಯಲ್ಲಿ ಹೋಂ ರೂಲ್ ಚಳುವಳಿಯನ್ನು ಹಳ್ಳಿ ಹಳ್ಳಿಗಳಿಗೆ ವಿಸ್ತರಿಸುವಲ್ಲಿ ಯಶಸ್ವಿಯಾದರು.

"ಅಸಂಖ್ಯಾತ ವಿದ್ಯಾರ್ಥಿಗಳು, ಮಂದಗಾಮಿಗಳೂ ಸಹ ಈ ಚಳುವಳಿಯಲ್ಲಿ ಭಾಗವಹಿಸಿ ವಿದೇಶಿ ವಸ್ತುಗಳನ್ನು ಸುಟ್ಟರು; ಬಹಿಷ್ಕಾರ ಚಳುವಳಿ ವ್ಯಾಪಕವಾಗಿ ನಡೆಯಿತು. ಈ ಚಳುವಳಿ

ಸ್ವರಾಜ್ಯ, ಸ್ವದೇಶಿ ಮತ್ತು ರಾಷ್ಟ್ರೀಯ ಶಿಕ್ಷಣ ತತ್ವಗಳನ್ನು ಜನಪ್ರಿಯಗೊಳಿಸಿತು. ಚಳುವಳಿಗೆ ದೇಣಿಗೆ ಸಂಗ್ರಹಿಸಲಾಯಿತಲ್ಲದೆ ಮಂದಗಾಮಿ ಮತ್ತು ತೀವ್ರಗಾಮಿಗಳನ್ನು ಒಂದುಗೂಡಿಸಿತು ಮತ್ತು ಸ್ತ್ರೀಯರನ್ನು ರಾಷ್ಟ್ರೀಯ ಚಳುವಳಿಯತ್ತ ಸೆಳೆಯುವಲ್ಲಿ ಯಶಸ್ವಿಯಾಯಿತು.[೨೧] ಈ ಚಳುವಳಿಯ ವಿಶೇಷತೆಯನ್ನು ಜಿಲ್ಲೆಯಲ್ಲಿ ಗಮನಿಸಿದರೆ, ಸ್ವದೇಶಿ ವಸ್ತುಗಳ ಬಳಕೆ, ವಿದೇಶಿ ವಸ್ತುಗಳ ನಿಷೇಧ, ಇದು ಹಾವೇರಿ ಜಿಲ್ಲೆಯಲ್ಲಿ ಪರಮಣ್ಣ ಹೊಸಮನಿ, ಸಂಗೂರು ಕರಿಯಪ್ಪ, ಗೋವಿಂದಾಚಾರ್ಯ ಅಗ್ನಿಹೋತ್ರಿ, ವಿನಾಯಕ ಗುಣಪುಲೆ, ಸಕ್ಕರೆ ಬಾಳಾಚಾರ್ಯ ಇನ್ನೂ ಮುಂತಾದವರು ಈ ಚಳುವಳಿಯ ಉದ್ದೇಶಗಳನ್ನು ಯಶಸ್ವಿಗೊಳಿಸುವಲ್ಲಿ ಕಾರಣೀಕರ್ತರಾಗಿದ್ದನ್ನು ಗುರುತಿಸಲಾಗಿದೆ.

### ೪.೩. ಖಿಲಾಫತ್ ಚಳುವಳಿ

ರಾಷ್ಟ್ರೀಯ ಹೋರಾಟದಲ್ಲಿ ಮತ್ತೊಂದು ಪ್ರಮುಖ ಚಳುವಳಿಯೆಂದರೆ ಖಿಲಾಫತ್ ಚಳುವಳಿ ಇದರ ಹಿನ್ನೆಲೆಯನ್ನು ಗಮನಿಸುವುದಾದರೆ, "ಮೊದಲ ಜಾಗತಿಕ ಯುದ್ಧದಲ್ಲಿ ಸೋತ ಟರ್ಕಿಯನ್ನು ಶಾಂತಿ ಒಪ್ಪಂದದಲ್ಲಿ ಬ್ರಿಟಿಷರು ಅವಮಾನಿಸಿದರು. ಟರ್ಕಿ ಸುಲ್ತಾನನ (ಅಬ್ದುಲ್ ಮಜೀದ್) ಬಿರುದಾದ 'ಖಿಲಾಫತ್'ನ್ನು ರದ್ದುಪಡಿಸಿದರು. ಅಲ್ಲದೆ 'ಸೆವರ್ಸ್' ಒಪ್ಪಂದದಂತೆ ಟರ್ಕಿಯನ್ನು ವಿಭಜಿಸಿ ಕ್ರೈಸ್ತರ ಆಳ್ವಿಕೆಯಲ್ಲಿಟ್ಟರು. ಇದರಿಂದ ಟರ್ಕಿ ಸುಲ್ತಾನ ನಾಮಮಾತ್ರನಾಗಿ ಅಧಿಕಾರದಲ್ಲಿ ಉಳಿದನು. ಇದರಿಂದ ಪವಿತ್ರ ಇಸ್ಲಾಂ ಕೇಂದ್ರಗಳಿಗೆ ಬಾರಿ ಅವಮಾನವಾಯಿತು. ಮುಸ್ಲಿಂ ಸಮುದಾಯ ಟರ್ಕಿ ಸುಲ್ತಾನನನ್ನು ತಮ್ಮ 'ಖಲೀಫ್'ನನ್ನಾಗಿ ಮತ್ತು ಆಧ್ಯಾತ್ಮಿಕ ನಾಯಕನನ್ನಾಗಿ ಸ್ವೀಕರಿಸಿದರು. ಜಗತ್ತಿನ ಎಲ್ಲ ಮುಸ್ಲಿಂ ರಾಷ್ಟ್ರಗಳು ಖಲೀಫ್ ಹುದ್ದೆಯನ್ನು ಉಳಿಸಿಕೊಳ್ಳಲು 'ಖಿಲಾಫತ್' ಚಳುವಳಿ ಪ್ರಾರಂಭಿಸಿದಾಗ, ಭಾರತದಲ್ಲಿಯೂ ಆ ಚಳುವಳಿಯನ್ನು ಮಾಡಲು ಮಹಮ್ಮದ್ ಅಲಿ ಮತ್ತು ಶೌಕತ್ ಅಲಿ ಸಹೋದರರ ನಾಯಕತ್ವದಲ್ಲಿ 'ಖಿಲಾಫತ್' ಚಳುವಳಿ ಮಾಡಲು ಗಾಂಧೀಜಿಯನ್ನು ಕೇಳಿಕೊಂಡರು. ಭಾರತದಲ್ಲಿ ಹಿಂದೂ-ಮುಸ್ಲಿಂರ ಐಕ್ಯತೆ ಸಾಧಿಸಲು ಭ್ರಾತೃತ್ವ ಭಾವನೆಗೊಸ್ಕರ ಗಾಂಧೀಜಿ ಖಿಲಾಫತ್ ಚಳುವಳಿಗೆ ಬೆಂಬಲಿಸಿದರು."[೨೨] ತಿಲಕರು ನಿಧನರಾದ ೧೯೨೦ರ ಆಗಸ್ಟ್ ೧ರಂದು ಖಿಲಾಫತ್ ಚಳುವಳಿ ಆರಂಭವಾಯಿತು.

"ಖಿಲಾಫತ್ ಸಮಿತಿ ಸಭೆ ಸೇರಿ ಗಾಂಧೀಜಿಯನ್ನು ಅಧ್ಯಕ್ಷರನ್ನಾಗಿ ಆರಿಸಿತು. ಅಲ್ಲದೆ ಖಿಲಾಫತ್ ಚಳುವಳಿಯ ನಾಯಕರು ತಮ್ಮ ಚಳುವಳಿ ಬರೀ ಮುಸ್ಲಿಮರಿಗೆ ಸಂಬಂಧಪಟ್ಟ ಚಳುವಳಿಯಾಗದೆ ಎಲ್ಲ ಜನ ವರ್ಗಗಳ ಬೆಂಬಲ ಗಳಿಸಬೇಕು ಎಂದು ಬಯಸಿದ್ದರು."[೨೩] ಇದು ಭಾರತೀಯ ರಾಜಕೀಯದ ಒಗ್ಗಟ್ಟಿಗೆ ಸಹಾಯವಾಗುವುದೆಂದು ಭಾವಿಸಿದ್ದರು. ನಂತರ "ಗಾಂಧೀಜಿ ಸಲಹೆಯಂತೆ ನಾಲ್ಕು ಹಂತಗಳಲ್ಲಿ ಚಳುವಳಿಯನ್ನು ಕೈಗೊಳ್ಳಲಾಯಿತು. ಬಿರುದು-ಬಾವಲಿಗಳ ಬಹಿಷ್ಕಾರ, ಸಿವಿಲ್ ನೌಕರರು, ಪೋಲೀಸ್ ಮತ್ತು ಮಿಲಿಟರಿ ಸೇವೆಗೆ ಬಹಿಷ್ಕಾರ, ಕೊನೆಗೆ ಕರ ನಿರಾಕರಣೆ ಅಂದರೆ ಕಂದಾಯ, ತೆರಿಗೆಗಳನ್ನು ಸಲ್ಲಿಸದಿರುವುದು. ಚಳುವಳಿಯು

೧೯೨೦ ಆಗಸ್ಟ್ ೧ನೇ ತಾರೀಖು ಅಖಿಲ ಭಾರತ ವ್ಯಾಪ್ತಿಯ ಹರತಾಳ, ಪ್ರದರ್ಶನಗಳೊಂದಿಗೆ ಆರಂಭವಾಗುವುದೆಂದು ನಿರ್ಧಾರವಾಯಿತು."[೨೪] ಖಿಲಾಫತ್ ಚಳುವಳಿಗೆ ಮಹಮ್ಮದ್ ಅಲಿ ಜಿನ್ನಾ ಭಾಗಿಯಾಗದೆ, ಮಹಮ್ಮದ್ ಅಲಿ ಮತ್ತು ಶೌಕತ್ ಅಲಿ ಖಿಲಾಫತ್ ಚಳುವಳಿಯ ಅಗ್ರ ಮುಸ್ಲಿಂ ನಾಯಕರಾಗಿ ಹೊರಹೊಮ್ಮಿದರು.

"ಧಾರವಾಡದಲ್ಲಿ ೧೯೨೧ರ ಜುಲೈ ೧ರಂದು ಸಂಜೆ ಸರಾಯಿ ಅಂಗಡಿ ಎದುರು ಬಲವಾದ ಪಿಕೆಟಿಂಗ್ ನಡೆದು, ಅದೇ ದಿನ ಖಿಲಾಫತ್ ಸ್ವಯಂಸೇವಕರಿಗೆ ಪಿಕೆಟಿಂಗ್ ಮಾಡಿದ್ದಕ್ಕೆ ೬ ತಿಂಗಳ ಶಿಕ್ಷೆ ವಿಧಿಸಲಾಯಿತು. ಆ ಸಂದರ್ಭದಲ್ಲಿ ಫೌಜುದಾರ ಶಿವಲಿಂಗಪ್ಪ ಗೋಲಿಬಾರ್ ನಡೆಸಲು ೩ ಜನ ಸತ್ತರು. ೨೦ ರಿಂದ ೨೫ ಜನ ಗಾಯಗೊಂಡರು. ಈ ಘಟನೆ ನಡೆದು ಎರಡು ಮೂರು ದಿನಗಳಲ್ಲಿ ಕಾಂಗ್ರೆಸ್ ಹಾಗೂ ಖಿಲಾಫತ್ ಮುಖಂಡರನ್ನು ಮತ್ತು ಕಾರ್ಯಕರ್ತರನ್ನು ಬಂಧಿಸಿ ಅವರ ಮೇಲೆ ಅಂಗಡಿಗಳ ಮೇಲೆ ಕಳವಿನ ಮತ್ತು ಕೊಲೆ ಮಾಡಲು ಯತ್ನಿಸಿದ ಆರೋಪಗಳನ್ನು ಹಾಕಿ ೨೪ ಜನರನ್ನು ಬಂಧಿಸಲಾಯಿತು."[೨೫] ಇದು ಚಳುವಳಿಗಾರರಿಗೆ ಮತ್ತಷ್ಟು ಕೋಪ ತರಿಸಿತ್ತು. ಈ ವಿಚಾರವನ್ನು ಕೇಳಿದ ಪರಮಣ್ಣ ಹೊಸಮನಿ ಮನೆಯಲ್ಲಿ ಕಾರ್ಯಕ್ರಮವಿದ್ದರೂ ಚಳುವಳಿಗೆ ಭಾಗಿಯಾಗಲು ಧಾರವಾಡಕ್ಕೆ ತೆರಳಿದರು. ಮುದವೀಡು ಕೃಷ್ಣರಾಯರರೊಂದಿಗೆ ಸೇರಿ ಹಲವು ಕಾರ್ಯಕ್ರಮಗಳಲ್ಲಿ ಭಾಗಿಯಾಗಿ ಪ್ರಚಾರ ಕಾರ್ಯದಲ್ಲಿ ನಿರತರಾದರು.

"ಖಿಲಾಫತ್ ಚಳುವಳಿಯು ಉದ್ದೇಶ ಸಾಧನೆಯಲ್ಲಿ ಅಸಫಲವಾದರೂ ದೇಶದ ರಾಜಕೀಯದ ಮೇಲೆ ಮಹತ್ತರ ಪರಿಣಾಮವನ್ನು ಬೀರಿತು. ಹೊಸ ನಾಯಕರು ಮುಸ್ಲಿಂ ಸಮುದಾಯದಲ್ಲಿ ಸೃಷ್ಟಿಯಾದರು. ರಾಜಕೀಯ ಪ್ರಜ್ಞೆ ಜನಸಾಮಾನ್ಯರಲ್ಲಿ ಬಂತು. ಈ ಸಂದರ್ಭದಲ್ಲಿ ದೇಶಕ್ಕೆ ಸಂಪೂರ್ಣ ಸ್ವರಾಜ್ಯ ಬೇಡಿಕೆಯನ್ನು ಮುಂದಿಡುವಲ್ಲಿ ಕಾಂಗ್ರೆಸ್‌ನವರಿಗಿಂತ ಖಿಲಾಫತ್ ನಾಯಕರು ಮುಂದಿದ್ದರು"[೨೬] ಎಂಬುದರ ಜೊತೆ ಖಿಲಾಫತ್ ಚಳುವಳಿಯು ಜಿಲ್ಲೆಯಲ್ಲಿ ಸದ್ದು ಮಾಡಿದ ವಿವರವನ್ನು ಗುರುತಿಸಲಾಗಿದೆ.

ಜಿಲ್ಲೆಯಲ್ಲಿ ಗೋವಿಂದಾಚಾರ್ಯ ಅಗ್ನಿಹೋತ್ರಿ, ಗೋವಿಂದಾಚಾರ್ಯ ರಾಯಚೂರು, ಶಾಂತಕವಿಗಳು(ಸಕ್ಕರೆ ಬಾಳಾಚಾರ್ಯರು) ಚನ್ನಬಸಯ್ಯ ಹಾಲಯ್ಯಗೋಳ, ನಾರಾಯಣಾಚಾರ್ಯ ಆನವಟ್ಟಿ, ಚನ್ನವೀರಪ್ಪ ಹೇರೂರು, ಪರಮಣ್ಣ ಹೊಸಮನಿ ಹೀಗೆ ಜಿಲ್ಲೆಯ ಹಲವು ಚಳುವಳಿಗಾರರು ಪೊಲೀಸ್ ಮತ್ತು ಮಿಲಿಟರಿ ನೌಕರರು ತಮ್ಮ ಸೇವೆಗೆ ಬಹಿಷ್ಕಾರ ಹಾಕಬೇಕೆಂದು ವಿನಂತಿಸುವ ಕಾರ್ಯವನ್ನು ಮಾಡುತ್ತಿದರು. ಅಲ್ಲದೆ ಜನಸಾಮಾನ್ಯರಿಗೆ ಸರಕಾರಕ್ಕೆ ತೆರಿಗೆ ಕಟ್ಟದಂತೆ ಜನಜಾಗೃತಿ ಕಾರ್ಯ ಮಾಡುತ್ತಿದ್ದ ಬಗ್ಗೆ ತಾವು ಕೇಳಿದ ಮತ್ತು ನೋಡಿದ ಜಿಲ್ಲೆಯ ಚಳುವಳಿಗಾರರಾದ ದೇವೇಂದ್ರಪ್ಪ ವಿಭೂತಿ, ಸುಬ್ಬಣ್ಣಾಚಾರ್ಯ ಅಕ್ಕಿವಳಿ, ಗುಡ್ಡಪ್ಪ ಹರಿಜನ ಇನ್ನೂ ಮೊದಲಾದ ಚಳುವಳಿಗಾರರ ಹೇಳಿಕೆಗಳು ಸಾಕ್ಷಿಯಾಗಿವೆ. ಈ ಬೆಳವಣಿಗೆ ಜಿಲ್ಲೆಯಲ್ಲಿ ಖಿಲಾಫತ್ ಚಳುವಳಿಯು ಬೀರಿದ ಪ್ರಭಾವವನ್ನು ಪ್ರತಿನಿಧಿಸುತ್ತದೆ.

## ೪.೪. ಅಸಹಕಾರ ಚಳುವಳಿ

೧೯೨೦ರಲ್ಲಿ ಗಾಂಧೀಜಿ ಸ್ವರಾಜ್ಯ ಸಾಧನೆಗೆ ಅಸಹಕಾರ ಚಳುವಳಿಯನ್ನು ಆರಂಭಿಸಿದರು. ಭಾರತೀಯರು ಬ್ರಿಟಿಷ್ ಸರಕಾರಕ್ಕೆ ಯಾವುದೇ ರೀತಿಯಲ್ಲಿಯೂ ಸಹಕಾರ ಕೊಡದಿದ್ದರೆ ಆಡಳಿತ ಯಂತ್ರ ಕುಸಿಯುತ್ತದೆ ಎಂಬುದು ಗಾಂಧೀಜಿ ಯೋಜನೆಯಾಗಿತ್ತು.

**ಚಳುವಳಿ ಆರಂಭ** ೧೯೨೧ರ ಜನವರಿಯಲ್ಲಿ ಗಾಂಧೀಜಿ ಅಸಹಕಾರ ಚಳುವಳಿಯನ್ನು ಆರಂಭಿಸಿದರು. ಈ ಚಳುವಳಿಯ ಕಾರ್ಯಕ್ರಮಗಳು ಭಾರತೀಯ ಸಾಮಾನ್ಯ ಪ್ರಜೆಗೆ ಮುಟ್ಟಿಸಲೆಂದು ಸಾದಾ ಮತ್ತು ಅಷ್ಟೇನೂ ನೀಟಾಗಿರದ ಬಟ್ಟೆಯನ್ನು ಧರಿಸಿ ೩ನೇ ದರ್ಜೆಯ ರೈಲಿನಲ್ಲಿ ಸಂಚರಿಸುತ್ತಾ ರಾಷ್ಟ್ರದ ಮೂಲೆ ಮೂಲೆಗೂ ಸುದ್ದಿ ಮುಟ್ಟಿಸಿದರು. ಗಾಂಧೀಜಿಯ ಅಹಿಂಸಾತ್ಮಕ ಅಸಹಕಾರ ಚಳುವಳಿಯೆಂದು ಕರೆದ ಈ ಚಳುವಳಿಯನ್ನು ಕಾರ್ಯಗತಗೊಳಿಸಲು ಕೆಲ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಅವುಗಳೆಂದರೆ –

* "ಬ್ರಿಟಿಷ್ ಸರಕಾರ ನೀಡಿದ್ದ ಬಿರುದು–ಬಾವಲಿಗಳನ್ನು, ಗೌರವಸ್ಥಾನಗಳನ್ನೂ ಹಿಂದಿರುಗಿಸುವುದು.

* ಸರಕಾರಿ ಮತ್ತು ಸೇನೆಯ ನೌಕರಿಗಳನ್ನು ತ್ಯಜಿಸುವುದು ಮತ್ತು ಸರಕಾರಿ ವಿದ್ಯಾಸಂಸ್ಥೆಗಳಿಗೂ, ನ್ಯಾಯಾಲಯಗಳಿಗೂ ಬಹಿಷ್ಕಾರ ಹಾಕುವುದು.

* ೧೯೨೦ರ ಚುನಾವಣೆಗಳ ಬಹಿಷ್ಕಾರ, ಚುನಾವಣೆ ಮತ್ತು ಶಾಸನ ಸಭೆಗಳ ಸದಸ್ಯತ್ವಕ್ಕೆ ರಾಜೀನಾಮೆ ಕೊಡುವುದು, ಕಾಂಗ್ರೆಸ್ ಸಲಹೆಯನ್ನು ಮೀರಿ ನಿಲ್ಲುವ ಅಭ್ಯರ್ಥಿಗಳಿಗೆ ಮತದಾರರು ಓಟು ಹಾಕಲು ನಿರಾಕರಿಸುವಂತೆ ಜನತೆಯ ಮನವೊಲಿಸುವುದು.

* ವಿದ್ಯಾರ್ಥಿಗಳು, ಶಿಕ್ಷಕರು ಶಾಲಾ–ಕಾಲೇಜುಗಳನ್ನು ಬಹಿಷ್ಕರಿಸಿ ಚಳುವಳಿಗೆ ಸೇರುವುದು.

* ವಿದೇಶಿ ವಸ್ತುಗಳ ಬಹಿಷ್ಕಾರ, ಸ್ವದೇಶಿ ವಸ್ತುಗಳ ಬಳಕೆ.

* ವಕೀಲರು, ಅಧಿಕಾರಿಗಳು, ತಮ್ಮ ತಮ್ಮ ಕೋರ್ಟು–ಕಚೇರಿಗಳನ್ನು ಬಹಿಷ್ಕರಿಸಿ, ತಮ್ಮದೇಯಾದ ನ್ಯಾಯ ಪಂಚಾಯಿತಿಯನ್ನು ರಚಿಸಿಕೊಳ್ಳಬೇಕು.

ಹೀಗೆ ಸುಮಾರು ಹದಿನಾಲ್ಕು ಕಾರ್ಯಕ್ರಮಗಳನ್ನು ಕಾಂಗ್ರೆಸ್ ಚಳುವಳಿಕಾರರು ಅನುಸರಿಸಬೇಕು ಎಂದು ಗಾಂಧೀಜಿ ಕರೆ ನೀಡಿದರು."[೨] ಗಾಂಧೀಜಿ ಹಮ್ಮಿಕೊಂಡ ಅಂಶಗಳನ್ನು ಹಾವೇರಿ ಜಿಲ್ಲೆಯಲ್ಲಿ ಗಮನಿಸುವುದಾದರೆ, ಹಾವೇರಿಯಲ್ಲಿ ವಕೀಲಿ ವೃತ್ತಿ ಮಾಡುತ್ತಿರುವ ಗೋವಿಂದಾಚಾರ್ಯ ರಾಯಚೂರು, ಹುಚ್ಚುರಾವ್ ಕೆರೆಮತ್ತಿಹಳ್ಳಿ ವಕೀಲರು ತಮ್ಮ ವೃತ್ತಿಗಳನ್ನು ತ್ಯಜಿಸಿದರು. ಗಳಗನಾಥರು, ಮಹದೇವಪ್ಪ ಮೈಲಾರ ಇವರು ಸ್ವದೇಶಿ ವಸ್ತ್ರ ಭಂಡಾರವನ್ನು ತೆರೆದು ಸ್ವದೇಶಿ ವಸ್ತುಗಳನ್ನು ಮಾರುತ್ತಿದ್ದರು. ಅಗ್ನಿಹೋತ್ರಿ ಸಹ ಇವರ ಕಾರ್ಯದಲ್ಲಿ ಬೆಂಬಲವಾಗಿ ನಿಂತರು. ಇನ್ನು ವಿದ್ಯಾರ್ಥಿಗಳು ಸರಕಾರಿ ಶಾಲೆಯನ್ನು ಬಹಿಷ್ಕರಿಸಿದ್ದು ಜಿಲ್ಲೆಯಲ್ಲಿ

ಪ್ರಮುಖವಾದ ಘಟನೆಯೆನ್ನಬಹುದು. ಹಾಗಾಗಿ ರಾಷ್ಟ್ರೀಯ ಶಾಲೆಗಳ ಸ್ಥಾಪನೆ ಹಾವೇರಿ, ಹಾನಗಲ್ಲು, ಗುತ್ತಲ, ರಾಣೆಬೆನ್ನೂರುಗಳಲ್ಲಿ ಪ್ರಾರಂಭವಾದವು. ಹೀಗೆ ಜಿಲ್ಲೆಯಲ್ಲಿ ಗಾಂಧೀಜಿಯ ಅಸಹಕಾರ ಚಳುವಳಿ ಸ್ವಾತಂತ್ರ್ಯ ಚಳುವಳಿಗೆ ಹೊಸ ರೂಪ ಮೊಳಗಿಸಿತು.

**ಅಸಹಕಾರ ಚಳುವಳಿ ನಾಲ್ಕು ಹಂತಗಳಲ್ಲಿ ನಡೆಯಿತು :**

೧. "ವಿದ್ಯಾರ್ಥಿಗಳು, ವಕೀಲರು ಶಾಲಾ-ಕಾಲೇಜು, ಕೊರ್ಟು-ಕಚೇರಿಗಳನ್ನು ಬಹಿಷ್ಕರಿಸಿ ಚಳುವಳಿಗೆ ಭಾಗವಹಿಸಿದ್ದು. ೨. ತಿಲಕ ಸ್ವರಾಜ್ಯ ನಿಧಿ ಸ್ಥಾಪಿಸಿ ಒಂದು ಕೋಟಿ ರೂ. ಸಂಗ್ರಹಿಸುವುದು. ೩. ಆಯ್ದ ಪ್ರದೇಶಗಳಲ್ಲಿ ಕರ ನಿರಾಕರಣೆ. ೪. ಇವೆಲ್ಲವುಗಳು ಸತ್ಯ ಮತ್ತು ಅಹಿಂಸೆಯಿಂದ, ಬಹಿಷ್ಕಾರ ಮಾರ್ಗಗಳಿಂದ ಅನುಷ್ಠಾನಕ್ಕೆ ತಂದರು.

**ಚಳುವಳಿಯ ದಮನ** ಬ್ರಿಟಿಷರು ಚಳುವಳಿಯನ್ನು ದಮನಕಾರಿ ರೀತಿಯಲ್ಲಿ ಹತ್ತಿಕ್ಕಿದರು. ೩೦,೦೦೦ ಚಳುವಳಿಗಾರರನ್ನು ಬಂಧಿಸಿದ ಪೊಲೀಸರು ಸೆರೆಮನೆಗೆ ತಳ್ಳಿದ ಪರಿಣಾಮ ಸೆರೆಮನೆಗಳು ತುಂಬಿದವು. ಜೈಲಿಗೆ ಹೋಗುವುದೇ ಚಳುವಳಿಗಾರರಿಗೆ ಸಾಮಾನ್ಯವಾಯಿತು."[೨೮] ಹಾವೇರಿ ಜಿಲ್ಲೆಯಲ್ಲಿ ವಿದ್ಯಾರ್ಥಿಗಳು, ವಕೀಲರು ಅಸಹಕಾರ ಚಳುವಳಿಗಾರರೊಂದಿಗೆ ಸೇರಿ, ಸ್ವದೇಶಿ ವಸ್ತುಗಳ ಬಳಕೆ ಜಿಲ್ಲೆಯಲ್ಲಿ ಪರಿಣಾಮಕಾರಿಯಾಗಿ ಪ್ರಚಾರ ಪಡೆಯಿತು. ನಂತರ ಜಿಲ್ಲೆಯಲ್ಲಿ ರಾಷ್ಟ್ರೀಯ ಶಾಲೆಗಳನ್ನು ಪ್ರಾರಂಭಿಸಿದ್ದು, ಅದರಲ್ಲಿಯೂ ಹಾನಗಲ್ಲು ಭಾಗದಲ್ಲಿ ಹೆಣ್ಣುಮಕ್ಕಳ ಶಾಲೆ ಪ್ರಾರಂಭಿಸಿದ ಚಳುವಳಿಗಾರರು ರಾಜ್ಯ ಮಟ್ಟದ ನಾಯಕರ ಗಮನ ಸೆಳೆಯುವಂತಹ ಘಟನೆಗಳು ನಡೆದಿದ್ದು ವಿಶೇಷವಾಗಿತ್ತು.

"೧೯೨೦ರಲ್ಲಿ ನಾಗಪುರ ಕಾಂಗ್ರೆಸ್ ಅಧಿವೇಶನಕ್ಕೆ ಕರ್ನಾಟಕದಿಂದ ೮೦೦ ಜನ ಪ್ರತಿನಿಧಿಗಳು ಹೋಗಿದ್ದು ಮತ್ತು ಅಷ್ಟೇ ಉತ್ಸಾಹದಿಂದ ಬಂದು ಕಾರ್ಯಕ್ರಮಗಳಲ್ಲಿ ಭಾಗಿಯಾಗಿರುವುದನ್ನು ಗಮನಿಸಬಹುದು. ರಾಜ್ಯದಲ್ಲಿ ಮೊದಲ ಬಾರಿಗೆ ತಮ್ಮ ಜೀವನವನ್ನೇ ರಾಷ್ಟ್ರಸೇವೆಗಾಗಿ ಮೀಸಲಿಟ್ಟ ಚಳುವಳಿ ಅಂದರೆ ಅಸಹಕಾರ ಚಳುವಳಿ. ಅದರಲ್ಲಿ ಪ್ರಮುಖರೆಂದರೆ ರಂಗನಾಥ ದಿವಾಕರ, ವೀರಪ್ಪ ವಾಲಿ, ಕೌಜಲಗಿ ಹನುಮಂತರಾವ್, ಪರಮಣ್ಣ ಹೊಸಮನಿ, ವೀರನಗೌಡ ಪಾಟೀಲ್ ಇನ್ನೂ ಮುಂತಾದವರು"[೨೯] ಭಾಗವಹಿಸುವುದರೊಂದಿಗೆ ಹಾವೇರಿಯ ಜಿಲ್ಲೆಯ ವಿವಿಧ ಕಡೆ ವಿವಿಧ ಸ್ವರೂಪದ ಕಾರ್ಯಕ್ರಮಗಳು ನಡೆದು ಚಳುವಳಿಗಳನ್ನು ಯಶಸ್ವಿಗೊಳಿಸಲು ಕಾರಣರಾದರು.

ಅಹಿಂಸಾತ್ಮಕ ಅಸಹಕಾರ ಆಂದೋಲನದಿಂದ ಸಾರ್ವತ್ರಿಕ ಜನಜಾಗೃತಿಯು ಅಸಾಮಾನ್ಯ ರೀತಿಯಲ್ಲಿ ಆಯಿತು. ಹಾಗೂ "ಅಸಹಕಾರ ಅಂದೋಲನದ ಬಗ್ಗೆ ಅಂದಿನ ಪತ್ರಿಕೆಗಳು ಪ್ರಚಾರ ನೀಡಿದವು– 'ಕರ್ಮವೀರ'(ಸಾಪ್ತಾಹಿಕ), 'ನವಶಕ್ತಿ', ' ಕರ್ನಾಟಕ ವೈಭವ', 'ಕರ್ನಾಟಕ ವೃತ್ತ', 'ರಾಷ್ಟ್ರ ಬಂಧು', 'ವಿಶ್ವ ಕರ್ನಾಟಕ', 'ಸತ್ಯಾಗ್ರಹಿ', 'ಶರಣ ಸಂದೇಶ' ಹೀಗೆ ಹಲವು ಪತ್ರಿಕೆಗಳು ತಮ್ಮದೇ ಆದ ರೀತಿಯಲ್ಲಿ ಸೇವೆ ಸಲ್ಲಿಸಿದವು."[೩೦] ಹಾವೇರಿಯ ಜಿಲ್ಲೆಯ ಚಳುವಳಿಯಲ್ಲಿ

ಈ ಪತ್ರಿಕೆಗಳು ಅಂದಿನ ಚಳುವಳಿಗಾರರಿಗೆ ತಮ್ಮ ಚಳುವಳಿ ಯಾವ ರೀತಿಯಲ್ಲಿ ಇರಬೇಕು? ಏನು ಮಾಡಬೇಕು? ಮುಂತಾದ ಅಂಶಗಳನ್ನು ಸಲಹೆ, ಸೂಚನೆಗಳನ್ನು ತಮ್ಮ ನಾಯಕರುಗಳಿಂದ ಪಡೆಯಲು, ರಾಷ್ಟ್ರ ನಾಯಕರ ನಿರ್ದೇಶನ ಪಡೆಯಲು, ಬ್ರಿಟಿಷ್ ಸರಕಾರದ ದೌರ್ಜನ್ಯ ಮುಂತಾದ ವಿವರಗಳನ್ನು ಈ ಪತ್ರಿಕೆಗಳು ಪ್ರಕಟ ಮಾಡುತ್ತಾ ಚಳುವಳಿಗಾರರಿಗೆ, ಜನಸಾಮಾನ್ಯರಿಗೆ ಪ್ರೇರಣೆ ನೀಡುವ ಕಾರ್ಯ ಮಾಡಿದ ಬಗ್ಗೆ ಹಾನಗಲ್ಲಿನ ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಸಂದರ್ಶನದಲ್ಲಿ ವಿವರಿಸುತ್ತಾರೆ.

ಹೀಗೆ ಆಂದೋಲನದಲ್ಲಿ "ಹಾವೇರಿ ನಗರ ಸಭೆಯ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳು ನಗರದ ಮುಖ್ಯ ಬೀದಿಗಳಲ್ಲಿ ಮೆರವಣಿಗೆ ಮೂಲಕ ಜಯ ಘೋಷ ಹಾಕುತ್ತ ಕಾಂಗ್ರೆಸ್ ಬ್ಯಾಡ್ಜ್‌ಗಳ ಸಮೇತ ಶಾಲೆಗೆ ಹೋಗಿದ್ದರಿಂದ ಆಡಳಿತ ಮಂಡಳಿ ವಿದ್ಯಾರ್ಥಿ ಮುಖಂಡರನ್ನು ಶಾಲೆಯಿಂದ ಹೊರಹಾಕಿತು. ಇದರ ಪರಿಣಾಮ ನಗರ ಸಭೆಯ ಶಾಲೆಯಿಂದ ಹೊರ ಬಂದರು. ಆ ವಿದ್ಯಾರ್ಥಿಗಳ ಶಿಕ್ಷಣಕ್ಕಾಗಿ ರಾಷ್ಟ್ರೀಯ ಶಾಲೆ ಪ್ರಾರಂಭವಾಯಿತು. ಈ ಶಾಲೆಯಲ್ಲಿ ವಕೀಲಿ ವೃತ್ತಿ ತ್ಯಜಿಸಿದ ಪುರುಷೋತ್ತಮಾಚಾರ್ಯ ರಾಯಚೂರು, ಹಣಮಂತರಾಮರಾವ್ ಗುಡಿ, ಗುರುರಾವ್ ಚಿಮ್ಮಲಗಿ, ಗೋವಿಂದಾಚಾರ್ಯ ಅಗ್ನಿಹೋತ್ರಿ ಮೊದಲಾದವರು ಸ್ವಯಂ ಪ್ರೇರಣೆಯಿಂದ ಶಿಕ್ಷಕರಾಗಿ ಮಕ್ಕಳಿಗೆ ಶಿಕ್ಷಣ ನೀಡುತ್ತಿದ್ದರು."[೩೧] ಹಾವೇರಿಯಲ್ಲಿ ಆರಂಭವಾದ ಚಳುವಳಿ ಜಿಲ್ಲೆಯ ಕಾಂಗ್ರೆಸ್ ನಾಯಕರು, ಪ್ರಮುಖ ವ್ಯಾಪಾರಿಗಳು ಮತ್ತು ವಿದ್ಯಾರ್ಥಿಗಳಿಂದ ರಾಷ್ಟ್ರೀಯ ಶಾಲೆಯ ಸ್ಥಾಪನೆಗೆ ಕಾರಣವಾಗಿ ಜಿಲ್ಲೆಯಲ್ಲಿ ಚಳುವಳಿಯನ್ನು ಮತ್ತಷ್ಟು ಪ್ರಜ್ವಲವಾಗಿ ಬೆಳೆಸಲು ಈ ಘಟನೆಗಳು ಕಾರಣವಾದವು.

ಅಸಹಕಾರ ಆಂದೋಲನದ ಸಮಯದಲ್ಲಿ ಹಾನಗಲ್ಲು ಭಾಗದಲ್ಲಿ ಯಾವುದೇ ಸಾರ್ವಜನಿಕ ಕಾರ್ಯಕ್ರಮಗಳಾದರೂ ರಾಷ್ಟ್ರೀಯ ಆಂದೋಲನದ ಬಣ್ಣವಿಲ್ಲದೇ ನಡೆಯುತ್ತಿರಲಿಲ್ಲ. ಅಲ್ಲಿಯ ರಾಷ್ಟ್ರೀಯ ಶಾಲೆಯು ಮಾದರಿ ಶಾಲೆಗಳಲ್ಲಿ ಒಂದಾಗಿತ್ತು. ಊರಲ್ಲಿ ಒಂದು ವ್ಯಾಯಾಮ ಶಾಲೆ ತೆರೆದು ಆ ಶಾಲೆಯ ಉಸ್ತುವಾರಿಯನ್ನು ಅನಂತ ಭಟ್ಟರಿಗೆ ವಹಿಸಿಕೊಡಲಾಯಿತು. ಅಲ್ಲದೆ ಖಾದಿ ಮಾರುವುದು, ಸ್ವದೇಶಿ ವಸ್ತುಗಳ ಬಳಕೆಯ ಜಾಗೃತಿ, ರಾಷ್ಟ್ರೀಯ ಶಾಲೆಯ ಆರಂಭ, ವ್ಯಾಯಾಮ ಶಾಲೆಯ ಆರಂಭ, ಗಣೇಶ ಉತ್ಸವ ಹೀಗೆ ರಾಷ್ಟ್ರೀಯತೆಯ ವಿವಿಧ ಕಾರ್ಯಗಳು ಜರುಗಿ ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸುವಲ್ಲಿ ಚಳುವಳಿಗಾರರ ಪ್ರಯತ್ನ ಪಟ್ಟ ಬಗ್ಗೆ ಆ ಭಾಗದ ಚಳುವಳಿಗಾರರಾದ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಹಾಗೂ ಗುಡ್ಡಪ್ಪ ಹರಿಜನ ಹೇಳಿಕೆಗಳು ಸ್ಪಷ್ಟಪಡಿಸುತ್ತವೆ.

ಎಲ್ಲೆಡೆ ರಾಷ್ಟ್ರೀಯ ಜಾಗೃತಿ ಮೂಡುತ್ತಿರಲು ತಾಲೂಕು ಮಟ್ಟದ ಸಮಿತಿಗಳಾದವು. "ಹಾವೇರಿಯಲ್ಲಿ ತಾಲೂಕು ಸಮಿತಿಗೆ ಶಂಕ್ರಪ್ಪ ತಾಂಡೂರು ಅಧ್ಯಕ್ಷರಾದರೆ, ಗೋವಿಂದಾಚಾರ್ಯ ಅಗ್ನಿಹೋತ್ರಿ ಕಾರ್ಯದರ್ಶಿಗಳಾದರು. ಇವರು ಹಾವೇರಿಯಲ್ಲಿ ಖಾದಿ ಭಂಡಾರವನ್ನು ನೋಡಿ

ಕೊಳ್ಳುತ್ತಿದ್ದರು. ಶಿಗ್ಗಾವಿಯಲ್ಲಿ ದಿಗಂಬರರಾವ್ ಹಳೆಪೇಟೆ, ಬಂಕಾಪುರದ ಗುಂಡೇರಾವ್ ಸವಣೂರ್, ಕ್ಯಾಲಕೊಂಡದ ತಿಪ್ಪೇರಾವ್ ಕುಲಕರಣಿ, ಶಂಕರ್ ದೀಕ್ಷಿತ್ ಮುಂತಾದವರನ್ನೊಳಗೊಂಡ ತಾಲೂಕು ಸಮಿತಿಯಾಗಿ ಅಲ್ಲಿಂದ ಮಕ್ಕಳಿಗೆ ರಾಷ್ಟ್ರೀಯ ಶಾಲೆಗಳಿಂದ ಶಿಕ್ಷಣವನ್ನು ನೀಡುತ್ತಿದ್ದರು."೨ ಗೋವಿಂದಾಚಾರ್ಯ ಅಗ್ನಿಹೋತ್ರಿಯವರು ಹೆಗಲ ಮೇಲೆ ಖಾದಿ ಬಟ್ಟೆಗಳನ್ನು ಹೊತ್ತು ಮನೆ ಮನೆಗೆ ಹೋಗಿ ಮಾರುತ್ತಿದ್ದರು. ಹುಚ್ಚರಾವ್ ಕೆರೆಮತ್ತಿಹಳ್ಳಿ ಹಾವೇರಿಯಲ್ಲಿ 'ಸ್ವದೇಶಿ ವಸ್ತ್ರ ಭಂಡಾರ'ವನ್ನು ತೆರೆದು ಅಲ್ಲಿ ದೇಶಿ ವಸ್ತುಗಳನ್ನು ಮಾರುತ್ತಿದ್ದರು. ಹಾವೇರಿಯ ಪ್ರಮುಖ ವ್ಯಾಪಾರಸ್ಥರಾದ ಶಂಕ್ರಪ್ಪ ತಾಂಡೂರ್, ಶೇಠ್ ಮುಖಿನ್‌ವಾಲ್, ಶೇಠ್ ಅಮೀನ್‌ಚಂದ್ ಕಾಂಗ್ರೆಸ್ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಆಂದೋಲನವು ಹಾವೇರಿಯಿಂದ ಕರ್ಜಗಿ, ಹೊಸರಿತ್ತಿ, ನೆಗಳೂರು, ದೇವಗಿರಿ, ಅಗಡಿ, ಗುತ್ತಲ, ಹಾಲಗಿ ಮೊದಲಾದ ಹಳ್ಳಿಗಳತ್ತ ಪಸರಿಸಿದ ಬಗ್ಗೆ ಮತ್ತು ಆ ಕಾರ್ಯದಲ್ಲಿ ಹಾವೇರಿಯ ಗಣ್ಯ ವ್ಯಾಪಾರಿಗಳು ಕೈಜೋಡಿಸಿದ ಬಗ್ಗೆ ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ನೆನಪಿಸಿಕೊಳ್ಳುತ್ತಾರೆ.

"ಎನ್.ಎಸ್. ಹರ್ಡೇಕರ್ ಸ್ಥಾಪಿಸಿದ್ದ ಹಿಂದುಸ್ಥಾನಿ ಸೇವಾದಳದಲ್ಲಿ ನಿಷ್ಠಾವಂತ ಸ್ವಯಂಸೇವಕರಾಗಿದ್ದ ಹಾವನೂರಿನ ಹನುಮಂತರಾವ್ ನಾಗಪುರದ ಧ್ವಜ ಸತ್ಯಾಗ್ರಹಕ್ಕೆ ಹೋಗಿ ಬಂದರು. ಹಾವೇರಿ ಭಾಗದಲ್ಲಿ ತಾವು ಕಂಡು ಬಂದಿದ್ದ ಸೇವಾ ಕಾರ್ಯಗಳನ್ನು ಮುಂದುವರಿಸಿದರು. ೧೯೨೩ರಲ್ಲಿ ಹಾವೇರಿಯಲ್ಲಿ ಧಾರವಾಡ ಜಿಲ್ಲಾ ಪರಿಷತ್ತು ಸಭೆ ಸೇರಿತ್ತು. ಆಗ ಖಾದಿ ಪ್ರದರ್ಶನ ಮತ್ತು ದನಗಳ(ಜಾತ್ರೆ) ಪರಿಸೆಯನ್ನು ಏರ್ಪಾಡು ಮಾಡಲಾಯಿತು. ಅದರ ಜೊತೆ ರಾಷ್ಟ್ರೀಯ ಪದ್ಯಗಳನ್ನು ಹಾಡುವ ಸ್ಪರ್ಧೆಯನ್ನು ಹಮ್ಮಿಕೊಳ್ಳಲಾಗಿತ್ತು. ಪ್ರಾಂತೀಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಚಕ್ರವರ್ತಿ ರಾಜಗೋಪಾಲಚಾರಿ, ಗಂಗಾಧರರಾವ್ ದೇಶಪಾಂಡೆ, ಸದಾಶಿವರಾವ್ ಕಾರ್ನಾಡ್, ರಂ.ರಾ. ದಿವಾಕರ, ದ.ಪ. ಕರಮಕರ, ಮಧ್ವರಾವ್ ಕಬ್ಬೂರು, ನಾರಾಯಣರಾವ್ ಜಾಲಿಹಾಳ್ ಮೊದಲಾದ ಮುಖಂಡರು ಬಂದಿದ್ದರು. ಎನ್.ಎಸ್. ಹರ್ಡೇಕರರು ತಮ್ಮ ಸ್ವಯಂಸೇವಕರೊಂದಿಗೆ ಪರಿಷತ್ತಿನ ವ್ಯವಸ್ಥೆಯನ್ನು ನೋಡಿಕೊಂಡರು. ಈ ಸಭೆಯಲ್ಲಿ ಅಹಿಂಸೆಗೆ ಹೆಚ್ಚು ಒತ್ತನ್ನು ಕೊಡಲಾಯಿತು. ಈ ಪರಿಷತ್ತಿನ ಅಧ್ಯಕ್ಷತೆಯನ್ನು ಹರ್ಡೀಕರ್ ಮಂಜಪ್ಪ ವಹಿಸಿದ್ದರು."೩ ಹೀಗೆ ಹಿಂದುಸ್ತಾನಿ ಸೇವಾದಳದ ಶಾಖೆ ಹಾವೇರಿಯಲ್ಲಿ ಪ್ರಾರಂಭವಾಗುವುದರೊಂದಿಗೆ, ಹಾವೇರಿ ಜಿಲ್ಲೆಯಲ್ಲಿಯೂ ಪರಮಣ್ಣ ಹೊಸಮನಿ, ಗೋವಿಂದಾಚಾರ್ಯ ಅಗ್ನಿಹೋತ್ರಿ, ರಮಾನಂದ ಮನ್ನಂಗಿ, ವಾಯಿ ವೆಂಕಣ್ಣ, ವೀರಪ್ಪ ಅಂಗಡಿ, ವೀರಣ್ಣ ಮಾಸೂರು ಇನ್ನೂ ಮುಂತಾದವರು ಈ ಶಾಖೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಪ್ರಮುಖ ಪಾತ್ರವಹಿಸಿದ್ದು ಅಷ್ಟೆ ಅಲ್ಲ, ನಂತರದಲ್ಲಿ ರಾಷ್ಟ್ರಮಟ್ಟದ ಗಮನಸೆಳೆಯುವಲ್ಲಿ ಈ ಶಾಖೆ ಮತ್ತು ಅದರ ಸ್ವಯಂಸೇವಕರು ರಾತ್ರಿಯನ್ನು ಹಗಲು ಮಾಡಿಕೊಂಡು ದುಡಿದರು.

ಧಾರವಾಡ ಜಿಲ್ಲಾ ಪರಿಷತ್ತಿಗೆ ಹಾವೇರಿ ತಾಲೂಕಿನ ಪ್ರಮುಖರಾಗಿದ್ದ ಪುರುಷೋತ್ತಮಾಚಾರ್ಯ ಗುಡಿ ಸ್ವಾಗತಾಧ್ಯಕ್ಷರಾಗಿದ್ದರು. ಹಾವೇರಿ ತಾಲೂಕಿನ ಪ್ರಮುಖರಾಗಿದ್ದ ಸಿದ್ದಪ್ಪ

ಹೊಸಮನಿ, ಹುಚ್ಚುರಾವ್ ಕೆರೆಮತ್ತಿಹಳ್ಳಿ, ಶಿವಮೂರ್ತಿಸ್ವಾಮಿ ಹಿರೇಮಠ ಮತ್ತು ಶ್ರೀಪಾದರಾವ್ ಕರಿಗುದರಿ ಪರಿಷತ್ತಿನ ಕಾರ್ಯದರ್ಶಿಗಳಾಗಿದ್ದರು. ಪ್ರಸಿದ್ಧ ವ್ಯಾಪಾರಿಗಳಾಗಿದ್ದ ಗುರುಬಸಪ್ಪ ಮೂಗಾವಿ, ತಂಡೂರ ಶಂಕರಪ್ಪ, ಹಾಲಯ್ಯಗೋಳ ಬಸಪ್ಪನವರು, ಶೇಠ್ ಮುಖನವಾಲ್, ಶೇಠ್ ಅಮಿನಚಂದ ಸ್ವಾಗತ ಸಮಿತಿಯ ಸದಸ್ಯರಾಗಿದ್ದರು. ಈ ಪರಿಷತ್ತಿಗೆ ಹೊಸರಿತ್ತಿಯ ಗುದ್ಲೆಪ್ಪ ಹಳ್ಳಿಕೇರಿ, ಕರ್ಜಗಿಯ ಪರಮಣ್ಣ ಹೊಸಮನಿ ಹಾಗೂ ಜಿಲ್ಲೆಯ ಅನೇಕರು ಕಾರ್ಯಕರ್ತರು ಆಗಮಿಸಿದ್ದರು. ಈ ಪರಿಷತ್ತಿನ ಫಲಶ್ರುತಿಯಿಂದ ಅಹಿಂಸೆ, ಪರದೇಶಿ ವಸ್ತುಗಳ ಬಹಿಷ್ಕಾರ, ಅಸಹಕಾರ ಚಳುವಳಿಯನ್ನು ಬೆಂಬಲಿಸುವುದು ಮೊದಲಾದ ರಚನಾತ್ಮಕ ಕಾರ್ಯಕ್ರಮಗಳನ್ನು ಮಾಡುವುದರಿಂದ ಜನರ ಗಮನವನ್ನು ಸೆಳೆದರು. ಈ ಪರಿಷತ್ತಿನಿಂದ ಪ್ರಭಾವಿತರಾಗಿ ಸಾವಿರಾರು ಜನರು ಹಾವೇರಿ ಭಾಗದಲ್ಲಿ ಕಾಂಗ್ರೆಸ್ ಸೇರಿರುವುದನ್ನು ಗುರುತಿಸಲಾಗಿದೆ.

"ಸೈಮನ್ ಕಮೀಶನ್ ಭಾರತಕ್ಕೆ ಭೇಟಿ ಕೊಟ್ಟಾಗ ಅದನ್ನು ವಿರೋಧಿಸಿ ಬಹಿಷ್ಕರಿಸಲು ಹಾವೇರಿಯ ಜಿಲ್ಲೆಯ ವಿವಿಧ ಭಾಗಗಳಲ್ಲಿ ಹತ್ತಾರು ಸಾರ್ವಜನಿಕ ಸಭೆಗಳು ನಡೆದವು. ಹಾವೇರಿಯಲ್ಲಿ ಸೈಮನ್ ಮೂರ್ತಿಯನ್ನು ಮಾಡಿ ನಗರದ ತುಂಬಾ ಮೆರವಣಿಗೆ ಮಾಡಿ ನಗರದ ಮಧ್ಯ ಸುಡುತ್ತಿರುವಾಗ ಪೊಲೀಸರು ಜನರನ್ನು ಚದುರಿಸಲು ಬೆತ್ತ ಪ್ರಹಾರ ಮಾಡಿದರು. ಹಲವರಿಗೆ ಗಾಯಗಳಾದವು. ಪೊಲೀಸರು ಹೊಡೆಯುತ್ತಿದ್ದರೆ ಜನರು ಚದುರಲಿಲ್ಲ, ಸಿದ್ದಪ್ಪ ಹೊಸಮನಿ ಮತ್ತು ವೆಂಕಟೇಶ ಚವಟಿ ಭಾಷಣ ಮಾಡಿ ಜನರು ಶಾಂತ ರೀತಿಯಿಂದ ವರ್ತಿಸಬೇಕೆಂದು ಕೇಳಿಕೊಂಡರು. ಇದೇ ರೀತಿ ಸೈಮನ್‌ರನ್ನು ವಿರೋಧಿಸಿ ಹೊಸರಿತ್ತಿ, ಗುತ್ತಲ, ಅಗಡಿ, ದೇವಗಿರಿ ಮುಂತಾದ ಕಡೆ ಸಭೆಗಳು ನಡೆದವು."[೩೪] ರಾಷ್ಟ್ರಮಟ್ಟದಲ್ಲಿ ಸೈಮನ್ ಗೋಬ್ಯಾಕ್ ಎಂಬ ಧ್ವನಿ ಜಿಲ್ಲೆಯಲ್ಲಿ ಪ್ರತಿಧ್ವನಿಸಿದ್ದು ಕೂಡ ಕ್ರಾಂತಿಕಾರಕ ಚಟುವಟಿಕೆಯಲ್ಲಿ ಒಂದಾಗಿರುವುದನ್ನು ಗುರುತಿಸಲಾಗಿದೆ.

ಅಸಹಕಾರ ಚಳುವಳಿ ಎಷ್ಟು ಆಕರ್ಷಿಸಿತ್ತೆಂದರೆ "ಹಿಂದು-ಮುಸ್ಲಿಮರು ಸೇರಿ ನಡೆಸಿದ ಖಿಲಾಫತ್ ಚಳುವಳಿಯ ನಾಣ್ಯದ ಇನ್ನೊಂದು ಮುಖದಂತೆ ಇದ್ದು, ಸರಕಾರ ಇದನ್ನು ಹತ್ತಿಕ್ಕಲು ತನ್ನೆಲ್ಲ ಶಕ್ತಿಯನ್ನು ಬಳಸುತ್ತಿತ್ತು. ದೇಶದ ಪ್ರಮುಖ ಊರುಗಳಲ್ಲಿ ಸರಕಾರ ಕಲಂ ೧೦೮ ಮತ್ತು ೧೪೪ ಜಾರಿಗೊಳಿಸಿದರೂ ಚಳುವಳಿ ನಡೆಯುತ್ತಲೇಯಿತ್ತು."[೩೫] ಧಾರವಾಡದಲ್ಲಿ ನಡೆದ ಗೋಲಿಬಾರ್ ಘಟನೆಯಿಂದ ಜಿಲ್ಲೆಯಲ್ಲಿ ಚಳುವಳಿಯ ಕಿಚ್ಚು ಹೆಚ್ಚಿತು.

ಅಸಹಕಾರ ಚಳುವಳಿ ದಿನೇ ದಿನೇ ಉಗ್ರ ಸ್ವರೂಪ ತಾಳಿತು, "೧೯೨೧ರಲ್ಲಿ ಮುಂಬೈಯಲ್ಲಿ, ೧೯೨೩ರಲ್ಲಿ ಮದ್ರಾಸ್‌ನಲ್ಲಿ ಹಲವು ಉಗ್ರ ಘಟನೆಗಳು ಘಟಿಸಿದವು. ಈ ರೀತಿ ಅಸಹಕಾರ ಚಳುವಳಿ ಹಿಂಸಾರೂಪಕ್ಕೆ ಹೋಗುತ್ತಿರುವುದನ್ನು ಗಮನಿಸಿದ ಗಾಂಧೀಜಿ ಯೋಚಿಸಿ ಜನರು ಅಹಿಂಸೆಯ ಅರ್ಥವನ್ನು ಅರಿತುಕೊಂಡು ಶಾಂತ ರೀತಿಯಲ್ಲಿ ಚಳುವಳಿ ಮಾಡುವ ಪ್ರಜ್ಞೆ ಬೆಳೆಸಿಕೊಳ್ಳುವವರೆಗೂ ಅಸಹಕಾರ ಚಳುವಳಿಯನ್ನು ಸ್ಥಗಿತಗೊಳಿಸುವುದಾಗಿ ಪ್ರಕಟಿಸಿದರು."[೩೬]

ಅಂದರೆ, ಹಿಂಸಾರೂಪ ಸಹಿಸದ ಗಾಂಧೀಜಿ ಹಿಂಸೆಯನ್ನು ತಡೆಯಲು ಈ ಕ್ರಮ ಕೈಗೊಂಡಿದ್ದು ವಿಶೇಷ.

ಆದರೆ ಅಸಹಕಾರ ಚಳುವಳಿಯಲ್ಲಿ ಹಾವೇರಿ ಜಿಲ್ಲೆಯ ಚಳುವಳಿಕಾರರು ಯಶಸ್ವಿಯಾಗಿ ವಿವಿಧ ರೀತಿಯ ಕಾರ್ಯಕ್ರಮಗಳಿಂದ ಜನಮನ ಗೆದ್ದು ಜಾಗೃತಿ ಮೂಡಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಅಸಹಕಾರ ಚಳುವಳಿ ಜಿಲ್ಲೆಯ ವಿವಿಧ ಭಾಗಗಳಲ್ಲಿ ಅಹಿಂಸೆಯಿಂದ ನಡೆದು ರಾಷ್ಟ್ರೀಯ ಅಸಹಕಾರ ಚಳುವಳಿಯಲ್ಲಿ ಜಿಲ್ಲೆ ಪ್ರಮುಖ ಪಾತ್ರವಹಿಸಿದ್ದು, ಅಲ್ಲದೆ ಹಿಂಸಾರೂಪದ ಘಟನೆಗಳು ನಡೆಯದೇ ಮುಂದಿನ ಚಳುವಳಿಗೆ ಎದುರು ನೋಡುವಂತೆ ಮಾಡಿದ್ದು ಜನರ ತಾಳ್ಮೆಯು ಕ್ರಾಂತಿಕಾರಕ ಬದಲಾವಣೆಗೆ ಪ್ರೇರಕವಾಯಿತು.

"ಅಸಹಕಾರ ಚಳುವಳಿ ರಾಷ್ಟ್ರಮಟ್ಟದಲ್ಲಿ ಪ್ರಥಮ ಜನಾಂದೋಲನ ಕ್ರಾಂತಿಗೆ ಕಾರಣವಾದ ಈ ಚಳುವಳಿ ಅದು ಜಾತಿ ಮತ ಭೇದವಿಲ್ಲದೆ ಎಲ್ಲ ವರ್ಗಗಳನ್ನು ಸೆಳೆಯಿತು. ವಿದೇಶಿ ವಸ್ತುಗಳ ಬಹಿಷ್ಕಾರ, ದೇಶಿಯ ಕೈಗಾರಿಕೆಗಳ ರಕ್ಷಣೆ, ಖಾದಿ, ಚರಕ, ಸತ್ಯ, ಅಹಿಂಸೆ ತತ್ವಗಳನ್ನು ಜನಪ್ರಿಯಗೊಳಿಸಿತು. ದೇಶದ ಮೂಲೆಮೂಲೆಗೂ ರಾಷ್ಟ್ರೀಯ ಪ್ರಜ್ಞೆ ಮೂಡಿಸಿತು."[೩೭] ಈ ಚಳುವಳಿಯ ಮೂಲ ಆಶಯದಂತೆ ಜಿಲ್ಲೆಯಲ್ಲಿ ಸ್ವಾತಂತ್ರ್ಯಕ್ಕಾಗಿ ಸರ್ವತ್ಯಾಗಕ್ಕೂ ಸಿದ್ಧರಾಗುವಂತೆ ಮಾಡಿತು. ರಾಷ್ಟ್ರೀಯ ಜಾಗೃತಿಗಾಗಿ ರಾಷ್ಟ್ರೀಯ ಶಾಲೆಗಳು, ಸಂಘಟನೆಗಳು ಹಾಗೂ ಆಶ್ರಮಗಳು ಸ್ಥಾಪನೆಯಾಗಿರುವುದನ್ನು ಗುರುತಿಸಲಾಗಿದೆ.

ವೃತ್ತಿಗಳನ್ನು ತ್ಯಜಿಸಿದವರು, ಶಾಲೆ-ಕಾಲೇಜುಗಳನ್ನು ಬಹಿಷ್ಕರಿಸಿದ ವಿದ್ಯಾರ್ಥಿಗಳು ಹೋರಾಟಕ್ಕೆ ತೊಡಗಿದ್ದರಿಂದ ಚಳುವಳಿಯ ಸ್ವರೂಪವೇ ಬದಲಾಗಿ, ಚಳುವಳಿಗೆ ಹೊಸ ಉತ್ಸಾಹ, ಚೈತನ್ಯಗಳು ಬಂದವು. ಸರಕಾರದ ಧಮನಕಾರಿ ನೀತಿಯನ್ನು ಅನುಸರಿದರೂ ಜನರು ಬೀದಿಗಿಳಿದದ್ದು ಜನರ ರಾಷ್ಟ್ರೀಯ ಮನೋಸ್ಥಿತಿ ಹೆಚ್ಚಾಗಿದ್ದು ಆ ಚಳುವಳಿಯ ಮುಖಾಂತರ ದೀರ್ಘ ಕಾಲದವರೆಗೂ ಜನರು ಹೋರಾಡುವಂತಾಯಿತು. ಹಾವೇರಿ ಜಿಲ್ಲೆಯಲ್ಲಿಯ ಚಳುವಳಿಗಳು ಕೇವಲ ಚಳುವಳಿಗಾರರಿಗೆ ಸೀಮಿತವಾಗಿರದೇ, ಈ ಚಳುವಳಿಯಲ್ಲಿ ಸಾಮಾನ್ಯ, ಮಧ್ಯಮ ವರ್ಗದ ಜನರು ಭಾಗವಹಿಸಿ ಅಸಹಕಾರ ಚಳುವಳಿ ಯಶಸ್ವಿಯಾಗಲು ಕಾರಣರಾಗಿರುವುದು.

ಸ್ವಾತಂತ್ರ್ಯ ಹೋರಾಟವು ಮೊದಲ ಬಾರಿಗೆ ರಾಷ್ಟ್ರೀಯ ಹೋರಾಟವಾಗಿ ಈ ಚಳುವಳಿಯ ಮೂಲಕ ಬದಲಾವಣೆಗೊಂಡಿತು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಈ ಚಳುವಳಿಯ ಮೂಲಕ ಸಮಾವೇಶದ ಹಂತ ಬಿಟ್ಟು, ಚಳುವಳಿಯ ಹಂತ ತಲುಪಿದ್ದನ್ನು ಕಾಣುತ್ತೇವೆ."[೩೮] ಜಿಲ್ಲೆಯಲ್ಲಿ ಕಾಂಗ್ರೆಸ್ ಚಳುವಳಿ ಪೂರ್ವದಲ್ಲಿ ಅಷ್ಟೊಂದು ವ್ಯಾಪಕವಾಗಿರಲಿಲ್ಲ ಎಂಬುದನ್ನು ಒಪ್ಪಬಹುದಾದರೂ, ನಂತರದಲ್ಲಿ ಅದು ಜಿಲ್ಲೆಯ ಹಳ್ಳಿಗಳ ಮಟ್ಟಕ್ಕೆ ವ್ಯಾಪಿಸಲು ಜಿಲ್ಲೆಯ ನಾಯಕರು ಹತ್ತುಹಲವು ಕಾರ್ಯಕ್ರಮಗಳ ಮೂಲಕ ಜನಸಾಮಾನ್ಯರಿಗೆ ರಾಷ್ಟ್ರೀಯ ಹೋರಾಟದ ಉದ್ದೇಶಗಳನ್ನು ತಿಳಿಸುವುದರೊಂದಿಗೆ ಜನಸಾಮಾನ್ಯರ ಪ್ರೀತಿವಿಶ್ವಾಸ ಗಳಿಸುವುದರೊಂದಿಗೆ ಈ

ಚಳುವಳಿಯನ್ನು ಗ್ರಾಮೀಣ ಮಟ್ಟಕ್ಕೆ ಮುಟ್ಟಿಸುವಲ್ಲಿ ಜಿಲ್ಲೆಯ ಚಳುವಳಿಯ ನಾಯಕರು ನಿರ್ವಹಿಸಿದ ಪಾತ್ರವನ್ನು ಗುರುತಿಸಲಾಗಿದೆ.

**೪.೫. ಸ್ವದೇಶಿ ಚಳುವಳಿ**

ಬಂಗಾಳ ವಿಭಜನೆಯ ನಂತರ ನಡೆದ ಚಳುವಳಿಯಲ್ಲಿ ಬಂದ ಅಭಿಪ್ರಾಯವೆಂದರೆ, ಕೇವಲ ಪ್ರತಿಭಟನೆಗಳು, ಸಾರ್ವಜನಿಕ ಸಭೆಗಳು ಮತ್ತು ನಿರ್ಣಯಗಳು ಇವು ಆಳುವವರ ಮೇಲೆ ಯಾವ ಪರಿಣಾಮ ಬೀರಲಾರವು ಎಂದು ಬಂಗಾಳದ ನಾಯಕರುಗಳು ಭಾವಿಸಲಾರಂಭಿಸಿದರು. "ಜನರ ಭಾವತೀವ್ರತೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ವ್ಯಕ್ತಪಡಿಸುವ ಮತ್ತು ಪ್ರದರ್ಶಿಸುವ ಒಂದು ಕಾರ್ಯಕ್ರಮದ ಅವಶ್ಯಕತೆ ಇತ್ತು. ಇದಕ್ಕೆ ಉತ್ತರವೇ ಸ್ವದೇಶಿ ಚಳುವಳಿ. ಬಂಗಾಳ ಅಷ್ಟೇ ಅಲ್ಲ ಭಾರತದ ಎಲ್ಲ ಕಡೆಗಳಲ್ಲಿಯೂ ಸ್ವದೇಶಿ ವಸ್ತುಗಳ ಬಳಕೆ ಮತ್ತು ಬ್ರಿಟಿಷ್ ಸರಕುಗಳ ಬಹಿಷ್ಕಾರವನ್ನು ಘೋಷಿಸುವ ಪ್ರತಿಜ್ಞೆಯೊಡನೆ ಸಾರ್ವಜನಿಕ ಸಭೆಗಳನ್ನು ನಡೆಸಲಾಯಿತು. ಈ ಚಳುವಳಿಯ ಮುಖ್ಯ ವಿಚಾರವೆಂದರೆ ಸ್ವಾವಲಂಬನೆ ಅಥವಾ ಆತ್ಮಸಾಕ್ಷಿಗೆ ನೀಡಲಾದ ಪ್ರಾಧಾನ್ಯತೆ, ಸ್ವಾವಲಂಬನೆ ಎಂದರೆ, ರಾಷ್ಟ್ರೀಯ ಪ್ರತಿಷ್ಠೆ, ಗೌರವ ಮತ್ತು ಆತ್ಮವಿಶ್ವಾಸವನ್ನು ಪ್ರತಿಷ್ಠಾಪನೆ ಮಾಡಿಕೊಳ್ಳುವುದೇ ಆಗಿತ್ತು. ಅನೇಕ ಬಟ್ಟೆ ಗಿರಣಿಗಳು, ಸಾಬೂನು ಮತ್ತು ಬೆಂಕಿಕಡ್ಡಿ ಕಾರ್ಖಾನೆಗಳು, ಕೈಮಗ್ಗದ ನೂಲಿನ ಉದ್ಯಮಗಳು, ರಾಷ್ಟ್ರೀಯ ಬ್ಯಾಂಕುಗಳು ಮತ್ತು ವಿಮಾ ಕಂಪನಿಗಳು ಈ ಅವಧಿಯಲ್ಲಿ ಆರಂಭವಾದವು."[೩೯]

ಸ್ವದೇಶಿ ಭಾವನೆ ಆರಂಭದಲ್ಲಿ ಬರೀ ಆರ್ಥಿಕ ವ್ಯಾಪ್ತಿ ಪಡೆದಿದ್ದು ಆನಂತರದಲ್ಲಿ ವಿಶಾಲವಾದ ರಾಜಕೀಯ ತಿರುವು ಪಡೆಯಿತು. ಕೈಕಸುಬುಗಳು ಸೇರಿದ ಹಾಗೆ ಭಾರತೀಯ ಉತ್ಪನ್ನಗಳಿಗೆ ಬೆಂಬಲ ನೀಡುವುದಾಗಿತ್ತು. ಆ ಸಮಯದಲ್ಲಿ ಜನರೇ ಮುಂದೆ ಬಂದು ಪ್ರೋತ್ಸಾಹ ನೀಡಬೇಕು ಎಂದು ಪ್ರತಿಪಾದಿಸುವುದು ಸ್ವದೇಶಿ ನೀತಿಯಾಗಿತ್ತು.

ಈ ಸ್ವದೇಶಿ ಭಾವನೆಗೆ ಬಹಿಷ್ಕಾರದ ನಂಟು ಬೆಳೆದಾಗ ಅವೆರಡರ ಒಕ್ಕೂಟ ಪ್ರಬಲ ರಾಜಕೀಯ ಅಸ್ತ್ರವಾಯಿತು. ಬಹಿಷ್ಕಾರ-ಸ್ವದೇಶಿ ೧೯೪೭ರವರೆಗೆ ಸ್ವಾತಂತ್ರ್ಯ ಚಳುವಳಿಯ ಪ್ರಬಲ ಘೋಷಣೆಗಳಾಗಿ ಉಳಿದವು. "ನೀವು ಸ್ವದೇಶಿಯನ್ನು ಇಚ್ಚಿಸುವಿರಾದರೆ ವಿದೇಶಿ ವಸ್ತುಗಳನ್ನು ಬಹಿಷ್ಕರಿಸಬೇಕು. ಬಹಿಷ್ಕಾರವಿಲ್ಲದೆ ಸ್ವದೇಶಿ ಅಭಿವೃದ್ಧಿಯಾಗಲಾರದು"[೪೦] ಎಂದು ತಿಲಕರು ಸಂದೇಶ ನೀಡಿದರು(Sankar Ghose- Political Ideas and Movement in India, P-38).

ಬಂಗಾಳದಲ್ಲಿ ಆರಂಭವಾದ ಈ ಸ್ವದೇಶಿ ಚಳುವಳಿಯನ್ನು "ಸುರೇಂದ್ರನಾಥ ಬ್ಯಾನರ್ಜಿ, ಕೆ.ಕೆ.ಮಿಶ್ರಾ, ಬಿಪಿನ್ ಚಂದ್ರಪಾಲ್, ಅರವಿಂದ ಘೋಷ್, ಬಾಲಗಂಗಾಧರ ತಿಲಕರು ರಾಷ್ಟ್ರದ ಮೂಲೆಮೂಲೆಗೂ ಮುಟ್ಟಿಸಿ ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವಂತೆ ಕರೆಕೊಟ್ಟರು. ರಾಷ್ಟ್ರನಾಯಕರ ಕರೆಯಂತೆ ವಿದ್ಯಾರ್ಥಿಗಳು ಶಾಲಾ-ಕಾಲೇಜುಗಳನ್ನು ತೊರೆದು ಬೀದಿಗಿಳಿದರು. ಕಾರ್ಮಿಕರು, ಸ್ತ್ರೀಯರು, ವಕೀಲರು, ರೈತರನ್ನು ಸೇರಿಸಿಕೊಂಡು ವಿದೇಶಿ ವಸ್ತುಗಳನ್ನು ಬೀದಿ ಬೀದಿಗಳಲ್ಲಿ

ಸುಡುವುದು ಸಾಮಾನ್ಯವಾಯಿತು. ಸ್ವದೇಶಿ ವಸ್ತುಗಳ ಬಳಕೆ ಸಾಮಾನ್ಯವಾಯಿತು."[೪೧] ಲೋಕಮಾನ್ಯ ಬಾಲಗಂಗಾಧರ ತಿಲಕರು ಮುಂಬೈ ಪ್ರಾಂತದಲ್ಲಿ ಸ್ವದೇಶಿ ಚಳುವಳಿಯನ್ನು ಹರಡುವಲ್ಲಿ ವಹಿಸಿದ ಶ್ರಮದಿಂದಾಗಿ ಬೆಳಗಾವಿ ಮತ್ತು ವಿಭಜಿತ ಧಾರವಾಡ ಜಿಲ್ಲೆಗೂ ಸ್ವದೇಶಿ ಚಳುವಳಿ ಹರಡಲು ಕಾರಣವಾಯಿತು. ಇದು ಗಾಂಧೀಜಿ ಆಗಮನದ ಮೊದಲು ಕರ್ನಾಟಕದ ಬೆಳಗಾವಿದಿಂದಲೇ ಪ್ರಾರಂಭಿಸಿದ್ದು ವಿಶೇಷ.

ಗಾಂಧೀಜಿ ಬೆಳಗಾವಿ ಅಧಿವೇಶನಕ್ಕೆ ಬಂದಾಗ ಅಲ್ಲಿಯ ಹುದಲಿ ಆಶ್ರಮದಲ್ಲಿ ಜನರನ್ನು ಉದ್ದೇಶಿಸಿ "೫೦ ವರ್ಷಗಳ ಹಿಂದೆ ಹೆಂಗಸರು ಎಲ್ಲರೂ ರಾಟಿ ತಿರುಗಿಸುತ್ತಿದ್ದರು, ಕೈನೂಲಿನ ಬಟ್ಟೆ ಉಡುತ್ತಿದ್ದರು. ಎಂದು ನಾವು ಸ್ವದೇಶಿ ಧರ್ಮವನ್ನು ಕೈಬಿಟ್ಟೆವೋ ಅಂದೇ ನಮ್ಮ ಪತನ ಪ್ರಾರಂಭವಾಯಿತು. ನಾವು ಗುಲಾಮರಾದೆವು, ನೀವು ಪ್ರತಿಯೊಬ್ಬರೂ ದಿನವೂ ಒಂದು ಗಂಟೆ ನೂತು ಆ ನೂಲನ್ನು ದೇಶಕ್ಕೆ ದಾನ ಕೊಡಬೇಕು ಎಂದು ಬೇಡುತ್ತೇನೆ. ನಿಮಗೆ ಸೊಗಸಾದ ಬಟ್ಟೆ ಸಿಗಲಿಕ್ಕಿಲ್ಲ, ಆದರೆ ನೂಲಲು ಕಲಿತರೆ ಅದು ನಿಮಗೆ ಸಿಗುತ್ತದೆ. ಆದರೆ ದೇಶ ಗುಲಾಮಗಿರಿಯಲ್ಲಿರುವ ತನಕ, ಒಳ್ಳೆ ಬಟ್ಟೆಯನ್ನು ಉಡುವ ಯೋಚನೆಯನ್ನು ಮಾಡಬಾರದು, ಲೋಕಮಾನ್ಯ ತಿಲಕರು 'ಸ್ವರಾಜ್ಯ ನಮ್ಮ ಜನ್ಮ ಸಿದ್ಧ ಹಕ್ಕು' ಎಂದು ಹೇಳಿದ್ದಾರೆ. ಈ ಮಂತ್ರವನ್ನು ಜಪಿಸಲು ನಾವು ಶಾಲೆಗಾಗಲಿ, ಶಾಸನ ಸಭೆಗಾಗಲಿ ಹೋಗಬೇಕಾಗಿಲ್ಲ, ರಾಟಿ ನಮಗೆ ಬೇಕಾದ ಸ್ವರಾಜ್ಯವನ್ನು ಕೊಡುತ್ತದೆ"[೪೨] ಎಂದು ಸಾರ್ವಜನಿಕ ರನ್ನು ಉದ್ದೇಶಿಸಿ ಮಾತನಾಡಿದ್ದು ಜಿಲ್ಲೆಯ ಚಳುವಳಿಗಾರರಿಗೆ ಸ್ವದೇಶಿ ಚಳುವಳಿಯ ಬಗ್ಗೆ ಮತ್ತಷ್ಟು ಪ್ರಭಾವ ಬೀರಿರುವುದನ್ನು ಗುರುತಿಸಲಾಗಿದೆ.

ಹಾವೇರಿಯಿಂದ ೩೦ ಮೈಲಿ ದೂರದಲ್ಲಿರುವ "ರಾಣೆಬೆನ್ನೂರಲ್ಲಿ ಪರದೇಶಿ ಬಟ್ಟೆಗಳನ್ನು ಮಾರುವ ಕೆಲವು ದೊಡ್ಡ ದೊಡ್ಡ ಅಂಗಡಿಗಳಿದ್ದು, ಚೌಟಿ ವೆಂಕಣ್ಣನವರ ಮುಂದಾಳತ್ವದಲ್ಲಿ ಸುಮಾರು ೩೦ ಸ್ವಯಂಸೇವಕರು ೩ ದಿನಗಳ ಕಾಲ ರಾಣೆಬೆನ್ನೂರಿನ ಆ ಅಂಗಡಿಗಳ ಮುಂದೆ ಧರಣಿ ಸತ್ಯಾಗ್ರಹ ನಡೆಸಿದರು. ಅಲ್ಲಿಗೆ ಬರುವ ಹಲವು ಗಿರಾಕಿಗಳ(ಬಟ್ಟೆ ಕೊಳ್ಳುವವರು) ಮನವೊಲಿಸಿ, ಅವರನ್ನು ಸ್ವದೇಶಿ ಬಟ್ಟೆ ಧರಿಸುವಂತೆ ಕರೆನೀಡಿದರು. ಈ ಸ್ವದೇಶಿ ಸತ್ಯಾಗ್ರಹದಲ್ಲಿ ಚೌಟಿ ವೆಂಕಣ್ಣನವರೊಂದಿಗೆ ರಾಮಕೃಷ್ಣ ಗಣಪುಲೆ, ಬಸಪ್ಪ ಇಂಗಳಗಿ, ಶಾಂತೇಶ ಯೋಗಾನ, ವಿರುಪಾಕ್ಷಪ್ಪ ಅಂಗಡಿ ಮುಂತಾದವರಿದ್ದು ೩ ದಿನಗಳ ಕಾಲ ಈ ಸ್ವದೇಶಿ ಆಂದೋಲನ ನಡೆಸಿದರು. ಹಾವೇರಿಯಲ್ಲಿ ಮುಖನಲಾಲ್ ಗುಪ್ತ ಇವರು ರಾಷ್ಟ್ರೀಯ ಶಾಲೆಗಾಗಿ ಪ್ರತಿ ತಿಂಗಳು ತಪ್ಪದೆ ೨೦ ರೂ.ಗಳನ್ನು ಸಲ್ಲಿಸುತ್ತಿದ್ದರು. ಅಲ್ಲದೆ ಹಾವೇರಿಯಲ್ಲಿ ಚರಕ ಸಂಘ ಸ್ಥಾಪನೆಗಾಗಿ ಹಾವೇರಿಯಲ್ಲಿನ ವ್ಯಾಪಾರಿಗಳು ಸುಮಾರು ೧೫೦೦ ರೂ.ಗಳನ್ನು ಕೊಟ್ಟರು."[೪೩] ಇವೆಲ್ಲವುಗಳಿಂದ ಜಿಲ್ಲೆಯ ವ್ಯಾಪಾರಸ್ಥರು ಸ್ವದೇಶಿ ಆಂದೋಲನ ಚಳುವಳಿಗೆ ತನು ಮನ ಧನ ಅರ್ಪಿಸಿರುವುದನ್ನು ಗುರುತಿಸಲಾಗಿದೆ.

ಹಾವೇರಿಯಲ್ಲಿ ರಾಷ್ಟ್ರೀಯ ಶಾಲೆ ಆರಂಭವಾಗಿ ಪುರುಷೋತ್ತಮಾಚಾರ್ಯ ರಾಯಚೂರು, ರಾಮಾಚಾರ ಗುಡಿ, ಪಿ.ಜಿ. ಗಣಪುಲೆ, ಕೃಷ್ಣರಾವ್ ತೊರಗಲ್, ಶ್ರೀನಿವಾಸರಾವ್ ತೊರಗಲ್, ಗುರುರಾವ್ ಚಿಮ್ಮಲಗಿ ಮುಂತಾದವರು ರಾಷ್ಟ್ರೀಯ ಶಾಲೆಯ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿದ ಬಗ್ಗೆ ಹಾಗೂ ೧೯೨೪ರ ವೇಳೆಗೆ ಹಾನಗಲ್ಲಿನಲ್ಲಿ ಆರ್.ವಿ. ಕರಗುದರಿ ಎಂಬುವರು 'ಗಾಂಧೀ ಸೇವಾ ಸಂಘ'ದ ವತಿಯಿಂದ ಹಾನಗಲ್ಲು ಭಾಗದಲ್ಲಿ ಹಳ್ಳಿ ಹಳ್ಳಿಗಳಲ್ಲಿ ಖಾದಿ ಮಾರುವ ಕೆಲಸ ಮಾಡುತ್ತಿದ್ದರು ಮತ್ತು ಮಲ್ಲಾರ ಭಟ್ಟ ಕಾಗಿನಲ್ಲಿ ಹೆಣ್ಣುಮಕ್ಕಳ ಶಾಲೆಯನ್ನು ರಾಷ್ಟ್ರೀಯ ಸ್ವರೂಪದಲ್ಲಿ ನಡೆಸಿದರು. ನಾಗಪುರದಲ್ಲಿ ಕಲಿಯುತ್ತಿದ್ದ ಶಾಮಾಚಾರ್ಯ ಶೇಷಾಚಾರ್ಯ ಹಾನಗಲ್ಲ ಇವರು ಕಾಲೇಜಿಗೆ ಶರಣು ಹೊಡೆದು ಹಾನಗಲ್‌ನಲ್ಲಿ ರಾಷ್ಟ್ರೀಯ ಶಾಲೆ ನಡೆಸಿದರು. ಆ ಭಾಗದ ದೇಸಾಯಿಯಾಗಿದ್ದ ನರಸಿಂಹರಾವ್ ದೇಸಾಯಿ ಇವರ ಬೆಂಬಲಕ್ಕೆ ನಿಂತದ್ದು ಅನುಕೂಲವಾಯಿತೆಂಬುದನ್ನು ಹಾನಗಲ್ಲಿನ ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಹೇಳುತ್ತಾರೆ.

ಹಾನಗಲ್‌ನಲ್ಲಿ ಮಾಮಲೇದಾರ ತಮ್ಮ ಮನೆಯಲ್ಲಿ ಕೆಲಸಕ್ಕೆ ಇದ್ದು ಚಳುವಳಿಗೆ ಭಾಗಿಯಾಗಿದ್ದ ಅನಂತ ಭಟ್ಟರಿಗೆ 'ನನ್ನ ಮನೆ ಬೇಕೋ ಇಲ್ಲಾ ಚಳುವಳಿ ಬೇಕೋ ಆಯ್ಕೆ ಮಾಡಿಕೊ' ಎಂದು ಹೇಳಿದಾಗ ಅನಂತಭಟ್ಟರು ಮಾಮಲೇದಾರರ ಮನೆ ಬಿಟ್ಟು ಪೂರ್ಣ ಪ್ರಮಾಣದ ಚಳುವಳಿಕಾರ ರಾದದ್ದು ಅವರ ರಾಷ್ಟ್ರೀಯತೆಯ ಪ್ರೇಮಕ್ಕೆ ಸಾಕ್ಷಿಯಾಗಿದೆ. ಊರ ಜನ ಅವರಿಗಾಗಿ ಒಂದು ವ್ಯಾಯಾಮ ಶಾಲೆ ಪ್ರಾರಂಭಿಸಿ ಅದರ ಉಸ್ತುವಾರಿ ವಹಿಸಿಕೊಟ್ಟ ಬಗ್ಗೆ ಹಾನಗಲ್‌ನ ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಸಂದರ್ಶನದಲ್ಲಿಯ ಹೇಳಿಕೆಯಿಂದ ತಿಳಿದುಬರುತ್ತದೆ.

**ಹೊಸರಿತ್ತಿ ಆಶ್ರಮ**

೧೯೩೪ರಲ್ಲಿ ೨೫ರಿಂದ ೩೦ ಜನ ತರುಣರು ಸೇರಿಕೊಂಡು ಹೊಸರಿತ್ತಿ ಗಾಂಧೀ ಆಶ್ರಮವನ್ನು ಸ್ಥಾಪಿಸಿಕೊಂಡು ಖಾದಿ ಗ್ರಾಮೋದ್ಯೋಗದ ಕೆಲಸ ಮಾಡುತ್ತ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವಿಧಾಯಕ ಕಾರ್ಯಗಳನ್ನು ಮಾಡುತ್ತಿದ್ದರು. ಆಶ್ರಮಕ್ಕೆ ಗುದ್ಲೆಪ್ಪ ಹಳ್ಳಿಕೇರಿ ಅಧ್ಯಕ್ಷರಾಗಿದ್ದು, ವೆಂಕಟೇಶ ಮಾಗಡಿ ಕಾರ್ಯದರ್ಶಿಗಳಾಗಿದ್ದರು. ಹೊಸರಿತ್ತಿ, ಕೊರಡೂರು, ಶಿರಮಾಪುರ, ಯಲಗಚ್ಚು, ನೆಗಳೂರು, ಹಾಲಗಿ ಮುಂತಾದ ಗ್ರಾಮಗಳಲ್ಲಿ ಖಾದಿ ಕಾರ್ಯ ಮಾಡಲಾಗುತ್ತಿತ್ತು. ಸುಮಾರು ೨೫೦ ಕುಟುಂಬಗಳು ಖಾದಿ ಗ್ರಾಮೋದ್ಯೋಗವನ್ನೇ ಆಧರಿಸಿ ಸ್ವಾವಲಂಬನೆ ಜೀವನ ನಡೆಸುತ್ತಿದ್ದವು. ಕೇವಲ ೧೦೦ ರಿಂದ ೧೫೦ ಜನ ಸದಸ್ಯರಿರುವ ಈ ಆಶ್ರಮದ ಸದಸ್ಯರಗಳೆಂದರೆ ಆ ಭಾಗದಲ್ಲಿ ಗೌರವವಿತ್ತೆಂದು ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕಂಗಿ ಹೇಳಿಕೆಯಿಂದ ತಿಳಿಯುತ್ತದೆ.

"ವೆಂಕಟೇಶ ಮಾಗಡಿ ಸಾಗರದ ಶೇಗಾಂವ್‌ಗೆ ಹೋಗಿ ಕಾರ್ಡಿಂಗ್ ಮಸೀನ್-ದಾರ ತಯಾರಿಸುವುದನ್ನು ಕಲಿತು ಹೊಸರಿತ್ತಿಯ ಆಶ್ರಮದಲ್ಲಿ ಅವುಗಳ ಪ್ರಾಯೋಗಗಳನ್ನು ಮಾಡಿದರು.

ಅಲ್ಲದೆ ಆಶ್ರಮದಲ್ಲಿ ಮಗ್ಗ ನೇಯುವುದಕ್ಕಾಗಿ ಶಾಲೆಯನ್ನು ಪ್ರಾರಂಭಿಸಿ ತರಬೇತಿ ಕೊಡುತ್ತಿದ್ದರು. ಗುತ್ತಲದ ದತ್ತಾತ್ರೇಯ ವೆಂಕಟೇಶ ನಾಡಗೇರ ಇವರು 'ಗ್ರಾಮ ಸಂಘಟನಾ ಮಂಡಲ' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮುಖಾಂತರ ವಿವಿಧ ರಾಷ್ಟ್ರೀಯ ಕಾರ್ಯಗಳನ್ನು ಮಾಡುತ್ತಿದ್ದರು. ಇವರ ಕಾರ್ಯಕ್ಕೆ ಹಣಮಂತ ನರಸಿಂಹ ಕರ್ಪೂರರರು ತಮ್ಮ ಮನೆಯನ್ನು ಬಿಟ್ಟುಕೊಟ್ಟಿದ್ದರು. ಈ ಮಂಡಲದಿಂದ ಸುತ್ತಮುತ್ತಲಿನ ಗ್ರಾಮಗಳಿಗೆ ವಿವಿಧ ಚಟುವಟಿಕೆಗಳಿಂದ ಜಾಗೃತಿಕಾರ್ಯ ಹಾಗೂ ರಾಷ್ಟ್ರೀಯ ಭಾವನೆ ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿದ ಇವರು ಹುಬ್ಬಳ್ಳಿಯಿಂದ ಖಾದಿ ಬಟ್ಟೆಗಳನ್ನು ತಂದು ಈ ಸುತ್ತಲು ಗ್ರಾಮಗಳಿಗೆ ತಲೆಮೇಲೆ ಹೊತ್ತು ಮಾರುತ್ತಿದ್ದರು."[೪೪] ಹೀಗೆ ಸ್ವದೇಶಿ ಚಳುವಳಿಯ ಪ್ರಚಾರದ ಕಾರ್ಯ ಮಾಡುತ್ತಿದ್ದ ಬಗ್ಗೆ ತಾವು ಅದರಲ್ಲಿ ಭಾಗಿಯಾದ ವಿವರವನ್ನು ನೆಗಳೂರಿನ ಪರಮಣ್ಣ ಹರಕಂಗಿ ನೆನಪಿಸಿಕೊಳ್ಳುತ್ತಾರೆ.

ಹಾವೇರಿಯ ಗೋವಿಂದಾಚಾರ್ಯ ಅಗ್ನಿಹೋತ್ರಿ ಹಾಗೂ ಹುಚ್ಚರಾವ್ ಕೆರೆಮತ್ತಿಹಳ್ಳಿ ಇವರು ಹಾವೇರಿಯಲ್ಲಿ ಕಾಂಗ್ರೆಸ್ ಚಟುವಟಿಕೆಗಳ ಜೊತೆ ಎಣ್ಣೆ ಗಾಣಗಳು, ಕುಸಬಿ ಮತ್ತು ಶೇಂಗಾ ಹಿಂಡಿ ಎಣ್ಣೆ ತೆಗೆಯುವ ಕಾರ್ಯಗಳು ಪ್ರಾರಂಭವಾಗಲು ಪ್ರೇರಣೆ ನೀಡಿದ ಬಗ್ಗೆ ಹಾವೇರಿಯ ಚಳುವಳಿಗಾರರ ಹೇಳಿಕೆಗಳಿಂದ ತಿಳಿಯಬಹುದು.

ನಂತರದಲ್ಲಿ ಹೇಮಣ್ಣ ಅಂಗಡಿ "೧೯೩೪ರಿಂದ ೧೯೩೬ರವರೆಗೆ ರಾಣೆಬೆನ್ನೂರು ತಾಲೂಕು ಸುಣಕಲ್‌ಬಿದರಿ ಗ್ರಾಮದಲ್ಲಿ ಮಾತೋಶ್ರೀ ಬಸಮ್ಮ ಕುಸುಗೂರು ಅವರ ಆಶ್ರಮದಲ್ಲಿ ಆಶ್ರಯ ಪಡೆದು ನೂಲುವುದು, ನೇಯುವುದು, ಹಿಂದಿ ಕ್ಲಾಸ್, ಲಾಠಿ ಕ್ಲಾಸ್, ಹಿಂದಿ ಪ್ರಚಾರ, ವೈದ್ಯಕೀಯ ವ್ಯವಸಾಯ ಹೀಗೆ ಮೊದಲಾದ ರಾಷ್ಟ್ರೀಯ ಸೇವಾಕಾರ್ಯ ಮಾಡಿದರು."[೪೫]

೧೯೩೭ರಲ್ಲಿ ಮೈಲಾರ ಮಹದೇವಪ್ಪ ಸ್ವತಂತ್ರವಾಗಿ ತಾನೇ ತನ್ನ ಸ್ನೇಹಿತರೊಂದಿಗೆ ಸೇರಿ ಸ್ಥಾಪಿಸಿದ್ದ "ಕೊರಡೂರು ಆಶ್ರಮದ(ಗ್ರಾಮ ಸೇವಾಶ್ರಮ)ಮುಖಾಂತರ ಖಾದಿ, ಗ್ರಾಮ ಕೈಗಾರಿಕೆ, ವ್ಯಾಯಾಮ, ಸಾಕ್ಷರತೆ, ಔಷಧೋಪಚಾರ ಮತ್ತು ಪ್ರಚಾರ ಹೀಗೆ ಆರು ವಿಭಾಗಗಳಲ್ಲಿ ಆಶ್ರಮ ಕಾರ್ಯ ಮಾಡುತ್ತಿತ್ತು. ಮುಖ್ಯವಾಗಿ ಆ ಭಾಗದ ಸುತ್ತಲಿನ ಗ್ರಾಮಗಳಾದ ಕೊರಡೂರು, ಕಿತ್ತೂರು, ಮರಡೂರು, ಬಾಲೇಹೊಸೂರು, ನೆಲೊಗಲ್ಲು, ಸೂರಣಗಿ, ಇಚ್ಚಂಗಿ, ಹಿರೇಮರಳಿಹಳ್ಳಿ, ಹಂದಿಗನೂರು, ನೆಗಳೂರು ಹೀಗೆ ಮುಂತಾದ ಹಳ್ಳಿಗಳಿಗೆ ಈ ಆಶ್ರಮದ ಕಾರ್ಯಗಳು ವ್ಯಾಪಿಸಿದ್ದವು. ಮುಖ್ಯವಾಗಿ ಹಂಜಿಹಾಕುವುದು, ನೂಲುವುದು, ಬಣ್ಣ ಹಾಕುವುದು, ಖಾದಿ ಮಾರುವುದು ಮೊದಲಾದ ಕೆಲಸಗಳನ್ನು ಆಶ್ರಮವಾಸಿಗಳೇ ಮಾಡುತ್ತಿದ್ದರು. ಪ್ರತಿಯೊಂದು ವಿಭಾಗದಲ್ಲಿಯೂ ನುರಿತ ಕೆಲಸಗಾರರಿದ್ದು, ಆಶ್ರಮದಲ್ಲಿ ಸೀರೆ, ದೋತರ, ಕೋಟಿನ ಹಾಗೂ ಶರ್ಟಿನ ಬಟ್ಟೆ, ಘಟಗಾ, ಮತ್ತು ಟವೆಲ್ಲಗಳು ಸಿದ್ಧವಾಗುತ್ತಿದ್ದವು."[೪೬] ನೂರಾರು ಹಳ್ಳಿಯ ಹೆಣ್ಣು ಮಕ್ಕಳಿಗೆ ಉಪಜೀವನದ ಮಾರ್ಗವನ್ನು ಆಶ್ರಮವು ಕಲ್ಪಿಸಿ ಸ್ವಾವಲಂಬನೆಯ ಮಾರ್ಗವನ್ನು ತೋರಿಸಿಕೊಟ್ಟ ವಿವರವನ್ನು ಕಾಣುತ್ತೇವೆ.

ಮಹದೇವಪ್ಪ ಈಗಾಗಲೇ ಗಾಂಧೀಜಿಯ ವರ್ದಾ ಆಶ್ರಮದಲ್ಲಿ ತರಬೇತಿ ಪಡೆದು ಬಂದವರಾಗಿದ್ದರಿಂದ ಸುತ್ತಮುತ್ತಲಿನ ಗ್ರಾಮಗಳಿಗೆ ತನ್ನ ಸಹಪಾಟಿಗಳ ಮೂಲಕ, ಸ್ವತಃ ತಾನೂ ಸಹ ಈ ಕಾರ್ಯದಲ್ಲಿ ತಲ್ಲೀನನಾಗಿದ್ದು, ಅದಕ್ಕಾಗಿ ಆಶ್ರಮದ ವತಿಯಿಂದಲ ಹೊಲದಲ್ಲಿ ಹತ್ತಿ ಬೆಳೆ ಬೆಳೆದು ಅದನ್ನು ನೂಲುವುದಕ್ಕೆ ಬಳಸುತ್ತಿದ್ದರು. ಹುತಾತ್ಮನಾಗುವ ಮೊದಲ ದಿನವು ಆ ಕಾರ್ಯ ಮಾಡಿದ ಬಗ್ಗೆ, ಅಂದಿನ ಅವರ ತಂಡದ ಸದಸ್ಯರಾದ ಪರಮಣ್ಣ ಹರಕಂಗಿ, ಹಾಲಯ್ಯ ಕುಲಕರ್ಣಿ, ಶ್ರೀಮತಿ ನಾಗವ್ವ ಉಂಡಿ, ದೇವೇಂದ್ರಪ್ಪ ವಿಭೂತಿ ಇವರ ಹೇಳಿಕೆಗಳು ಅಂದಿನ ಕಾರ್ಯಚಟುವಟಿಕೆ, ಸ್ವದೇಶಿ ಚಳುವಳಿಯಲ್ಲಿಯ ಶ್ರಮ ಎದ್ದುಕಾಣುವಂಥದ್ದು.

ಸ್ವದೇಶಿ ಚಳುವಳಿಯಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ ಮತ್ತೊಬ್ಬ ಜಿಲ್ಲೆಯ ಚಳುವಳಿಕಾರರೆಂದರೆ ಪಿ.ಎ.ಸವಣೂರು. ಧಾರವಾಡದಲ್ಲಿ 'ಭಾರತೀಯ ತರುಣ ಸಂಘ'ದ ಸದಸ್ಯರಲ್ಲಿ ಒಬ್ಬರು. ಇವರು ನೂಲುವುದು, ನೇಯುವುದು ಹಾಗೂ ಇತರ ವಿಧಾಯಕ ಕಾರ್ಯಗಳಲ್ಲಿ ಭಾಗವಹಿಸುತ್ತಿರುವಾಗ, "೧೯೩೦ರಲ್ಲಿ 'ಚರಕ ಸಂಘ' ಸೇರಿ ೨ ವರ್ಷ ಸೇವೆ ಸಲ್ಲಿಸಿದ ನಂತರ ಭಾರತೀಯ ತರುಣ ಸಂಘದ ಮುಖ್ಯ ಚಟುವಟಿಕೆ ಕೇಂದ್ರಗಳಲ್ಲೊಂದಾದ ಹೊಸರಿತ್ತಿ ಗಾಂಧೀ ಆಶ್ರಮದ ಚಟುವಟಿಕೆಗಳಲ್ಲಿ ಭಾಗವಹಿಸಿ ಎರಡು ಬಾರಿ ಜೈಲು ಸೇರಿದರು. ೧೯೩೪-೧೯೪೨ರವರೆಗೆ ಪಿ.ಎ. ಸವಣೂರು ಸುಮಾರು ೩೦ ಜನ ಆಶ್ರಮವಾಸಿ ಗಳೊಡನೆ ಸುತ್ತಲಿನ ೩೦ ಹಳ್ಳಿಗಳಿಗೆ ಕಾಲ್ನಡಿಗೆ ಪ್ರವಾಸದ ಮೂಲಕ ಪ್ರಭಾತಫೇರಿ, ಧ್ವಜ ವಂದನೆ, ಸಾರ್ವಜನಿಕ ಸಭೆ, ಖಾದಿ ಮಾರಾಟ ಇವುಗಳಿಂದ ಜನಜಾಗೃತಿ ಮಾಡಲಾಗುತ್ತಿತ್ತು"[೪೭] ಎಂಬ ಹೇಳಿಕೆ ಹೊಸರಿತ್ತಿ ಮತ್ತು ಕೊರಡೂರು ಎರಡು ಆಶ್ರಮಗಳು ಕಾರ್ಯಚಟುವಟಿಕೆಗಳಿಂದ ಜನರ ಗೌರವಕ್ಕೆ ಪಾತ್ರವಾಗಿದ್ದವೆಂಬುದನ್ನು ಗುರುತಿಸಲಾಗಿದೆ.

ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದ ಶಾಲೆಯಲ್ಲಿ ಪತ್ತಾರ್ ಮಾಸ್ತರ್ "೧೯೩೭ರ ವೇಳೆಯಲ್ಲಿ ಕಚವಿ ಗ್ರಾಮದಲ್ಲಿ 'ಮಹಿಳಾ ಮಂಡಳ' ಸ್ಥಾಪಿಸಿದರು. ಅದಕ್ಕೆ ಬಸವ್ವ ಅಗಸರ ಅಧ್ಯಕ್ಷೆಯಾಗಿ, ಅನ್ನಪೂರ್ಣಾದೇವಿ ಅಮರಗೋಳ ಕಾರ್ಯದರ್ಶಿಯಾಗಿ ಹಾಗೂ ೭ ಜನ ಸದಸ್ಯರಿಂದ ಕೂಡಿದ ಒಟ್ಟು ೯ ಜನ ಮಹಿಳೆಯರ ಒಂದು ಸಂಘಟನೆ ಪ್ರಾರಂಭವಾಯಿತು. ಈ ಸಂಘದ ೯ ಜನ ಮಹಿಳೆಯರು ಸಾಮಾನ್ಯ ಗೃಹಿಣಿಯರಾಗಿದ್ದರು. ಹಾಗೂ ಮಂಡಳದ ಸಭಾಸದಸ್ಯರು ಖಾದಿದಾರಿಗಳಾಗಿದ್ದಲ್ಲದೆ, ದಿನಾಲು ತಮ್ಮ ದಿನನಿತ್ಯತದ ಕೆಲಸಗಳ ನಂತರ ಒಂದೆರೆಡು ಘಂಟೆಗಳ ಕಾಲ ನೂಲುವುದನ್ನು ಮಾಡುತ್ತಿದ್ದರು."[೪೮] ಸಾಮಾನ್ಯ ಚಿಕ್ಕ ಹಳ್ಳಿಯಲ್ಲಿ ಹುಟ್ಟಿಕೊಂಡ ಇಂಥ ಸಂಘಟನೆಗಳು ಅಂದಿನ ರಾಷ್ಟ್ರೀಯತೆಯ ಪ್ರಭಾವದ ಪ್ರತೀಕವಾಗಿದೆ.

ಒಟ್ಟಾರೆ ಜಿಲ್ಲೆಯಲ್ಲಿ ಸ್ವದೇಶಿ ಚಳುವಳಿಯನ್ನು ನಾಯಕರು, ಸ್ವಯಂಸೇವಕರು ತಮ್ಮ ಕಾರ್ಯಗಳಿಂದ ಯಶಸ್ವಿಗೊಳಿಸಿದ ಬಗ್ಗೆ ಹಾಗೂ ಸ್ವತಃ ಚಳುವಳಿಯಲ್ಲಿ ಭಾಗಿಯಾದ

ಚಳುವಳಿಗಾರರು ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದರಿಂದ ಅದರ ವ್ಯಾಪ್ತಿಯನ್ನು ಗುರುತಿಲಾಗಿದೆ.

### ೪.೬. ಕರ ನಿರಾಕರಣೆ ಚಳುವಳಿ

ಭಾರತೀಯ ಸ್ವಾತಂತ್ರ್ಯ ಚಳುವಳಿಗಳಲ್ಲಿ ಪ್ರಮುಖವಾದ ಚಳುವಳಿಯೆಂದರೆ ಕರ ನಿರಾಕರಣೆ ಚಳುವಳಿ. ಈ ಚಳುವಳಿಯ ಹಿನ್ನೆಲೆಯನ್ನು ಗಮನಿಸುವುದಾದರೆ– "ಗುಜರಾತಿನ ಬಾರ್ಡೋಲಿಯಲ್ಲಿ ದೊಡ್ಡ ಪ್ರಮಾಣದ ರೈತ ಸಂಘಟನೆಯಾಗಿ ಸರಕಾರ ಶೇ. ೩೦ಕ್ಕೆ ಕಂದಾಯ ಹೆಚ್ಚಿಸಿದಾಗ, ಅಲ್ಲಿಯ ರೈತರೆಲ್ಲ ಸೇರಿ ಕಂದಾಯ ಕೊಡಬಾರದೆಂದು ನಿಶ್ಚಯಿಸಿದರು. ವಲ್ಲಭಭಾಯಿ ಪಟೇಲರು ಆ ರೈತರ ಸಂಘಟನೆಯ ಪ್ರಮುಖ ರೂವಾರಿಯಾಗಿದ್ದರು. ಅಲ್ಲಿಯ ರೈತ ಸಂಘಟನೆ ಎಷ್ಟು ಪರಿಣಾಮಕಾರಿಯಾಗಿತ್ತೆಂದರೆ ಶೇ. ೩೦ರಷ್ಟು ಹೆಚ್ಚಿಸಿದ ಕಂದಾಯ ನಂತರದಲ್ಲಿ ಸರಕಾರ ಶೇ. ೬.೨೫ಕ್ಕೆ ನಿಗದಿಪಡಿಸಿತು."[೪೯] ಈ ಚಳುವಳಿ ದೇಶದ ಉಳಿದ ಭಾಗಗಳಿಗೆ ಪ್ರಭಾವವನ್ನು ಬೀರಿದಂತೆ ಹಾವೇರಿ ಜಿಲ್ಲೆಯ ಹಿರೇಕೆರೂರು ಭಾಗದಲ್ಲೂ ಉಂಟಾಯಿತ್ತು. ಹಾಗೆಯೇ ಅದರ ಪ್ರತಿಧ್ವನಿ ರಾಷ್ಟ್ರಮಟ್ಟದಲ್ಲಿ ಗಮನ ಸೆಳೆಯುವಂತೆ ಮಾಡಿತು.

೧೯೩೦-೩೨ ಮತ್ತು ೩೪ರಲ್ಲಿ ಉತ್ತರ ಕನ್ನಡ ಮತ್ತು ಹಾವೇರಿ ಜಿಲ್ಲೆಯ ಹಿರೇಕೆರೂರಲ್ಲಿ ರೈತರು ನಡೆಸಿದ ಕರ ನಿರಾಕರಣ ಆಂದೋಲನ ಮೇಲ್ಕಂಡ ಅಸಹಕಾರ ಚಳುವಳಿಯಲ್ಲಿಯೇ ಅಂಕುರಾರ್ಪಣವಾಯಿತೆಂದು ಹೇಳಬಹುದು.

"ಗುಜರಾತಿನ ಬಾರ್ಡೋಲಿಯಲ್ಲಿ ಯಶಸ್ವಿಯಾಗಿ ನಡೆದಿದ್ದ ಕರ ನಿರಾಕರಣ ಚಳುವಳಿ ಬಗ್ಗೆ ಅಧ್ಯಯನ ಮಾಡಲು ಕೆ.ಪಿ.ಸಿ.ಸಿ. ಅಧ್ಯಕ್ಷರಾದ ರಂಗನಾಥ ದಿವಾಕರರ ನಿರ್ದೇಶನದಂತೆ ವೀರನಗೌಡ ಪಾಟೀಲ ಮತ್ತು ಎಂ.ಪಿ.ಪಾಟೀಲರು ಬಾರ್ಡೋಲಿಗೆ ಹೋಗಿ ಕರ ನಿರಾಕರಣ ಚಳುವಳಿಯ ಬಗ್ಗೆ ಪೂರ್ಣ ಮಾಹಿತಿ ತಿಳಿದುಕೊಂಡು ಬಂದರು."[೫೦] ತಾವು ಯಶಸ್ವಿಯಾಗಿ ಚಳುವಳಿ ಮಾಡಬೇಕು; ಅದರಲ್ಲಿ ನ್ಯೂನತೆಗಳು ಇರಬಾರದೆಂಬ ಅಂದಿನ ನಾಯಕರುಗಳ ಮುಂದಾಲೋಚನಾ ಶಕ್ತಿಗೆ ಇದು ಸ್ಪಷ್ಟ ಸಾಕ್ಷಿಯಾಗಿದೆ.

"ಹಿರೇಕೆರೂರು ಭಾಗದಲ್ಲಿ ಕರ ನಿರಾಕರಣ ಚಳುವಳಿ ಯಶಸ್ವಿಯಾಗಲು ಟಿ.ಆರ್. ನೆಶ್ವಿಯನ್ನು ಭೇಟಿಯಾಗಿ ತಾಲೂಕಿನ ಸ್ವಾತಂತ್ರ್ಯ ಚಳುವಳಿ ಕಾರ್ಯಕರ್ತರನ್ನು ಕರೆಯಿಸಿ, ಕರ ನಿರಾಕರಣ ಚಳುವಳಿಯನ್ನು ಯಶಸ್ವಿ ಮಾಡಬೇಕೆಂದು ವೀರನಗೌಡ ಪಾಟೀಲ್ ಚರ್ಚಿಸಿದರು. ಈ ವೇಳೆಗೆ ಹಿರೇಕೆರೂರಲ್ಲಿ ಭೀಕರ ಬರಗಾಲವಿದ್ದರಿಂದ ರೈತರನ್ನು ತೆರಿಗೆಯಿಂದ ಮುಕ್ತಗೊಳಿಸಲು ಆ ಕಾರ್ಯವನ್ನು ಟಿ.ಆರ್. ನೆಶ್ವಿಗೆ ವಹಿಸಿದರು."[೫೧] ಟಿ.ಆರ್.ನೆಶ್ವಿಯೊಂದಿಗೆ ಸ್ಥಳೀಯವಾಗಿ ಹಂಸಬಾವಿ, ಚಿಕ್ಕೇರೂರು, ದೀವಿಗಿಹಳ್ಳಿ, ಹಾದ್ರಿಹಳ್ಳಿ, ಅಬ್ಬಲೂರು, ಎತ್ತಿನಹಳ್ಳಿ, ಮಾಸೂರು, ರಟ್ಟಿಹಳ್ಳಿ, ನಾಗವಂದ, ಸೂಡಂಬಿ ಮುಂತಾದ ಗ್ರಾಮಗಳ ರೈತಮುಖಂಡರು ಬೆಂಬಲಕ್ಕೆ ನಿಂತರು.

ಹಿರೇಕೆರೂರು ಭಾಗದ ಕರ ನಿರಾಕರಣ ಚಳುವಳಿಗೆ ಟಿ.ಆರ್. ನೆಶ್ವಿ ವೀರನಗೌಡ ಪಾಟೀಲ್, ಜಿ.ವಿ. ಹಳ್ಳಿಕೇರಿ ಇವರೆಲ್ಲ ಸಂಘಟನೆಯ ಸೂತ್ರದಾರರು. ಇವರೊಂದಿಗೆ ಜಿಲ್ಲಾ ಸ್ವಯಂ ಸೇವಕರು ಈ ಕಾರ್ಯದಲ್ಲಿ ಭಾಗಿಗಳಾಗಲು ಸೈಕಲ್ ಮೇಲೆ ಬಂದಿದ್ದು ವಿಶೇಷ. ಸ್ಥಳೀಯ ಮಟ್ಟದಲ್ಲಿ ಹತ್ತು ಹಲವು ಗ್ರಾಮಗಳ ಕೃಷಿ ಮುಖಂಡರಿದ್ದರೆ ಜಿಲ್ಲಾ ಚಳುವಳಿಯ ನಾಯಕರ ಸಹಾಯ-ಸಹಕಾರದ ಬಗ್ಗೆ ಚಳುವಳಿಗಾರರ ಹೇಳಿಕೆಯಿಂದ ಗುರುತಿಸಲಾಗಿದೆ.

ಸರಕಾರದವರು ರೈತರ ಆಸ್ತಿ, ದನ-ಕರುಗಳನ್ನು ಲಿಲಾವ ಮಾಡಿ ತೆರಿಗೆ ವಸೂಲಿ ಮಾಡುವುದರಲ್ಲಿದ್ದರು. ಇದಕ್ಕೆ ಪರಿಹಾರ ಕಂಡುಕೊಳ್ಳಲು ೬.೧.೧೯೩೧ರಂದು ವೀರನಗೌಡ ಪಾಟೀಲ್ ಮತ್ತು ಟಿ.ಆರ್. ನೆಶ್ವಿ ಹಂಸಬಾವಿಯಲ್ಲಿ ರೈತ ಮುಖಂಡರನ್ನು ಸೇರಿಸಿ ಸಮಾಲೋಚಿಸಿದರು. ಸರಕಾರದಿಂದಾಗುವ ತೊಂದರೆಯಿಂದ ರೈತರನ್ನು ರಕ್ಷಿಸಲು, ಆಣೆವಾರಿ ಮಾಡುವ ಮೂಲಕ ರೈತರನ್ನು ರಕ್ಷಿಸಲು ಸಾಧ್ಯವೆಂಬುದನ್ನು ನಾಯಕರು ಪರಿಹಾರವಾಗಿ ಕಂಡುಕೊಂಡರು. ಟಿ.ಆರ್. ನೆಶ್ವಿ ಚಿಕ್ಕಂದಿನಿಂದ ಕೃಷಿಕಾರ್ಯಗಳನ್ನು ಮಾಡುತ್ತಾ ಕೃಷಿ ಪದವಿ ಪಡೆದವರಾಗಿದ್ದರು. ಅವರಿಗೆ ಕೃಷಿಯ ಬಗ್ಗೆ ಆಳವಾದ ಜ್ಞಾನವಿತ್ತೆಂಬುದನ್ನು ಸಂದರ್ಶನಕ್ಕೆ ಲಭ್ಯರಾದ ಹಾಗೂ ಟಿ.ಆರ್. ನೆಶ್ವಿಯ ಒಡನಾಡಿಗಳಾದ ಸಂಶೋಧಕ ಭೋಜರಾಜ ಪಾಟೀಲ್ ತಿಳಿಸುತ್ತಾರೆ.

ರೈತರ ಹೊಲಗಳಿಗೆ ಹೋಗಿ ಆಣೆವಾರಿ ಮಾಡುವ ಕಾರ್ಯದೊಂದಿಗೆ, ಸರಕಾರದ ದಬ್ಬಾಳಿಕೆಯ ಕಂದಾಯ ಸಂಗ್ರಹ ನೀತಿಯನ್ನು ವಿರೋಧಿಸಬೇಕೆಂದು ರೈತರಿಗೆ ತಿಳಿಸುತ್ತಾ ನೀವೆಲ್ಲ ಸಂಘಟಿತರಾಗಬೇಕೆಂದು ಹೇಳುತ್ತಾ ಸರಕಾರದ ವಿರುದ್ಧ ರೈತರನ್ನು ಸಂಘಟಿಸುವ ಕಾಯಕ ಪ್ರಾರಂಭ ಮಾಡಿದರು. ಹಳ್ಳಿ ಹಳ್ಳಿಗಳಲ್ಲಿ ರೈತರ ಹೊಲಗಳಿಗೆ ಹೋಗಿ ಆಣೆವಾರಿ ಮಾಡಿದಾಗ ಎಲ್ಲ ಹಳ್ಳಿಗಳ ಆಣೆವಾರಿ ನಾಲ್ಕು ಆಣೆಗಿಂತ ಕಡಿಮೆಯಾಗುವುದೆಂದು ವೀರನಗೌಡರಿಗೆ ತಿಳಿಸಿದರೆ ಅವರು ಮೇಲಾಧಿಕಾರಿಗಳಿಗೆ ತಿಳಿಸಿದರು."[೫೨] ರೈತರು ಕಂದಾಯ ಕಟ್ಟುವ ಸ್ಥಿತಿಯಲ್ಲಿಯಿಲ್ಲ; ಆದರೆ ಅವರನ್ನು ಕರ ನಿರಾಕರಣ ಚಳುವಳಿಗೆ ಪ್ರೇರೇಪಿಸುವುದು ಹೇಗೆ? ಕಾರಣ ಆಂಗ್ಲ ಅಧಿಕಾರಿಗಳನ್ನು ಕಂಡರೆ ರೈತರು ನಡುಗುತ್ತಿದ್ದರು. ಆದರೂ ತಾಲೂಕಿನ ಹಲವು ಗ್ರಾಮಗಳಿಗೆ ಭೇಟಿನೀಡಿ ರೈತರನ್ನು ಸಂಘಟಿಸುವ ಕಾರ್ಯಮಾಡುವಲ್ಲಿ ಟಿ.ಆರ್.ನೆಶ್ವಿ ಯಶಸ್ವಿಯಾದರು.

ರೈತರನ್ನು ಸಂಘಟಿಸಲು "೨೫.೧.೧೯೩೧ರಂದು ಹಿರೇಕೆರೂರು ತಾಲೂಕಿನ ಹಂಸಬಾವಿಯಲ್ಲಿ 'ರೈತ ಪರಿಷತ್' ಸಮಾವೇಶಗೊಂಡಿತು. ಹಾವೇರಿ ಜಿಲ್ಲೆಯಲ್ಲಿಯೇ ಮೊದಲಬಾರಿಗೆ ರೈತರನ್ನು ಸಂಘಟಿಸಿ, ಒಂದು ಸಮಾವೇಶ ಮಾಡುವ ಹಂತಕ್ಕೆ ಟಿ.ಆರ್.ನೆಶ್ವಿ ಯಶಸ್ವಿಯಾದರು. ಹಂಸಬಾವಿಯಲ್ಲಿ ನಡೆದ ತಾಲೂಕಿನ ಮೊದಲ ರೈತ ಸಮಾವೇಶಕ್ಕೆ ಸುಮಾರು ೩೦೦೦ ರೈತರು ಆಗಮಿಸಿದರೆ, ಸಮಾವೇಶದ ಅಧ್ಯಕ್ಷತೆಯನ್ನು ಹುಬ್ಬಳ್ಳಿಯ ಪಾವಟೆ ವಕೀಲರು ವಹಿಸಿದ್ದರು. ಸಮ್ಮೇಳನದಲ್ಲಿ 'ಸರಕಾರ ಬರಗಾಲ ಸ್ಥಿತಿ ಅರಿತು ಕಂದಾಯ ಸೂಟ ಮಾಡಿದರೆ

ಸರಿ, ಮಾಡದಿದ್ದರೆ ಯಾರು ಎಂಥ ಪರಿಸ್ಥಿತಿಯಲ್ಲಿಯೂ ಕರ ಕಟ್ಟಬಾರದೆಂದು ನಿರ್ಣಯಿಸಿದರು' ಸಮಾವೇಶದಲ್ಲಿದ್ದ ರೈತರೆಲ್ಲರೂ ಒಕ್ಕೂರಲಿನಿಂದ ಜೈಕಾರ ಹಾಕುವುದರಿಂದ ಸಮಾವೇಶದ ನಿರ್ಣಯವನ್ನು ಬೆಂಬಲಿಸಿದರು."[೩೩]

ಬ್ರಿಟಿಷ್ ಸರಕಾರದ ವಿರುದ್ಧ ಚಳುವಳಿ ಮಾಡುವುದೆಂದರೆ ಸಾಮಾನ್ಯವಾಗಿರಲಿಲ್ಲ. ಯಾವ ಸರಕಾರವೂ ಕರ ನಿರಾಕರಣೆಯನ್ನು ಸಹಿಸುವುದಿಲ್ಲ. ಒಂದರ್ಥದಲ್ಲಿ ಅದು ಸರ್ಕಾರವೇ ಇಲ್ಲವೆಂಬುದರ ಸಂಕೇತ. ಅದಕ್ಕೆ ರೈತರು ಸಿದ್ಧರಾದದ್ದು ಆಶ್ಚರ್ಯವಾದುದು. ಬಹುಶಃ ಹಾವೇರಿ ಜಿಲ್ಲೆಯಲ್ಲಿಯೇ ಮೊದಲ ಬಾರಿಗೆ ಎನ್ನುವಂತೆ ಒಂದು ರೈತ ಸಂಘಟನೆಯನ್ನು ತಾಲೂಕು ಮಟ್ಟದಲ್ಲಿ (ಹಂಸಬಾವಿಯಲ್ಲಿ) ಸಂಘಟಿಸಿದ್ದು, ರೈತರನ್ನು ಒಂದುಗೂಡಿಸುವಲ್ಲಿ ಅವರ ಪ್ರಯತ್ನ ಅಭಿಮಾನವುಳ್ಳ ಘಟನೆಯಾಗಿರುವುದನ್ನು ಕಾಣಬಹುದು.

ಕರ ನಿರಾಕರಣ ಚಳಿವಳಿ ಹಿರೇಕೆರೂರು ತಾಲೂಕನ್ನು ಪೂರ್ಣ ಆವರಿಸಿದ್ದರಿಂದ ಸರಕಾರ ಆಣೆವಾರಿ ಮಾಡಿ ವರದಿ ಸಲ್ಲಿಸುವಂತೆ ಅಂದಿನ ಡಿ.ಡಿ.ಸಿ.ಯಾಗಿದ್ದ ವಿದ್ಯಾಶಂಕರ ಎಂಬ ಅಧಿಕಾರಿಯನ್ನು ತಾಲೂಕಿಗೆ ಕಳುಹಿಸಿಕೊಟ್ಟಿತು. ಇತ್ತ ಕೆ.ಪಿ.ಸಿ.ಸಿ. ಟಿ.ಆರ್. ನೆಶ್ವಿಯನ್ನು "ಲೀಡರ್ ಆನ್ ಸ್ಪಾಟ್" ಎಂದು ನೇಮಕ ಮಾಡಿತು. ನೆಶ್ವಿ ಮತ್ತು ವಿದ್ಯಾಶಂಕರ ಸೇರಿ ಹಳ್ಳಿಗಳಿಗೆ ಹೋಗಿ ಬೆಳೆದು ನಿಂತ ಜಮೀನಿನಲ್ಲಿಯ ಬೆಳೆಗಳನ್ನು ಕಟಾವು ಮಾಡಿಸಿ, ಬಡಿಸಿ, ತೂರಿ ಮತ್ತು ತೂಗಿ ನೋಡಲು ಆಣೆವಾರಿ ನಾಲ್ಕು ಆಣೆಗಿಂತ ಕಡಿಮೆ ಬಂದಿತು. ಈ ಪ್ರಕಾರ ೧೦ರಿಂದ ೧೫ ಹಳ್ಳಿಗಳಲ್ಲಿ ನೋಡಲಾಗಿ ಡಿ.ಡಿ.ಸಿ. ವಿದ್ಯಾಶಂಕರ ಟಿ.ಆರ್. ನೆಶ್ವಿಯ ಪ್ರಮಾಣಿಕತೆಯನ್ನು ಮೆಚ್ಚಿ ೫೦ರಿಂದ ೬೦ ಹಳ್ಳಿಗಳ ಆಣೆವಾರಿಯನ್ನು ಬರೆದುಕೊಂಡು ಸರಕಾರಕ್ಕೆ ವರದಿ ಒಪ್ಪಿಸಿದರು. ಇದರಿಂದ ಸರಕಾರಕ್ಕೆ ಒಂದು ರೀತಿಯಲ್ಲಿ ಮುಜುಗರವಾಯಿತು. ಈ ಕರ ನಿರಾಕರಣ ಚಳುವಳಿ ಎಷ್ಟು ಪ್ರಭಾವ ಬೀರಿತ್ತು, ಎಷ್ಟು ವ್ಯಾಪಕವಾಗಿತ್ತು ಎನ್ನುವುದಕ್ಕೆ ಮತ್ತೊಂದು ಘಟನೆ ರಾಜ್ಯದಲ್ಲಿ ನಡೆಯಿತು. ೨೫.೧.೧೯೩೧ರಂದು ಹಿರೇಕೆರೂರು ತಾಲೂಕಿನ ಹಂಸಬಾವಿಯಲ್ಲಿ 'ರೈತ ಪರಿಷತ್' ಸಮಾವೇಶಗೊಂಡು 'ಕರ ನೀಡುವುದಿಲ್ಲ' ಎಂಬ ರೈತರ ಕೂಗು ಅಂಕೋಲಾದಲ್ಲಿ ೨೬.೧.೧೯೩೧ ರಂದು ಕರ ನಿರಾಕರಣೆ ಘೋಷಣೆಯಾಯಿತು, ಅಂದರೆ ಈ ಚಳುವಳಿ ಪ್ರೇರಣೆಗೆ ಸಾಕ್ಷಿ ಎನ್ನಬಹುದು. ಆದರೂ ಸರಕಾರ ರೈತರಿಂದ ಕಂದಾಯ ವಸೂಲಿ ಕಾರ್ಯ ಆರಂಭಮಾಡಿತು.

ಬ್ರಿಟಿಷ್ ಸರಕಾರ ೨೫.೨.೧೯೩೧ರಿಂದ ಹಿರೇಕೆರೂರಲ್ಲಿ ಮೊದಲ ಹಂತದ ಕಂದಾಯ ವಸೂಲಿ ಪ್ರಾರಂಭಿಸಿತು. ಸರಕಾರಕ್ಕೆ ಬರಬೇಕಾಗಿದ್ದ ೧,೯೧,೦೦೦ ರೂ. ಕಂದಾಯದಲ್ಲಿ ಸತತ ೧೫ ದಿನ ಪ್ರಯತ್ನ ಮಾಡಿದರೂ ೭,೦೦೦ ರೂ. ಮಾತ್ರ ವಸೂಲಿ ಮಾಡಲು ಸಾಧ್ಯವಾಯಿತು. ಅದು ಕೂಡ ಅಧಿಕಾರಿಗಳು, ಗೌಡರು, ದೇಸಾಯಿಯರು, ಶ್ಯಾನಬೋಗರು, ಅಂಜಿ ಕೊಟ್ಟಿದ್ದರು. ಸಾಮಾನ್ಯ ರೈತರು ಕಂದಾಯ ನೀಡಲು ನಿರಾಕರಿಸಿದರು. ಸರಕಾರಕ್ಕೆ

ಇದು ಅನೀರಿಕ್ಷಿತ ಆಘಾತವನ್ನುಂಟುಮಾಡಿತು. ಏಕೆಂದರೆ ಹಿರೇಕೆರೂರು ತಾಲೂಕು ತಮ್ಮ ಸಂರಕ್ಷಿತ ಪ್ರದೇಶವೆಂದು ಈವರೆಗೂ ಸರಕಾರ ನಂಬಿಕೊಂಡಿತ್ತು. ಇಲ್ಲಿ ಮತ್ತೊಂದು ಗಮನಿಸ ಬೇಕಾದ ಅಂಶವೆಂದರೆ ಹಿರೇಕೆರೂರು ತಾಲೂಕಿನಲ್ಲಿ ಯಶಸ್ವಿ ಕರ ನಿರಾಕರಣ ಚಳುವಳಿ ಯಾಗುತ್ತಿರುವುದನ್ನು ಕಂಡು ಪ್ರೇರಣೆ ಪಡೆದ ಪಕ್ಕದ ಗ್ರಾಮ(ಹಿರೇಕೆರೂರಿಗೆ ಹೊಂದಿಕೊಂಡಿರುವ ಶಿಕಾರಿಪುರ ತಾಲೂಕಿನ) ಮಳವಳ್ಳಿ ಗ್ರಾಮದ ಮರಿಸ್ವಾಮಿ ಹಿರೇಮಠ ತಮ್ಮಲ್ಲಿಯೂ ಕರ ನಿರಾಕರಣ ಚಳುವಳಿ ನಡೆಸಲು ತಾವು ಬರಬೇಕೆಂದು ಟಿ.ಆರ್. ನೆಶ್ವಿಯನ್ನು ಕೇಳಿಕೂಂಡಿದ್ದ ಬಗ್ಗೆ ನೆಶ್ವಿಯವರ ಒಡನಾಡಿ, ಸಂಶೋಧಕ ಭೋಜರಾಜ ಪಾಟೀಲ ಹೇಳಿಕೆಯಿಂದ ಗುರುತಿಸಲಾಗಿದೆ.

ಟಿ.ಆರ್. ನೆಶ್ವಿ ಹಿರೇಕೆರೂರು ಭಾಗಕ್ಕೆ ಹಲವಾರು ಹಿರಿಯ ಚಳುವಳಿಗಾರರನ್ನು ಕರೆಯಿಸಿ ಚಳುವಳಿ ಉಗ್ರ ಸ್ವರೂಪದ ಭಾಷಣವನ್ನು ಮಾಡಿಸುತ್ತಿರುವುದನ್ನು ಕಂಡು ಅಧಿಕಾರಿಗಳು ಮೇಲಾಧಿಕಾರಿಗಳಿಗೆ ವರದಿ ಕಳುಸಿದರು. ಧಾರವಾಡ ಜಿಲ್ಲಾ ಅಸಿಸ್ಟೆಂಟ್ ಕಲೆಕ್ಟರ್ ಚೆನ್ನಮುಳಗುಂದ ಹಂಸಬಾವಿಗೆ ಬಂದು ಟಿ.ಆರ್. ನೆಶ್ವಿಯನ್ನು ಬಂಧಿಸಲು ಆದೇಶಿಸುತ್ತಾರೆ. ತಮ್ಮ ಮನೆಯಲ್ಲಿಯೇ ನೆಶ್ವಿಯನ್ನು ಬಂಧಿಸಿದಾಗ ಊರಿನಲ್ಲಿ ಮತ್ತು ಸುತ್ತಮುತ್ತಲಿನ ಗ್ರಾಮಗಳಿಂದಲೂ ಜನ ಸಾವಿರಾರು ಸಂಖ್ಯೆಯಲ್ಲಿ ಆಗಮಿಸಿ ಬಂಧಿತ ಟಿ.ಆರ್. ನೆಶ್ವಿ ಅವರನ್ನು ಮೆರವಣಿಗೆಯಲ್ಲಿ ವೀರಯೋಧನಂತೆ ಕರೆದೊಯ್ದು ಕಲೆಕ್ಟರ್ ಇರುವ ಬಂಗ್ಲೆಗೆ ಕರೆದುಕೊಂಡು ಬಂದರು. ಈ ದೃಶ್ಯ ಹಿರೇಕೆರೂರು ತಾಲೂಕಿನ ಜನಕ್ಕೆ ಚಳುವಳಿಗೆ ಧುಮುಕಲು ಮತ್ತಷ್ಟು ಪ್ರೇರಣೆಯಾದಂತಾಯಿತು."[೫೪] ಆ ಸಂದರ್ಭಕ್ಕೆ ಸಾಕ್ಷಿಯಾದ ದೀವಿಗಿಹಳ್ಳಿಯ ಹನುಮನಗೌಡ ಬಸನಗೌಡ ಕೊಡಿಗೌಡ್ರ ಹಂಸಬಾವಿಯಲ್ಲಿ ತಮ್ಮ ತಂದೆಯೊಂದಿಗೆ ತಾವು ನೋಡಿದ ಆ ಘಟನೆ ಕುರಿತು ನೆನಪಿಸುತ್ತಾರೆ.

ಹಂಸಬಾವಿಯ ಬಂಗ್ಲೆಯಲ್ಲಿ ಎದುರಿಗೆ ನಿಂತ ಟಿ.ಆರ್.ನೆಶ್ವಿಯನ್ನು ನೋಡಿದ ಕಲೆಕ್ಟರನು ಇವರನ್ನು ಬಂಧಿಸಿದರೆ ಜೈಲಿಗೆ ಹೋಗುತ್ತಾರೆ, ಚಳುವಳಿ ನಿಂತುಬಿಡುತ್ತದೆ. ಹೇಗೊ ಜನ ಜಾಮೀನಿನ ಮೇಲೆ ಬಿಡುಗಡೆ ಮಾಡಬೇಕೆಂದು ಕೇಳುತ್ತಿದ್ದಾರೆ ಎಂದು ಯೋಚಿಸಿದ. ಆ ಅಧಿಕಾರಿ ನೆಶ್ವಿಯವರನ್ನು ಹತ್ತಿರಕ್ಕೆ ಕರೆದು 'ನಿನಗೆ ಜಾಮೀನಿನ ಮೇಲೆ ಬಿಡುತ್ತೇನೆ ನೀನು ಚಳುವಳಿಯನ್ನು ರಭಸದಿಂದ ಮುಂದುವರಿಸಬೇಕು, ಈ ಕೇಸಿಗೆ ಸಂಬಂಧಿಸಿದಂತೆ ಮುದ್ದತ್ತುಗಳನ್ನು ಮುಂದೆ ಹಾಕುತ್ತ ಕಾಲವ್ಯಯ ಮಾಡುತ್ತೇನೆ. ನೀನು ನಿನ್ನ ಕಾರ್ಯ ಮಾಡು ನಿನಗೆ ಒಳ್ಳೆಯದಾಗಲಿ' ಎಂದು ಬಿಡುಗಡೆ ಮಾಡಿದನು. ಸ್ವಾತಂತ್ರ್ಯ ಚಳುವಳಿಯಲ್ಲಿ ಜಿಲ್ಲಾ ಮಟ್ಟದಲ್ಲಿ ಬೆರಳೆಣಿಕೆಯಷ್ಟು ಜನ ಮಾತ್ರ ಇಂಗ್ಲೀಷ್ ಅಧಿಕಾರಿಗಳಿದ್ದು, ಉಳಿದ ಅಧಿಕಾರಿಗಳೆಲ್ಲ ಭಾರತೀಯರೆ ಆಗಿರುತ್ತಿದ್ದರು. ಅವರೆಲ್ಲರೂ ಪ್ರಭುತ್ವದ ಪರ ಎನ್ನುವಂತಿಲ್ಲ ಎಂಬುದಕ್ಕೆ ಹಂಸಬಾವಿಯಲ್ಲಿ ನಡೆದ ಈ ಘಟನೆಯೇ ಸಾಕ್ಷಿ.

೨ನೇ ಕಂತಿನ ಕಂದಾಯ ವಸೂಲಿಯನ್ನು ೬.೩.೧೯೩೧ರಿಂದ ಪ್ರಾರಂಭಿಸಲಾಯಿತು. ತೆರಿಗೆಗಾಗಿ ರೈತರ ಮೇಲೆ ದಬ್ಬಾಳಿಕೆ ಮಾಡಿ ಹೈನು ಕರೆಯುವ ದನಗಳನ್ನು ಹಿಡಿಸಿ

ಕೊಂಡವಾಡಕ್ಕೆ ಹಾಕಿಸಿದರು. ಮೆಣಸಿನಕಾಯಿ ಅಂಡಿಗೆ ಮತ್ತು ಧಾನ್ಯದ ಚೀಲಗಳನ್ನು ಜಪ್ತಿಮಾಡಿ ಚಾವಡಿಗೆ ತಂದಿಟ್ಟರು. ಹಂಸಬಾವಿಯಲ್ಲಿ ಒಬ್ಬರ ಮನೆ ಜಪ್ತಿ ಮಾಡುವಾಗ ಆ ಮನೆಯಲ್ಲಿದ್ದ ತಿಜೋರಿಯ ಕೀ ಕೊಡದಿದ್ದಕ್ಕೆ ಆ ತಿಜೋರಿಯನ್ನು ಮನೆಯಿಂದ ಚಾವಡಿಯವರೆಗೂ ಉರುಳಿಸುತ್ತಾ ತರಲಾಯಿತು. ಇಷ್ಟಾದರೂ ಜನ ಹೆದರಿಲಿಲ್ಲ, ಕೆಲ ಹಳ್ಳಿಗಳಲ್ಲಿ ಹೆಂಗಸರೂ ಸಹ ಸರಕಾರಿ ಅಧಿಕಾರಿಗಳನ್ನು ಧಿಕ್ಕರಿಸಿ ಮಾತನಾಡುತ್ತಿದ್ದ ಬಗ್ಗೆ ಸಂಶೋಧಕ ಭೋಜರಾಜ ಪಾಟೀಲರ ಹೇಳಿಕೆಯಿಂದ, ದಾಖಲೆಗಳಿಂದ ಹಾಗೂ ಚಳುವಳಿಗಾರರ ಹೇಳಿಕೆಗಳಿಂದ ತಿಳಿದುಬರುತ್ತದೆ.

ಮಾರ್ಚ್ ೧೯೩೧ರಂದು ಹುಬ್ಬಳ್ಳಿಯಲ್ಲಿ ಕರ ನಿರಾರಣೆ ಧೋರಣೆ ಬಗೆಗೆ ಸಭೆ ನಡೆದಾಗ ಆ ಕಾಲಕ್ಕೆ ಹಿರೇಕೆರೂರಲ್ಲಿ ೧ ರೂ. ೨ ಆಣೆ ಮಾತ್ರ ವಸೂಲಾಗಿತ್ತು. ಪತ್ರಿಕೆಗಳು ಈವರೆಗಿನ ವಿಷಯ ಗಮನದಲ್ಲಿಟ್ಟುಕೊಂಡು ಹಿರೇಕೆರೂರು ತಾಲೂಕಿನಲ್ಲಿ ನಡೆದ ಕರಬಂದ ಚಳುವಳಿಗೆ 'ದಕ್ಷಿಣದ ಬಾರ್ಡೋಲಿ' ಎಂದು ಕರೆದು ಪ್ರಚಾರ ಮಾಡಿದವು. ಕರಾಚಿಯಲ್ಲಿ ಕಾಂಗ್ರೆಸ್ ಅಧಿವೇಶನದಲ್ಲಿದ್ದ ವೀರನಗೌಡ ಪಾಟೀಲ್ ಪತ್ರಿಕೆಗಳ ಮೂಲಕ ವಿಷಯ ತಿಳಿದು ಅಧಿವೇಶನ ಮುಗಿಯುತ್ತಿದ್ದಂತಿಯೇ ರಂ.ರಾ. ದಿವಾಕರರೊಂದಿಗೆ ಬೆಳಗಾವಿಗೆ ಬಂದು ಬೆಳಗಾವಿಯ ಡಿವಿಜಿನಲ್ ರೆವೆನ್ಯೂ ಅಧಿಕಾರಿಯ ಹತ್ತಿರ 'ಕರಬಂದ ಚಳುವಳಿ' ಬಗೆಗೆ ಚರ್ಚಿಸಿದರು. ಅಧಿಕಾರಿಯೊಂದಿಗೆ ಸುದೀರ್ಘ ಚರ್ಚೆ ನಡೆದು ವೀರನಗೌಡ ಪಾಟೀಲ್ ಮತ್ತು ರಂಗನಾಥ ದಿವಾಕರ ಒಂದು ಒಪ್ಪಂದಕ್ಕೆ ಸಿದ್ಧರಾದರು.

ಒಪ್ಪಂದದಂತೆ– ರೈತರು ಚಳುವಳಿ ನಿಲ್ಲಿಸಬೇಕು, ಸರಕಾರ ನೀರಸಾರಿಗೆ ಸೂಟ ಮಾಡಬೇಕು ಕಂದಾಯ ತಹಕೂಬಿನಲ್ಲಿಡಬೇಕು, ಚಳುವಳಿ ನೇತಾರ ಟಿ.ಆರ್. ನೆಶ್ವಿಯವರನ್ನು ಕೇಸುಗಳಿಂದ ಖುಲಾಸೆ ಮಾಡಬೇಕು. ಇಂಥದ್ದೊಂದು ಸರಕಾರಿ ಫರ್ಮಾನು ಹಿಡಿದುಕೊಂಡು ವೀರನಗೌಡ ಪಾಟೀಲ ಹಂಸಬಾವಿಗೆ ಬಂದರು. ೩–೪ ತಿಂಗಳಲ್ಲಿ ಚಳುವಳಿ ಇಷ್ಟೊಂದು ಉಗ್ರವಾಗಿ 'ದಕ್ಷಿಣದ ಬಾರ್ಡೋಲಿ' ಎಂದು ಹೆಸರಾಗುವಷ್ಟರಮಟ್ಟಿಗೆ ಕೊಂಡೊಯ್ದುದ್ದಕ್ಕಾಗಿ ಟಿ.ಆರ್. ನೆಶ್ವಿಯವರನ್ನು ಪಾಟೀಲರು ಅಭಿನಂದಿಸಿದರು. ಈ ಚಳುವಳಿಯಿಂದಾಗಿ ಸುಮಾರು ೪೬,೦೦೦.೦೦ ರೂ. ನೀರು ಸಾರಿಗೆ ಸೂಟ್ ಆಯಿತು. ರೈತರಿಗೆ ಲಾಭಕರವಾಗುವಂತೆ ಒಪ್ಪಂದ ಮಾಡಿಕೊಂಡು ಬಂದ ವೀರನಗೌಡ ಪಾಟೀಲರನ್ನು ರೈತರು "ಸರದಾರ"ನೆಂದು ಅಭಿಮಾನದಿಂದ ಕರೆದರು.

ಕರಬಂದ ಚಳುವಳಿಯನ್ನು ಮುನ್ನಡೆಸಿದ ಶ್ರೇಯಸ್ಸು ತಿ.ರು.ನೆಶ್ವಿ ಇವರೊಡನೆ ರಾಮಣ್ಣ ಕುಲಕರ್ಣಿ, ಸಿದ್ಧಲಿಂಗಯ್ಯಸ್ವಾಮಿ ಕಜ್ಜರಿ, ಪುಟ್ಟಣ್ಣ ಹಾದ್ರಿಹಳ್ಳಿ, ಚನ್ನಪ್ಪ ತೊಗರ್ಸಿ, ಹೇಮಣ್ಣ ಅಂಗಡಿ, ಹೊಳಬಸಪ್ಪ ಹುಚ್ಚಗೊಂಡರ, ಲಿಂಗನಗೌಡ ಪಾಟೀಲ, ಬಸನಗೌಡ ಬಸಪ್ಪನವರ, ಸಿದ್ದಲಿಂಗಪ್ಪಗೌಡ ಸೂಡಂಬಿ, ಚನ್ನಬಸಯ್ಯ ಕನ್ನಗತ್ತಿ, ಕಲ್ಲಪ್ಪ ಮೆಣಸಿನಾಳ ಮುಂತಾದವರ ಅವಿರತ ಪರಿಶ್ರಮದ ಫಲ. ಹಿರೇಕೆರೂರು ತಾಲೂಕಿನಲ್ಲಿ ಕರ ನಿರಾಕರಣ ಚಳುವಳಿ ಯಶಸ್ವಿಯಾದ ವಿಷಯವನ್ನು ಸಂಶೋಧಕ ಭೋಜರಾಜ ಪಾಟೀಲ ಟಿ.ಆರ್. ನೆಶ್ವಿ ಸಂದರ್ಶನದ ಮಾತುಗಳನ್ನು, ಘಟನೆಗಳನ್ನು ಕುರಿತು ಸಂದರ್ಶನದಲ್ಲಿ ವಿವರಿಸಿರುತ್ತಾರೆ.

ಹಿರೇಕೆರೂರು ತಾಲೂಕಿನ ಕರ ನಿರಾಕರಣ ಚಳುವಳಿ ಯಶಸ್ವಿಯಾಗಲು, ಚಳುವಳಿಯ ಕೇಂದ್ರ ಹಂಸಬಾವಿಯಾದರೂ, ಆ ಊರಲ್ಲಿ ಪಾರ್ಟಿ ಪಂಗಡಗಳು, ಜಾತಿ-ಪಂಥಗಳು, ವೈಷಮ್ಯವಿದ್ದರೂ ನಮ್ಮ ಕಾರ್ಯ ದೃಷ್ಟಿಯಿಂದ ಕೆಲಮಟ್ಟಿಗೆ ಏಕತೆ ಸಾಧ್ಯವಾಯಿತು. "೧೯೩೧ರಲ್ಲಿ ಎ.ಐ.ಸಿ.ಸಿ.ಗೆ ವೀರನಗೌಡ ಪಾಟೀಲ್ ಹಿರೇಕೆರೂರು ತಾಲೂಕಿನಲ್ಲಿ ನಡೆದ ಕರ ನಿರಾಕರಣ ಚಳುವಳಿ ಬಗ್ಗೆ ಪೂರ್ಣ ಮಾಹಿತಿ ನೀಡಿದರು."[೫೫]

"೧೯೩೭ರಲ್ಲಿ ಕಾಂಗ್ರೆಸ್ ಸರಕಾರ ಅಧಿಕಾರಕ್ಕೆ ಬಂದಾಗ ಕರ ನಿರಾಕರಣೆಯ ಚಳುವಳಿಯ ಸಂತ್ರಸ್ತರಿಗೆ ಜಮೀನುಗಳನ್ನು ತಿರುಗಿ ಒಪ್ಪಿಸಿಸಲಾಯಿತು."[೫೬] ಹಾವೇರಿ ಜಿಲ್ಲೆಯ ಕರ ನಿರಾಕರಣೆ ಚಳುವಳಿ ವಿಷಯದಲ್ಲಿ ಈ ಮೇಲಿನ ಅಂಶ ಅನ್ವಯಿಸುವುದಿಲ್ಲ. ಕಾರಣ ಆರಂಭದಲ್ಲಿ ಅಂಥ ಪ್ರಕರಣ ಸಂಭವಿಸಿದರೂ ನಂತರದಲ್ಲಿ ರೈತರು ಭೂಮಿ ಕಳೆದುಕೊಳ್ಳುವ ಪ್ರಮೇಯ ಬರಲಿಲ್ಲ. ಕಾರಣ ಈ ಚಳುವಳಿಯ ನಾಯಕರು ಸೂಕ್ಷ್ಮವಾಗಿ ರೈತರಿಗೂ ತೊಂದರೆಯಾಗದಂತೆ ಕಾರ್ಯಗಳನ್ನು ಮಾಡಿರುವುದು ಅವರ ಸಾಮಾಜಿಕ ಕಳಕಳಿಗೆ ಸಾಕ್ಷಿಯಾಗಿದೆ.

"ಗುತ್ತಲದ ದೇಶಪಾಂಡೆ ಆರ್ಥಿಕವಾಗಿ ಬಹಳ ತೊಂದರೆ ಎದುರಿಸುತ್ತಿರುವ ರೈತರಿಗೆ ಏನಾದರು ಸಹಾಯವಾಗುವಂಥದ್ದನ್ನು ಮಾಡಬೇಕೆಂದು ಯೋಚಿಸಿ. 'ಗ್ರೂಪ್ ಮಲ್ಟಿಪರ್ಪಸ್ ಸೊಸಾಯಿಟಿ'ಯನ್ನು ಪ್ರಾರಂಭಿಸಿದರು. ಆ ಸೊಸಾಯಿಟಿಯ ಸಲುವಾಗಿ ಶೇರು ಬಂಡವಾಳ ಕೂಡಿಸಲು ಕಷ್ಟವಾದಾಗ ತಮ್ಮ ಪತ್ನಿಯ ಆಭರಣಗಳನ್ನು ಮಾರಿ ೫೦೦ ಶೇರು ಕಟ್ಟಿದರು. ೧೯೩೯ರಲ್ಲಿ ರಿಜಿಸ್ಟ್ರೇಷನ್ ಮಾಡಿಸಿದರು. ಆ ಸೊಸಾಯಿಟಿ ದಿನದಿಂದ ದಿನಕ್ಕೆ ಬೆಳೆದು ೨೫ ಜನರಿಂದ ೮೦೦ ಜನ ಸದಸ್ಯರಾದರು. ಈ ಸಂಘ ಕೂಡ ರೈತರ ಕರ ನಿರಾಕರಣೆಗೆ ಸ್ಪಂದಿಸಿತು."[೫೭] ಇದು ಜಿಲ್ಲೆಯಲ್ಲಿಯ ರೈತರ ನೋವಿಗೆ ಸ್ಪಂದಿಸಿದ ಮತ್ತೊಂದು ಘಟನೆಯಾಗಿದೆ.

ಹೀಗೆ ಜಿಲ್ಲೆಯಲ್ಲಿ ಕರ ನಿರಾಕರಣ ಚಳುವಳಿ ರಾಜ್ಯ ಮತ್ತು ರಾಷ್ಟ್ರಮಟ್ಟದ ಗಮನ ಸೆಳೆದ ಬಗೆಯನ್ನು ಗುರುತಿಸಲಾಗಿದೆ. ಮುಂಬೈ ಪ್ರಾಂತದಲ್ಲಿಯೇ ವಿಶೇಷವೆನ್ನುವಂಥ ಕರ ನಿರಾಕರಣ ಚಳುವಳಿ ಹಾವೇರಿ ಜಿಲ್ಲೆಯಲ್ಲಿ ನಡೆಯುವಲ್ಲಿ ಬರಿ ಚಳುವಳಿ ನಾಯಕರು ಅಷ್ಟೇ ಅಲ್ಲ ಸಾಮಾನ್ಯ ರೈತರು ಕೂಡ ಪ್ರಭುತ್ವದ ವಿರುದ್ಧ ನಿಂತಿರುವುದು ಈ ಚಳುವಳಿಯ ಯಶಸ್ವಿಗೆ ಕಾರಣ. ಈ ಘಟನೆ ಜಿಲ್ಲೆಯ ವಿಶೇಷವೆಂದು ಗುರುತಿಸಲಾಗಿದೆ.

**೪.೭. ಉಪ್ಪಿನ ಸತ್ಯಾಗ್ರಹ ಅಥವಾ ಕಾಯ್ದೆ ಭಂಗ ಚಳುವಳಿ**

ರಾಷ್ಟ್ರೀಯ ಚಳುವಳಿಗಳಲ್ಲಿ ಮಹತ್ವವಾದ ಚಳುವಳಿ ಎಂದರೆ ಉಪ್ಪಿನ ಸತ್ಯಾಗ್ರಹ. ಇದರ ಹಿನ್ನೆಲೆಯನ್ನು ಗಮನಿಸುವುದಾದರೆ, "೧೯೩೦ರಲ್ಲಿ ಭಾರತದ ಸ್ವಾತಂತ್ರ್ಯ ಚಳುವಳಿ ಸ್ತಬ್ಧವಾಗಿತ್ತು. ಮುಂದೇನು? ಎಂಬ ಪ್ರಶ್ನೆ ಗಾಂಧೀಜಿ ಕಾಡುತ್ತಿರಲು, ಎಲ್ಲರಿಗೂ ಆಸಕ್ತಿ ತರುವ ಮತ್ತು ಎಲ್ಲರನ್ನೂ ಮುಟ್ಟುವಂತಹ ಒಂದು ಹೋರಾಟದ ವಿಷಯವನ್ನು ಅವರು ಅರಸುತ್ತಿರಲು, ಸರಕಾರ ವಿಧಿಸಿದ್ದ ಉಪ್ಪಿನ ಮೇಲಿನ ತೆರಿಗೆಯ ವಿಷಯವನ್ನೇ ತೆಗೆದುಕೊಂಡು ಸತ್ಯಾಗ್ರಹ

ಮಾಡಿದರೆ ಹೇಗೆ? ಕಾರಣ ದೇಶದ ಸಾಮಾನ್ಯ ನಾಗರಿಕನಿಗೂ ಉಪ್ಪು ಅವಶ್ಯ; ಆದರೆ ಸರಕಾರ ಈಗ ಉಪ್ಪಿನ ಮೇಲೆ ಹೆಚ್ಚು ತೆರಿಗೆ ವಿಧಿಸಿರುವನ್ನು ವಿರೋಧಿಸಿ ಚಳುವಳಿ ಮಾಡುವುದು ಎಂದು ಎಲ್ಲರಿಗೂ ತಿಳಿಸಿ ಉಪ್ಪಿನ ಮೇಲಿನ ತೆರಿಗೆ ರದ್ದತಿಗೆ ಸರಕಾರಕ್ಕೆ ಪತ್ರ ಬರೆದರು."[೫೮]

ಸರಕಾರ ಉಪ್ಪಿನ ಮೇಲೆ ಹೆಚ್ಚಿನ ತೆರಿಗೆ ವಿಧಿಸಲು ಕಾರಣ ಭಾರತದ ವಸ್ತುಗಳನ್ನು ಇಂಗ್ಲೆಂಡ್‌ಗೆ ರಫ್ತು ಮಾಡುವ ಸರಕಾರ, ಇಂಗ್ಲೆಂಡ್‌ನಿಂದ ಹಡಗುಗಳು ಖಾಲಿ ಬರಬೇಕಿತ್ತು, ಹಾಗೆ ಹಡಗುಗಳು ಖಾಲಿ ಬರುವುದು ಅಪಾಯಕಾರಿ; ಹಾಗಾಗಿ ಅಲ್ಲಿ ಸುಲಭವಾಗಿ ಸಿಗುವ ಉಪ್ಪನ್ನು ಭಾರತಕ್ಕೆ ಕಳುಹಿಸುವುದು, ಅದನ್ನೇ ಇಲ್ಲಿಯ ಉಪ್ಪಿಗಿಂತ ಹೆಚ್ಚಿನ ಬೆಲೆಗೆ ಮಾರಾಟ ಮಾಡಬೇಕೆಂದರೆ ಭಾರತದಲ್ಲಿಯ ಉಪ್ಪಿಗೆ ಈ ರೀತಿ ಭಾರವಾದ ತೆರಿಗೆಯನ್ನು ಸರಕಾರ ವಿಧಿಸಿತ್ತು."[೫೯] ಇದು ಬ್ರಿಟಿಷರ ಸ್ವಾರ್ಥದ ನೀತಿ ಎನ್ನಬಹುದಾಗಿದೆ. ಇದಕ್ಕೆ ಪ್ರತಿಯಾಗಿ–

ಗಾಂಧೀಜಿ ತಮ್ಮ ಉದ್ದೇಶವನ್ನು ವೈಸ್‌ರಾಯ್ ಇರ್ವಿನ್‌ರಿಗೆ ಪತ್ರ ಬರೆದು, "ಬಡವರಿಗೆ ಅತ್ಯವಶ್ಯಕವಾದ ಉಪ್ಪಿಗೆ ಏಕೆ ನೀವು ಕರ ಹಾಕುತ್ತಿದ್ದೀರಿ? ಕೂಡಲೇ ತೆರಿಗೆಯನ್ನು ರದ್ದುಪಡಿಸಬೇಕೆಂದು ಕೇಳಿಕೊಂಡರು. ಆದರೆ ಗಾಂಧೀಜಿ ಪತ್ರಕ್ಕೆ ಸರಕಾರದಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ."[೬೦] ಹಾಗಾಗಿ ಗಾಂಧೀಜಿ ಉಪ್ಪಿನ ಸತ್ಯಾಗ್ರಹಕ್ಕೆ ಸಿದ್ಧರಾದರು. "ಅದಕ್ಕಾಗಿ ಸಾಬರಮತಿ ಆಶ್ರಮದಲ್ಲಿ ಶಿಕ್ಷಣ ಮತ್ತು ತರಬೇತಿಗಾಗಿ ಶಿಬಿರದಲ್ಲಿದ್ದ ೭೮ ಜನ ಸತ್ಯಾಗ್ರಹಿಗಳನ್ನು ಆಯ್ಕೆ ಮಾಡಿದ್ದರು."[೬೧]

ಗಾಂಧೀಜಿ ಮಾರ್ಚ್ ೧೨, ೧೯೩೦ರಂದು ತಮ್ಮ ಸಬರಮತಿ ಆಶ್ರಮದಿಂದ ೭೮ ಜನ ಅನುಯಾಯಿಗಳೊಂದಿಗೆ ಚರಿತ್ರಾರ್ಹ ದಂಡಿ ಪಾದಯಾತ್ರೆ ಕೈಗೊಂಡರು. "ಈ ದಂಡಿ ಸತ್ಯಾಗ್ರಹದಲ್ಲಿ ಕರ್ನಾಟಕದ ಏಕೈಕ ಪ್ರತಿನಿಧಿಯಾಗಿ ೧೮ ವರ್ಷದ ಮೈಲಾರ ಮಹದೇವಪ್ಪ ಗಾಂಧೀಜಿ ಜೊತೆಗಿದ್ದದ್ದು ವಿಶೇಷ. ೨೪ ದಿನಗಳಲ್ಲಿ ೨೪೦ ಮೈಲಿ ಕ್ರಮಿಸಿ ದಂಡಿ ತೀರವನ್ನು ಸೇರಿದರು. ಏಪ್ರಿಲ್ ೬ರಂದು ದಂಡಿ ಸಮುದ್ರದ ತೀರದಲ್ಲಿ ಉಪ್ಪನ್ನು ಕೈಗೆತ್ತಿಕೊಂಡು ಉಪ್ಪಿನ ಮೇಲಿನ ಶಾಸನೋಲ್ಲಂಘನೆ ಮಾಡಿದರು. ಬ್ರಿಟಿಷರ ಬಂಧನಕ್ಕೆ ಭಯಪಡದೆ ಯಾರು ಬೇಕಾದರೂ, ಎಲ್ಲಿ ಅನುಕೂಲವೋ ಅಲ್ಲಿ ಉಪ್ಪನ್ನು ತಯಾರಿಸಬಹುದು ಎಂದು ಗಾಂಧೀಜಿ ಕರೆ ನೀಡಿದರು. ಏಪ್ರಿಲ್ ೬ರಿಂದ ೧೩ರವರೆಗಿನ ಕಾಲವನ್ನು 'ಕಾನೂನು ಭಂಗದ ರಾಷ್ಟ್ರೀಯ ವಾರ'ವಾಗಿ ಆಚರಿಸಲಾಯಿತು."[೬೨] ಇದರಿಂದ ಇಡೀ ದೇಶದಲ್ಲಿ ಹಲವಾರು ಕಡೆ ಕಾಯ್ದೆಭಂಗ ಚಳುವಳಿಗಳು ಆರಂಭವಾದವು.

"ಈ ಸತ್ಯಾಗ್ರಹದಲ್ಲಿ ಭಾಗಿಯಾಗಿದ್ದ ಮಹದೇವಪ್ಪ ಮೈಲಾರ ಕಾಯ್ದೆಭಂಗ ಮಾಡಿದ್ದಕ್ಕಾಗಿ ಗಾಂಧೀಜಿಯೊಂದಿಗೆ ಇದ್ದ ಎಲ್ಲ ಸತ್ಯಾಗ್ರಹಿಗಳಿಗೆ ಆರು ತಿಂಗಳ ಜೈಲು ಶಿಕ್ಷೆಯಾಯಿತು. ಆರು ತಿಂಗಳ ಶಿಕ್ಷೆ ಮುಗಿಸಿ ಮಹದೇವಪ್ಪ ಮೈಲಾರ ಧಾರವಾಡಕ್ಕೆ ಬಂದಾಗ ಅವರನ್ನು

ಸ್ನೇಹಿತರು, ಚಳುವಳಿಗಾರರು ಆತ್ಮೀಯವಾಗಿ ಬರಮಾಡಿಕೊಂಡರು. ಅದೇ ರೀತಿ ಇವರ ಊರಾದ ಹಾವೇರಿ ಜಿಲ್ಲೆಯ ಮೋಟೆಬೆನ್ನೂರಲ್ಲಿಯೂ ಇವರನ್ನು ವಿಜೃಂಭಣೆಯಿಂದ ಸ್ವಾಗತಿಸಲಾಯಿತು."[೬೩] ಇದರಿಂದ ಮಹದೇವಪ್ಪನಿಗೆ ಮುಂದಿನ ಚಳುವಳಿಯ ಯೋಜನೆಗಳಿಗೆ ಹುಮ್ಮಸ್ಸು ತುಂಬುವಂತಹ ವಾತಾವರಣ ಜಿಲ್ಲೆಯಲ್ಲಿ ನಿರ್ಮಾಣವಾಯಿತು.

ದಂಡಿಯಾತ್ರೆ ಪ್ರಭಾವವನ್ನು ಹಾವೇರಿ ಜಿಲ್ಲೆಯಲ್ಲಿ ಗಮನಿಸುವುದಾದರೆ, ಕರ್ನಾಟಕ ಸತ್ಯಾಗ್ರಹ ಮಂಡಳದ ನಿರ್ಣಯದಂತೆ ಕರಾವಳಿ ಜಿಲ್ಲೆಯ ಅಂಕೋಲಾದಲ್ಲಿ ಉಪ್ಪಿನ ಸತ್ಯಾಗ್ರಹ ಏಪ್ರಿಲ್ ೧೩, ೧೯೩೦ ರಂದು ಮಾಡಲು ನಿರ್ಧರಿಸಲಾಯಿತು. ಅಲ್ಲಿಗೆ ಹಾವೇರಿಯಿಂದ ವಿನಾಯಕ ಗಣಪುಲೆ, ಶಿವಲಿಂಗಪ್ಪ ಮಂಚಾಲಿ, ಬಸಲಿಂಗಪ್ಪ ಶಿರೂರು ಹೀಗೆ ಇನ್ನೂ ಮುಂತಾದವರನ್ನು ಕಳುಹಿಸಲಾಯಿತು. ಇವರೆಲ್ಲ ಉಪ್ಪಿನ ಕಾಯ್ದೆಯನ್ನು ಮುರಿದು ಬಂಧಿತರಾಗಿ ಬೆಳಗಾವಿ, ಹಿಂಡಲಗಾ ಜೈಲಿನಲ್ಲಿ ಶಿಕ್ಷೆ ಅನುಭವಿಸಿದ ವಿವರವನ್ನು ಹಲವು ಚಳುವಳಿಗಾರರು ಸ್ಮರಿಸಿಕೊಳ್ಳುತ್ತಾರೆ.

ದಿನಾಂಕ ೧.೬.೧೯೩೦ರಂದು ರಾಣೇಬೆನ್ನೂರು ತಾಲೂಕಿನಲ್ಲಿ ಉಪ್ಪಿನ ಸತ್ಯಾಗ್ರಹ ನಡೆಯಿತು– ರಾಣೆಬೆನ್ನೂರು ತಾಲೂಕಿನ ಹೂಲಿಹಳ್ಳಿ, ಅಸುಂಡಿ, ಹಲಗೇರಿ, ಗುಡ್ಡದ ಆನವೇರಿ ಈ ಗ್ರಾಮಗಳಲ್ಲಿ ಉಪ್ಪಿನ ಸತ್ಯಾಗ್ರಹ ಮಾಡಬೇಕೆಂದು ಪಿ.ಆರ್. ರಂಗನಾಥ ನಾಯಕರ ನೇತೃತ್ವದಲ್ಲಿ ಕೆಲವು ಚಳುವಳಿಗಾರರು ನಿರ್ಧರಿಸಿ, ಮೊದಲು ಈ ಗ್ರಾಮಗಳಿಗೆ ಹೋಗಿ ವಿಷಯ ತಿಳಿಸಿ ಅಲ್ಲಿಯ ಜನ ವಿಶ್ವಾಸ ಗಳಿಸಿದರು.

ತಮ್ಮ ತಂಡದೊಂದಿಗೆ ತಾಲೂಕಿನ ಹುಲ್ಲತ್ತಿ ಗ್ರಾಮದ ಹಳ್ಳದಲ್ಲಿನ ಸವುಳು ಮಣ್ಣಿನಿಂದ ಉಪ್ಪು ತಯಾರಿಸಿ ರಾಣೆಬೆನ್ನೂರಿನಲ್ಲಿ ಮಾರಿ ಕಾಯ್ದೆ ಭಂಗ ಮಾಡಿದರು. ಪೊಲೀಸರು ಬರುವ ವೇಳೆಗೆ ಸತ್ಯಾಗ್ರಹಿಗಳು ರಾಣೆಬೆನ್ನೂರಲ್ಲಿ ಉಪ್ಪನ್ನು ಹಂಚಿ, ಆಗಲೇ ಹೊರಟು ಹೋಗಿದ್ದ ಬಗ್ಗೆ ಮತ್ತು ರಾಣೆಬೆನ್ನೂರಿನಲ್ಲಿ ಮತ್ತೊಬ್ಬ ಚಳುವಳಿಗಾರ ಹೇಮಣ್ಣ ವೀ. ಅಂಗಡಿ ಇವರು ಶಿರಸಿ ಕ್ಯಾಂಪಿನಲ್ಲಿ ಸಂಘಟನಾ ಕೆಲಸ ಮಾಡಿ ಅಂಕೋಲೆಯಿಂದ ಉಪ್ಪು ತೆಗೆದುಕೊಂಡು ಬಂದು ರಾಣೆಬೆನ್ನೂರು ತಾಲೂಕು ಬಿಲ್ಲಳ್ಳಿ, ಇಟಗಿ ಗ್ರಾಮಗಳಲ್ಲಿ ಉಪ್ಪಿನ ಸತ್ಯಾಗ್ರಹ ಮಾಡಿದ ಬಗ್ಗೆ ರಾಣೆಬೆನ್ನೂರಿನ ಚಳುವಳಿಗಾರ ಮಿನ್ನಪ್ಪ ಹಳ್ಳಿ ಅದೇ ತಾಲೂಕಿನ ಮಾಳನಾಯಕನಹಳ್ಳಿಯ ಚಳುವಳಿಗಾರ ಹೊಳೆಯಪ್ಪ ಬ್ಯಾಳಿ ಅವರು ಸಂದರ್ಶನದಲ್ಲಿ ಹೆಮ್ಮೆಯಿಂದ ಹೇಳಿರುತ್ತಾರೆ.

"ಪರಮಣ್ಣ ಹೊಸಮನಿ ಉಪ್ಪಿನ ಸತ್ಯಾಗ್ರಹಕ್ಕೆ ಹಾವೇರಿ ಭಾಗದಿಂದ ಅಂಕೋಲೆಗೆ ಹೋಗುವವರಿಗೆ ದಾರಿಮಧ್ಯದಲ್ಲಿಯ ಗ್ರಾಮಗಳಲ್ಲಿ ವಸತಿ–ಊಟದ ವ್ಯವಸ್ಥೆ ಮಾಡಿದರು, ಹಾವೇರಿಯಿಂದ ತಲಾ ೧೨ ಜನ ಸ್ವಯಂಸೇವಕರ ಗುಂಪು ಸಂಘಟಿಸಿ ಅಂಥ ನಾಲ್ಕು ಗುಂಪುಗಳನ್ನು ಅಂಕೋಲೆಗೆ ಕಳುಹಿಸಿಕೊಟ್ಟು."[೬೪] ತಾವು ಸವುಳು ಮಣ್ಣಿನಿಂದ ಉಪ್ಪನ್ನು

ತಯಾರಿಸುವುದನ್ನು ಕಲಿತುಕೊಂಡು ಬಂದು ಹಾವೇರಿಯಲ್ಲಿ ಸವುಳು ಮಣ್ಣಿನಿಂದ ಉಪ್ಪು ತಯಾರಿಸಿ ಬಹಿರಂಗವಾಗಿ ಮಾರಾಟಮಾಡಿ ಉಪ್ಪಿನ ಕಾಯ್ದೆ ಭಂಗ ಮಾಡಿದರು. ಹೀಗೆ ಹಾವೇರಿ ಜಿಲ್ಲೆಯ ಚಳುವಳಿಗಾರರು ಉಪ್ಪಿನ ಸತ್ಯಾಗ್ರಹದಲ್ಲಿ ಭಾಗಿಗಳಾಗಿ ಕಾಯ್ದೆ ಭಂಗ ಮಾಡಿರುವುದಲ್ಲದೆ, ಅಂಕೋಲ ಸತ್ಯಾಗ್ರಹದಲ್ಲಿ ಭಾಗಿಗಳಾಗಿದ್ದು ವಿಶೇಷವಾಗಿರುವುದನ್ನು ಮತ್ತು ಅವರು ನಿರ್ವಹಿಸಿದ ಪಾತ್ರವನ್ನು ಗುರುತಿಸಲಾಗಿದೆ.

## ೪.೮. ಅರಣ್ಯ ಸತ್ಯಾಗ್ರಹ

ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಚಳುವಳಿಗಳಲ್ಲಿ ಅರಣ್ಯ ಸತ್ಯಾಗ್ರಹವು ಒಂದು. ಹಾವೇರಿ ಜಿಲ್ಲೆಯಲ್ಲಿ ಅರಣ್ಯ ಸತ್ಯಾಗ್ರಹಕ್ಕೆ ಸಂಬಂಧಿಸಿದಂತೆ ಜಿಲ್ಲೆಯ ವಿವಿಧ ತಾಲೂಕುಗಳಲ್ಲಿ ಕೆ.ಪಿ.ಸಿ.ಸಿ ವರದಿಯಂತೆ ಹಾವೇರಿ ಜಿಲ್ಲೆಯ ಶಿಗ್ಗಾವಿ, ಹಾನಗಲ್ಲ, ಬ್ಯಾಡಗಿ, ಹಿರೇಕೆರೂರು ತಾಲೂಕುಗಳಲ್ಲಿ ಈ ಚಳುವಳಿ ನಡೆಯಿತು. ಹಾನಗಲ್ಲು ತಾಲೂಕಿನ ಸುಮಾರು ೨೦ ಗ್ರಾಮಗಳಲ್ಲಿ ಹುಲಬನ್ನಿಯನ್ನು ಸಂಪೂರ್ಣ ನಿರಾಕರಿಸಿದರು. ಹಾವೇರಿ ತಾಲೂಕಿನ ಆಲದಕಟ್ಟಿ, ಕಬ್ಬೂರು, ಸಂಗೂರು, ನಾಗನೂರು, ಬೆಂಚಿಹಳ್ಳಿ ಇನ್ನೂ ಮುಂತಾದ ಗ್ರಾಮಗಳಲ್ಲಿ ಜನರು ಹುಲಬನ್ನಿ ಲೀಲಾವನ್ನು ಹಿಡಿಯಲಿಲ್ಲ. ಹುಲಬನ್ನಿ ಲೀಲಾವ ಅಂದರೆ- ಗ್ರಾಮಗಳಲ್ಲಿ ಊರ ದನಗಳ ಆಹಾರಕ್ಕಾಗಿ(ಮೇವು) ಸರಕಾರಿ (ಗೋಮಾಳ)ಜಾಗೆಯಿದ್ದು, ಅದರಲ್ಲಿ ಊರ ದನ-ಕರುಗಳನ್ನು ಗ್ರಾಮಗಳ ಜನತೆ ಮೇಯಿಸುತ್ತಿದ್ದರು. ಬ್ರಿಟಿಷ್ ಸರಕಾರ ಆ ಮೇಯುವ ದನ-ಕರುಗಳಿಗೆ ತೆರಿಗೆ ವಿಧಿಸಿತ್ತು. ಹಾಗಾಗಿ ಆ ಗ್ರಾಮಗಳಿಗೆ ಹೋಗಿ ಕೃಷಿಕರಿಗೆ ಪರಮಣ್ಣ ಹೊಸಮನಿ, ವೆಂಕಟೇಶ ಚವಟಿ ಮತ್ತು ಗೋವಿಂದಾಚಾರ್ಯ ಅಗ್ನಿಹೋತ್ರಿ ಮುಂತಾದವರು ಮನೆ ಮನೆಗಳಿಗೆ ಹೋಗಿ 'ನೀವು ಯಾರು ಸರಕಾರ ಮಾಡುವ ಲೀಲಾವನ್ನು ಹಿಡಿಯಬೇಡಿ' ಎಂದು ರೈತರ ಮನವೊಲಿಸುತ್ತಿದ್ದ ವಿವರ ಹಾನಗಲ್ಲು ಹಾಗೂ ಹಾವೇರಿ ಭಾಗದ ಚಳುವಳಿಗಾರರ ಹೇಳಿಕೆಗಳಿಂದ ತಿಳಿದುಬರುತ್ತದೆ.

ಬಂಕಾಪುರ ತಾಲೂಕಿನ ದುಂಡಸಿ ಕೇಂದ್ರವನ್ನಾಗಿ ಮಾಡಿಕೊಂಡು "೧೯೩೦ ನವಂಬರ್ ವೇಳೆಗೆ ಸುಮಾರು ೩ ಬಾರಿ ಕಾನನಮೇಲೆ ಸತ್ಯಾಗ್ರಹಗಳು ನಡೆದವು. ಇದೇ ರೀತಿ ಹಾನಗಲ್ಲ ತಾಲೂಕಿನ ಬಮ್ಮನಹಳ್ಳಿಯಲ್ಲಿ ಹುಲಬನ್ನಿ ನಿರಾಕರಣೆ ಮತ್ತು ಗಂಧದ ಗಿಡಗಳ ಸಂಹಾರ ಮಾಡಲಾಯಿತು(ಕರ್ನಾಟಕದಲ್ಲಿ ಸತ್ಯಾಗ್ರಹ ವರದಿ, ೧೯೩೧-೩೨, ಪುಟ ೧೬-೧೭)".[೬೫]

೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ ಮಾಡುವುದರ ಸಲುವಾಗಿ ಮಾದವರಾವ್ ಬುರ್ಲಿ ನಾಯಕತ್ವದಲ್ಲಿ ೮೦ ಜನ ಚಳುವಳಿಗಾರರು ಅಂಕೋಲಾಕ್ಕೆ ಹೋಗುವಾಗ ಮಾರ್ಗ ಮಧ್ಯ ಬಂಕಾಪುರಕ್ಕೆ ಬಂದಾಗ ಅಲ್ಲಿ ಸಭೆ ನಡೆಸಿ ಸೇಂದಿ ಗಿಡ ಕಡಿಯುವ ಕಾರ್ಯಕ್ರಮವನ್ನು ನಿರ್ಧರಿಸಿದಂತೆ ೨-೩ ದಿನಗಳ ಕಾಲ ಸುತ್ತಮುತ್ತಲಿನ ಗಿಡಗಳನ್ನು ನಾಶ ಮಾಡಲಾಯಿತು. ನಂತರ ಶಂಕರ ದೀಕ್ಷಿತ್ ಕರ್ಮಠ ಎಂಬುವವರ ನಾಯಕತ್ವದಲ್ಲಿ ನೀಲರಗಿ ಗ್ರಾಮದ

ಅಗಡಿಯವರು ಬಂಕಾಪುರದ ಹೇಜೀಬರ ಮನೆಗೆ ಬಂದು ತಮ್ಮ ಹೊಲದಲ್ಲಿದ್ದ ಮಾಲ್ಕಿ ಗಿಡಗಳನ್ನು ಕಡಿಯಲು ಕೇಳಿಕೊಂಡಾಗ ಅವರು ಪರವಾನಗಿ ಕೊಟ್ಟರು. ಆ ಸತ್ಯಾಗ್ರಹದಲ್ಲಿ ಇದ್ದ ಪ್ರಮುಖರೆಂದರೆ ಅ.ನಾ.ಕುಂದಾಪುರ, ಶೇಷಾಚಾರ್ಯ ಮಡಿ, ತಿಪ್ಪಣ್ಣ ಕಲಾಲ, ಸೂರ್ಯಭಟ್ಟ ವೈದ್ಯ ವಾಮನ ಹನುಮಂತ ದೇಸಾಯಿ, ಫಕ್ಕೀರಪ್ಪ ಕಿತ್ತೂರು, ವೆಂಕಣ್ಣಾಚಾರ್ಯ ಮಡಿ, ಕೆ.ಎನ್. ಪುರೋಹಿತ, ಅಡಿವೆಪ್ಪ ಕಮಾಟ ಮುಂತಾದವರು ಸೇರಿ–ಸೋಮವಾರ ೧೦ ರಿಂದ ೧೨ ಜನ ಹುಡುಗರನ್ನು ಕರೆದುಕೊಂಡು ಸಂಜೆ ವೇಳೆಗೆ ಗಿಡಗಳನ್ನು ಉರುಳಿಸಲು ಪ್ರಾರಂಭಿಸಿದರು. ಈ ವೇಳೆಗೆ ಸೇಂದಿ ಗುತ್ತಿಗೆದಾರರು, 'ಇವು ನಮ್ಮ ದೇವತೆ, ಅವನ್ನು ನಾವು ಕಡಿಯಗೊಡುವುದಿಲ್ಲ' ಎಂದಾಗ ಶಂಕರ ದೀಕ್ಷಿತ್ ಕರ್ಮಠರು 'ನಾವು ಗಾಂಧೀಜಿ ಸಂದೇಶ ಪಾಲಿಸುತ್ತೇವೆ. ಕುಡಿಯುವುದು ನಿಮ್ಮ ಸರ್ವನಾಶಕ್ಕೆ ನಾಂದಿ' ಎಂದು ತಿಳಿಹೇಳಿದರು. ಆದರೆ, ಮಾತಿಗೆ ಮಾತು ಬೆಳೆಯುತ್ತ ಸಂಜೆಯಾಗಿದ್ದರಿಂದ ಮುಂದಿನ ಸೋಮವಾರ ಬರುವುದಾಗಿ ಮರಳಿದರು. ಇಲ್ಲಿ ಸಾಮಾನ್ಯ ಬಾಲಕರು ಸಹ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದು ಒಂದಡೆಯಾದರೆ, ಅವರನ್ನು ಈಚಲ ಗಿಡ ಕಡಿಯದಂತೆ ತಡೆಗಟ್ಟಿದ ಗುತ್ತಿಗೆದಾರರ ಆಳುಗಳೊಂದಿಗೆ ಅವರು ವಿನಾಕಾರಣ ಜಗಳ ಕಾಯದೇ ಸಂಜೆಯವರೆಗೂ ತಮ್ಮ ಉದ್ದೇಶಗಳನ್ನು ಹೇಳಿದ ವಿವರ, ಅವರು ಚಿಕ್ಕವರಾದರೂ ಅವರು ಅನುಸರಿಸಿದ ಅಹಿಂಸಾ ನೀತಿಯು ಗಮನಸೆಳೆಯುತ್ತದೆ.

೨ನೇ ಸೋಮವಾರ ಚಿಕ್ಕವರು–ದೊಡ್ಡವರೆನ್ನದೆ ಹೊರಟರು, ಎಲ್ಲರ ಕೈಯಲ್ಲಿ ನಿಶಾನಿ, ಕೊಡಲಿ ಇದ್ದವು "ಇರಕೂಡದೆಂದಿಗೂ ಈ ಅಂಗ್ರೇಜಿ ಸರಕಾರ, ಇರಕೂಡದೆಂದಿಗೂ ಕುಡುಕರ ರಾಜ್ಯ ಎಂದು ಹಾಡುತ್ತ ಗುಂಪು ನಡೆಯಿತು. ಆದರೆ ಈ ವೇಳೆಗೆ ಗುತ್ತಿಗೆದಾರರು ನೂರಾರು ಜನರಿಗೆ ಕುಡಿಸಿ, ಊಟ ಮಾಡಿಸಿ ಚಳುವಳಿ ಜನ ಬರದಂತೆ ತಡೆಯಿರಿ ಮತ್ತು ಅವರನ್ನು ಚೆನ್ನಾಗಿ ಥಳಿಸಿರಿ ಎಂದು ಹೇಳಲಾಗಿತ್ತು. ಇದರ ಪರಿವೆ ಇಲ್ಲದ ಚಳುವಳಿಗಾರರು ಈಚಲ ಗಿಡಗಳಿದ್ದ ಕಡೆ ಹೊರಟಾಗ ಇವರನ್ನು ಆ ಪುಂಡರ ಗುಂಪು ಬಡಿಗೆಗಳಿಂದ ಬಡಿಯುತ್ತಿದ್ದರು. ಚಳುವಳಿಗೆ ಬಂದವರು ಸಿಟ್ಟಿನಿಂದ ನಮ್ಮ ಹೋರಾಟವನ್ನು ಸರಕಾರದೊಂದಿಗೆ ಮಾಡುತ್ತೇವೆ ನಿಮ್ಮೊಂದಿಗಲ್ಲ, ಇಷ್ಟಕ್ಕೂ ನಾವು ಕಡಿಯುತ್ತಿರುವುದು ಈಚಲಮರಗಳನ್ನು ಹೊಲದ ಮಾಲೀಕರನ್ನು ಕೇಳಿ ಕಡಿಯುತ್ತೇವೆ, ಅದನ್ನು ತಡೆಯಲು ನೀವು ಯಾರು? ಇಷ್ಟರಮೇಲೆ ಕೈ ಮಾಡಿದರೆ ನೆಟ್ಟಗಿರಲಿಕ್ಕಿಲ್ಲ ಎಂದು ಗರ್ಜಿಸಿದಾಗ, ಆ ಕುಡುಕರು ಹೊರಟುಹೋದರು, ಆದರೆ ಈ ವೇಳೆಗಾಗಲೇ ಕೇಶವರಾವ್ ಕುಲಕರ್ಣಿ ಎಂಬ ಹುಡುಗನಿಗೆ ತಲೆಗೆ ಏಟು ಬಿದ್ದು ರಕ್ತ ಸೋರುತ್ತಿದ್ದರಿಂದ ಅವನ ಉಪಚಾರಕ್ಕಾಗಿ ಬಂಕಾಪುರಕ್ಕೆ ಕರೆದೊಯ್ದರೆ ಅಲ್ಲಿ ವೈದ್ಯರು ಉಪಚಾರ ಮಾಡಲಿಲ್ಲ. ಇದನ್ನೆಲ್ಲ ಕಂಡ ಊರ ಜನ ಕೋಪಿತರಾಗಿ ಎಲ್ಲರೂ ಮಾತನಾಡಿ ಕೊಂಡಿದ್ದು ಒಂದೇ; ಮುಂದಿನ ವಾರ ಒಂದೇ ಒಂದು ಗಿಡ ಉಳಿಯಬಾರದು. ಈ ಸುದ್ದಿ ಎನ್.ಎಸ್. ಹರ್ಡೀಕರ್, ಹ.ರಾ.ಪುರೋಹಿತ, ಹೊಸಮನಿ ಸಿದ್ದಪ್ಪ, ಪರಮಣ್ಣ ಹೊಸಮನಿ

ಮುಂತಾದ ನಾಯಕರಿಗೆ ಮುಟ್ಟಿ ಅವರೆಲ್ಲ ಬಂಕಾಪುರಕ್ಕೆ ಬಂದು ಜನತೆಗೆ ಅರಣ್ಯ ಸತ್ಯಾಗ್ರಹಕ್ಕಾಗಿ ಭಾಷಣ ಮಾಡತೊಡಗಿದರು. ನಂತರದಲ್ಲಿ ಸೇರಿಕೊಂಡವರು ಮುದವೀಡು ಕೃಷ್ಣರಾಯರು. ಅವರ ಬಂದನಂತರ ಎಲ್ಲ ಜನಗಳನ್ನು ಉದ್ದೇಶಿಸಿ ನಾಳೆ ಸೋಮವಾರ ಈಚಲಗಿಡ ಸಂಹಾರಕ್ಕಾಗಿ ಹೋಗತಕ್ಕದ್ದು, ಗಂಡಸರಾರು ಊರಲ್ಲಿ ಉಳಿಯತಕ್ಕದ್ದಲ್ಲ ಎಂದು ಎಲ್ಲರಿಗೂ ಆಹ್ವಾನ ನೀಡಿದ ಬಗ್ಗೆ ಹಾನಗಲ್ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಹಾಗೂ ಅಕ್ಕಿಆಲೂರಿನ ಗುಡ್ಡಪ್ಪ ಹರಿಜನ ಅಂದಿನ ಸನ್ನಿವೇಶವನ್ನು ವಿವರಿಸುತ್ತಾರೆ.

"ಬಂಕಾಪುರದಲ್ಲಿ ಸೋಮವಾರ ಮೆರವಣಿಗೆ ಬೆಳಿಗ್ಗೆ ೨೦ರಿಂದ ೩೦ ಜನರಿಂದ ಮೆರವಣಿಗೆ ಪ್ರಾರಂಭವಾಯಿತು. ಶ್ರೀಮಂತರು, ಪ್ರಮುಖರು, ವ್ಯಾಪಾರಿಗಳು ಹೊರಟಿದ್ದರಿಂದ ಊರ ಎಲ್ಲ ರೈತಬಾಂಧವರು, ಕೂಲಿಕಾರರು ಹೀಗೆ ಒಬ್ಬರೂ ಉಳಿಯದಂತೆ ಬಂದು ಮೆರವಣಿಗೆಯಲ್ಲಿ ಸೇರತೊಡಗಿದರು. ಬಂಕಾಪುರದಿಂದ ಒಂದೂವರೆ ಮೈಲಿ ದೂರದಲ್ಲಿದ್ದ ಕುಂದೂರು ಗ್ರಾಮದಲ್ಲಿ ರಸ್ತೆ ಹಿಡಿಯದಂತೆ ಕಿಕ್ಕಿರಿದು ಸಾಗುತ್ತಿದ್ದ ಮೆರವಣಿಗೆಯ ಮುಂಭಾಗ ಇದ್ದರೆ ಕೊನೆಯದು ಇನ್ನೂ ಬಂಕಾಪುರದಲ್ಲಿದ್ದು, ಹನುಮಂತನ ಬಾಲದಂತೆ ಈ ಚಳುವಳಿಗಾರರ ಸೈನ್ಯ ಬೆಳೆಯುತ್ತಲೇ ಇತ್ತು."[೬೬] ದೊಡ್ಡ ಕುದುರೆಯ ಮೇಲೆ ಕುಳಿತ ಮುದವೀಡು ಕೃಷ್ಣರಾಯರು ಕೈಯಲ್ಲಿ ರಾಷ್ಟ್ರಧ್ವಜ ಹಿಡಿದು ಮೆರವಣಿಗೆಯ ಮುಂಚೂಣಿಯಲ್ಲಿದ್ದರೆ, ಚಳುವಳಿಗಾರರು ಕೈಯಲ್ಲಿ ಕೊಡ್ಲಿ ಹಿಡಿದು ಶಿಸ್ತಿನ ಸಿಪಾಯಿಗಳಂತೆ ಮೆರವಣಿಗೆ ಹೊರಟಿರುವುದನ್ನು ನೋಡಿದವರಿಗೆ ರೋಮಾಂಚನವಾಗುವಂತ್ತಿತ್ತು. ನೀರಲಗಿಯು ಶಿಗ್ಗಾವಿಯಿಂದ ನಾಲ್ಕು ಮೈಲು ದೂರದಲ್ಲಿದ್ದು ಅಲ್ಲಿಯವರೆಗೆ ಬಾಜಾಭಜಂತ್ರಿ ಸಹಿತ ನಡೆದ ಮೆರವಣಿಗೆಯನ್ನು ತಡೆಯಲು ತಾಲೂಕಾಧಿಕಾರಿಗಳು ಸಶಸ್ತ್ರ ಪೊಲೀಸ್ ಪಡೆಯೊಂದಿಗೆ ನಿಂತಿರಲು ಮುದವೀಡು ಕೃಷ್ಣರಾಯರು ಆ ಕಡೆ ಗಮನಹರಿಸದೆ ಮುಂದೆ ಸಾಗಿದರು.

ಧಾರವಾಡದ ಎಸ್.ಪಿ. ಹಾಲೆಂಡರು ಸಶಸ್ತ್ರ ೧೦೦ ಜನ ಪೊಲೀಸರೊಂದಿಗೆ ನೀರಲಗಿ ಅಗಸಿಗೆ ಬಂದು ನಿಂತರು. ಮೆರವಣಿಗೆ ಹೊರಟ ಚಳುವಳಿಗಾರರು ಎಸ್.ಪಿ.ಯನ್ನು ಲೆಕ್ಕಿಸದೇ ಹೋಗಿ ಗಿಡ ಕಡಿಯತೊಡಗಿದರು. ಅಲ್ಲಿಗೆ ಆಗಮಿಸಿದ ಎಸ್.ಪಿ ಮುದವೀಡು ಕೃಷ್ಣರಾಯರನ್ನು ಕುರಿತು ಇದೇನು ನೀವು ಸರಕಾರದ ವಿರುದ್ಧ ಮಾಡುವ ಧ್ವಂಸಕಾರ್ಯ! ಎಂದು ಕೇಳಿದ್ದಕ್ಕೆ "ನಾವು ಮಾಲಕಿ ಗಿಡಗಳನ್ನು ಮಾತ್ರ ಪರವಾನಗಿಯಿಂದ ಕಡಿಯುತ್ತೇವೆ. ಹಾಗೆ ಗಿಡಗಳನ್ನು ಕಡಿಯುವಾಗ ನಿಮ್ಮ ಪೊಲೀಸಿನವರು ನಮ್ಮ ಹುಡುಗರ ಮೇಲೆ ಹಿಂಸಾಚಾರ ಮಾಡಿದ್ದಾರೆ ಎಂದು ಕೇಶವ ರಾಯರ ರಕ್ತದ ಬಟ್ಟೆಗಳನ್ನು ತೋರಿಸಿದರು. ಅತ್ತ ಏನೂ ಆಗಿಲ್ಲವೇನೋ ಎನ್ನುವಂತೆ ಜನತೆ ಗಿಡಗಳ ಸಂಹಾರ ಮಾಡುತ್ತಿರುವುದನ್ನು ಕಂಡ ಎಸ್.ಪಿ ಹಾಲಂಡ್‌ರು ಆ ಜನಸೇನೆಯ ಮುಂದೆ ಪೊಲೀಸರೆತ್ತ? ಎಂದು ಯೋಚಿಸಿ ಸರಿ ನೀವು ಸರಕಾರಿ ಗಿಡಗಳನ್ನು ಮಾತ್ರ ಕಡಿಯಬೇಡಿರಿ ಎಂದು ಹೇಳಿ ಅಲ್ಲಿಂದ ಪೊಲೀಸರನ್ನು ಕರೆದುಕೊಂಡು ಹೊರಟುಹೋದರು.

೧೧ ಘಂಟೆಯಿಂದ ಸಂಜೆ ೫ ಘಂಟೆಯವರೆಗೆ ೨೫,೦೦೦ ಶೇಂದಿ ಗಿಡಗಳನ್ನು ಕಡಿಯಲಾಯಿತು. ಅಲ್ಲದೇ ಮುಂದಿನ ಪ್ರತೀ ಸೋಮವಾರ ಈ ಸತ್ಯಾಗ್ರಹ ಮುಂದುವರೆಸಲು ಶಿಗ್ಗಾವಿ ಪರಿಸರದಲ್ಲಿ ೮೦,೦೦೦ ಈಚಲ ಮರಗಳನ್ನು ಉರುಳಿಸಿದ್ದು, ಎಂಥವರಿಗೂ ಆಶ್ಚರ್ಯವನ್ನುಂಟುಮಾಡಿತ್ತು. ಈ ಬೆಳವಣಿಗೆಯಿಂದ ಹಾನಗಲ್ಲು, ಬಂಕಾಪುರ, ದುಂಡಸಿ ಭಾಗಗಳಲ್ಲಿ ರಾಷ್ಟ್ರೀಯತೆಯ ಜಾಗೃತಿ ಮತ್ತಷ್ಟು ಪ್ರಬಲವಾಗುವಂತಹ ವಾತಾವರಣ ಸೃಷ್ಟಿಯಾದ ವಿವರವನ್ನು ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ವಿವರಿಸುತ್ತಾರೆ.

"೧೯೩೦ ನವೆಂಬರ್‌ನಲ್ಲಿ ದುಂಡಸಿಯಲ್ಲಿ ಸಾವಿರಾರು ಜನ ಗಂಧದ ಮರ ಕಡಿದರು; ಎಲ್ಲರನ್ನು ಬಂಧಿಸಲಾಗದೆ ಪೊಲೀಸರು ಕೆಲವರನ್ನು ಮಾತ್ರ ಬಂಧಿಸಿದರು. ಅವರನ್ನು ಶಿಗ್ಗಾವಿ ಜೈಲಿಗೆ ಒಯ್ಯುವಾಗ ಪೊಲೀಸರು ಲಾಠಿ ಚಾರ್ಜ್ ಮಾಡಿದರೂ ಜನ ಹಿಂಬಾಲಿಸಿದರು, ಕೊನೆಗೆ ಬಂಧಿತರೇ 'ನಾವು ನಾಳೆ ಕಛೇರಿಗೆ ಹಾಜರಾಗುವುದಾಗಿ ಹೇಳಿ ಕಳುಹಿಸಿದರು."[೬೫] ಚಳುವಳಿಗಾರರ ಮನೋಸ್ಥಿತಿ ಮತ್ತು ಅವರಿಗೆ ಪೊಲೀಸ್ ಅಧಿಕಾರಿಗಳು, ಶಿಕ್ಷೆ, ಕಾರಾಗೃಹ ಯಾವುದರ ಪರಿವೆಯೂ ಇಲ್ಲದ್ದು ಅವರ ರಾಷ್ಟ್ರ ಪ್ರೇಮಕ್ಕೆ ಸಾಕ್ಷಿಯಾಗಿದೆ.

ಅರಣ್ಯ ಸತ್ಯಾಗ್ರಹದಿಂದಾದ ಅವಮಾನ ಹಾಗೂ ಮುಂದೆ ನಡೆಯಬಹುದಾದ ಅರಣ್ಯ ಸತ್ಯಾಗ್ರಹವನ್ನು ಹತ್ತಿಕ್ಕಲು ಸರಕಾರವು ಶಿಗ್ಗಾವಿಯಲ್ಲಿ ದರ್ಬಾರ್ ನಡೆಸುವ ಯೋಜನೆ ಮಾಡಿತು. ಆ ಪ್ರಕಾರ ಎಲ್ಲ ಗ್ರಾಮಗಳ ಗೌಡ–ಶ್ಯಾನಭೋಗರಿಗೂ, ದೇಸಾಯಿ–ದೇಶಪಾಂಡೆಗೂ, ಪ್ರಮುಖ ರೈತರಿಗೂ ಆಹ್ವಾನ ಕೊಡಲಾಯಿತು. ಈ ದರ್ಬಾರ್ ಕೂಡದಂತೆ ಸರಕಾರಿ ಕಾಯಿದೆ ಭಂಗ ಮಾಡಲು ಶಿಗ್ಗಾವಿ ಭಾಗದ ಚಳುವಳಿಗಾರರು ಶಂಕರ ದೀಕ್ಷಿತ್ ಕರ್ಮಠರ ನೇತೃತ್ವದಲ್ಲಿ ಸಭೆ ಸೇರಿದರು. ಜಿಲ್ಲಾ ಕಾಂಗ್ರೆಸ್ ಕಮಿಟಿಗೆ, ಸೇವಾದಳಕ್ಕೆ, ಸುತ್ತಮುತ್ತಲಿನ ಗ್ರಾಮದ ಸ್ವಯಂ ಸೇವಕರಿಗೆ ವಿಷಯ ತಿಳಿಸಲಾಯಿತು. ಇದಕ್ಕಾಗಿ ಶಿಗ್ಗಾವಿಯ ತರುಣರು ಕಾರ್ಯ ಪ್ರವೃತ್ತರಾದರು. ಮುಖ್ಯವಾಗಿ ಅನಂತಭಟ್ಟ ಹುರುಳಿಕೊಪ್ಪಿ, ಮಾಧವರಾವ್ ಹಳೆಪೇಟಿ, ಚಿಂತಾಮಣಿ ಹಳೆಪೇಟಿ, ಪುರೋಹಿತ ಕಟ್ಟಿ ಮುಂತಾದ ತರುಣರು ೪ರಿಂದ ೬ ದಿನ ಅಹೋರಾತ್ರಿ ಈ ಕಾರ್ಯ ಮಾಡತೊಡಗಿದರು. ದ.ಪ.ಕರಮರಕರರನ್ನು ಮುಂಚಿತವಾಗಿ ಬರಮಾಡಿಕೊಂಡು ಊರ ಮೂಲೆ ಮೂಲೆಗಳಲ್ಲಿ ಪ್ರಚಾರ ಮಾಡಿ ಅವರ ನೇತೃತ್ವದಲ್ಲಿ ಪ್ರಭಾವಿ ಭಾಷಣ ಏರ್ಪಾಡು ಮಾಡಲಾಯಿತು. ಅಲ್ಲದೆ ಮೈಸೂರು ಪ್ರಾಂತದ ಜಿ.ಆರ್.ಸ್ವಾಮಿ ತಮ್ಮ ಸಂಗಡ ಸ್ವಯಂಸೇವಕರ ತಂಡವನ್ನೇ ಕರೆದುಕೊಂಡು ಬಂದಿದ್ದರು.

ದರ್ಬಾರ್ ನಡೆಯುವ ದಿನ ಬರುವ ಜನರಿಗಾಗಿ ಸರಕಾರದ ವತಿಯಿಂದ ಕಚೇರಿಯ ಹತ್ತಿರ ಪೆಂಡಾಲ್ ಹಾಕಿಸಿ ಪೊಲೀಸರ ಕಾವಲು ಹಾಕಲಾಗಿತ್ತು. ಚಳುವಳಿಗಾರರು ಶಿಗ್ಗಾವಿ ಊರ ಹೊರಗಿನ ಅಗಸಿಯಲ್ಲಿ, ಪ್ರಮುಖ ಕೂಟಗಳಲ್ಲಿ ಸ್ವಯಂಸೇವಕರು ದರ್ಬಾರಿಗೆ ಬರುವ ಗಣ್ಯರನ್ನು ತಡೆದು ವಿನಯಪೂರ್ವಕವಾಗಿ ನಮಸ್ಕರಿಸಿ 'ಗುಲಾಮಗಿರಿಗೆ, ಬೂಟುಗಾಲಿಗೆ ನಮಸ್ಕಾರ ಹಾಕಲು ಏಕೆ ಹೋಗುತ್ತೀರಿ' ಎಂದು ತಿಳಿಹೇಳಿ ಹಿಂತಿರುಗಿ ಕಳುಹಿಸುತ್ತಿದ್ದರು.

ಕೆಲವರನ್ನು ಅವರ ಮನೆಯವರೆಗೂ ಕಳುಹಿಸಿ(ಮುಟ್ಟಿಸಿ) ಬರಲಾಗುತ್ತಿದ್ದ ವಿವರವನ್ನು ಹಾನಗಲ್ಲಿನ ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ವಿವರಿಸುತ್ತಾರೆ.

ಮತ್ತೊಂದು ತಂಡ ದರ್ಬಾರ್ ನಡೆಯುವ ಸಮಿಪವೇ 'ದರಬಾರ್‌ಗೆ ಧಿಕ್ಕಾರ ಬ್ರಿಟಿಷರಿಗೆ ಧಿಕ್ಕಾರ, ಭಾರತ್ ಮಾತಾಕೀ ಜೈ' ಎಂಬ ಘೋಷಣೆಗಳನ್ನು ಕೂಗುತ್ತಿದ್ದರು. ದರಬಾರ್‌ಗೆ ಸಾಕಷ್ಟು ಸಂಖ್ಯೆಯಲ್ಲಿ ಜನರು ಬಾರದಿರುವುದನ್ನು ಕಂಡು, ಅಧಿಕಾರಿಗಳಿಗೆ ವಿಪರೀತ ಕೋಪವಿತ್ತು. ದರ್ಬಾರಿನ ಅಧ್ಯಕ್ಷತೆ ವಹಿಸಿದ್ದ ಧಾರವಾಡ ಜಿಲ್ಲಾ ಕಲೆಕ್ಟರ್ ಅವರನ್ನು ಉದ್ದೇಶಿಸಿ ಸಭೆಯ ಆರಂಭದಲ್ಲಿಯೇ ಮೈಸೂರು ಪ್ರಾಂತದಿಂದ ಬಂದಿದ್ದ ಜಿ.ಆರ್. ಸ್ವಾಮಿ ಎದ್ದು ನಿಂತು ಸಜ್ಜನಿಕೆಯಿಂದ 'ನಾನು ಒಂದೆರಡು ಮಾತನಾಡಬಹುದೆ' ಎಂದು ವಿನಯದಿಂದ ಕೇಳಿದಾಗ, ಸರಕಾರದ ಪರವಿರುವವನು ಎಂದುಕೊಂಡು ಪರವಾನಗಿ ಕೊಡಲಾಯಿತು, ಎದ್ದು ನಿಂತ ಜಿ.ಆರ್. ಸ್ವಾಮಿ ಬಾಂಧವರೆ, ನಮ್ಮ ಚಳುವಳಿ ಬ್ರಿಟಿಷರ ಕೂಡ ಅಲ್ಲ, ಆದರೆ ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ. ಆದ್ದರಿಂದ ಅಂಥ ಸಾಮ್ರಾಜ್ಯದ ನೌಕರರಾದ ಕಲೆಕ್ಟರರಿಗೆ ಬಹಿಷ್ಕರಿಸುವುದೇ ನಮ್ಮ ಇಂದಿನ ಸತ್ಯಾಗ್ರದ ಹಿನ್ನೆಲೆ ಎಂದು ಅವರಿಗೆ ಕಪ್ಪು ಬಾವುಟವನ್ನು ಕೊಡಲು ಹೋದರು. ಇದನ್ನು ಸಹಿಸದ ಶಿಗ್ಗಾವಿ ಮಾಮಲೇದಾರ ಅವರನ್ನು ಬಂಧಿಸಲು ಹುಕ್ಕುಂ ನೀಡಿದನು. ಕೆಲವೇ ನಿಮಿಷಗಳಲ್ಲಿ ದರ್ಬಾರ್ ಮುಗಿದುಹೋಯಿತು. ಆದರೆ ದರ್ಬಾರ್ ಯಾವ ರೀತಿ ನಡೆಯಬೇಕಿತ್ತೋ ಆ ರೀತಿಯಲ್ಲಿ ನಡೆಯಲಿಲ್ಲ. ಜಿ.ಆರ್. ಸ್ವಾಮಿ ಬಂಧನವನ್ನು ವಿರೋಧಿಸಿ ಹೊರಗಿದ್ದ ಸ್ವಯಂಸೇವಕರು ಅವರ ಬಿಡುಗಡೆಗಾಗಿ ಘೋಷಣೆ ಕೂಗತೊಡಗಿದರು. ಬಹಳ ಗೊಂದಲದ ವಾತಾವರಣ  ನಿರ್ಮಾಣವಾಗಿ ಎಲ್ಲರೂ ನಮ್ಮನ್ನು ಬಂಧಿಸಿರಿ ಎಂದು ಕೂಗಾಡುತ್ತಿದ್ದರ ಪರಿಣಾಮ ಜಿ.ಆರ್. ಸ್ವಾಮಿಯನ್ನು ಬಿಡುಗಡೆ ಮಾಡಲಾಯಿತು. ಈ ರೀತಿ ಸರಕಾರದ ಕ್ರಮವನ್ನು ಉಗ್ರ ರೀತಿಯಲ್ಲಿ ಶಿಗ್ಗಾವಿಯಲ್ಲಿ ಪ್ರತಿಭಟಿಸಿ ಯಶಸ್ವಿಯಾದ ವಿವರವನ್ನು ಶಿಗ್ಗಾವಿ ಹಾಗೂ ಹಾನಗಲ್ಲು ಭಾಗದ ಚಳುವಳಿಗಾರರ ಹೇಳಿಕೆಯಿಂದ ಗುರುತಿಸಲಾಗಿದೆ.

ಸರಕಾರದ ದರ್ಬಾರ್ ಯೋಜನೆ ವಿಫಲವಾದ ಮೇಲೆ ಆ ಭಾಗದ ಕಾರ್ಯಕರ್ತರು ಮತ್ತೊಂದು ಕಾರ್ಯಕ್ಕೆ ಮುಂದಾಗುತ್ತಾರೆ. ತಮಗೆ ಬೇಕಾದಷ್ಟು ಒಬ್ಬರ ತಲೆಭಾರ ಕಟ್ಟಿಗೆ ತಂದು ಜಂಗಲ್ ಕಾಯ್ದೆಯನ್ನು ಮುರಿಯಬೇಕೆಂದು ಗಾಂಧೀಜಿ ಅವರು ಆದೇಶಿಸಿದಂತೆ ಶಿಗ್ಗಾವಿ ಭಾಗದಲ್ಲಿ ೩-೪ ಜನರು ಕೊಡಲಿ ಹಿಡಿದುಕೊಂಡು 'ಲೇಂಗೆ ಹಮ್ ಸ್ವರಾಜ್ಯ ಲೇಂಗೆ' ಎಂದು ಹಾಡುತ್ತಾ ಅರಣ್ಯಕ್ಕೆ ಹೋಗಿ ಕಟ್ಟಿಗೆ ಕಡಿದು ತೆಗೆದುಕೊಂಡು ಬಂದು ಚಾವಡಿಯ ಮುಂದೆ ಪ್ರದರ್ಶಿಸಿ ಇತರರಿಗೆ ಹೋಗಲು ಪ್ರಚೋದಿಸುತ್ತ ತಾವು ತಂದ ಕಟ್ಟಿಗೆಯನ್ನು ದಹಿಸುತ್ತಿದ್ದರು. ಹೀಗೆ ದಿನಾಲು ೪-೫ ಜನ ಅರಣ್ಯ ಸತ್ಯಾಗ್ರಹಿಗಳನ್ನು ಪೊಲೀಸರು ಬಂಧಿಸಿ ಕಾರಾಗೃಹಕ್ಕೆ ಕಳುಹಿಸುತ್ತಿದ್ದರು. ಈ ಪ್ರಕರಣದಿಂದ ಬಹಳಷ್ಟು ಜನ ಜೈಲುಪಾಲಾದರು. ಈ ಕಾರ್ಯದಲ್ಲಿ ಶಿಗ್ಗಾವಿ, ದುಂಡಸಿ, ಬಂಕಾಪುರ ಉಳಿದ ಗ್ರಾಮಗಳಷ್ಟೆ ಅಲ್ಲದೆ ಮೈಸೂರು ಪ್ರಾಂತದವರೂ ಈ ಕಾರ್ಯದಲ್ಲಿ ಭಾಗಿಗಳಾಗಿದ್ದು ವಿಶೇಷವಾಗಿತ್ತು.

ಮತ್ತು ಈ ಅರಣ್ಯ ಸತ್ಯಾಗ್ರಹದಿಂದ ಶಿಗ್ಗಾವಿ ಮತ್ತು ಹಾನಗಲ್ಲು ಭಾಗಗಳಲ್ಲಿ ಜನಸಾಮಾನ್ಯರಿಗೆ ಚಳುವಳಿಗೆ ಪ್ರೇರೇಪಿಸುವಂಥ ವಾತಾವರಣ ನಿರ್ಮಾಣವಾದ ಬಗ್ಗೆ ಚಳುವಳಿಗಾರ ಗುಡ್ಡಪ್ಪ ಹರಿಜನ ನೆನಪಿಸಿಕೊಳ್ಳುತ್ತಾರೆ.

"ಶಿಗ್ಗಾವಿ ಭಾಗದ ಸತ್ಯಾಗ್ರಹದ ಮುಖ್ಯ ಪ್ರಚೋದಕರು ಸ್ಥಳಿಯರಲ್ಲಿ ಯಾರು ಎಂದು ಪತ್ತೆಹಚ್ಚುವ ಕಾರ್ಯ ಪೊಲೀಸರದ್ದಾಗಿತ್ತು. ಶಿಗ್ಗಾವಿ ತಾಲೂಕು ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿಯಾಗಿದ್ದ ಶಂಕರ ದೀಕ್ಷಿತ್ ಕರ್ಮಠರನ್ನು ಶಿಗ್ಗಾವಿ ಫೌಜುದಾರರಿಗೆ ಇವನೇ ಮುಖಂಡ ಎಂದು ಊರ ಗೌಡ ಬಂಧಿಸಲು ಸಹಾಯ ಮಾಡಿದನು. ಹಾಗಾಗಿ ಶಂಕರ ದೀಕ್ಷಿತ ಕರ್ಮಠರನ್ನು ಬಂಧಿಸಿ, ೩.೧೨.೧೯೩೦ ರಂದು ಅವರಿಗೆ ೪ ತಿಂಗಳ ಶಿಕ್ಷೆ ಮತ್ತು ೫೦ ರೂ.ಗಳ ದಂಡ ವಿಧಿಸಿ ಹಿಂಡಲಗಾ ಜೈಲಿಗೆ ಕಳುಹಿಸಲಾಯಿತು."[೬] ಸರಕಾರದ ಕೆಂಗಣ್ಣಿಗೆ ಗುರಿಯಾಗಿದ್ದ ಶಿಗ್ಗಾವಿನ ಕಾಂಗ್ರೆಸ್ ನಾಯಕ ಶಂಕರ ದೀಕ್ಷಿತ್ ಕರ್ಮಠರನ್ನು ಪೊಲೀಸರಿಗೆ ಹಿಡಿದುಕೊಟ್ಟ ಊರ ಗೌಡರ ಕ್ರಮ, ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಬ್ರಿಟಿಷರ ಪರವಾದ ಜನ ಗ್ರಾಮೀಣ ಮಟ್ಟದಲ್ಲಿ ಇದ್ದದ್ದು ಕಂಡುಬರುತ್ತದೆ. ಆದರೆ ಇಂಥ ಪ್ರಸಂಗಗಳು ಹಾವೇರಿ ಜಿಲ್ಲೆಯಲ್ಲಿ ವಿರಳ ಎಂಬುದನ್ನು ಗಮನಿಸಲಾಗಿದೆ.

ಹಂಸಬಾವಿಯಲ್ಲಿ ಓದುತ್ತಿದ್ದ ಹಾಗೂ ಈಗಾಗಲೇ ಆ ಸಂಸ್ಥೆಯಲ್ಲಿ ಓದಿ ಅಲ್ಲಿಯ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಕೃಷಿ, ವ್ಯಾಪಾರ ಇನ್ನಿತರ ಕಾರ್ಯಗಳನ್ನು ಮಾಡುತ್ತಿದ್ದವರು ಶಾಲಾ ವಿದ್ಯಾರ್ಥಿಗಳೊಂದಿಗೆ ಸೇರಿ ಹಂಸಬಾವಿ ಭಾಗದಲ್ಲಿ ಈಚಲಗಿಡಗಳನ್ನು ಕಡಿಯುವುದು, ಹೆಂಡದಂಗಡಿಗಳನ್ನು ನಾಶ ಮಾಡುವುದು, ಪ್ರಭಾತಪೇರಿ ನಡೆಸುವುದನ್ನು ಮಾಡುತ್ತಿದ್ದರು. ಇದನ್ನು ಗಮನಿಸಿದ ಪೊಲೀಸರು ಹಂಸಬಾವಿಗೆ ಬಂದು ಸುಮಾರು ೧೪೦ ಶಾಲಾ ವಿದ್ಯಾರ್ಥಿಗಳನ್ನು ಬಂಧಿಸಿದರು. ಅವರಲ್ಲಿ ರಾಮನಾಥ ಬೆಳವಡಿ, ಮಲ್ಲೇಶಪ್ಪ ಬಣಕಾರ, ಚನ್ನಬಸಯ್ಯ ಸೂಳಿಕೇರಿಮಠ, ಸಿ.ಆರ್. ದಾನಣ್ಣನವರ, ಸಿ.ವಿ. ಹಿರೇಮಠ, ಗಂಗನಗೌಡ ಪಾಟೀಲ್ ಮೊದಲಾದವರ ಮೇಲೆ ಹಿರೇಕೆರೂರು ಮಾಮಲೇದಾರ ಮ್ಯಾಜಿಸ್ಟ್ರೇಟ್‌ರು ಕೋರ್ಟ್‌ನಲ್ಲಿ ೧೯೩೨ರಲ್ಲಿ ಕೇಸು ದಾಖಲಾಗಿ ೪೦ ವಿದ್ಯಾರ್ಥಿಗಳಲ್ಲಿ ೧೦ ಜನರ ಮೇಲೆ ಅಪರಾಧ ಸಿದ್ಧವಾಗಿದೆಯೆಂದು ಮೂರು ವರ್ಷಗಳವರೆಗೆ ಕಠಿಣ ಶಿಕ್ಷೆ ಹಾಗೂ ದಂಡ ವಿಧಿಸಿ ಮ್ಯಾಜಿಸ್ಟ್ರೇಟ್ ಆರ್.ಪಿ.ವಾಗಳೆ ೧೬.೧.೧೯೩೨ರಂದು ತೀರ್ಪು ನೀಡಿದರು. ಅವರೆಲ್ಲರನ್ನು ಜೈಲಿಗೆ ಕಳುಹಿಸಲಾಯಿತು. ಅಲ್ಲದೆ ಅವರು ದಂಡ ಕೊಡದಿದ್ದರಿಂದ ಅವರವರ ಚಿರಾಸ್ತಿಯನ್ನು ಮುಟ್ಟುಗೋಲು ಹಾಕಲಾಯಿತು. ಈ ಕೇಸಿನಲ್ಲಿ ಅಪ್ರಾಪ್ತರಿಗೆ ಛಟಿಗಿ ಶಿಕ್ಷೆ ಕೊಡಲಾದ ವಿವರವನ್ನು ಅದೇ ಭಾಗದ ಹಿರೇಅಣಜಿ ಚಳುವಳಿಗಾರ ಪುಟ್ಟಪ್ಪ ಹರಬಿ ವಿವರಿಸುತ್ತಾರೆ.

"ಅಪ್ರಾಪ್ತನಾದ ಚನ್ನಯ್ಯ ಸೂಳಕೇರಿಮಠ ಎಂಬ ೧೪ ವರ್ಷದ ಹುಡುಗನಿಗೆ ೧೫ ಛಟಿಗಿ ಏಟಿನ ಶಿಕ್ಷೆ ವಿಧಿಸಲಾಗಿತ್ತು. ಇಷ್ಟಾದರೂ ಹಂಸಬಾವಿ ಭಾಗದಲ್ಲಿ ಅರಣ್ಯ ಸತ್ಯಾಗ್ರಹ ನಡೆದೇಯಿತ್ತು. ಇದಕ್ಕೆ ಕಾರಣರಾದ ಕೆ.ಎಫ್. ಪಾಟೀಲ್‌ರನ್ನು ಬಂಧಿಸಿ, ಅವರ ಮೇಲೆ

ಹಿರೇಕೆರೂರು ಕೋರ್ಟಿನಲ್ಲಿ ಸಿ.ಸಿ.ನಂಬರ್ ೩೫/೧೯೩೨ ದಾಖಲೆ ಮಾಡಿ ಚಳುವಳಿ ಮಾಡಿದ್ದಕ್ಕಾಗಿ ೬ ತಿಂಗಳ ಕಠಿಣ ಶಿಕ್ಷೆಯಾಗಿ ೩೧.೩.೧೯೩೨ ರಂದು ಅವರನ್ನು ಸೆರೆಮನೆಗೆ ಕಳುಹಿಸಲಾಯಿತು."[೬೬] ಹೀಗೆ ಹಂಸಬಾವಿ ಭಾಗದಲ್ಲಿ ವಿದ್ಯಾರ್ಥಿಗಳೊಂದಿಗೆ ಕೆ.ಎಫ್. ಪಾಟೀಲ್‌ರಿಗೂ ಶಿಕ್ಷೆಯಾಗಿದ್ದರಿಂದ ಆ ಭಾಗದಲ್ಲಿ ಚಳುವಳಿಯ ತೀವ್ರತೆ ಹೆಚ್ಚಾಗಲು ಕಾರಣ ವಾಯಿತೆನ್ನುವುದನ್ನು ಅಲ್ಲಗಳೆಯುವಂತಿಲ್ಲ.

ಜಿಲ್ಲೆಯಲ್ಲಿ ಅರಣ್ಯ ಸತ್ಯಾಗ್ರಹಕ್ಕೆ ಸ್ಪಂದಿಸಿದ ಮತ್ತೊಂದು ಭಾಗವೆಂದರೆ ಹಿರೇಕೆರೂರು ತಾಲೂಕಿನ ನಾಗವಂದ ಗ್ರಾಮದ ಹತ್ತಿರ ಹಾರಿಕಟ್ಟಿ ಜಂಗಲ್ ಬ್ರಿಟಿಷ ಸರಕಾರದ ನಿಷೇದಿತ ಅರಣ್ಯವಾಗಿತ್ತು. "೧೮.೧.೧೯೩೨ ರಂದು ೨೫೦ರಿಂದ ೩೦೦ ಜನ ಚಳವಳಿಗಾರರ ತಂಡ ಹಾರಿಕಟ್ಟಿ ಜಂಗಲ್ ಕಡೆ ಹೊರಟಿತು. ಆ ತಂಡದ ನಾಯಕರುಗಳೆಂದರೆ ಹೇಮಪ್ಪ ವೀ ಅಂಗಡಿ, ಮೆಣಸಿನಾಳದ ತಿಮ್ಮನಗೌಡ್ರ ಹಾಗೂ ಸಿದ್ದಪ್ಪ ಹಿರೇಮಾರ ಹೀಗೆ ಹೋದ ತಂಡ ಮುಕ್ಕಾಲು ಭಾಗದಷ್ಟು ಅರಣ್ಯವನ್ನು ನಾಶ ಮಾಡಿ ಬ್ರಿಟಿಷರ ವಿರುದ್ಧ ಕಾನೂನು ಭಂಗ ಮಾಡಿದರು. ಪೊಲೀಸರು ಚಳುವಳಿಗಾರರನ್ನು ಬಂಧಿಸಿದರು. ಅರಣ್ಯ ನಾಶ ಮಾಡಿದ್ದನ್ನು ಚಳುವಳಿಕಾರರು ಒಪ್ಪಿದ್ದರಿಂದ ಕೇಸ್ ನಂ೬/೧೯೩೨ ನೇದ್ದರಲ್ಲಿ ಇವರಿಗೆ ೨ ವರ್ಷ ಶಿಕ್ಷೆ ಹಾಗೂ ೫೦/-ರೂ. ದಂಡ ವಿಧಿಸಿ ಯರವಾಡಾ ಜೈಲಿಗೆ ಕಳುಹಿಸಿದರು. ತಿಮ್ಮನಗೌಡ ಯರವಡಾ ಜೈಲಿನಲ್ಲಿ ಉತ್ತರ ಭಾರತದ ಚಳುವಳಿಗಾರರಿಂದ ಹಿಂದಿ ಭಾಷೆ ಮತ್ತು ಚರಕದಿಂದ ನೂಲು ತೆಗೆಯುವುದನ್ನು ಕಲಿತು ಬಂದದ್ದು, ಅದನ್ನು ತಮ್ಮ ತಮ್ಮ ಭಾಗಗಳಲ್ಲಿ ಪ್ರಯೋಗಿಸಿದ್ದು ಮಹತ್ತರವಾದ ಬದಲಾವಣೆಗೆ ಕಾರಣವಾಯಿತೆನ್ನಬಹುದು."[೬೮] ಜಂಗಲ್ ಸತ್ಯಾಗ್ರಹದಿಂದ ಜೈಲು ಸೇರಿ ಬಿಡುಗಡೆಯಾಗಿ ಊರಿಗೆ ಬಂದಾಗ ತುಮ್ಮಿನಕಟ್ಟಿಯಲ್ಲಿ ತಿಮ್ಮನಗೌಡರನ್ನು ಮೆರವಣಿಗೆ ಮಾಡಿ ಸನ್ಮಾನಿಸಿದ್ದು, ಮುಂದಿನ ಯೋಜನೆಗಳಿಗೆ ಅಣಿಗೊಳಿಸುವಂತಿತ್ತು ಎಂಬ ಅವರೊಂದಿಗೆ ಚಳುವಳಿಯಲ್ಲಿ ಭಾಗವಹಿಸಿದ ತಿಮ್ಮನಗೌಡರ ತಂಡದ ಸದಸ್ಯ ಮೆಣಸಿನಾಳದ ಶಿವನಗೌಡ ಭ. ಮರಿಗೌಡ್ರ ಹೇಳಿಕೆಯು ದಾಖಲೆಗಳಿಗೆ ಸಾಕ್ಷಿಭೂತವಾಗಿದೆ.

ಹಾವೇರಿ ಭಾಗದಲ್ಲಿ ಜಂಗಲ್ ಕಾಯ್ದೆ ಭಂಗ ಚಳುವಳಿಯನ್ನು ಬ್ಯಾಡಗಿ ತಾಲೂಕು ಕಲ್ಲೇದೇವರ ಗ್ರಾಮದ ಅಡವಿಯಲ್ಲಿ ಮಾಡಬೇಕೆಂದು ತೀರ್ಮಾನಿಸಲಾಯಿತು. "೨೬.೧೦.೧೯೩೦ ರಂದು ಮುಂಜಾನೆ ಗೋವಿಂದಾಚಾರ್ಯ ಅಗ್ನಿಹೋತ್ರಿ ನಾಯಕತ್ವದಲ್ಲಿ ೮ ರಿಂದ ೧೦ ಜನ ಸ್ವಯಂಸೇವಕರು ಹೊರಟರು. ಕಲ್ಲೇದೇವರಲ್ಲಿ ಮೆರವಣಿಗೆ ನಂತರ ಸಭೆಯಲ್ಲಿ ಗೋವಿಂದಾ ಚಾರ್ಯರ ಭಾಷಣವಾಗಿ ಊರ ಹೊರಗಿನ ಅಡವಿಯ ದಾರಿ ಹಿಡಿದರು. ಅವರೊಂದಿಗೆ ಕಲ್ಲೇದೇವರ ಸುತ್ತಮುತ್ತಲಿನ ಗ್ರಾಮದ ಅನೇಕ ನಾಗರಿಕರು ಸತ್ಯಾಗ್ರಹಕ್ಕಾಗಿ ಕೊಡಲಿಗಳಿಂದ ಅರಣ್ಯ ನಾಶ ಮಾಡಿದರು. ಫಾರೆಸ್ಟ್‌ಗಾರ್ಡ್ ಮತ್ತು ಅರಣ್ಯ ಅಧಿಕಾರಿಗಳು ಎಲ್ಲ ಸ್ವಯಂಸೇವಕರ ಹೆಸರುಗಳನ್ನು ಬರೆದುಕೊಂಡು ಪಂಚನಾಮೆಯನ್ನು ಮಾಡಿದರು, ಯಾವ ಅಡಚಣೆ ಆಗದೇ ಅರಣ್ಯ ಸತ್ಯಾಗ್ರಹ ಯಶಸ್ವಿಯಾಗಿ ಕೊನೆಗೊಂಡಿತು.

ಸತ್ಯಾಗ್ರಹದ ನಂತರ ಎಲ್ಲರನ್ನು ಸೇರಿಸಿ ಪುನಃ ೨ನೇ ಸೋಮವಾರ ಮತ್ತೇ ಸತ್ಯಾಗ್ರಹವೆಂದು ಸಾರಲಾಯಿತು. ಭಾನುವಾರ ಮುಂಜಾನೆ ಮತ್ತೆ ೮ ಜನ ಸ್ವಯಂಸೇವಕರ ತಂಡದೊಂದಿಗೆ ಕಲ್ಲೇದೇವರ ಗ್ರಾಮದ ಕಡೆ ಹೊರಟು, ಮಾರ್ಗದಲ್ಲಿ ಹಾವೇರಿ, ಅಗಡಿಯಿಂದ ಬಾಬುರಾವ್ ಹೇಜೀಬರು, ಕನವಳ್ಳಿ, ಗುತ್ತಲಗಳಿಂದ, ದೇಶಪಾಂಡೆ, ದತ್ತಾತ್ರೇಯ ನಾಡಗೇರ್, ದಿನಕರ ವಾಟವೇ ಮೊದಲಾದವರು ಹಾವೇರಿಯಿಂದ ಬಂದ ತಂಡದೊಂದಿಗೆ ಸೇರಿಕೊಂಡರು. ಸಂಜೆ ಹೊತ್ತಿಗೆ ಕಲ್ಲೇದೇವರ ಗ್ರಾಮವನ್ನು ಸೇರಿದರು. ಅಷ್ಟರಲ್ಲಿ ೧೦೦ ಜನ ಪೊಲೀಸರೊಂದಿಗೆ ಡಿವೈ.ಎಸ್.ಪಿ ಕೌಜಲಗಿ ಕಲ್ಲೇದೇವರ ಊರನ್ನು ಪ್ರವೇಶಿಸಿದರು. ಎಂದೂ ಪೊಲೀಸರ ಮುಖ ನೋಡದ ಕಲ್ಲೇದೇವರ ಗ್ರಾಮದ ಜನತೆ ಪೊಲೀಸರನ್ನು, ಬಂದೂಕುಗಳನ್ನು ನೋಡಿ ಹೆದರಿದರೂ ಅದನ್ನು ತೋರಗೊಡಲಿಲ್ಲ"೬ ಎಂಬುದನ್ನು ಬ್ಯಾಡಗಿಯ ಚಳುವಳಿಗಾರ ಷಡಕ್ಷರಪ್ಪ ಮಹಾರಾಜಪೇಟೆ ನೆನಪಿಸಿಕೊಳ್ಳುತ್ತಾರೆ.

ಡಿವೈ.ಎಸ್.ಪಿ. ಚಳುವಳಿಯ ನಾಯಕರನ್ನು ಚಾವಡಿಗೆ ಕರೆಯಿಸಿ "ನೀವು ಗಾಂಧೀಜಿ ಅನುಯಾಯಿಗಳು ನಾವು ಕೂಡ ನಿಮ್ಮೊಂದಿಗಿರುತ್ತೇವೆ ಆದಷ್ಟು ಶಾಂತ ರೀತಿಯಿಂದ ನಡೆಸೋಣ, ಅಡವಿಯಲ್ಲಿ ಜನ ಸೇರಿಸಿ ನನ್ನ ಅಥವಾ ಪೊಲೀಸರ ಮೇಲಾಗಲಿ ಕಲ್ಲು ತೂರಿ ಗದ್ದಲ ಮಾಡಿದರೆ ನಿಮಗೆ ಲಾಠಿಚಾರ್ಜು, ಗೋಲಿಬಾರ್ ಮಾಡಬೇಕಾಗುತ್ತದೆ. ಇದರಿಂದ ಗಾಂಧೀಜಿ ಹೆಸರಿಗೂ ಹಾಗೂ ನಮಗೂ ಕಳಂಕ ಕಾರಣ ನೀವು ನಾಳಿನ ಸತ್ಯಾಗ್ರಹಕ್ಕೆ ಹೊರಡುವ ವೇಳೆಯನ್ನು ತಿಳಿಸಿರುವಂತೆ ಆ ವೇಳೆಗೆ ಯಾವುದೇ ಗದ್ದಲವಿಲ್ಲದೇ ಸತ್ಯಾಗ್ರಹ ಆರಂಭಿಸುತ್ತಿದ್ದಂತೆ, ನಾವು ಕೂಡ ಯಾವುದೇ ಹಿಂಸೆ ಕೊಡದೇ ನಿಮ್ಮನ್ನು ಬಂಧಿಸಿ, ಶಾಂತಿಯುತವಾಗಿ ಹಾವೇರಿಗೆ ಹೋಗೋಣ. ಇದಕ್ಕೆ ನಿಮ್ಮ ಅಭಿಪ್ರಾಯವೇನು? ಎಂದು ಪ್ರಶ್ನಿಸಿದಾಗ, ಚಳುವಳಿಯ ನಾಯಕರು 'ಹಾಗೆಯೇ ಮಾಡೋಣ ಸಾಹೇಬ್ರೆ' ಎಂದು ಒಪ್ಪಿ ಚಳುವಳಿಗಾರರ ಕ್ಯಾಂಪಿಗೆ ಮರಳಿದರು.

ಡಿವೈ.ಎಸ್.ಪಿ. ಮಾತು ಕೇಳಿದ ಎಲ್ಲರೂ ಇನ್ನುಳಿದ ನಾಯಕರುಗಳಾದ ಗುತ್ತಲದ ದೇಶಪಾಂಡೆ ಮತ್ತು ಅಗಡಿಯ ದಿನಕರ ವಾಟವೇ ಇವರನ್ನು ಆ ದಿನ ರಾತ್ರಿಯೇ ಗುತ್ತಲ, ಕನವಳ್ಳಿ, ಅಗಡಿ ಗ್ರಾಮಗಳಿಗೆ ಕಳುಹಿಸಿ ಅವರಿಗೂ ಕಲ್ಲೇದೇವರ ಊರಿಗೆ ಬಾರದೇ ಅರಣ್ಯಕ್ಕೆ ಬರುವಂತೆ ತಿಳಿಸಲಾಯಿತು. ಸುತ್ತಮುತ್ತಲಿನ ಎಲ್ಲ ಗ್ರಾಮಗಳ ಜನರನ್ನು ಅಡವಿಗೆ ಊರ ಹೊರಗಿನಿಂದಲೇ ಸಾಗಿಸಿ ಸತ್ಯಾಗ್ರಹ ಮಾಡಬೇಕೆಂದೂ, ಕಲ್ಲೇದೇವರ ಊರಿನವರಿಗೆ ಸಾಮಾನ್ಯವಾಗಿ ದಿನಾಲು ಹೊಲಗಳಿಗೆ ಹೋಗುವಂತೆ ಅಡವಿಗೆ ಸತ್ಯಾಗ್ರಹಕ್ಕೆ ಹೋಗಬೇಕೆಂದು ಹೇಳಲಾಯಿತು. ಚಳುವಳಿಗಾರರು ಪೊಲೀಸರಿಗೆ, ಅಧಿಕಾರಿಗಳಿಗೆ ಯಾವುದೇ ರೀತಿಯ ಗುಟ್ಟು ಬಿಟ್ಟುಕೊಡದೆ ಯಶಸ್ವಿ ಯೋಜನೆಯನ್ನು ರೂಪಿಸಿದರು.

ಮರುದಿನವೇ ಸೋಮವಾರ ಕಲ್ಲೇದೇವರ ಅಡವಿಗೆ ದೇಶಪಾಂಡೆ ಹಾಗೂ ವಾಟವೇ ಇವರು ಸುತ್ತಮುತ್ತಲಿನ ಎಲ್ಲಾ ಹಳ್ಳಿಯ ಜನರನ್ನು ಸೇರಿಸಿ ಅಡವಿಯಲ್ಲಿ ರುದ್ರಪ್ಪನ ಕಟ್ಟೆಯಲ್ಲಿ

ಎಲ್ಲರನ್ನು ಉದ್ದೇಶಿಸಿ ವಾಟವೇಯವರು ತಮ್ಮ ಭಾಷಣದ ಮೂಲಕ ಹುರಿದುಂಬಿಸಿದರು. ಇತ್ತ ಪೊಲೀಸ್ ಪಡೆ ಸ್ವಯಂಸೇವಕರನ್ನು ಕಾಯುತ್ತ ಕಲ್ಲೇದೇವರಲ್ಲಿ ತಂಗಿತ್ತು. ಅತ್ತ ಅಡವಿಯಲ್ಲಿ ಸುಮಾರು ೪೦೦೦ ಜನ ಚಳುವಳಿಗಾರರು ಸೇರಿ ಅನೇಕ ಗಿಡ–ಮರಗಳನ್ನು ಕಡಿದರು. ಸುಮಾರು ಒಂದು ಘಂಟೆಯಲ್ಲಿ ಸ್ವಯಂಸೇವಕರು ಬಲು ಶಿಸ್ತಿನಿಂದ ತಮ್ಮ ಕಾರ್ಯವನ್ನು ಯಶಸ್ವಿಯಾಗಿ ಮಾಡುತ್ತಿದ್ದರು. ಇತ್ತ ಕಲ್ಲೇದೇವರಲ್ಲಿದ್ದ ಚಳುವಳಿಗಾರರು ಮೆರವಣಿಗೆ ಹೊರಟರು. ಪೊಲೀಸರು ಪರೇಡ್ ಮಾಡುತ್ತಾ ಮೆರವಣಿಗೆಯನ್ನು ಹಿಂಬಾಲಿಸಿದರು. ಚಳುವಳಿಗಾರರು ಊರು ಸುತ್ತುಹಾಕಿ ಅಡವಿ ದಾರಿ ಹಿಡಿದಾಗ ಪೊಲೀಸರು ಎಲ್ಲರನ್ನು ಬಂಧಿಸುತ್ತಿದರು.

ಈ ವೇಳೆಗೆ "ರಾಣೆಬೆನ್ನೂರಿನ ಇನ್ಸ್‌ಪೆಕ್ಟರ್ ಜಾಧವ್ ೪ ಜನ ಪೊಲೀಸರೊಂದಿಗೆ ಗಡಿಬಿಡಿಯಿಂದ ಧಾವಿಸಿ 'ಸಾಹೇಬರೇ ಘಾತವಾಗಿದೆ' ಮುಂಜಾನೆ ೯ ಘಂಟೆಯಿಂದ ಅವ್ಯಾಹತವಾಗಿ ಅಡವಿಯಲ್ಲಿ ಸತ್ಯಾಗ್ರಹ ನಡೆದಿದೆ, ಅಡವಿಯಲ್ಲಿ ನಾಲ್ಕೂ ಕಡೆಯಿಂದಲೂ ಜನರು ನುಗ್ಗುತ್ತಿದ್ದಾರೆ. ಗಿಡ–ಮರಗಳನ್ನು ರಾಶಿರಾಶಿಯಾಗಿ ಕಡಿದುಹಾಕಿದ್ದಾರೆ. ನನ್ನ ಸಂಗಡ ಇದ್ದ ೮ ಜನ ಪೊಲೀಸರಿಂದ ಏನೂ ಮಾಡಲು ಸಾಧ್ಯವಾಗಲಿಲ್ಲ, ನಿಮಗಾಗಿ ಕಾದಿದ್ದೆ, ನಡೆಯಿರಿ"[೨೦] ಎಂಬ ಇನ್ಸ್‌ಪೆಕ್ಟರ್ ಜಾಧವ್ ಮಾತು ಕೇಳಿ ಡಿವೈ.ಎಸ್.ಪಿ. ಚಳುವಳಿಕಾರರಿಗೆ "ನೀವು ನಮಗೆ ಮೋಸ ಮಾಡಿದಿರಿ ಎಂದು ಶಪಿಸಿ ಉಪಾಯವಿಲ್ಲದೇ ಪೊಲೀಸ್ ಪಾರ್ಟಿ ಸಮೇತರಾಗಿ ಅಡವಿಗೆ ಹೋದರು. ಅಡವಿಯಲ್ಲಿದ್ದ ಜನರನ್ನು ನೋಡಿ ಬೆರಗಾದರು. ಇವರು ಬಂದ ಪರಿವೆಯಿಲ್ಲದೇ ಚಳುವಳಿಗಾರರು ಜಯಕಾರದೊಂದಿಗೆ ಆವೇಶಭರಿತರಾಗಿ ಮರಗಳನ್ನು ಉರುಳಿಸುತ್ತಿದ್ದರು. ಡಿವೈ.ಎಸ್.ಪಿ. ಇನ್ಸ್‌ಪೆಕ್ಟರ್ ಮತ್ತು ಪೊಲೀಸ್ ಸಿಬ್ಬಂದಿ ಸೇರಿ ಉಪಾಯದಿಂದ ನೂರಾರು ಜನ ಚಳುವಳಿಗಾರರನ್ನು ಬಂಧಿಸಿ ಕಲ್ಲೇದೇವರಿಗೆ ಕರೆತಂದರು. ಅಡವಿಯಲ್ಲಿ ಬಂಧಿಸಿದವರಲ್ಲಿ ಸುಮಾರು ೬೦ ಜನರನ್ನು ಮಾತ್ರ ಹಾವೇರಿಗೆ ತಂದು ಸಬ್‌ಜೈಲಿಗೆ ಹಾಕಲಾಯಿತು. ಆದರೂ ಇದೇ ರೀತಿ ಪ್ರತಿ ಸೋಮವಾರ ಕಲ್ಲೇದೇವರು, ಬುಡಪನಹಳ್ಳಿ ಸತ್ಯಾಗ್ರಹಿಗಳು ಸುಮಾರು ೩ ತಿಂಗಳು ಈ ಜಂಗಲ್ ಸತ್ಯಾಗ್ರಹವನ್ನು ನಡೆಸಿದರು."[೨೧] ಈ ಘಟನೆ ಹಾವೇರಿ ಭಾಗದಲ್ಲಿ ಜಾಗೃತಿ ಮೂಡಿಸಿತು.

ದೀವಿಗಿಹಳ್ಳಿ ಎಂಬ ಹಿರೇಕೆರೂರು ತಾಲೂಕಿನ ಹಳ್ಳಿಯಲ್ಲಿ ರೈತ ತರುಣರು ಅರಣ್ಯ ಸತ್ಯಾಗ್ರಹಕ್ಕೆ ಸಿದ್ಧರಾದರು, ೧೯೩೨ರ ಜೂನ್ ತಿಂಗಳಲ್ಲಿ ಜೇಷ್ಠ ಹುಣ್ಣಿಮೆಯ ದಿನ ಶ್ರೀ ಬಸವೇಶ್ವರ ದೇವಸ್ಥಾನದ ಮುಂದಿನ ಬೈಲಿನಲ್ಲಿ ಪ್ರಭಾತ್‌ಫೇರಿ ಮಾಡಿ ೨೫ ಜನ ತರುಣರು ಕಾನೂನು ಭಂಗ ಮಾಡಲು ಹಂಸಬಾವಿ ಹದ್ದಿಗೆ ಒಳಪಟ್ಟಿರುವ ಈಚಲ ಗಿಡಗಳನ್ನು ಕಡಿದುಹಾಕಿ ಅದೇ ದಿವಸ, ಅದೇ ಹದ್ದಿನಲ್ಲಿರುವ ಸೇಂದಿ ಅಂಗಡಿಗೆ ಬೆಂಕಿ ಇಟ್ಟು ಸಂಪೂರ್ಣ ನಾಶ ಮಾಡಿದ ವಿವರವನ್ನು ಹಿರೇಅಣಜಿ ಚಳುವಳಿಗಾರ ಮಳ್ಳಪ್ಪ ಕೊಪ್ಪದ ಹೇಳಿಕೆ. ಈ ಘಟನೆ ಸಾಮಾನ್ಯ ಹಳ್ಳಿಯೊಂದರಲ್ಲಿ ಕೃಷಿಕರು ನಡೆಸಿದ ಸತ್ಯಾಗ್ರಹವಾಗಿತ್ತು. ಇದು ಚಳುವಳಿ ಹಳ್ಳಿಯ ಮಟ್ಟಕ್ಕೆ ವ್ಯಾಪಿಸಿ ಪ್ರತಿಭಟನೆ ಹಿಂಸಾರೂಪ ತಾಳಿತು.

"ರಾಣೆಬೆನ್ನೂರನಲ್ಲಿ ಪಿ.ಆರ್.ರಂಗನಾಥ ನಾಯಕ ೧೯೩೦ರಲ್ಲಿ ಕರ್ನಾಟಕ ಸತ್ಯಾಗ್ರಹ ಮಂಡಳಿಯ ಆದೇಶದಂತೆ ರಾಣೆಬೆನ್ನೂರು ತಾಲೂಕಿನಲ್ಲಿ ಅರಣ್ಯ ಸತ್ಯಾಗ್ರಹ ಮಾಡಲು ನಿರ್ಧರಿಸಿದರು. ಇವರಿಗೆ ಸಹಕಾರ ಕೊಟ್ಟವರು ಆನೆಶೆಟ್ಟರ ಚನ್ನಬಸಪ್ಪನವರು ಇವರ ನಾಯಕತ್ವದಲ್ಲಿ ತಾಲೂಕಿನ ಹುಲ್ಲತ್ತಿಯಲ್ಲಿ ಅರಣ್ಯ ಸತ್ಯಾಗ್ರಹ ಮಾಡಿದರು."[೨]

೧೯೩೦ರಲ್ಲಿ ಹಾವೇರಿಯ ಗೋವಿಂದಾಚಾರ್ಯ ಅಗ್ನಿಹೋತ್ರಿ, ರಾಮಕೃಷ್ಣ ಗಣಪುಲೆ, ಬಸಪ್ಪ ಇಂಗಳಗಿ, ಶಾಂತೇಶ ಯೋಗಾನ, ವಿರುಪಾಕ್ಷಪ್ಪ ಅಂಗಡಿ ಹೀಗೆ ಸುಮಾರು ೨೫೦ ಜನ ಸ್ವಯಂಸೇವಕರು ಸೇಂದಿ ಗಿಡ ಕಡಿಯಲು ಯಲ್ಲಾಪುರದ ಹಳ್ಳಕ್ಕೆ ಹೋಗಿ, ಅಲ್ಲಿಯ ಸೇಂದಿ ಗಿಡಗಳನ್ನು ೫ರಿಂದ ೬ ದಿನಗಳಲ್ಲಿ ಕಡಿಯುವಲ್ಲಿ ಯಶಸ್ವಿಯಾದರು. ಈ ಕಾರ್ಯಕ್ಕಾಗಿ ಪೊಲೀಸರು ಸುಮಾರು ೩೦ ಜನ ಚಳುವಳಿಗಾರರನ್ನು ಬಂಧಿಸಿ ಸೆರೆಮನೆಗೆ ಕಳುಹಿಸಿದರು. ಎಲ್ಲರೂ ಒಂದೊಂದು ತಿಂಗಳು ಜೈಲು ಶಿಕ್ಷೆ ಅನುಭವಿಸಿದರು. ಈ ಚಳುವಳಿಯಲ್ಲಿ ಹಾವೇರಿಯ ವಿರುಪಾಕ್ಷಪ್ಪ ಅಂಗಡಿವರು ಬಾಲಕನಾಗಿದ್ದರಿಂದ ಯಾವುದೇ ಶಿಕ್ಷೆಯಾಗಿರಲಿಲ್ಲ. ಆ ಬಾಲಕ ತನ್ನ ಸಂಗಡ ಸ್ನೇಹಿತರನ್ನು ಕರೆದುಕೊಂಡು ೪-೫ ದಿನಗಳ ಕಾಲ ಹಾವೇರಿಯ ೪ ಸೇಂದಿ ಅಂಗಡಿಗಳ ಮುಂದೆ ಧರಣಿ ಸತ್ಯಾಗ್ರಹ ಮಾಡಿ ಎಲ್ಲ ಬಾಲಕರು ಕುಡಕರಿಂದ ಒದೆತಿಂದರು. ಅಂದಿನ ಚಳುವಳಿಗಾರರು ಸಾಮಾನ್ಯ ಬಾಲಕರ ಮೇಲೆ ಬೀರಿದ ಪ್ರಭಾವ ಚಳುವಳಿಯ ತೀವ್ರಗೊಳ್ಳಲು ಪ್ರೇರಣೆಯಾದ ವಿವರವನ್ನು ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಹೇಳಿಕೆಯಿಂದ ಗುರುತಿಸಲಾಗಿದೆ.

"ಕೃಷ್ಣಾಜಿ ದೇಶಪಾಂಡೆ ದ.ವೆಂ. ನಾಡಗೇರ, ಗ.ಸು.ಕುಲಕರ್ಣಿಯೊಂದಿಗೆ ಅಂಕೋಲಕ್ಕೆ ಹೋಗಿ ಬಂದ ಮೇಲೆ ಹಾವೇರಿ ತಾಲೂಕಿನ ಪೂರ್ವಭಾಗ ಚಳುವಳಿಯಲ್ಲಿ ಅಷ್ಟೊಂದು ಆಸಕ್ತಿಯಿರಲಿಲ್ಲ. ಹಾಗಾಗಿ ಭಾಗದ ಜನತೆಗೆ ಪ್ರಭಾವ ಬೀರಬೇಕೆಂದು ನಿರ್ಧರಿಸಿ, ವರದಾ ನದಿ ದಂಡೆಯ ರಿತ್ತಿ ಗ್ರಾಮವನ್ನು ತಮ್ಮ ಕ್ಷೇತ್ರವನ್ನಾಗಿ ಆರಿಸಿಕೊಂಡರು. ಅಲ್ಲಿಯೇ ಸಮೀಪದಲ್ಲಿ ಪರಾಪುರವೆಂಬ ಬೇಚರಾಕ್ ಗ್ರಾಮದಲ್ಲಿ ಸಾವಿರಾರು ಈಚಲ ಮರಗಳಿದ್ದವು. ಅಲ್ಲಿಂದಲೇ ನೂರಾರು ಕಪಾಲಿ ಹೆಂಡವು ಹೊರಹೋಗುತ್ತಿತ್ತು. ಈ ಈಚಲ ಮರಗಳನ್ನು ನಾಶ ಮಾಡಬೇಕೆಂದು ಸತ್ಯಾಗ್ರಹಿಗಳು ನಿರ್ಧರಿಸಿದರು. ಇವರಿಗೆ ಅದೇ ಊರಿನ ಸಮಿಪದ ಕೂರಡೂರು ಜಮೀನ್ದಾರರಾದ ಕರಿಯಪ್ಪ ಕಲಕೋಟಿಗೆ ಪೊಲೀಸರಿಂದ ಬೆದರಿಕೆಯಿದ್ದರೂ ಅಂಜದೆ ಸಹಾಯ ಮಾಡಿದ್ದರು. ಅವರ ಸಹಾಯದಿಂದ ಪರಾಪುರದ ಈಚಲ ಮರಗಳು ೪-೫ ದಿನಗಳಲ್ಲಿ ಧ್ವಂಸವಾದವು. ಸತ್ಯಾಗ್ರಹ ಮುಗಿಸಿ ಬಂದಾಗ, ವರದಾ ನದಿಯ ದಂಡೆಯ ಎರಡು ಬದಿಗಳಲ್ಲಿ ಹಳ್ಳಿಗಳ ಜನರು ಸತ್ಯಾಗ್ರಹಿಗಳಿಗೆ ರೊಟ್ಟಿಬುತ್ತಿಯನ್ನು ತಂದದ್ದು ತಮ್ಮ ಶ್ರಮ ಸಾರ್ಥಕವಾಯಿತು ಎಂಬ ಮನೋಸ್ಥಿತಿ ಚಳುವಳಿಗಾರರಿಗೆ"[೩] ಚಳುವಳಿಯಲ್ಲಿ ಭಾಗವಹಿಸದಿದ್ದರೂ ಜಾಗೃತರಾಗಿ, ಈಚಲ ಮರಗಳನ್ನು ಕಡಿದ ಚಳುವಳಿಗಾರರಿಗೆ ತಮ್ಮ ತಮ್ಮ ಮನೆಗಳಿಂದ ಸಾಮಾನ್ಯ ಜನತೆ ಊಟ ತಂದದ್ದು, ಚಳುವಳಿಗಾರರಿಗೆ ಜನತೆ ನೀಡಿದ ಊಟಕ್ಕಿಂತ ಪ್ರೋತ್ಸಾಹವನ್ನು ತೋರಿಸುತ್ತದೆ.

೩೦.೭.೧೯೩೦ರಂದು ಕೊರಡೂರು ಗ್ರಾಮದಲ್ಲಿ ನಡೆದ ಈಚಲಮರ ಸತ್ಯಾಗ್ರಹದಲ್ಲಿ ಬಂಧಿಸಲ್ಪಟ್ಟ ಸತ್ಯಾಗ್ರಹಿಗಳಾದ ಕರಿಯಪ್ಪ ಕಲಕೋಟಿ ಮೊದಲಾದ ೮೦ ಸ್ವಯಂಸೇವಕರನ್ನು ಹಾವೇರಿಯಲ್ಲಿ ಪ್ರಚಂಡ ಮೆರವಣಿಗೆ ಮಾಡುತ್ತಾ ಎಲ್ಲರನ್ನು ಜೈಲಿಗೆ ಕಳುಹಿಸಿಕೊಡಲಾಯಿತು.

ಮತ್ತೊಂದಡೆ ವೆಂಕಟೇಶ ದೇಶಪಾಂಡೆ ೧೯೩೨ರಲ್ಲಿ ಹೊಸರಿತ್ತಿ ಭಾಗದಲ್ಲಿ ಈಚಲ ಗಿಡಗಳನ್ನು ಕಡಿದು ಒಂದು ವರ್ಷ ಶಿಕ್ಷೆಗೆ ಒಳಗಾದವರು ಜಿಲ್ಲೆಯ ರಾಣೆಬೆನ್ನೂರು ತಾಲೂಕಿನ ಹುಲಿಹಳ್ಳಿ ಗ್ರಾಮದಲ್ಲಿ ಸಿದ್ಧಲಿಂಗಯ್ಯ ಕಜ್ಜರಿ ಸ್ವಾಮಿ ಹಿರೇಮಠರೊಂದಿಗೆ ಸೇರಿ ಸೇಂದಿ ಗಿಡ ಕಡಿಯುವ ಸತ್ಯಾಗ್ರಹದಲ್ಲಿ ಭಾಗಿಯಾದ ವಿಷಯ ದೇವೇಂದ್ರಪ್ಪ ವಿಭೂತಿ ಮತ್ತು ಮಿನ್ನಪ್ಪ ಹಳ್ಳಿಯವರಿಂದ ತಿಳಿದುಬರುತ್ತದೆ.

"೧೯೩೧ರಿಂದ ೧೯೩೩ವರೆಗೂ ನಡೆದ ಜಂಗಲ್ ಸತ್ಯಾಗ್ರಹದಲ್ಲಿ ಧಾರವಾಡ ಜಿಲ್ಲೆಯಲ್ಲಿ (ಅವಿಭಜಿತ) ಒಟ್ಟು ಬಂಧಿತರ ಸಂಖ್ಯೆ ೧೦೦೦ ಆಗಿರಬಹುದೆಂದು ಅಂದಾಜಿಸ ಲಾಗಿದೆ."[೭೪] ಹಾವೇರಿ ಜಿಲ್ಲೆಯಲ್ಲಿ ಅರಣ್ಯ ಸತ್ಯಾಗ್ರಹ ಯಶಸ್ವಿಯಾಗಿ ನಡೆದು, ಜನ-ಸಾಮಾನ್ಯರನ್ನು ತಲುಪಿದ್ದು, ಜನತೆಯ ಪ್ರೋತ್ಸಾಹ, ಸಹಾಯ, ಸಹಕಾರ ಪಡೆದಿದ್ದು ಅಲ್ಲದೇ ಜನಸಾಮಾನ್ಯರು ಈ ಚಳುವಳಿಗೆ ಭಾಗವಹಿಸುವಂತೆ ಚಳುವಳಿಗಾರರು ಯಶಸ್ಸನ್ನು ಸಾಧಿಸಿದ್ದು, ಮುಂದಿನ ಚಳುವಳಿಗಳಿಗೆ ಕಾಯುವಂಥ ವಾತಾವರಣ ಜಿಲ್ಲೆಯಲ್ಲಿ ನಿರ್ಮಾಣವಾಯಿತೆನ್ನುವುದನ್ನು ದಾಖಲೆ ಹಾಗೂ ಹೇಳಿಕೆಗಳಿಂದ ಗುರುತಿಸಲಾಗಿದೆ.

**೪.೯. ವೈಯಕ್ತಿಕ ಸತ್ಯಾಗ್ರಹ**

ರಾಷ್ಟ್ರೀಯ ಚಳುವಳಿಯಲ್ಲಿ ಮತ್ತೊಂದು ಮಹತ್ವದ ಚಳುವಳಿಯೆಂದರೆ ವೈಯಕ್ತಿಕ ಸತ್ಯಾಗ್ರಹ(೧೯೪೦-೪೧). ಈ ಸತ್ಯಾಗ್ರಹ ಮಾಡುವವರು ಕಾಂಗ್ರೆಸ್ ಸದಸ್ಯರಾಗಿರಬೇಕು. ಗಾಂಧೀಜಿಯಿಂದ ಪರವಾನಗಿ ಪಡೆದು ಈ ಸತ್ಯಾಗ್ರಹ ಮಾಡಬಹುದಿತ್ತು. "೧೯೪೦-೪೧ರಲ್ಲಿ ಇಂಥ ವೈಯಕ್ತಿಕ ಸತ್ಯಾಗ್ರಹ ಮಾಡುವವರ ಪಟ್ಟಿಯನ್ನು ಸಿದ್ಧಪಡಿಸಿ ಗಾಂಧೀಜಿಯಿಂದ ಪರವಾನಗಿ ಪಡೆಯುವ ಕಾರ್ಯವನ್ನು ಕರ್ನಾಟಕದ ಪ್ರಾಂತದ ಪರವಾಗಿ ಕೆ.ಪಿ.ಸಿ.ಸಿ. ಅಧ್ಯಕ್ಷರಾದ ರಂಗನಾಥ ದಿವಾಕರರು ಮಾಡುತ್ತಿದ್ದರು."[೭೫] ರಾಷ್ಟ್ರೀಯ ಹೋರಾಟದಲ್ಲಿ ಈ ಚಳುವಳಿಯು ವಿಶೇಷವಾಗಿದೆ. ಕಾರಣ ಕಾಂಗ್ರೆಸ್ ಸದಸ್ಯರಾದವರು ಮಾತ್ರ ಗಾಂಧೀಜಿಯ ಪರವಾನಗಿ ಪಡೆದು ಮಾಡುವ ಚಳುವಳಿ ಇದಾಗಿತ್ತು.

**ವೈಯಕ್ತಿಕ ಸತ್ಯಾಗ್ರಹದ ಹಿನ್ನೆಲೆ**

"ಇಂಗ್ಲೆಂಡ್‌ನ ವೈರಿಗಳಾದ ಜರ್ಮನಿ, ಇಟಲಿ ರಾಷ್ಟ್ರಗಳೊಡನೆ ಸ್ನೇಹ ಸಂಪಾದಿಸಿ ಬ್ರಿಟನ್‌ನನ್ನು ಸೋಲಿಸಿ ಸ್ವಾತಂತ್ರ್ಯ ಸಂಪಾದಿಸಬೇಕೆಂಬ ವಿಚಾರ ಉಗ್ರಗಾಮಿ ಚಳುವಳಿಕಾರರ ಉದ್ದೇಶವಾಗಿತ್ತು. ಈ ರೀತಿ ಇಂಗ್ಲೆಂಡನ್ನು ಸಂಕಷ್ಟಕ್ಕೆ ತಳ್ಳುವುದು ಸಮಂಜಸವಲ್ಲವೆಂಬುದು ಗಾಂಧೀಜಿ ವಿಚಾರವಾಗಿತ್ತು. ಇಷ್ಟಾದರೂ ಬ್ರಿಟಿಷರು ಭಾರತದ ನೀತಿಯಲ್ಲಿ ಬದಲಾಗಲಿಲ್ಲ. ಇತ್ತ ಕಾಂಗ್ರೆಸ್ ಸುಮ್ಮನಿರಲು ಸಿದ್ಧವಿರಲಿಲ್ಲ. ಆದ್ದರಿಂದ ಯುದ್ಧ ನೀತಿಯ ವಿರೋಧದ

ಘೋಷಣೆಯನ್ನು ಮಾಡಿ ಸೆರೆಮನೆ ಸೇರಲು ಅಧಿಕಾರವಿತ್ತು."[೭೬] ತಾತ್ವಿಕ ತಳಹದಿಯ ಮೇಲೆ ಜರುಗಿಸಲಾದ ಈ ಕಾರ್ಯಕ್ರಮ ದೇಶದಲ್ಲೆಲ್ಲ ಪಸರಿಸಿತು.

"ಕರ್ನಾಟಕ ಕಾಂಗ್ರೆಸ್ ಸದಸ್ಯರಲ್ಲಿ ಜಿಲ್ಲೆಯಲ್ಲಿ ಮೊದಲು ವೈಯಕ್ತಿಕ ಸತ್ಯಾಗ್ರಹ ಮಾಡುವ ಅವಕಾಶವನ್ನು ಕೆ.ಪಿ.ಸಿ.ಸಿ. ಟಿ.ಆರ್. ನೆಶ್ವಿಗೆ ಒಪ್ಪಿಗೆ ಕೊಟ್ಟಿತು. ಅವರು ವೈಯಕ್ತಿಕ ಸತ್ಯಾಗ್ರಹ ಮಾಡಲು ನಿರ್ಧರಿಸಿ ಹಂಸಬಾವಿಯಲ್ಲಿ 'ನಮಗೆ ಯುದ್ಧ ಬೇಡ ಯುದ್ಧಕ್ಕೆ ನಮ್ಮ ಬೆಂಬಲವಿಲ್ಲ"[೭೭] ಎಂದು ಬೀದಿಯಲ್ಲಿ ಘೋಷಣೆ ಕೂಗುತ್ತ ನಡೆದರು. ಪೊಲೀಸರು ಅವರನ್ನು ಬಂಧಿಸಿ ಹಿಂಡಲಗಾ ಜೇಲಿಗೆ ಕಳುಹಿಸಿದರು.

"ಸವಣೂರು ಭಾಗದಲ್ಲಿ ಶಿಗ್ಗಿ ಗ್ರಾಮದ ಬಸವಕುಮಾರ ಮುಳಗುಂದಮಠ, ಕಳಸ ಗ್ರಾಮದಲ್ಲಿ ವೀರಭದ್ರಪ್ಪ ಮಾಳಿ ಹೂವಿನಶಿಗ್ಗಿ(೫.೪.೧೯೪೧ ರಂದು) ಲಕ್ಷ್ಮೀ ಗುಡಿಯ ಮುಂದೆ, ವೀರಭದ್ರಪ್ಪ ಬಿದರಳ್ಳಿ ಶಿಗ್ಗಿಯಲ್ಲಿ ವೈಯಕ್ತಿಕ ಚಳುವಳಿ ಮಾಡಿ ಬಂಧಿತರಾದರು. ಅದಕ್ಕಾಗಿ ೪ ತಿಂಗಳ ಜೈಲುವಾಸ ಅನುಭವಿಸಿದರು.

ರಾಯಪ್ಪ ನರಗುಂದ ಕೂಡ ಕಾಂಗ್ರೆಸ್‌ನಿಂದ ಪರವಾನಗಿ ಪಡೆದು ಚಳುವಳಿ ಮಾಡುವ ದಿನಾಂಕ, ವೇಳೆಯನ್ನು ಸರಕಾರಕ್ಕೆ ತಿಳಿಸಿದರು. ವೀರಭದ್ರಪ್ಪ ಬಿದರಹಳ್ಳಿ ಹೂವಿನಶಿಗ್ಗಿಯಲ್ಲಿ ಚಳುವಳಿ ಮಾಡಲು ಪರವಾನಗಿ ಪಡೆದು ಭಾಗವಹಿಸಿ ಬಂಧಿತರಾದರು. ನಂತರದಲ್ಲಿ ಇವರ ತಂದೆ ವೀರಪ್ಪ ಚಳುವಳಿಗಾರ ರಾಯಪ್ಪನು ಶಿಗ್ಗಿ ಸಂತೆಗೆ ಹೋದಾಗ ಉಪಾಯದಿಂದ ತಮ್ಮ ಮನೆಗೆ ಕರೆದುಕೊಂಡು ಹೋಗಿ 'ನನ್ನ ಮಗ ನೇಕಾರಿಕೆ ಉದ್ಯೋಗ ಮಾಡಿ ನಮ್ಮ ಸಂರಕ್ಷಣೆ ಮಾಡುತ್ತಿದ್ದ. ಅವನಿಗೆ ಪ್ರೋತ್ಸಾಹ ನೀಡಿ ಚಳುವಳಿ ಮಾಡಿಸಿ ಜೈಲಿಗೆ ಕಳುಹಿಸಿರುವೆ. ಈಗ ನಮಗೆ ಹೊಟ್ಟೆಗೆ ಹಾಕುವವರು ಯಾರು' ಎಂದು ರಾಯಪ್ಪ ನರಗುಂದರೊಡನೆ ಜಗಳಕ್ಕೆ ನಿಂತನು. ಇದನ್ನು ಕೇಳಿದ ಪಕ್ಕದ ಮನೆಯ ಪ್ರಭಣ್ಣ ಮಂಜಲಾಪೂರ ಇವರಿದ್ದ ಕಡೆ ಬಂದು 'ನಿನ್ನ ಮಗ ಗಾಂಧೀಜಿ ಪರವಾನಗಿ ಪಡೆದುಕೊಂಡು ಚಳುವಳಿ ಮಾಡಿ ಜೈಲಿಗೆ ಹೋದರೆ ರಾಯಪ್ಪ ಏನೂ ಮಾಡಬೇಕು? ಈ ರೀತಿ ಮಾತನಾಡಲು ನಾಚಿಕೆಯಾಗಲ್ಲವೇ? ದೇಶ ಸೇವೆಗೆ ಹೋದವರ ಬಗ್ಗೆ, ದೇಶ ಸೇವೆ ಮಾಡುವವರ ಬಗ್ಗೆ ಮಾತನಾಡಲು ನಿಮಗೆ ಚಳುವಳಿಯ ಬಗ್ಗೆ ಏನು ಗೊತ್ತು' ಎನ್ನಲು, ಇದನ್ನು ಕೇಳಿದ ವೀರಭದ್ರಪ್ಪ ಸುಮ್ಮನಾದನು."[೭೮] ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಚಳುವಳಿಗಾರರು ತಮ್ಮ ಮನೆಗಳಲ್ಲಿ ತಿಳಿಸದೆಯೇ ಚಳುವಳಿಯಲ್ಲಿ ಭಾಗವಹಿಸುತ್ತಿರುವುದು, ತಮ್ಮ ಮನೆಯ ಬಡತನದ ಪರಿಸ್ಥಿತಿಯನ್ನು ಲೆಕ್ಕಿಸದೇ ಸೆರೆಮನೆಗೆ ಸೇರಿರುವುದು ಗಮನಿಸಬಹುದಾದ ಸಂಗತಿಗಳಾದರೂ, ಮನೆಯ ಪರಿಸ್ಥಿತಿ ಅವರ ಪಾಲಕರಿಂದ ಈ ರೀತಿಯ ಮಾತುಗಳನ್ನಾಡಿಸಿರಬಹುದು ಇದಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಡುವ ಅವಶ್ಯಕತೆಯಿಲ್ಲ, ಕಾರಣ ಸಂತೆಯಲ್ಲಿಯೇ ಮಗನ ಬಗ್ಗೆ ವಿಚಾರಿಸಿಲ್ಲ ಬದಲಾಗಿ ತಮ್ಮ ಮನೆ ಸೇರಿದ ಮೇಲೆ ರಾಯಪ್ಪನನ್ನು ಬೈದಿರುವುದು, ಅವರು ಚಳುವಳಿಗಾರರು ಅವರನ್ನು ಸಾರ್ವಜನಿಕ ಸ್ಥಳದಲ್ಲಿ ಮಾತನಾಡಿಸಬಾರದು ಎಂಬ ಅವರ ಸಾಮಾನ್ಯ ಜ್ಞಾನ

ನಮಗೆ ಪರಿಚಯವಾಗುತ್ತದೆ. ಹಾಗೆಯೇ ಅದೇ ಊರಿನ ಪ್ರಭಣ್ಣ ಮಂಜಲಾಪುರ ಎಂಬುವವರ ಮಧ್ಯಸ್ಥಿಕೆ, ಚಳುವಳಿಗಾರರ ಬಗ್ಗೆ ಅವರ ಮಾತುಗಳು ಸಾಮಾನ್ಯ ಜನತೆಯ ರಾಷ್ಟ್ರಪ್ರೇಮವನ್ನು ಗಮನಿಸಲಾಗಿದೆ.

ರಾಯಪ್ಪ ವೈಯಕ್ತಿಕ ಚಳುವಳಿಯಲ್ಲಿ ಭಾಗವಹಿಸುವ ದಿನ ರಾಯಪ್ಪನನ್ನು ಯಲವಿಗಿ ಯವರೆಗೂ ಕಳುಹಿಸಿ ಬರಲು ಬಂಡಿಯೊಂದನ್ನು ಸಿಂಗರಿಸಿದ್ದರು. ಶ್ರೀಮತಿ ನಾಗಮ್ಮ ನರಗುಂದ ಪತಿಗೆ ಆರತಿ ಮಾಡಿ ತಿಲಕವಿಟ್ಟು ನಮಸ್ಕರಿದಳು. ಗಂಡ ಸತ್ಯಾಗ್ರಹಕ್ಕೆ ಹೊರಟರೆ, ಪತ್ನಿ ಅದಕ್ಕೆ ಪ್ರೋತ್ಸಾಹ ನೀಡುತ್ತಿರುವ ಈ ಘಟನೆ ಅಂದು ಮಹಿಳೆಯರಲ್ಲಿಯೂ ರಾಷ್ಟ್ರಪ್ರೇಮದ ಕೆಚ್ಚು ತ್ಯಾಗದ ಮನೋಭಾವನೆಗಳ ಪರಿಚಯವಾಗುತ್ತವೆ.

"ರಾಯಪ್ಪನು ಹೂವಿನಶಿಗ್ಲಿಯಲ್ಲಿ ಬಂಡಿಯನ್ನೇರಿ ಯಲವಿಗಿಯ ಮುನಾಫೀರ್ ಬಂಗ್ಲೆಯವರೆಗೆ ಮೆರವಣಿಗೆಯಲ್ಲಿ ಬಂದು ಬೋಲೋ ಭಾರತ ಮಾತಾಕೀ ಜೈ, ಒಂದೇ ಮಾತರಂ, ಭಾರತದ ಸ್ವಾತಂತ್ರ್ಯ ನಮ್ಮ ಜನ್ಮ ಸಿದ್ಧ ಹಕ್ಕು ಅದನ್ನು ನಾವು ಪಡದೇ ತೀರುವೆವು ಎಂದು ಘೋಷಣೆ ಕೂಗುತ್ತಿದ್ದರೆ ಅಲ್ಲಿಯೇ ಹಾಜರಿದ್ದ ಶಿಗ್ಗಾವಿ ತಾಲೂಕು ಬೆಂಡಿಗೇರಿ ಫೌಜುದಾರ ನಾವು ನಿಮ್ಮನ್ನು ಬಂಧಿಸಿದ್ದೇವೆ ಎಂದು ಹುಬ್ಬಳ್ಳಿ ಕೋರ್ಟಿಗೆ ಹಾಜರುಪಡಿಸಿ, ಅಲ್ಲಿ ಅವರಿಗೆ ೪ ತಿಂಗಳ ಶಿಕ್ಷೆಯಾಗಿ ಬಿಜಾಪುರ ಜೈಲಿಗೆ ಕಳುಹಿಸಲಾಯಿತು."[೭೯] ಇಲ್ಲಿ ಪೋಲೀಸರು ಯಾವುದೇ ರೀತಿಯಲ್ಲಿ ತೊಂದರೆ ಕೊಡದಿರುವುದು ವಿಶೇಷ.

೧೯೪೦ರಲ್ಲಿ ಪರಮಣ್ಣ ಹೊಸಮನಿ ವೈಯಕ್ತಿಕ ಸತ್ಯಾಗ್ರಹವನ್ನು ಕರ್ಜಗಿಯಲ್ಲಿ ವ್ಯಾಖ್ಯಾನ ಮಾಡುವಾಗ ಬಂಧಿಸಿ ಹಾವೇರಿ ನ್ಯಾಯಾಲಯದಲ್ಲಿ ಒಂದು ವರ್ಷ ಶಿಕ್ಷೆಯಾಗಿ ಧಾರವಾಡದ ಜೈಲಿಗೆ ಕಳುಹಿಸಲಾಯಿತು. ಮೈಲಾರ ಮಹದೇವಪ್ಪ ವೈಯಕ್ತಿಕ ಸತ್ಯಾಗ್ರಹ ಮಾಡಿ ಒಂದು ವರ್ಷ ಶಿಕ್ಷೆಗೆ ಗುರಿಯಾದ ವಿವರವನ್ನು ದೇವೇಂದ್ರಪ್ಪ ವಿಭೂತಿ ನೆನಪಿಸಿಕೊಳ್ಳುತ್ತಾರೆ.

ಶಿಗ್ಗಾವಿ ಭಾಗದಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಲು ಅನಂತಭಟ್ಟ, ನಾಗರಾಜ ಬಸ್ತಿ ಮತ್ತು ಬಸವಣ್ಯಪ್ಪ ಹೆಸರೂರು ಈ ಮೂರು ಜನ ಚಳುವಳಿಗಾರರು ವೈಯಕ್ತಿಕ ಸತ್ಯಾಗ್ರಹ ಮಾಡಲು ಗಾಂಧೀಜಿ ಅನುಮತಿಗಾಗಿ ಮನವಿ ಕಳುಹಿಸಿದರು. ಆದರೆ ಗಾಂಧೀಜಿ ಶಿಗ್ಗಾವಿ ಭಾಗದ ಚಳುವಳಿ ಇನ್ನೂ ಬಿರುಸಿನಿಂದ ನಡೆಯಬೇಕಾಗಿದೆ. ಹಾಗಾಗಿ ಅನಂತಭಟ್ಟ ಹುರುಳಿಕುಪ್ಪಿಯನ್ನು ಬಿಟ್ಟು ನಾಗರಾಜ ಬಸ್ತಿ ಮತ್ತು ಬಸವಣ್ಯಪ್ಪ ಹೆಸರೂರು ಇವರು ವೈಯಕ್ತಿಕ ಸತ್ಯಾಗ್ರಹ ಮಾಡಲು ಅವಕಾಶ ಕೊಡುವುದಾಗಿ ತಿಳಿಸಿದ್ದರಿಂದ ವೈಯಕ್ತಿಕ ಸತ್ಯಾಗ್ರಹದಿಂದ ಅನಂತಭಟ್ಟರು ಹೊರಗುಳಿಯಬೇಕಾಯಿತು. ಮತ್ತೊಂದೆಡೆ ನಾಗರಾಜ ಬಸ್ತಿ ಮತ್ತು ಬಸವಣ್ಯಪ್ಪ ಹೆಸರೂರು ಒಬ್ಬರು ಶಿಗ್ಗಾವಿಯ ಸಮೀಪದ ಗಂಗಿಬಾವಿಯಲ್ಲಿ ಮತ್ತೊಬ್ಬರು ಶಿಗ್ಗಾವಿಯಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಿ ಬಂಧಿಸಿ ಜೈಲಿಗೆ ಕಳುಹಿಸಲಾದ ವಿವರವನ್ನು ಸುಬ್ಬಣ್ಣಾಚಾರ್ಯ ಅಕ್ಕಿವಳಿಯಿಂದ ತಿಳಿದುಬರುತ್ತದೆ.

೧೯೪೧ರಲ್ಲಿ ಹಾನಗಲ್ಲು ಭಾಗದಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಿದವರು ೧೦ರಿಂದ ೧೨ ಜನರು. ಪ್ರಮುಖರೆಂದರೆ ಅಪ್ಪಣ್ಣರಾವ್ ದೇಸಾಯಿ, ಮೋತಿರಾವ್ ಕುಲಕರ್ಣಿ, ಅ.ನಾ.ಕುಂದಾಪುರ, ಮಲ್ಲಪ್ಪ ಅಕ್ಕಿ, ನಾ.ನ. ಬಹದ್ದೂರ್ ದೇಸಾಯಿ, ರಂಗಾಚಾರ್ಯ ಗದಗಕರ್ ಇನ್ನು ಮುಂತಾದವರು ಹಾನಗಲ್ ಭಾಗದಲ್ಲಿ ವೈಯಕ್ತಿಕ ಚಳುವಳಿ ಮಾಡಿದ ಬಗ್ಗೆ ಅಕ್ಕಿಆಲೂರಿನ ಚಳುವಳಿಗಾರ ಗುಡ್ಡಪ್ಪ ಹರಿಜನ ವಿವರ ನೀಡುತ್ತಾರೆ.

ಹಾವೇರಿ ಜಿಲ್ಲೆಯಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಲು ಇಚ್ಚಿಸಿದ್ದ "ವೆಂಕಟೇಶ ಮಾಗಡಿ ಇವರಿಗೆ ಗಾಂಧೀಜಿ ವೈಯಕ್ತಿಕ ಸತ್ಯಾಗ್ರಹ ಬೇಡ ವಿಧಾಯಕ ಕಾರ್ಯ ಮಾಡಿರೆಂದು ಇವರ ಮನವಿಗಳನ್ನು ತಿರಸ್ಕರಿಸಿದರು. ಜಿಲ್ಲೆಯ ಮತ್ತೊಬ್ಬ ನಾಯಕ ವೀರನಗೌಡ ಪಾಟೀಲ್ ಹಾಗೂ ಹಾನಗಲ್ಲಿನ ಸಿಂಧೂರ ಸಿದ್ದಪ್ಪ ಅಕ್ಕಿಆಲೂರಿನ ಸುರುಳೇಶ್ವರದಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಿದರು ಹಾಗೂ ಜೈಲು ಸೇರಿದರು."[೮೦] ವೈಯಕ್ತಿಕ ಸತ್ಯಾಗ್ರಹದಲ್ಲಿ ಹಾವೇರಿ ಜಿಲ್ಲೆಯಲ್ಲಿಯೇ ಹಾನಗಲ್ ಭಾಗದಲ್ಲಿ ಹೆಚ್ಚು ಈ ಚಳುವಳಿಯಲ್ಲಿ ಹೆಚ್ಚು ಸತ್ಯಾಗ್ರಹಿಗಳು ಭಾಗಿಯಾಗಿದ್ದು ಆ ಭಾಗದ ಜನಸಾಮಾನ್ಯರಿಗೆ ಪ್ರೇರಣೆಯಾಗಿರುವುದರಲ್ಲಿ ಅನುಮಾನವಿಲ್ಲ.

೧೯೪೦ರಲ್ಲಿ ಬ್ಯಾಡಗಿಯಲ್ಲಿ ಪಂಚಪ್ಪ ಕಬ್ಬೂರು, ಸಿದ್ದಪ್ಪ ಚ.ಹುಂಬಿ ಇವರು ಸತ್ಯಾಗ್ರಹ ಮಾಡಿದಾಗ ಇವರಿಗೆ ೪ ತಿಂಗಳ ಶಿಕ್ಷೆಯಾಗಿ ಹಿಂಡಲಗಾ ಜೈಲಿಗೆ ಹಾಕಲಾಯಿತು. ಇದು ಬ್ಯಾಡಗಿ ಹೋರಾಟಗಾರರನ್ನು ಕೆರಳಿಸಿದ ಬಗ್ಗೆ ಬ್ಯಾಡಗಿಯ ಚಳುವಳಿಗಾರ ಷಡಕ್ಷರಪ್ಪ ಮಹಾರಾಜಪೇಟೆ ವಿವರಿಸುತ್ತಾರೆ.

"ಸಮಗ್ರ ಹಿಂದುಸ್ಥಾನದಲ್ಲಿ ವೈಯಕ್ತಿಕ ಚಳುವಳಿಯಲ್ಲಿ ಭಾಗವಹಿಸಲು ಆಯ್ದುಕೊಂಡ ೩೦,೦೦೦ ಸತ್ಯಾಗ್ರಹಿಗಳಲ್ಲಿ ಇಂದಿನ ಕರ್ನಾಟಕ ರಾಜ್ಯದ ವತಿಯಿಂದ ೫,೦೦೦ ಕನ್ನಡಿಗರು ಭಾಗವಹಿಸಿದ್ದು, ಈ ಸತ್ಯಾಗ್ರಹ ನಿರಂತರ ೧೪ ತಿಂಗಳು ನಡೆಯಿತು. ಈ ಚಳುವಳಿಯಲ್ಲಿ ಹಾವೇರಿ ಜಿಲ್ಲೆಯಿಂದ ಸುಮಾರು ೮೬ ಜನ ಭಾಗವಹಿಸಿದ್ದರೆಂದು ಹೇಳಲಾಗಿದೆ. ಭಾರತದಲ್ಲಿ ವೈಯಕ್ತಿಕ ಚಳುವಳಿಯಲ್ಲಿ ಅಧಿಕ ಪ್ರಮಾಣದ ಜನರು ಭಾಗವಹಿಸಿದ್ದನ್ನು ಕಂಡುಕೊಂಡ ಗಾಂಧೀಜಿ ಬ್ರಿಟಿಷರೊಂದಿಗೆ ಸಂಧಾನಕ್ಕೆ ಅನುಕೂಲವಾಗಲೆಂದು ವೈಯಕ್ತಿಕ ಚಳುವಳಿಯನ್ನು ನಿಲ್ಲಿಸಲು ನಿರ್ಧರಿಸಿದರು."[೮೧] ಹಾವೇರಿ ಜಿಲ್ಲೆಯು ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಿದ ಚಳುವಳಿಗಾರರು ನಿರ್ವಹಿಸಿದ ಪಾತ್ರವನ್ನು ಹಾಗೂ ಘಟನೆಗಳನ್ನು ಗುರುತಿಸಲಾಗಿದೆ.

### ೪.೧೦. ಭಾರತ ಬಿಟ್ಟು ತೊಲಗಿ ಚಳುವಳಿ

ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಹಾಗೂ ಆಂಗ್ಲರನ್ನು ನಡುಗಿಸಿದ ಚಳುವಳಿ. 'ಏಷ್ಯಾದಲ್ಲಿ ಪ್ರಚಂಡ ಜಯಭೇರಿ ಭಾರಿಸಿದ ಜಪಾನೀಯರು ಭಾರತದತ್ತ ಬರುತ್ತಿದ್ದರು. ಇಂಗ್ಲೀಷರಿಗೆ ಅವರಿಂದ ಭಾರತವನ್ನು ರಕ್ಷಿಸಿಕೊಳ್ಳುವಷ್ಟು ಶಕ್ತಿಯಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಕಾಂಗ್ರೆಸ್‌ನ ಅಧ್ಯಕ್ಷರಾದ ಮೌಲಾನಾ ಆಜಾದ್‌ರು ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರೊಂದಿಗೆ ಸಂಧಾನಕ್ಕೆ ಮುಂದಾದಾಗ ಬ್ರಿಟಿಷರು 'ನೀವು ಯುದ್ಧದಲ್ಲಿ ನಮಗೆ ಸಹಕರಿಸಿದರೆ ಸ್ವಾತಂತ್ರ್ಯ ಕೊಡುತ್ತೇವೆ'

ಎಂದಾಗ ಆಜಾದ್‌ರು 'ನೀವು ಸ್ವಾತಂತ್ರ್ಯ ಕೊಡುತ್ತೇವೆ ಎಂದು ವಚನ ನೀಡಿದರೆ ನಾವು ನಿಮ್ಮೊಂದಿಗೆ ಯುದ್ಧಕ್ಕೆ ಸಹಕರಿಸುತ್ತೇವೆ' ಎನ್ನಲು ಬ್ರಿಟಿಷರು ಸಮ್ಮತಿಸಲಿಲ್ಲ ಕಾರಣ ಭಾರತವನ್ನು ಕಳೆದುಕೊಳ್ಳಲು ಸಿದ್ಧರಿರಲಿಲ್ಲ. ಹಾಗೂ ಸುಭಾಸ್‌ಚಂದ್ರ ಭೋಸರ ಬಾನುಲಿ ಭಾಷಣ, ಬರ್ಮಾ ಸೇನೆಯಲ್ಲಿ ಬ್ರಿಟಿಷರು ಅನುಸರಿಸುತ್ತಿದ್ದ ವರ್ಣಭೇದ ನೀತಿ, ಜಪಾನೀಯರ ಮುನ್ನಡೆ, ಪೂರ್ಣ ಸ್ವಾತಂತ್ರ್ಯಕ್ಕೆ ಚರ್ಚಿಲ್‌ರ ನಕಾರ ಕ್ವಿಟ್ ಇಂಡಿಯಾ ಚಳುವಳಿ ಆರಂಭವಾಗಲು ಸಕಾರಣಗಳಾಗಿದ್ದವು.

**ಕ್ವಿಟ್ ಇಂಡಿಯಾ ಠರಾವು** (Quit India Resolution); ಭಾರತದ ಮೇಲೆ ಜಪಾನೀಯರು ಬರುತ್ತಿದ್ದ ಹಿನ್ನೆಲೆಯಲ್ಲಿ ಕ್ವಿಟ್ ಇಂಡಿಯಾ ಠರಾವು ಅಂಗೀಕರಿಸಬೇಕಾಯಿತು. ೧೯೪೨ ಜುಲೈ ೧೪ರಂದು ವಾರ್ದಾದಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಗಾಂಧೀಜಿ ಸಲಹೆಯಂತೆ **"ಭಾರತ ಬಿಟ್ಟು ತೊಲಗಿ"** ಎಂಬ ನಿರ್ಣಯವನ್ನು ಅಂಗೀಕರಿಸಿ ಬ್ರಿಟಿಷರಿಗೆ ರಾಜಕೀಯ ಒಪ್ಪಂದಕ್ಕೆ ಬರಲು ೨೪ ದಿನಗಳ ಅಂತಿಮ ಗಡುವು ನೀಡಿತು. ಆದರೆ ಬ್ರಿಟಿಷರು ಆ ಠರಾವಿಗೆ ಯಾವುದೇ ಪ್ರತಿಕ್ರಿಯೆ ಕೊಡಲಿಲ್ಲ. ಹೀಗಾಗಿ ಕಾಂಗ್ರೆಸ್ ತನ್ನ ಮುಂದಿನ ಯೋಜನೆಗೆ ಸಿದ್ಧವಾಯಿತು."[೮೨]

'ಭಾರತ ಬಿಟ್ಟು ತೊಲಗಿ' ಈ ವ್ಯಾಖ್ಯೆ ಭಾರತದ ಚಳುವಳಿಗಾರರಿಗೆ ಕೇಳಿಸಿದ್ದು ೧೯೪೨ ಆಗಸ್ಟ್ ೭, ಮುಂಬಯಿ ನಗರದ 'ಗವಾಲಿಯಾ' (ಈಗ ಆ ಕೆರೆಯ ಮೈದಾನವನ್ನು ಆಗಸ್ಟ್ ಕ್ರಾಂತಿ ಮೈದಾನ ಎಂದು ಕರೆಯಲ್ಪಡುತ್ತದೆ) ಕೆರೆಯ ಮೈದಾನದಲ್ಲಿ, ಕಾಂಗ್ರೆಸ್ ನಾಯಕರ ಬೃಹತ್ ಸಭೆ ನಡೆಯಿತು. ಮಾರನೇ ದಿನವೇ ಆಗಸ್ಟ್ ೮, ೧೯೪೨ ರಂದು ಸಭೆ ಸೇರಿದ್ದ ಕಾಂಗ್ರೆಸ್ ಸಮಿತಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ'(Quit India) ಎಂಬ ಎಚ್ಚರಿಕೆಯನ್ನು ಬ್ರಿಟಿಷರಿಗೆ ಕೊಟ್ಟರೆ, ಭಾರತೀಯರಿಗೆ ಸ್ವಾತಂತ್ರ್ಯಕ್ಕಾಗಿ ನಮಗೆ ಇದು ಕೊನೆಯ ಹೋರಾಟ ಅದಕ್ಕಾಗಿ **'ಮಾಡು ಇಲ್ಲವೆ ಮಡಿ'** Do or Die ಎಂಬ ಮಂತ್ರವನ್ನು ಎಲ್ಲ ಚಳುವಳಿಗಾರರಿಗೆ ಘೋಷಿಸಲಾಯಿತು."[೮೩]

ಸರಕಾರ ಕೂಡಲೇ ಹೋರಾಟಕ್ಕೆ ಕರೆ ನೀಡಿದ ಗಾಂಧೀಜಿಯಾದಿಯಾಗಿ ಕಾಂಗ್ರೆಸ್ಸಿನ ಎಲ್ಲ ರಾಷ್ಟ್ರ ನಾಯಕರುಗಳನ್ನು ಸರಕಾರ ದಸ್ತಗಿರಿ ಮಾಡಿ ಸೆರೆಮನೆಯಲ್ಲಿಟ್ಟಿತ್ತು. ಕಾಂಗ್ರೆಸ್ ಸಮಿತಿಗಳು ನ್ಯಾಯಬಾಹಿರ ಸಂಸ್ಥೆಗಳೆಂದು ಸರಕಾರದಿಂದ ಘೋಷಿಸಲ್ಪಟ್ಟವು. ಸಭೆ ಸಮಾರಂಭಗಳನ್ನು ನಡೆಸುವಂತಿಲ್ಲ. ಮೆರವಣಿಗೆ ಹೊರಡುವಂತಿಲ್ಲ; ಹಾಗೇನಾದರೂ ಮಾಡಿದರೆ ಲಾಠಿ ಪ್ರಯೋಗ, ಅದಕ್ಕೂ ಹೋಗದಿದ್ದರೆ ಗುಂಡುಹಾರಿಸಿ ಜನರನ್ನು ಚದುರಿಸುತ್ತಿದ್ದರು.

"ಗಾಂಧೀಜಿ ಜೊತೆಗೆ ರಾಷ್ಟ್ರನಾಯಕರ ಬಂಧನವಾದಾಗ ಚಳುವಳಿಗಾರರಿಗೆ ನಾಯಕರೇ ಇಲ್ಲದಂಥ ವಾತಾವರಣ ನಿರ್ಮಾಣವಾಯಿತು. ಆಗ ಗಾಂಧೀಜಿ ಅಧಿಕೃತ ಪ್ರತಿಪಾದಕ ಕಿಶೋರಿಲಾಲ್ ಮಶ್ರೂವಾಲಾ 'ಹರಿಜನ' ಪತ್ರಿಕೆಯಲ್ಲಿ 'ಚಲೇಜಾವ್ ಚಳುವಳಿ ಮಾಡಲು ಎಲ್ಲರೂ ನಾಯಕರುಗಳನ್ನು ಕಾಯಬೇಡಿ ಬದಲಾಗಿ ಅಹಿಂಸಾ ಧರ್ಮದ ಯಾವ ಕ್ರಮವೇ ಆಗಲಿ ಸಿಂಧುವಾಗುತ್ತದೆ, ಅಂಥ ಚಳುವಳಿಯನ್ನು ಯಾರು ಬೇಕಾದರೂ, ಎಲ್ಲಿ ಬೇಕಾದರೂ

ಮಾಡಲು ಸ್ವತಂತ್ರರು, ಜನರನ್ನು, ಜನರ ಸೊತ್ತನ್ನೂ, ಹಿಂಸೆಗೆ, ದಾಳಿಗೆ ಗುರಿಮಾಡದೆ ಅಹಿಂಸಾ ಮಾರ್ಗ ಅನುಸರಿಸಿ ಚಳುವಳಿ ಮಾಡಿ' ಎಂದು ಲೇಖನ ಬರೆದರು. ಈ ಲೇಖನದಿಂದ ಸ್ಫೂರ್ತಿ ಪಡೆದ ಧಾರವಾಡ(ಹಾವೇರಿಯನ್ನು ಸೇರಿಕೊಂಡಂತೆ) ಜಿಲ್ಲೆಯ ಚಳುವಳಿಯ ನಾಯಕರು ಪೊಲೀಸರಿಗೆ ಸಿಗದೆ ಚಳುವಳಿಯ ರೂಪುರೇಷೆಗಳನ್ನು ಪ್ರಾರಂಭಿಸಿದರು.

"೯.೮.೧೯೪೨ ರಂದು ಧಾರವಾಡದಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿ ಸಭೆ ಸೇರಿ ಜಿಲ್ಲೆಯ ಎಲ್ಲ ಭಾಗಗಳಲ್ಲಿ ಯಾವ ರೀತಿ ಚಳುವಳಿಗಳನ್ನು ನಡೆಸುವ ಬಗ್ಗೆ ಚರ್ಚಿಸಲಾಯಿತು. ಪ್ರಮುಖವಾಗಿ ಸಭೆ, ಮೆರವಣಿಗೆ, ದಿನಾಚರಣೆಗಳು ಹೀಗೆ ಯೋಜನೆಗಳನ್ನು ರೂಪಿಸಿದರು. ಪ್ರಮುಖವಾಗಿ ಮಾಡಬೇಕಾದ ಕಾರ್ಯಗಳೆಂದರೆ - ೧. ಸಂಪರ್ಕ ಸಾಧನಗಳ ನಾಶ, ೨. ರೈಲು ಹಳಿಗಳನ್ನು ಕಿತ್ತು ರೈಲು ಸಾರಿಗೆಯನ್ನು ತಡೆಯುವುದು, ೩. ಎಲ್ಲ ಗ್ರಾಮದ ದಫ್ತರುಗಳನ್ನು ಸುಡುವುದು, ೪, ರೈಲು ನಿಲ್ದಾಣ, ಗ್ರಾಮಚಾವಡಿ, ಧರ್ಮ ಶಾಲೆ, ಡಾಕ್ ಬಂಗ್ಲೆಗಳನ್ನು ಸುಡುವುದು. ೫. ತಮ್ಮ ವಿರುದ್ಧ ಬರುವ ಪೊಲೀಸರು ಮತ್ತು ಇತರರನ್ನು ನಿಶಸ್ತ್ರಗೊಳಿಸುವುದು, ೬, ಕಂದಾಯ ಸಂಗ್ರಹ ಮಾಡುವ ಕೇಂದ್ರಗಳನ್ನು ಸೂರೆ ಮಾಡುವುದು, ೭. ಮೇಲ್ ಬ್ಯಾಗಗಳನ್ನು ಅಪಹರಿಸುವುದು. ಇವು ಪ್ರಮುಖ ಕಾರ್ಯಗಳಾಗಿದ್ದವು."[೮೪] ಚಳುವಳಿಯ ನಾಯಕರುಗಳು ಸರ್ವರೂ ಪಾಲ್ಗೊಳ್ಳುವಂತೆ ದಶಸೂತ್ರಗಳನ್ನು ಘೋಷಿಸಿದ್ದರು. ಅವುಗಳಲ್ಲಿ ಪ್ರಮುಖವಾಗಿ –

೧. "ಸರಕಾರಿ ಸಾಲಪತ್ರಗಳನ್ನು ಕೊಳ್ಳಬಾರದು. ೨. ಬ್ರಿಟಿಷ್ ಬ್ಯಾಂಕುಗಳೊಡನೆ ವ್ಯವಹರಿಸಬಾರದು. ೩. ಸ್ವದೇಶಿ ವಸ್ತುಗಳನ್ನೇ ಕೊಳ್ಳಬೇಕು. ೪. ಸರಕಾರಿ ಮುದ್ರಾ(ಕರೆನ್ಸಿ ನೋಟುಗಳು) ನಂಬಬೇಡಿರಿ. ೫. ಅಂಜದೇ ಎಲ್ಲವನ್ನೂ ಧೈರ್ಯದಿಂದ ಎದುರಿಸಿರಿ. ೬. ಶತ್ರುಗಳಿಗೆ ಸಹಾಯವನ್ನು ಮಾಡುವವರನ್ನು ಹತ್ತಿರ ಸೇರಿಸಿಕೊಳ್ಳಬೇಡಿರಿ. ೭. ದೇಶದ ಶತ್ರುಗಳಿಗೆ ಸಹಾಯವನ್ನು ಮಾಡಬೇಡಿರಿ. ೮. ಚಲನಚಿತ್ರಗಳನ್ನು ಬಹಿಷ್ಕರಿಸಿರಿ ಮತ್ತು ಅತ್ಯಲ್ಪ ಪ್ರಯಾಣ ಮಾಡಿರಿ. ೯. ಸುರಕ್ಷಿತವಾಗಿರುವ ಹಳ್ಳಿಗಳಿಗೆ ಹೋಗಿರಿ. ೧೦. ಎಷ್ಟೇ ಹೆಚ್ಚಿನ ಬೆಲೆ ಬಂದರೂ ದವಸ ಧಾನ್ಯಗಳನ್ನು ಸರಕಾರಕ್ಕೆ ಮಾರಬೇಡಿರಿ. ಅವು ಆಪತ್ಕಾಲದಲ್ಲಿ ಪ್ರಯೋಜನಕ್ಕೆ ಬರುವವು. ಈ ಮಾತನ್ನು ನಿಮ್ಮ ಗೆಳೆಯರಿಗೂ ಹೇಳಿರಿ. ಈ ಪ್ರಕಟಣೆಯನ್ನು ಕನ್ನಡಿಕರಿಸಿ ಎಲ್ಲ ಕಡೆ ಹಂಚಲಾಯಿತು."[೮೫] ಅಂದರೆ ಸಾಮಾನ್ಯರು ಸಹ ಚಳುವಳಿಗೆ ಭಾಗವಹಿಸಬೇಕು ಮತ್ತು ಚಳುವಳಿಗಾರರು ಪಾಲಿಸಬೇಕಾದ ಪದ್ಧತಿಗಳನ್ನು ಅಥವಾ ನಿಯಮಗಳನ್ನು ರಾಜ್ಯ ನಾಯಕರು ಹೊರಡಿಸಿ ಅವುಗಳನ್ನು ಪಾಲಿಸುವಂತೆ ಸೂಚಿಸಲಾಗಿತ್ತು.

**ಹಾವೇರಿ ಜಿಲ್ಲೆಯಲ್ಲಿ ಚಳುವಳಿ :** ರಾಷ್ಟ್ರನಾಯಕರುಗಳ ಬಂಧನದ ನಂತರ ಹಾವೇರಿ ಜಿಲ್ಲೆಯ ಚಳುವಳಿಯ ನಾಯಕರನ್ನು ಪೊಲೀಸರು ಬಂಧಿಸಿದ್ದರು. ಅದರಿಂದ ಜಿಲ್ಲೆಯಲ್ಲಿ ಈಗ ೨ನೇ ಹಂತದ ನಾಯಕರು ತಾವೇ ಚಳುವಳಿಯ ನಾಯಕತ್ವ ವಹಿಸಿಕೊಂಡು ಚಳುವಳಿಯನ್ನು ಮುನ್ನಡೆಸಲು ನಿರ್ಧರಿಸಿದರು. ಆ ನಾಯಕರುಗಳು ಯಾರು? ಅವರು ಮಾಡಿದ ಘಟನೆಗಳು ಯಾವುವು? ಎಂಬ ವಿವರವನ್ನು ಕಟ್ಟಿಕೊಡುವ ಪ್ರಯತ್ನ ಇಲ್ಲಿದೆ -

"ಚಳುವಳಿಗಳು ಹಾವೇರಿ ಜಿಲ್ಲೆಯ ಶಿಗ್ಗಾವಿ, ಹಾವೇರಿ, ರಾಣೆಬೆನ್ನೂರು, ಹಿರೇಕೆರೂರು, ಬ್ಯಾಡಗಿ, ಹಂಸಭಾವಿ, ಹಾನಗಲ್ಲು, ತುಮ್ಮಿನಕಟ್ಟಿ, ಹೊಸರಿತ್ತಿ, ದೇವರಗುಡ್ಡ ಅಗಡಿ, ಅಕ್ಕಿಆಲೂರು, ಗುತ್ತಲ ಇನ್ನು ಮುಂತಾದ ಕಡೆ ವಿವಿಧ ರೀತಿಯಲ್ಲಿ ಹೊಸಮನಿ ಸಿದ್ದಪ್ಪ, ಮೈಲಾರ ಮಹದೇವಪ್ಪ, ಕೆ.ಎಫ್. ಪಾಟೀಲ್, ಟಿ.ಆರ್. ನೆಶ್ವಿ, ಮೆಣಸಿನಾಳದ ತಿಮ್ಮನಗೌಡ್ರ, ಕರಿಯಪ್ಪ ಸಂಗೂರು, ವೀರನಗೌಡ ಪಾಟೀಲ್, ಹಳ್ಳಿಕೇರಿ ಗುದ್ಲೆಪ್ಪ, ಪರಮಣ್ಣ ಹೊಸಮನಿ, ಗೋಣೆಪ್ಪ ಕಮತದ ಮುಂತಾದ ಮುಖಂಡರು ತಮ್ಮ ನೇತೃತ್ವದಲ್ಲಿ ಚಲೇಜಾವ್ ಚಳುವಳಿಯನ್ನು ಪರಿಣಾಮಕಾರಿ ರೀತಿಯಲ್ಲಿ ನಡೆಸಿದರು."[೮೬] ಈ ನಾಯಕರುಗಳ ನೇತೃತ್ವದಲ್ಲಿ ನಡೆದ ಘಟನೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಚಲೇಜಾವ್ ಚಳುವಳಿಯ ಬಿಸಿ ಜಿಲ್ಲೆಯಲ್ಲಿ ಮೊದಲು ತಟ್ಟಿದ್ದು ಟಿ.ಆರ್.ನೆಶ್ವಿಗೆ– ಮುಂಬೈಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿ ಸಭೆ ೮.೮.೧೯೪೨ರಂದು ಸಮಾವೇಶವಾದಾಗ ಟಿ.ಆರ್.ನೆಶ್ವಿ ಹಂಸಬಾವಿಯಲ್ಲಿದ್ದರು. ಅವರ ಗಮನವೆಲ್ಲ ಮುಂಬೈ ಕಡೆಯಿತ್ತು; ತಮ್ಮ ನಾಯಕರುಗಳು ಸ್ವೀಕರಿಸುವ ನಿರ್ಣಯಗಳನ್ನು ಅರಿತು ತಮ್ಮ ಮುಂದಿನ ಕಾರ್ಯಕ್ರಮಗಳನ್ನು ರೂಪಿಸುವ ತವಕದಲ್ಲಿದ್ದರು. "ದಿನಾಂಕ ೯ರಂದು ವರ್ತಮಾನ ಪತ್ರಿಕೆ ತಲುಪಿದಾಗಲೇ ಅವರಿಗೆ ಸುದ್ದಿ ತಿಳಿಯಬೇಕು. ವರ್ತಮಾನ ಪತ್ರಿಕೆ ಹಂಸಬಾವಿಗೆ ಬರುವುದು ಮಧ್ಯಾಹ್ನ ಆದರೆ ನೆಶ್ವಿಯವರ ಮನಸ್ಸು ಮಾತ್ರ ಚಾತಕಪಕ್ಷಿಯಂತೆ ಪತ್ರಿಕೆಗಾಗಿ ಕಾಯುತ್ತಿದ್ದರೆ, ಪುನಃ ಮನಸ್ಸಿನಲ್ಲಿ ತಮ್ಮ ನಾಯಕರು ಏನೇ ಆದೇಶವಿತ್ತರೂ ಅದು ಒಂದು ದಿನ ತಡವಾಗಿ ತಿಳಿಯುತ್ತೆ, ಒಂದು ವೇಳೆ ನಾಯಕರು ಉಗ್ರ ಚಳುವಳಿಗೆ ಕರೆ ನೀಡಿದರೆ, ಆ ವಿಷಯ ತಮಗೆ ತಿಳಿಯುವುದರೊಳಗಾಗಿ ಪೊಲೀಸರು ಬಂಧಿಸಬಹುದು"[೮೭] ಎಂದು ಯೋಚಿಸಿ ಹಂಸಬಾವಿಯ ಕಲ್ಲೋಣಿಯಲ್ಲಿದ್ದ ಸೋಮನಗೌಡ ಹುತ್ತನಗೌಡ ಪಾಟೀಲ್ ಅವರ ಮನೆಗೆ ಬಂದು ಸೋಮನಗೌಡರೊಂದಿಗೆ ಮುಂಬೈಯ ವಿಚಾರವಾಗಿ ಮಾತನಾಡುವ ವೇಳೆಗೆ ಪೊಲೀಸರು ಪ್ರತ್ಯಕ್ಷರಾದರು.

'ನೆಶ್ವಿಯವರೇ ನಿಮ್ಮನ್ನು ಆರೆಸ್ಟ್ ಮಾಡ್ತಿವಿ, ಬನ್ನಿ ಜಿಪ್ ಹತ್ತಿ ಎಂದಾಗ, ಟಿ.ಆರ್. ನೆಶ್ವಿ ನಾನೇಕೆ ನಿಮ್ಮ ಜೀಪ್ ಹತ್ತಬೇಕು ನಾನೇನು ತಪ್ಪು ಮಾಡಿದಿನಿ! ನಾ ಜೀಪ್ ಹತ್ತುವುದಿಲ್ಲ ಎಂದರು, ಆ ವೇಳೆಗೆ ಜನ ಸೇರಲಾರಂಭಿಸಿದರು. ಟಿ.ಆರ್.ನೆಶ್ವಿ ಎರಡು ಕರಾರುಗಳಿಗೆ ಒಪ್ಪಿದರೆ ಬರುತ್ತೇನೆಂದಾಗ ಪೊಲೀಸರು ಒಪ್ಪಿದರು. ಅದೇನೆಂದರೆ 'ನಾವೇ ನೆಶ್ವಿಯನ್ನು ಹೊತ್ತು ಜೀಪಿನಲ್ಲಿ ಹಾಕಿದೆವು ಎಂದು ಲೇಖಿ ಹೊರಡಿಸಬೇಕು. ನನ್ನ ತಾಯಿ ಮತ್ತು ಮಕ್ಕಳನ್ನು ನೋಡಲು ಅರ್ಧ ಗಂಟೆ ಕಾಲಾವಕಾಶ ಕೊಟ್ಟರೆ ಜೀಪ್ ಹತ್ತುತ್ತೇನೆ' ಎಂದಾಗ ಪೊಲೀಸರು ಒಪ್ಪಿ, ಅವರ ಮನೆಗೆ ಬಿಟ್ಟರು. ನಂತರದಲ್ಲಿ ಸಾವಿರಾರು ಸಂಖ್ಯೆಯಲ್ಲಿ ಸೇರಿದ ಜನ ಜಯಘೋಷಗಳನ್ನು ಹಾಕುತ್ತ ಟಿ.ಆರ್. ನೆಶ್ವಿಯನ್ನು ಬೀಳ್ಕೊಟ್ಟರು. ಅವರನ್ನು ಧಾರವಾಡಕ್ಕೆ ಕರೆದೊಯ್ಯಲಾಯಿತು. ಟಿ.ಆರ್.ನೆಶ್ವಿ ಹೋಗುವುದರೊಳಗಾಗಿ ಹಳ್ಳಿಕೇರಿ ಗುದ್ಲೆಪ್ಪ, ನಾ.ಸು.ಹರ್ಡೀಕರ್

ಹೀಗೆ ಸುಮಾರು ೨೦ ಜನ ಚಳುವಳಿಗಾರರನ್ನು ಬಂಧಿಸಿ ತರಲಾಗಿತ್ತು. ಹೀಗೆ ಹಾವೇರಿ ಜಿಲ್ಲೆಯ ಚಳುವಳಿಯ ಹಲವು ನಾಯಕರನ್ನು ಚಳುವಳಿ ಮಾಡುವ ಮೊದಲೇ ಬಂಧಿಸಿ ಸೆರೆಮನೆಗೆ ಹಾಕಲಾಯಿತು."[೮] ಅಂದರೆ, ಹಾವೇರಿ ಭಾಗದಲ್ಲಿ ರಾಷ್ಟ್ರೀಯ ಚಳುವಳಿಯ ಪ್ರಭಾವವನ್ನು ತಡೆಯಲು ಪೊಲೀಸರು/ಸರಕಾರ ಈ ರೀತಿ ನಾಯಕರನ್ನು ಚಳುವಳಿಯ ಪೂರ್ವದಲ್ಲಿಯೇ ಬಂಧಿಸಿದ್ದು, ಜಿಲ್ಲೆಯ ಚಳುವಳಿಯ ನಾಯಕರ ಪ್ರಭಾವವನ್ನು ಗುರುತಿಸ ಬಹುದಾಗಿದೆ.

"ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಎಂದು ಆಂಗ್ಲರಿಗೆ ಎಚ್ಚರಿಸಿದ್ದು, ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲೂಕಿನ ಮೆಣಸಿನಾಳ ಗ್ರಾಮದ ತಿಮ್ಮನಗೌಡರಿಗೆ ಅದು ವೇದವಾಕ್ಯವಾಗಿತ್ತು. ಅದಕ್ಕಾಗಿ ತಮ್ಮದೇಯಾದ ತಂಡ ಕಟ್ಟಿಕೊಂಡು ದೇಶದಲ್ಲಿ ಎಲ್ಲ ನಾಯಕರನ್ನು ಸರಕಾರ ಬಂಧಿಸಿದೆ, ಈಗ ನಾವೇ ಅವರ ಕಾರ್ಯವನ್ನು ಮಾಡುವ ಜವಾಬ್ದಾರಿ ಹೊರಬೇಕಿದೆ ಎಂದು ಸಂಗಡಿಗರಿಗೆ ತಿಳಿಸಿ ತುಮ್ಮಿನಕಟ್ಟಿಯಲ್ಲಿ **'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ'** ಎಂಬ ಘೋಷಣೆಗಳನ್ನು ಕೂಗುತ್ತ ಮೆರವಣಿಗೆ ಮಾಡಿದರು. ಪೊಲೀಸರು ಬಂಧಿಸಲು ಬಂದಾಗ ತಪ್ಪಿಸಿಕೊಂಡರು.

ಮೆಣಸಿನಾಳ ತಿಮ್ಮನಗೌಡರ ನಾಯಕತ್ವದಲ್ಲಿ ಅವರ ತಂಡ –

* ಕಡೂರಿನಲ್ಲಿ ಕಂದಾಯ ವಸೂಲಿ ಮಾಡಿದ ಹಣವನ್ನು ಕಡೂರಿನ ಚಾವಡಿಯಲ್ಲಿ ಇಟ್ಟು ಪೊಲೀಸ್ ಕಾವಲು ಹಾಕಲಾಗಿತ್ತು. ತಿಮ್ಮನಗೌಡರ ತಂಡ ಕಡೂರಿಗೆ ಹೋಗಿ ಆ ಹಣವನ್ನು ತೆಗೆದುಕೊಂಡು, ಚಾವಡಿಗೆ ಬೆಂಕಿ ಹಚ್ಚಿ ಪರಾರಿಯಾಯಿತು. * ರಟ್ಟಿಹಳ್ಳಿ ಪೊಲೀಸ್ ಠಾಣೆಗೆ ಬೆಳಗಿನ ಜಾವ ನುಗ್ಗಿ ಪೊಲೀಸರಿಗೆ ಚಾಕು ತೋರಿಸಿ ಪೊಲೀಸರಿಂದಲೇ ೫ ರೈಫಲ್‌ಗಳನ್ನು ತೆಗೆದುಕೊಂಡು ಪರಾರಿಯಾಯಿತು. * ತಿಮ್ಮನಗೌಡರು ನಾಗವಂದದ ಬಣಕಾರರ ಮನೆಯಲ್ಲಿದ್ದಾರೆಂಬ ಖಚಿತ ಮಾಹಿತಿ ಮೇರೆಗೆ ಪೊಲೀಸರು ಆ ಮನೆಗೆ ಪಹರೆ ಹಾಕಿದಾಗ ಮನೆಯಲ್ಲಿ ಸ್ತ್ರೀವೇಶ ಧರಿಸಿ ರೊಟ್ಟಿ ಸುಡುತ್ತ ಪೊಲೀಸರಿಗೆ ಯಾಮಾರಿಸಿದ್ದು. * ಮಾಸೂರು ಹಾಗೂ ಮೇದೂರು ಸರಕಾರಿ ಚಾವಡಿಗಳನ್ನು ಸುಟ್ಟರು. * ಕಾಗಿನೆಲ್ಲಿ, ತಡಸ ಮತ್ತು ಹೊಮ್ಮರಡಿ ಚಾವಡಿಗಳನ್ನು ಸುಟ್ಟು ಸರಕಾರಿ ದಫ್ತರಗಳನ್ನು ನಾಶ ಮಾಡಿದರು. * ಬೆಳಗುತ್ತಿಯಿಂದ–ನ್ಯಾಮತಿಗೆ ಹೋಗುವ ಟಪಾಲನ್ನು ಅಪಹರಿಸಿ ಸುಟ್ಟರು. * ಗುಡ್ಡದ ಮಾದಾಪುರ ಅರಣ್ಯ ಇಲಾಖೆಯ ಆಫೀಸಿಗೆ ಮುತ್ತಿಗೆ ಹಾಕಿ ೪ ರೈಫಲ್‌ಗಳನ್ನು ಕಸಿದುಕೊಂಡು ಆಫೀಸಿಗೆ ಬೆಂಕಿಹಚ್ಚಿದರು. * ರಾಣೇಬೆನ್ನೂರು–ತುಮ್ಮಿನಕಟ್ಟಿ ಟಪಾಲ್ ಬಸ್ಸನ್ನು ಬಡಸಂಗಾಪುದ ಬಳಿ ನಿಲ್ಲಿಸಿ ಟಪಾಲ್ ಅಪಹರಿಸಿದರು. * ಹೊನ್ನಾಳಿ ಪೊಲೀಸ್ ಠಾಣೆಗೆ ಮತ್ತು ದಾವಣಗೆರೆ ರೇಲ್ವೇ ಸ್ಟೇಷನ್ನಿಗೆ ಇವರ ತಂಡ ಬೆಂಕಿ ಹಚ್ಚಿತ್ತು.

ಈ ಚಳುವಳಿಯಲ್ಲಿ ತಿಮ್ಮನಗೌಡರ ತಂಡ ಪೊಲೀಸರಿಗೂ ಸಿಗದೆ ಸರಕಾರಿ ಆಸ್ತಿಯನ್ನು ನಾಶ ಮಾಡುತ್ತಿದ್ದರಿಂದ ಧಾರವಾಡ ಜಿಲ್ಲಾಧಿಕಾರಿಗಳು ತಿಮ್ಮನಗೌಡರನ್ನು ಹಿಡಿದುಕೊಟ್ಟವರಿಗೆ

೧೦,೦೦೦ ರೂ.ಗಳ ಬಹುಮಾನವನ್ನು ಹಾಗೂ ಅವರಿಗೆ ಕಂಡಲ್ಲಿ ಗುಂಡಿಕ್ಕುವ ಮತ್ತು ಅವರಿಗೆ ಸೇರಿದ ೮೦ ಎಕರೆ ಜಮೀನಿನ ಬೆಳೆಸಹಿತ ಮುಟ್ಟುಗೋಲು ಹಾಕಲು ಆದೇಶಿಸಿದರು. ಈ ವಿಷಯ ಗೊತ್ತಾಗುತ್ತಿದ್ದಂತೆ ಮೆಣಸಿನಾಳದ ತಿಮ್ಮನಗೌಡರು ಅಂದು ರಾತ್ರಿಯೇ ಊರ ಜನರನ್ನು ಸೇರಿಸಿ, ನನ್ನ ಜಮೀನಿನ ಬೆಳೆಯ ಒಂದು ಕಾಳು ಸರಕಾರದ ಕೈ ಸೇರುವ ಮೊದಲು ನೀವೆ ಆ ಬೆಳೆಯನ್ನು ತೆಗೆದುಕೊಳ್ಳಿ, ಆದರೆ ಚಳುವಳಿಗಾರರಿಗೆ ಅವಶ್ಯವಿದ್ದಾಗ ನೀವೆಲ್ಲಾ ಸಹಾಯ ಮಾಡಬೇಕು ಎಂದು ಹೇಳಿ ರಾತ್ರಿಯೇ ಊರು ಬಿಟ್ಟು ಹೊರಟು ಹೋದರು. ಈ ಬಗ್ಗೆ ತಿಮ್ಮನಗೌಡರು ತಂಡದ ಸದಸ್ಯ ಶಿವನಗೌಡ ಮರಿಗೌಡರು ನೆನಪಿಸುತ್ತಾರೆ.

**ಕುಪ್ಪೆಲೂರು ಹಫ್ತಾ ಲೂಟಿ ಪ್ರಕರಣ**

ಕುಪ್ಪೆಲೂರು ಚಾವಡಿಯಲ್ಲಿ ರೈತರಿಂದ ಸಂಗ್ರಹಿಸಿಟ್ಟಿದ್ದ ಹಣವನ್ನು ಲೂಟಿ ಮಾಡಲು ತಿಮ್ಮನಗೌಡರು ತಂಡ ೧೯೪೩ ಫೆಬ್ರುವರಿ ೧೦ ರಂದು ರಾತ್ರಿ ೧೦ ಘಂಟೆಗೆ ಚಾವಡಿಗೆ ನುಗ್ಗಿತು. ಕಂದಾಯದ ಹಣ ಇಟ್ಟಿರುವ ಕೋಣೆಯ ಬಾಗಿಲಿಗೆ ಹಾಕಿದ ಕೀಯನ್ನು ಒಡೆಯುವಾಗ ಪೊಲೀಸರೊಂದಿಗಿನ ತಳ್ಳಾಟದಲ್ಲಿ ತಿಮ್ಮನಗೌಡರ ಬಗಲ ಚೀಲದಲ್ಲಿದ್ದ ಬಾಂಬ್ ಸ್ಫೋಟಗೊಂಡು ಅವರ ಎಡಗೈ ಮತ್ತು ಕಾಲುಗಳಿಗೆ ಗಂಭೀರ ಗಾಯಗಳಾದವು. ಸಂಗಡಿಗರು ಖಾಸಗಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸಿದ್ದು, ಚೇತರಿಕೆ ಕಾಣದೆ ಹೋದಾಗ ದಾವಣಗೆರೆ ಆಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸಿದರೂ ಅವರು ಬದುಕುಳಿಯಲಿಲ್ಲ. ಹೀಗೆ ೧೯೪೨ ಚಲೇಜಾವ್ ಚಳುವಳಿಯಲ್ಲಿ ಜಿಲ್ಲೆಯ ಒಬ್ಬ ನಾಯಕ ಹುತಾತ್ಮನಾದರು. ಅವರ ಕಾರ್ಯಚಟುವಟಿಕೆಗಳನ್ನು ಕುರಿತು ತಿಮ್ಮನಗೌಡರ ಸಂಬಂಧಿ ೯೬ ವರ್ಷದ ಶಿವನಗೌಡ ಮರಿಗೌಡ್ರ ಹೆಮ್ಮೆಯಿಂದ, ಅಷ್ಟೇ ನೋವಿನಿಂದ ಅಂದಿನ ಹಲವು ಘಟನೆಗಳಿಗೆ ಸಾಕ್ಷಿಯಾಗಿ ವಿಷಯಗಳನ್ನು ವಿವರಿಸುತ್ತಾರೆ.

ಜಿಲ್ಲೆಯಲ್ಲಿ "೧೯೪೨ರ ಮತ್ತೊಂದು ಕ್ರಾಂತಿಯ ಘಟನೆಯೆಂದರೆ ಕರಿಯಪ್ಪ ಸಂಗೂರ ಅವರೊಂದಿಗೆ ಮಲ್ಲೇಶಪ್ಪ ಬಣಕಾರ, ಹನುಮಂತಪ್ಪ ಕೊಡ್ಲೇರ, ಶಿವಣ್ಣ ನೆಶ್ವಿ ಇವರ ನಾಯಕತ್ವದಲ್ಲಿ ಟಪಾಲೂ ಲೂಟಿ ಪ್ರಕರಣ. ಹಂಸಭಾವಿಯ ಹತ್ತಿರವಿರುವ ಬ್ಯಾಡಗಿ ತಾಲೂಕು ಹಿರೇಅಣಜಿ ಗ್ರಾಮದ ಯುವಕರಾದ ಮಲ್ಲನಗೌಡ ಗೂಳಪ್ಪಗೌಡ್ರ, ಮೂಕಪ್ಪ ಮುಳಥಳಿ, ಬಸಪ್ಪ ಹುರುಳಿ, ಗುಡ್ಡಪ್ಪ ಓಲೇಕಾರ, ರಾಮಚಂದ್ರಪ್ಪ ಬೋಡ್ಕೆ, ಕರಿಬಸಪ್ಪ ಅಡವೇರ್, ಮಳ್ಳಪ್ಪ ಕೊಪ್ಪದ ಹೀಗೆ ೨೦ ಜನರಲ್ಲಿ ೧೨ ಜನ ಯುವಕರನ್ನು ತಮ್ಮೊಂದಿಗೆ ೭.೧೦.೧೯೪೨ ರಾತ್ರಿ ಮಳೆಯಲ್ಲಿಯೇ ಕರೆದುಕೊಂಡು ಶಿಡೇನೂರು ಗುಡ್ಡದ ಹತ್ತಿರ ಕರಿಯಪ್ಪನ ಸಂಗಡಿಗರು ಸುಮಾರು ೨೦ ಜನರಿದ್ದು, ಎಲ್ಲರೂ ೫ ಜನರಂತೆ ೪ ಗುಂಪು ಮಾಡಿ ಅವರವರ ಗುಂಪಿಗೆ ಒಂದೊಂದು ಕೆಲಸ ಕೊಟ್ಟರು. ಒಂದು ಗುಂಪು ಬ್ಯಾಡಗಿಗೆ ಹೋಗಿ ಬ್ಯಾಡಗಿ–ಹಿರೇಕೆರೂರು ಟಪಾಲ್ ಬಸ್ಸು ಹತ್ತಿಕೊಂಡು ಬರಬೇಕು; ಆ ಟಪಾಲಲ್ಲಿ ಹಿರೇಕೆರೂರಿಗೆ ಸರಕಾರದ ಹಣ ಬರುವುದಿದ್ದು, ಅದಕ್ಕಾಗಿ ಟಪಾಲಿನ ಕಾವಲಿಗೆ ೨ ಜನ ಪೊಲೀಸ್ ಸಿಬ್ಬಂದಿಯಿರುತ್ತದೆ. ಗುರುತಿಸಿದ ಸ್ಥಳಕ್ಕೆ ಬಸ್ಸು ನಿಂತಾಗ ಸಿಬ್ಬಂದಿಯನ್ನು ಬಿಗಿಯಾಗಿ ಹಿಡಿಯಬೇಕು,

ಬಸ್ಸು ಬರುವುದನ್ನು ನೋಡಿ ಸೀಟಿ ಊದುವುದು, ಬಸ್ ನಿಂತೊಡನೆ ಗಾಲಿಗಳ ಗಾಳಿ ತೆಗೆಯುವುದು, ಬಸ್ ನಿಂತ ತಕ್ಷಣ ಬಸ್ಸಿನೊಳಗೆ ನುಗ್ಗಿ ಟಪಾಲ್ ತೆಗೆಯುವುದು ಹೀಗೆ ಯೋಜನೆಯಂತೆ ಎಲ್ಲರಿಗೂ ಕಾರ್ಯವಹಿಸಿ ಬ್ಯಾಡಗಿ–ಹಿರೇಕೆರೂರು ಟಪಾಲ್ ಲೂಟ ಕಾರ್ಯ ಯಶಸ್ವಿ ಮಾಡಿದರು."೮೯

ಈ ಟಪಾಲು ಲೂಟಿ ಪ್ರಕರಣದ ವೇಳೆಗಾಗಲೇ ಎಲ್ಲರಿಗೂ ಹಸಿವಾಗಿದ್ದು, ಲೂಟಿ ಕಾರ್ಯದಲ್ಲಿ ಚೀಲದಲ್ಲಿಯ ಹಣ್ಣು ಕಂಡು ಹಸಿವಾಗಿದೆ ಒಂದು ಹಣ್ಣು ಕೊಡುತ್ತಿರಾ ಎಂದು ಚಳುವಳಿಗಾರನೊಬ್ಬ ಕೇಳಿದ(ಹಿರೇಕೆರೂರ ಸಂತಿಗೆ ವ್ಯಾಪಾರಕ್ಕಾಗಿ ಹೊರಟ ಹಣ್ಣಿನ ವ್ಯಾಪಾರಿ) ನಿಮಗೆ ಬೇಕಾದಷ್ಟು ಹಣ್ಣು ತೆಗೆದುಕೊಳ್ಳಿ ಎಂದಾಗ ಕರಿಯಪ್ಪ ಸಂಗೂರ ಪ್ರತಿಯೊಬ್ಬರಿಗೆ ಒಂದರಂತೆ ಕೊಡು ಸಾಕು; ನೀನು ನಿನ್ನ ಜೀವನಕ್ಕೆ ದುಡಿಯುವವ ಎಂದಾಗ, ಆ ವ್ಯಾಪಾರಿ 'ನಾ ನನಗೋಸ್ಕರ ದುಡಿತಿನಿ, ನೀವು ನಮಗೋಸ್ಕರ ಈ ಕಾರ್ಯ ಮಾಡುತ್ತೀರಿ ನೀವು ಎಷ್ಟು ಬೇಕಾದರೂ ತೆಗೆದುಕೊಳ್ಳಿ' ಎಂದದ್ದು ಚಳುವಳಿಗಾರರಿಗೆ ಹೆಮ್ಮೆಯೆನಿಸಿತು. ಆದರೆ ಚಳುವಳಿಗಾರರು ಎರಡೆರಡು ಹಣ್ಣುಗಳನ್ನು ಮಾತ್ರ ತೆಗೆದುಕೊಂಡು ಅವನಿಗೆ ಅಭಿನಂದಿಸಿದರು; ಆ ವ್ಯಾಪಾರಿಯೂ ಪ್ರತಿಯಾಗಿ ಅಭಿನಂದಿಸಿದ.

ಈ ಲೂಟಿ ಪ್ರಕರಣ ಮುಗಿದು ೪ ದಿನಗಳಲ್ಲಿ ಹಿರೇಅಣಜಿಯಿಂದ ೧೨ರಿಂದ ೧೩ ಜನರನ್ನು ಹಂಸಭಾವಿ ಪೊಲೀಸರು ದಿನಾಂಕ ೧೪.೧೦.೧೯೪೨ ರಂದು ಇವರೆಲ್ಲರನ್ನು ಬಂಧಿಸಿ ಹಿರೇಕೆರೂರು ಪೊಲೀಸ್ ಠಾಣೆಗೆ ಹಾಕಿ ನಂತರ ೧.೩.೧೯೪೩ಕ್ಕೆ ಧಾರವಾಡ ಜೈಲಿಗೆ ಕಳುಸಿದರು. ನಾಯಕರಾದ ಕರಿಯಪ್ಪ ಸಂಗೂರ ಸೇರಿ ಎಲ್ಲರಿಗೂ ವಿವಿಧ ರೀತಿಯಲ್ಲಿ ಶಿಕ್ಷೆಯಾಯಿತು. ಬಿದರಿಕಟ್ಟಿ ಟಪಾಲು ಲೂಟಿ ಪ್ರಕರಣವೂ ಜಿಲ್ಲೆಯಲ್ಲಿಯ ಚಲೇಜಾವ್ ಚಳುವಳಿ ನಡೆಯಲಿಕ್ಕೆ ಮಹತ್ವ ಪಡೆದುಕೊಂಡಿತು. ಈ ಘಟನೆಗೆ ಸಂಬಂಧಿಸಿದ ವಿವರವನ್ನು ಹಾಗೂ ಆ ಘಟನೆಯ ಹಿಂದಿನ ದಿನ ರಾತ್ರಿ ಸಂಗೂರು ಕರಿಯಪ್ಪ ಹಿರೇಅಣಜಿಯ ಯುವಕರನ್ನು ಕರೆತರುವ ಸನ್ನಿವೇಶವನ್ನು, ಕಾರ್ಯದಲ್ಲಿ ಭಾಗಿಗಳಾಗಿ ನಮ್ಮೊಂದಿಗಿರುವ ಮಳ್ಳಪ್ಪ ಸಿದ್ದಪ್ಪ ಕೊಪ್ಪದ ಮತ್ತು ಪುಟ್ಟಪ್ಪ ಹನುಮಂತಪ್ಪ ಹರಬಿಮನಿ ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ.

೧೯೪೨ರಂದು ಹಾವೇರಿಯಲ್ಲಿ ವಿದ್ಯಾರ್ಥಿಗಳು ಆಕ್ಟೋಬರ್ ೨ ಗಾಂಧಿ ಜಯಂತಿಯಂದು ಮೆರವಣಿಗೆ ನಡೆಸಿದ್ದರಿಂದ ಪೊಲೀಸರು ೧೧ ಜನ ವಿದ್ಯಾರ್ಥಿಗಳನ್ನು ಬಂಧಿಸಿದರು. ಇತ್ತ ಹಂಸಭಾವಿಯಲ್ಲಿ ೧೯೪೨ರ ಬ್ರಿಟಿಷರೇ ಭಾರತ ಬಿಟ್ಟು ತೊಲಗಿರಿ ಚಳುವಳಿಯಲ್ಲಿ ಹಂಸಭಾವಿ ಸ್ಕೂಲಿನಲ್ಲಿ ಶಿಕ್ಷಕರಾಗಿದ್ದ ಹಾಲಪ್ಪ ಹುಲ್ಲತ್ತಿ, ಕೆ.ಎಫ್. ಪಾಟೀಲ್ ಹಾಗೂ ವೀರನಗೌಡ ಪಾಟೀಲ ಇವರ ನೇತೃತ್ವದಲ್ಲಿ ಉಗ್ರ ಹೋರಾಟ ನಡೆದು ತಂತಿ ಕಂಬ ಕಡೆಯುವುದು, ಹೆಂಡದ ಅಂಗಡಿಗಳನ್ನು ಮುಚ್ಚುವುದು, ಚಾವಡಿ, ಸ್ಟೇಷನ್, ಸರಕಾರಿ ದಫ್ತರ, ಸರಕಾರಿ ಟಪಾಲು ಸುಡುವುದು, ಸೇತುವೆ ಕೆಡುವುದು, ಟಪಾಲು ಲೂಟಿ ಮಾಡುವುದು ಇತ್ಯಾದಿ

ಪ್ರತಿಭಟನಾ ಚಳುವಳಿ ಉಗ್ರವಾಗಿ ಹಂಸಭಾವಿ, ದೀವಿಗಿಹಳ್ಳಿ, ಹಿರೇಕೆರೂರು, ಚಿಕ್ಕೊಣತಿ, ಚಿಕ್ಕೇರೂರು, ಕಡೂರು, ಕುಡಪಲಿ, ನಾಗವಂದ, ಹಾದ್ರಿಹಳ್ಳಿ, ಸುತ್ತಕೋಟಿ, ತಡಕನಹಳ್ಳಿ, ಯತ್ತಿನಹಳ್ಳಿ ಮೊದಲಾದ ಗ್ರಾಮಗಳಲ್ಲಿ ನಾಗರಿಕರು ಹಾಗೂ ವಿದ್ಯಾರ್ಥಿಗಳು ಭಾಗಿಗಳಾಗಿ ಸರಕಾರದಿಂದ ಕೇಸು ಹಾಕಲ್ಪಟ್ಟು ಸಹಸ್ರಾರು ಜನ ಶಿಕ್ಷೆಗೆ ಒಳಗಾದರು. ಕೋರ್ಟಿನಲ್ಲಿ ಆ ಚಳುವಳಿಗಾರರ ಪರವಾಗಿ ಕಬ್ಬೂರು, ಕೇಸರಿ, ಬಿಜ್ಜೂರು, ಹೊಟ್ಟಿಮಂಡಗಿ, ತಂಬಾಕದ ಮೊದಲಾದ ವಕೀಲರು ಉಚಿತವಾಗಿ ವಾದ ಮಾಡಿದ್ದು ಗಮನಾರ್ಹವಾದದ್ದು, ಆದರೂ ಈ ಕೇಸಿನಲ್ಲಿ ಬ್ಯಾಡಗಿ–ಹಿರೇಕೆರೂರು ಟಪಾಲು ಲೂಟಿ ಪ್ರಕರಣದಲ್ಲಿ ಮಲ್ಲೇಶಪ್ಪ ಬಣಕಾರ, ಕೊಡ್ಲೇರ ಹನುಮಂತಪ್ಪ, ಮುಗಳಗೇರಿ ಜಯಪ್ಪ ಇವರಿಗೆ ಶಿಕ್ಷೆಯಾಗಿ ಜೈಲಿಗೆ ತಳ್ಳಲ್ಪಟ್ಟ ವಿವರಗಳು ಚಳುವಳಿಗಾರ ಚಿಕ್ಕೊಣತಿಯ ಮಲ್ಲೇಶಪ್ಪ ಬಣಕಾರ ಅಳಿಯ ಹಿರಿಯ ರಾಜಕಾರಣಿ, ಬಿ.ಜಿ. ಬಣಕಾರ ಹಾಗೂ ಹಿರೇಅಣಜಿ ಚಳುವಳಿಗಾರ ಪುಟ್ಟಪ್ಪ ಹರಭಿ ಸಂದರ್ಶನದಲ್ಲಿ ಅನಾವರಣಗೊಂಡಿವೆ.

ಧಾರವಾಡ ದಕ್ಷಿಣ ಭಾಗದಲ್ಲಿ ಚಲೇಜಾವ್ ಚಳುವಳಿಯ ಕಾರ್ಯಕ್ರಮ ರೂಪಿಸಿಲು ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಎಣ್ಣೆಕೊಪ್ಪ(ಹಿರೇಕೆರೂರು ತಾಲೂಕಿಗೆ ಹೊಂದಿಕೊಂಡ) ಗ್ರಾಮದ ಮಲ್ಲಿಕಾರ್ಜುನಗೌಡರ ಮನೆಯಲ್ಲಿ ಸಭೆ ಸೇರಿದ್ದ ವೀರನಗೌಡ ಪಾಟೀಲ್, ಹಳ್ಳಿಕೇರಿ ಗುದ್ಲೆಪ್ಪ, ಪರಮಣ್ಣ ಹೊಸಮನಿ ಮುಂತಾದವರು ಸೇರಿ ಚರ್ಚಿಸಿದ ಎರಡು ದಿನಗಳಲ್ಲಿ ಕೆಲವರನ್ನು ಬಂಧಿಸಲಾಯಿತು. ಆದರೆ ಕಾರಣಾಂತರಗಳಿಂದ ಹೊರಗುಳಿದಿದ್ದ ಕೆ.ಎಫ್.ಪಾಟೀಲ್ ಗುಪ್ತವಾಗಿ ಮಹದೇವಪ್ಪ ಮೈಲಾರ, ಮೆಣಸಿನಾಳ ತಿಮ್ಮನಗೌಡ, ಸಂಗೂರು ಕರಿಯಪ್ಪ ಮುಂತಾದವರಿಗೆ ಸಲಹೆ ಸೂಚನೆಗಳನ್ನು ಕೊಡುತ್ತ ತಮ್ಮ ಕಾರ್ಯ ತಾವು ಮಾಡುತ್ತಿದ್ದರು."[೯೦] ಚಳುವಳಿಗಾರರು ತಾಲೂಕು, ಜಿಲ್ಲೆಯ ಗಡಿ ಬಗೆಗಿನ ವಿಚಾರದಲ್ಲಿ ಯಾವ ನಿಬಂಧನೆಗಳನ್ನು ತಾಳಿರಲಿಲ್ಲ. ಅವರು ತಾವು ಎಲ್ಲಿ? ಹೇಗೆ? ಏನು? ಮಾಡಬಹುದು ಎಂಬುದಷ್ಟೆ ಅವರ ಉದ್ದೇಶವಾಗಿತ್ತು ಎಂಬುದನ್ನು ಗಮನಿಸಲಾಗಿದೆ.

ಹಾವೇರಿ ಜಿಲ್ಲೆಯಲ್ಲಿ ಗಾಂಧೀಜಿಯ **'ಮಾಡು ಇಲ್ಲವೇ ಮಡಿ'** ಸಂದೇಶವನ್ನು ಪಾಲಿಸಿದ ಗಾಂಧೀಜಿ ಶಿಷ್ಯ ಹಾಗೂ ಆಂಗ್ಲ ಸರಕಾರದ ನಿದ್ದೆಗೆಡಿಸಿದ್ದ ಮೈಲಾರ ಮಹದೇವಪ್ಪ ಹಾಗೂ ಅವರ ತಂಡ ಮಾಡಿದ ವಿವಿಧ ಕಾರ್ಯಗಳು ಮಹತ್ವ ಪಡೆದಿವೆ. ಮಹದೇವಪ್ಪ ಭೂಗತನಾಗಿದ್ದು ಕೊಂಡು ಹಾವೇರಿಯ ಸುತ್ತಮುತ್ತಲಿನ ಭಾಗಗಳಲ್ಲಿ ಯಶಸ್ವಿಯಾಗಿ ನಡೆಯುವ ಚಳುವಳಿಗೆ ನಾಯಕತ್ವ ವಹಿಸಿ ಕೊರಡೂರನಲ್ಲಿ ಒಂದು ಆಶ್ರಮವನ್ನು ಕಟ್ಟಿ ಕೊಗನೂರು, ಶಿಗ್ಲಿ, ಹಾವೇರಿ, ಕಲ್ಲೇದೇವರು, ಹೊಸರಿತ್ತಿ, ನೆಗಳೂರು, ಜಂಗಮನಕೊಪ್ಪ, ಬೆಳವಡಿ, ಅಗಡಿ, ಹೀಗೆ ಹತ್ತಾರು ಊರುಗಳಿಂದ ಸುಮಾರು ೫೦ರಿಂದ ೬೦ ಯುವಕರ ತಂಡ ಕಟ್ಟಿಕೊಂಡು, ಅದರಲ್ಲಿ ೨೫ರಿಂದ ೩೦ ಜನರೊಂದಿಗೆ ಸೇರಿ ಭೂಗತರಾಗಿ ಕಾರ್ಯ ಮಾಡುತ್ತಿದ್ದನು. ಈ ತಂಡ ಹಳ್ಳಿ ಹಳ್ಳಿಗಳಿಗೆ ಹೋಗಿ ಬ್ರಿಟಿಷರ ದಬ್ಬಾಳಿಕೆಯ ಬಗ್ಗೆ ಜನತೆಗೆ ತಿಳಿಸಿ, ಸರಕಾರಿ ಕಟ್ಟಡ, ದಪ್ತರಗಳನ್ನು ದಹಿಸುತ್ತಿತ್ತು.

ಇವರ ಮುಖ್ಯಕಾರ್ಯಗಳೆಂದರೆ ರೇಲ್ವೆ ನಿಲ್ದಾಣ ಹಾಗೂ ಸ್ಟೇಷನ್ ರಿಕಾರ್ಡ್‌ಗಳನ್ನು ಸುಡುವುದು, ತಾರು ತಂತಿಗಳನ್ನು ಕತ್ತರಿಸುವುದು, ತಾರು ಕಂಬಗಳನ್ನು ಕೀಳುವುದು, ಟಪಾಲು ದೋಚುವುದು, ರೇಲ್ವೆ ಹಳಿಗಳನ್ನು ಕೀಳುವುದು, ಪೊಲೀಸ್ ಚೌಕಿ, ಹಳ್ಳಿಗಳ ಚಾವಡಿ ಸುಡುವುದು, ದಫ್ತರಗಳನ್ನು ಸುಡುವುದು, ಪೊಲೀಸರ ಆಯುಧಗಳನ್ನು ಕಸಿದುಕೊಳ್ಳುವುದು, ವಸೂಲಿ ಮಾಡಿದ ಕಂದಾಯವನ್ನು ದೋಚುವುದು, ರೈತರಿಗೆ ಕಂದಾಯವನ್ನು ಸರಕಾರಕ್ಕೆ ಕೊಡಬೇಡಿರೆಂದು ಮನವರಿಕೆ ಮಾಡಿಕೊಡುವುದು. ಇಲ್ಲಿ ಪ್ರಮುಖವಾದ ಅಂಶವೆಂದರೆ, ತಾವು ಮಾಡುವ ಚಟುವಟಿಕೆಗಳ ಕೇಂದ್ರ ೨೫ರಿಂದ ೩೦ ಮೈಲಿ ದೂರದ ಅಂತರವಿರುತ್ತಿತ್ತು. ಹಾಗಾಗಿ ಪೊಲೀಸರಿಗೆ, ಅಧಿಕಾರಿಗಳಿಗೆ ಅಷ್ಟು ಸುಲಭವಾಗಿ ಅವರನ್ನು ಗುರುತಿಸಲು ಸಾಧ್ಯವಾಗದಿರಲೆಂದೇ ಈ ಯೋಜನೆ ರೂಪಿಸಿರಬಹುದೆಂದು ಗ್ರಹಿಸಬಹುದು. ಎಲ್ಲ ಗ್ರಾಮಗಳಲ್ಲಿಯ ಜನತೆಯ ಬೆಂಬಲದಿಂದಾಗಿಯೇ ಮಹದೇವಪ್ಪ ತಂಡ ಸುಲಭವಾಗಿ ಪೊಲೀಸರಿಗೆ ಸಿಗುತ್ತಿರಲಿಲ್ಲ ಎಂಬುದನ್ನು ತಂಡದ ಸದಸ್ಯರಾದ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕಂಗಿ ತಿಳಿಸಿರುವುದು ಅವರ ಕಾರ್ಯಗಳಿಗೆ ಸಾಕ್ಷಿಯಾಗಿದೆ.

**ಮಹದೇವಪ್ಪನ ನಾಯಕತ್ವದಲ್ಲಿ ಮಾಡಿದ ಪ್ರಮುಖ ಕಾರ್ಯಗಳು**

* ನಾಲ್ಕು ಮೈಲಿ ದೂರದಲ್ಲಿದ್ದ ಸವಣೂರು ರೇಲ್ವೆ ಸ್ಟೇಷನ್‌ನಿಂದ ಪ್ರತಿದಿನ ಟಪಾಲು ಸವಣೂರಿಗೆ ಹೋಗುತ್ತಿತ್ತು. ಅದನ್ನು ದೋಚಲು ಮಹದೇವಪ್ಪ ನಿರ್ಧರಿಸಿ, ಸವಣೂರಿಂದ ಟಪಾಲು ತರುವ ಮೋಟಾರ್‌ನಲ್ಲಿ ಸ್ವತಃ ತಾನೇ ಕುಳಿತುಕೊಂಡು ಮಾರ್ಗಮಧ್ಯದಲ್ಲಿ ತನ್ನ ತಂಡದವರು ಮೊದಲು ರೂಪಿಸಿದ್ದ ಯೋಜನೆಯಂತೆ ವಾಹನ ನಿಲ್ಲಿಸಲು ದೊಡ್ಡ ದೊಡ್ಡ ಕಲ್ಲು ಬಂಡೆಗಳನ್ನು ಹಾಕಿದ್ದರಿಂದ ವಾಹನ ನಿಂತಾಗ ಯಾವ ಪ್ರಯಾಣಿಕರಿಗೂ ತೊಂದರೆ ಕೊಡದೆ ಟಪಾಲನ್ನು ಕಿತ್ತುಕೊಂಡು ತನ್ನ ತಂಡದೊಂದಿಗೆ ಪರಾರಿಯಾದರು. ಈ ಘಟನೆ ನಡೆದದ್ದು, ನವಾಬರ ಆಳ್ವಿಕೆಯಿರುವ ಸವಣೂರಲ್ಲಿ, ಆ ಪ್ರದೇಶದಲ್ಲಿ ಚಳುವಳಿ ಮಾತು ಕೇಳಿಬರುವಂತಿಲ್ಲ. ಹಾಗೇನಾದರೂ ಆದಲ್ಲಿ ನವಾಬರರಿಂದ ಉಗ್ರಶಿಕ್ಷೆಗೆ ಗುರಿಯಾಗುವ ಸಂದರ್ಭವಿತ್ತು. ಆ ಭಾಗದಲ್ಲಿ ಕಾರ್ಯಮಾಡುವುದು ಚಳುವಳಿಗಾರರಿಗೆ ದೊಡ್ಡ ಸವಾಲಾಗಿತ್ತು. ಅಂಥ ಪ್ರದೇಶದಲ್ಲಿ ಮೈಲಾರ ಮಹದೇವಪ್ಪನ ತಂಡ ಟಪಾಲು ಲೂಟಿ ಕಾರ್ಯ ಮಾಡಿ ಆ ಭಾಗದ ಜನತೆಗೆ ಪ್ರೇರಣೆಯಾಗುವಂಥ ಕಾರ್ಯಮಾಡಿದ್ದು ಒಂದೆಡೆಯಾದರೆ, ಮತ್ತೊಂದೆಡೆ ಬರೀ ಇಂಗ್ಲಿಷರೊಂದಿಗೆ ಅಷ್ಟೇ ಅಲ್ಲ ನವಾಬರನ್ನು ಎದುರು ಹಾಕಿಕೊಂಡು ಮಾಡಿದ ಕಾರ್ಯ ಆಶ್ಚರ್ಯವನ್ನುಂಟುಮಾಡಿದ ಬಗ್ಗೆ ತಂಡದ ಸದಸ್ಯರಾದ ಪರಮಣ್ಣ ಹರಕಂಗಿ, ದೇವೇಂದ್ರಪ್ಪ ವಿಭೂತಿ ಹಾಗೂ ಹಾಲಯ್ಯ ಕುಲಕರ್ಣಿ ಇವರಿಂದ ತಿಳಿದುಬರುತ್ತದೆ.

* "ಗದಗ-ಶಿರಹಟ್ಟಿ ಟಪಾಲು ಬಸ್ಸನ್ನು ಕಲ್ಲುಮುಳಗುಂದದ ಬಳಿ ನಿಲ್ಲಿಸಿ ಟಪಾಲು ದೋಚಲಾಯಿತು. ಅಲ್ಲದೆ, ಹರಿಹರ-ಹರಪನಹಳ್ಳಿ ಟಪಾಲು ಬಸ್ಸಿನ ಟಪಾಲನ್ನು ದೋಚಲು ಆ ಭಾಗದ ಅಷ್ಟೊಂದು ಪರಿಚಯವಿಲ್ಲದಿದ್ದರೂ ಆ ಕಾರ್ಯಕ್ಕೆ ನಿರ್ಧರಿಸಿದರು. ತಂಡದ

ಎರಡು ಜನರನ್ನು ಹರಿಹರಕ್ಕೆ ಕಳುಹಿಸಿ ಟಪಾಲು ಬಸ್ಸಿನಲ್ಲಿ ಬರಲು ಹೇಳಿ ಹರಪನಹಳ್ಳಿ ರಸ್ತೆಯಲ್ಲಿ ರಸ್ತೆಗೆ ಅಡ್ಡಲಾಗಿ ಮರದ ತುಂಡುಗಳನ್ನು ಹಾಕಿ ಸರಿಯಾದ ಸಮಯಕ್ಕೆ ಬಸ್ಸು ಬಂದಾಗ ಬಸ್ಸಿನಲ್ಲಿ ಇದ್ದ ತಂಡದ ಸದಸ್ಯ ದೇವೇಂದ್ರಪ್ಪ ವಿಭೂತಿ ಡ್ರೈವರ ಕಣ್ಣಿಗೆ ಕಾರದ ಪುಡಿ ಎರಚಿ ಬಸ್ಸು ನಿಲ್ಲುವಂತೆ ಮಾಡಿದರು. ಬಸ್ಸು ನಿಲ್ಲುವುದಿಲ್ಲವೆಂದು ತಂಡದ ಇನ್ನೊಬ್ಬ ಸದಸ್ಯ ಗೋಣೆಪ್ಪ ಕಮತದ ಹೋಗುತ್ತಿರುವ ಬಸ್ಸಿನಿಂದ ಜಿಗಿದು ಮೂರ್ಛೆ ಹೋದ, ಆದರೂ ಮಹದೇವಪ್ಪ ಟಪಾಲ್ ಬ್ಯಾಗನ್ನು ತೆಗೆದುಕೊಂಡು ಮೂರ್ಛೆ ಹೋದ ವ್ಯಕ್ತಿಯನ್ನು ಹೊತ್ತುಕೊಂಡು ಅಲ್ಲಿಯೆ ಇದ್ದ ಜೋಳದ ಹೊಲಕ್ಕೆ ಹೋಗಿ ಸುಧಾರಿಸಿಕೊಳ್ಳುವ ವೇಳೆಗೆ ಪೊಲೀಸರು ಬಂದಾಗ ಅವರಿಂದ ತಪ್ಪಿಸಿಕೊಳ್ಳಲು ಮಹದೇವಪ್ಪ ತನ್ನ ಇತರ ಸದಸ್ಯರಿಗೆ ನಿಮ್ಮಲ್ಲಿ ಕೆಲವರು ಪೊಲೀಸರಿಗೆ ಕಾಣುವಂತೆ ಓಡಿ ಎನ್ನಲು ಕೆಲ ಸದಸ್ಯರು ಓಡಹತ್ತಿದರು. ಅವರನ್ನು ಕಂಡ ಪೊಲೀಸರು ಅವರನ್ನು ಹಿಂಬಲಿಸಿದರು. ಇತ್ತ ಮಹದೇವಪ್ಪ ಮೂರ್ಛೆಹೋದ ಸದಸ್ಯನನ್ನು ಹೊತ್ತುಕೊಂಡು ಅಲ್ಲಿಂದ ಪರಾರಿಯಾದರು. ಆದರೂ ಆ ಭಾಗ ಅಪರಿಚಿತ ಸ್ಥಳವಾಗಿದ್ದರಿಂದ ಮಹದೇವಪ್ಪನ ತಮ್ಮ ಲಿಂಗಪ್ಪ ಹಾಗೂ ದೇವೇಂದ್ರಪ್ಪ ವಿಭೂತಿ ಪೊಲೀಸರಿಗೆ ಸಿಕ್ಕು ಜೈಲು ಶಿಕ್ಷೆ ಅನುಭವಿಸಿದರು."[೧] ಈ ಘಟನೆ ಅಂದಿನ ಚಳುವಳಿಗಾರರಿಗೆ ಗಡಿ ಭಾಗಗಳ ಹಂಗು ಇರಲಿಲ್ಲವೆಂಬುದಕ್ಕೆ ಸಾಕ್ಷಿ. ಲಿಂಗಣ್ಣ ಮೈಲಾರ ಮತ್ತು ದೇವೇಂದ್ರಪ್ಪ ವಿಭೂತಿ ಪೊಲೀಸರಿಗೆ ಸಿಗಲು ಕಡತಿ(ಗ್ರಾಮ)ಯ ಊರ ಗೌಡ ಕಾರಣವಾಗಿದ್ದು ಈ ಘಟನೆ ಬಗ್ಗೆ ದೇವೇಂದ್ರಪ್ಪ ವಿಭೂತಿ ತಮ್ಮ ಕಾರ್ಯದ ಬಗ್ಗೆ ಸಂದರ್ಶನದಲ್ಲಿ ವಿವರಿಸಿರುತ್ತಾರೆ.

ಹರಿಹರ-ಹರಪನಹಳ್ಳಿ ಟಪಾಲು ಬಸ್ಸಿನ ಘಟನೆಯ ಬಗ್ಗೆ ಬಳ್ಳಾರಿ ಜಿಲ್ಲೆಯ ಚಳುವಳಿಗಾರರ ಮೇಲೆ ಹಾವೇರಿ ಭಾಗದ ಚಳುವಳಿಗಾರರು ಪ್ರಭಾವ ಬೀರಿದ್ದರು ಎಂಬುದನ್ನು ಸ್ಪಷ್ಟಪಡಿಸುವಂತ ಮತ್ತೊಂದು ಆಧಾರವೆಂದರೆ ಬಿ.ಶೇಷಾದ್ರಿ ಮತ್ತು ಟಿ.ಆರ್.ಚಂದ್ರಶೇಖರ(ಸಂ) 'ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ' ಎಂಬ ಕೃತಿಯಲ್ಲಿ ಉಲ್ಲೇಖವಾಗಿದೆ. ಧಾರವಾಡ ಜಿಲ್ಲೆಯ ಚಳುವಳಿಗಾರರು ೧೯೪೨ರ ಭಾರತ ಬಿಟ್ಟು ತೊಲಗಿ ಚಳುವಳಿಯ ಸಮಯದಲ್ಲಿ "ನವೆಂಬರ್ ೧, ೧೯೪೨ರಂದು ಹರಿಹರದಿಂದ ಹೊಸಪೇಟೆಗೆ ಬರುತ್ತಿದ್ದ ಟಪಾಲು ಬಸ್ಸನ್ನು ಹರಪನಹಳ್ಳಿಯಿಂದ ೭ ಮೈಲಿ ದೂರದಲ್ಲಿ ೧೫-೨೦ ಜನರ ತಂಡವು ತಡೆದು ನಿಲ್ಲಿಸಿ ಬಸ್ಸಿನಲ್ಲಿದ್ದ ಟಪಾಲು ಪೆಟ್ಟಿಗೆಯನ್ನು ತೆಗೆದುಕೊಂಡು ಹೋಯಿತು. ತಂಡದ ಸದಸ್ಯರು ಕೈಯಲ್ಲಿ ಚಾಕು, ಚೂರಿ, ದಂಡ ಹಿಡಿದಿದ್ದರು. ಇಂತಹ ಉಗ್ರರೂಪದ ಚಟುವಟಿಕೆಗಳನ್ನು ಮಾಡಬೇಕಾದರೆ ಅವರು ಬಳ್ಳಾರಿ ಜಿಲ್ಲೆಗೆ ಸೇರಿದ ಚಳುವಳಿಗಾರರಾಗಿರಲು ಸಾಧ್ಯವಿಲ್ಲ, ಅವರೆಲ್ಲರೂ ಬೊಂಬಾಯಿ ಪ್ರಾಂತದ ಧಾರವಾಡ ಜಿಲ್ಲೆಗೆ ಸೇರಿದ ಚಳುವಳಿಗಾರರೇ ಇರಬೇಕು ಎಂದು ೧೯೪೨ರ ಪೊಲೀಸ್ ರಹಸ್ಯ ದಾಖಲೆಗಳು ತಿಳಿಸುತ್ತವೆ. ಮುದೇನೂರು ಸಂಗಣ್ಣ ತಿಳಿಸುವಂತೆ ಈ ಪ್ರಸಂಗವು 'ತೆಲಗಿ' ಎಂಬ ಗ್ರಾಮದ ಬಳಿ ನಡೆಯಿತು. ಈ ಪ್ರಕರಣದಲ್ಲಿ ಆಕ್ರಮಣ ನಡೆಸಿದ ತಂಡದ ನಾಯಕತ್ವವನ್ನು ಮೈಲಾರ ಮಹದೇವಪ್ಪನ ತಮ್ಮ ಮೈಲಾರ ಲಿಂಗಪ್ಪ ವಹಿಸಿದ್ದರು"[೨] ಎಂಬ ಉಲ್ಲೇಖವಿದೆ. ಈ

ಘಟನೆಯಲ್ಲಿ ನಾಯಕತ್ವದ ವಿಚಾರದಲ್ಲಿ ಭಿನ್ನ ಅಭಿಪ್ರಾಯವಿದೆ. ಕಾರಣ ಇದೇ ಘಟನೆಯಲ್ಲಿ ಭಾಗಿಗಳಾಗಿದ್ದ ಹಾವೇರಿ ತಾಲೂಕಿನ ನೆಗಳೂರು ಗ್ರಾಮದ ದೇವೇಂದ್ರಪ್ಪ ವಿಭೂತಿ, ಪರಮಣ್ಣ ಹರಕಂಗಿ ಮತ್ತು ಹಾಲಗಿಯ ಫಕ್ಕೀರಯ್ಯ ಕುಲಕರ್ಣಿ ಹೇಳಿಕೆಯಂತೆ ಆ ತಂಡದ ನಾಯಕತ್ವವನ್ನು ಮೈಲಾರ ಮಹದೇವಪ್ಪ ವಹಿಸಿದ್ದ ಎಂದು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಜಿಲ್ಲೆಯ ರಾಷ್ಟ್ರೀಯ ಚಳುವಳಿಯಲ್ಲಿ ಮೈಲಾರ ಮಹದೇವಪ್ಪನ ತಮ್ಮ ಲಿಂಗಪ್ಪ ತಂಡದ ನಾಯಕತ್ವ ವಹಿಸಿದ ಪ್ರಸ್ತಾಪ ಕೇಳಿಬಂದಿಲ್ಲ.

* ಹುಬ್ಬಳ್ಳಿಯಿಂದ ಪ್ರತಿ ದಿನ ಮೇಲ್‌ಗಾಡಿಯು ಸಂಜೆ (ಇನ್ನೂ ಬೆಳಕಿರುವಾಗಲೇ) ಹಾವೇರಿಗೆ ಬರುತ್ತಿತ್ತು. ಅದನ್ನು ಹೇಗಾದರೂ ಮಾಡಿ ಸಂಜೆ ಬರುವಹಾಗೆ ಮಾಡಲು ಮಹದೇವಪ್ಪ ಯೋಚಿಸತೊಡಗಿದ. ಹಾವೇರಿಯಿಂದ ಹಿಂದೆ ವರದಾ ನದಿಯ ಮೇಲಿನ ಸೇತುವೆ ಮೇಲೆ ಯಾರಿಗೂ ತೊಂದರೆಯುಂಟಾಗದ ಹುಸಿ ಬಾಂಬ್ ಹಾಕಿ ಸ್ವಲ್ಪ ಗಾಬರಿಯುಂಟುಮಾಡಿದರೆ, ಹಾವೇರಿಗೆ ಕತ್ತಲಾಗುವ ವೇಳೆಗೆ ಬರುತ್ತೆ ಎಂದುಕೊಂಡು ಕೆಲಸವನ್ನು ಕಾರ್ಯರೂಪಕ್ಕೆ ತಂದ, ಮಹದೇವಪ್ಪನ ಯೋಜನೆಯಂತೆ ಶಕ್ತಿಶಾಲಿ ಬಾಂಬ್ ಆಗಿರದ ಕಾರಣ ಯಾರಿಗೂ ಪ್ರಾಣಹಾನಿ ಆಗದೆ ಗಾಡಿ ಸ್ವಲ್ಪ ಕಾಲ ನಿಂತು ಹಾವೇರಿಗೆ ಇವರು ಅಂದುಕೊಂಡಂತೆ ಸಂಜೆ ಕತ್ತಲು ಕವಿಯುವ ವೇಳೆಗೆ ಬಂದಾಗ ಅಂಚೆ ಜವಾನ ತನ್ನ ದಿನಚರಿಯಂತೆ ಅಂಚೆ ಚೀಲ ತೆಗೆದುಕೊಂಡು ಹೊರಟಾಗ ಜನಗಳೊಂದಿಗೆ ಹೊರಟಿದ್ದ ಮೈಲಾರ ಮಹದೇವಪ್ಪನು ಜವಾನನೊಂದಿಗೆ ಹೊರಟು ಜವಾನನ ಹತ್ತಿರವೇ ಹುಸಿಬಾಂಬನ್ನು ಎಸೆದಾಗ, ಜನ ಗಾಬರಿಯಿಂದ ಬಾಂಬ್ ಬಾಂಬ್ ಎನ್ನುತ್ತ ಓಡುತ್ತಿರುವಾಗ ಮಹದೇವಪ್ಪ ಜವಾನನ ಕೈಯಲ್ಲಿರುವ ಅಂಚೆ ಚೀಲವನ್ನು ಕಿತ್ತುಕೊಂಡು ಓಡಿ ಹೋದನು.

ಈ ಘಟನೆ ಹಾವೇರಿಯ ಮಧ್ಯ ಭಾಗದಲ್ಲಿಯೇ ನಡೆದಿದ್ದರಿಂದ ಪೊಲೀಸರಿಗೆ ಅಧಿಕಾರಿಗಳಿಗೆ ಅವಮಾನ ಮಾಡಿದಂತಿತ್ತು. ಮಹದೇವಪ್ಪನ ಜನಪ್ರಿಯತೆ ಹೆಚ್ಚಾದ ಬಗ್ಗೆ ಮತ್ತು ಆ ಘಟನೆಯ ವಿವರಗಳನ್ನು, ಮಹದೇವಪ್ಪನ ಸಾಹಸವನ್ನು ಹಾವೇರಿಯ ಚಳುವಳಿಗಾರ ರಾಮಚಂದ್ರ ಕರ್ಪೂರ ಸಂದರ್ಶನದಲ್ಲಿ ನೆನಪಿಸಿಕೊಳ್ಳುತ್ತಾರೆ.

ಇದೇ ರೀತಿ ಹಾವೇರಿ–ಹಾವನೂರು ಟಪಾಲು ಬಸ್ಸು ಲೂಟಿ, ಶಿಗ್ಗಿ ರನ್ನರ್‌ನಿಂದ ಟಪಾಲು ಲೂಟಿ, ಕರ್ಜಗಿ ಪೋಸ್ಟ್‌ಬ್ಯಾಗ್ ಲೂಟಿ, ಬ್ಯಾಡಗಿ ರೈಲ್ವೇ ಸ್ಟೇಶನ್ ಹತ್ತಿರ ರನ್ನರನಿಂದ ಟಪಾಲು ಲೂಟಿ, ಸವಣೂರು ರೈಲ್ವೇ ಸ್ಟೇಶನ್‌ಗೆ ಬೆಂಕಿ ಹಚ್ಚಿದ್ದು ಇವರ ಭೂಗತ ಕಾರ್ಯಕ್ಕೆ ಸಾಕ್ಷಿಯಂತಿವೆ. ಈ ಎಲ್ಲ ಘಟನೆಗಳಲ್ಲಿ ಮಹದೇವಪ್ಪನ ತಂಡದಲ್ಲಿ ಮಹತ್ತರ ಪಾತ್ರವಹಿಸಿದ ಚಳುವಳಿಗಾರರೆಂದರೆ ನೆಗಳೂರಿನ ದೇವೇಂದ್ರಪ್ಪ ವಿಭೂತಿ, ಇವರು ಇಲ್ಲಿಯೂ ತಮ್ಮ ಖಾರದ ಪುಡಿಯ ಮಹಿಮೆಯನ್ನು ಪ್ರದರ್ಶಿಸಿದವರು. ಹೀಗಾಗಿ ಇವರಿಗೆ ಮಹದೇವಪ್ಪ ಬ್ಯಾಡಗಿಯ ಬಾಂಬ್ ಎಂದು ಕರೆಯುತ್ತಿದ್ದ ಬಗ್ಗೆ ಸಂದರ್ಶನದಲ್ಲಿ ದೇವೇಂದ್ರಪ್ಪ ಹೆಮ್ಮೆಯಿಂದ ಹೇಳಿರುತ್ತಾರೆ.

* ನೆಗಳೂರಲ್ಲಿ ಮಧ್ಯಾಹ್ನದಲ್ಲಿಯೇ ಮಹದೇವಪ್ಪನ ತಂಡ ಕಂದಾಯ ವಸೂಲಿಗೆ ಬಂದ ಅಧಿಕಾರಿಗಳ ವಾಹನಕ್ಕೆ (ಜೀಪಿಗೆ) ಬೆಂಕಿ ಹಚ್ಚಿ ಅಲ್ಲಿಂದ ಪಾರಾಗಿ ಹೋದರು. ಈ ಪ್ರಕರಣದಲ್ಲಿ ಮಹದೇವಪ್ಪನ ತಂಡದಲ್ಲಿದ್ದ ಪರಮಣ್ಣ ಹರಕಂಗಿ ಹೇಳುವಂತೆ, ನಡು ಊರಿನಲ್ಲಿ ಈ ಘಟನೆ ನಡೆದು, ಅಧಿಕಾರಿಗಳಿಗೆ, ಪೊಲೀಸರಿಗೆ ಭಾರಿ ಅವಮಾನವಾಯಿತು. ಅದರಿಂದ ನಮ್ಮನ್ನು ಬಂಧಿಸಲು ತುಂಬಾ ಕಷ್ಟಪಟ್ಟರು. ಆದರೆ ನಾವು ಮಾತ್ರ ಯಾರಿಗೂ ತಿಳಿಸದೆ, ಕಪ್ಪತ್ತಗುಡ್ಡದಲ್ಲಿ ಬಿಡಾರ ಹೂಡಿದ್ದೆವೆಂದು ಆ ಘಟನೆಯನ್ನು ನೆನಪಿಸಿಕೊಳ್ಳುತ್ತಾರೆ.

ಇಷ್ಟೆಲ್ಲ ಕಾರ್ಯ ಮಾಡಿದ ಮಹದೇವಪ್ಪನಿಗೆ ಮತ್ತು ಅವನ ತಂಡಕ್ಕೆ ಹೊಸರಿತ್ತಿ ಕಂದಾಯದ ಹಣ ಲೂಟಿ ಮಾಡಿ ರೈತರಿಗೆ ಕಂದಾಯ ವಾಪಾಸು ಮಾಡಬೇಕು ಎಂಬ ಆಲೋಚನೆ ಬಂದು, ಅದಕ್ಕಾಗಿ ಬುಡಬುಡಕಿಯ ವೇಷ ಧರಿಸಿ ಕಂದಾಯ ಸಂಗ್ರಹ ಕೇಂದ್ರವಾದ ಹೊಸರಿತ್ತಿಯ ವೀರಭದ್ರೇಶ್ವರ ದೇವಾಲಯಕ್ಕೆ ಹೋಗಿ ಬಂದನು. ಆದರೆ ಈ ವೇಳೆಗಾಗಲೇ ಸರಕಾರ ಮಹದೇವಪ್ಪ ಪೊಲೀಸರಿಗೆ ಸಿಗದೆ ಇಷ್ಟೊಂದು ಕಾರ್ಯಮಾಡಲು ಹೇಗೆ ಸಾಧ್ಯ? ಎಂದು ಯೋಚಿಸಿ ಸ್ಥಳೀಯ ಪೊಲೀಸರನ್ನು ನಂಬದೇ ಬಾಂಬೆ ಸರಕಾರ ಮಹಾರಾಷ್ಟ್ರದಿಂದ ಪೊಲೀಸರನ್ನು ಕರೆಯಿಸಿ ಹೊಸರಿತ್ತಿ ಕಂದಾಯ ವಸೂಲಿ ಕೇಂದ್ರಕ್ಕೆ ಪಹರೆ ಹಾಕಿಸಿತ್ತು. ಆದರೆ ಆ ವಿಷಯ ಮಹದೇವಪ್ಪನಿಗೆ ತಿಳಿದಿತ್ತು. ಆದರೆ ಈಗಾಗಲೇ ೭೪ ಕಾರ್ಯಗಳನ್ನು ಮಾಡಿದ್ದ ಮಹದೇವಪ್ಪನಿಗೆ ಇದು ದೊಡ್ಡ ವಿಷಯವಾಗಿರಲಿಲ್ಲ. ಅದಕ್ಕಾಗಿ ತನ್ನ ತಂಡವನ್ನು ಸಜ್ಜುಗೊಳಿಸಿದ, "೧.೪.೧೯೪೩ರಂದು ಬೆಳಗಿನ ಜಾವ ೫:೩೦ರ ಸಮಯಕ್ಕೆ ಪೊಲೀಸರು ಬೆಳಗಿನ ಕಾರ್ಯಕ್ರಮಗಳಿಗೆ ನದಿ ಕಡೆ ಹೋಗಿರುತ್ತಾರೆಂದುಕೊಂಡು ಭೈರಿದೇವರ ಕೊಪ್ಪದ ಗುಡ್ಡದಿಂದ ಮದುವೆ ದಿಬ್ಬಣ್ಣದ ಚಕ್ಕಡಿಯಲ್ಲಿ ಬಂದಿಳಿದಾಗ ಮಹದೇವಪ್ಪ ನಿರೀಕ್ಷಿಸಿದಂತೆ ಎರಡು ಮೂರು ಜನ ಪೊಲೀಸರನ್ನು ಬಿಟ್ಟರೆ ಉಳಿದವರು ನದಿ ಕಡೆ ಹೋಗಿದ್ದರು. ಕಂದಾಯದ ಹಣದ ತೆಗೆದುಕೊಳ್ಳುವ ಸಂದರ್ಭದ ತಳ್ಳಾಟದಲ್ಲಿ ಗರ್ಭಗುಡಿಯಲ್ಲಿದ್ದ ಪೊಲೀಸನೊಬ್ಬ ಬಂದೂಕಿನಿಂದ ಮಹದೇವಪ್ಪನ ಎದೆಗೆ ಗುಂಡು ಹಾರಿಸಿದ. ಅದನ್ನು ತಪ್ಪಿಸಲು ಬಂದ ವೀರಯ್ಯ ಹಿರೇಮಠ ಮತ್ತು ತಿರುಕಪ್ಪ ಮಡಿವಾಳರ ಅವರಿಗೂ ಗುಂಡು ತಗುಲಿ ಮಹದೇವಪ್ಪ ಮತ್ತು ತಿರುಕಪ್ಪ ಕಂದಾಯ ಕೇಂದ್ರ ವೀರಭದ್ರೇಶ್ವರ ದೇವಾಲಯದಲ್ಲಿಯೇ ಮರಣ ಹೊಂದಿದರೆ, ವೀರಯ್ಯ ಹಿರೇಮಠ ದಾರಿ ಮಧ್ಯ ಹಾವೇರಿ ಸಮೀಪ ಹುತಾತ್ಮರಾದರು.

ಈ ಘಟನೆಯಲ್ಲಿ ಮಹದೇವಪ್ಪನ ಸಂಗಡಿಗರ ಹತ್ತಿರ ಬಂದೂಕುಗಳಿದ್ದು ಅವರು ಪ್ರತಿಯಾಗಿ ಪೊಲೀಸರಿಗೆ ಗುಂಡುಹಾರಿಸಲು ಮುಂದಾದಾಗ, ಮಹದೇವಪ್ಪ ನಾವು ಅಹಿಂಸಾ ವಾದಿಗಳು ನೀವಾರು ಗುಂಡು ಹಾರಿಸಬೇಡಿ ನೀವೆಲ್ಲರೂ ಇಲ್ಲಿಂದ ತಪ್ಪಿಸಿಕೊಂಡು ನನ್ನ ನಂತರ ಕಾರ್ಯ ಮುಂದುವರಿಸಿ ಎನ್ನುತ್ತ ಪ್ರಾಣಬಿಟ್ಟಿದ್ದ. ಹಾಗಾಗಿ ಯಾರೂ ಆಯುಧಗಳನ್ನು ಪ್ರಯೋಗಿಸದೆ ಅಲ್ಲಿಂದ ಓಡಿದರು."[೯೩] ಈ ಘಟನೆ ಜಿಲ್ಲೆಯ ಚಳುವಳಿಗಾರರ ಅಹಿಂಸಾ ನೀತಿಗೆ ಉದಾಹರಣೆಯಾಗಿದೆ.

ಹಾವೇರಿ, ಹಾನಗಲ್ಲು, ಶಿಗ್ಗಾವಿ, ಬ್ಯಾಡಗಿ ತಾಲೂಕುಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರೊಂದಿಗಿನ ಶಾಲಾ-ಕಾಲೇಜು ವಿದ್ಯಾರ್ಥಿಗಳ ಸಂವಾದ ಕಾರ್ಯಕ್ರಮಗಳನ್ನು ಹಾವೇರಿ ಜಿಲ್ಲೆಯ ಮೈಲಾರ ಮಹದೇವಪ್ಪ ರಾಷ್ಟ್ರೀಯ ಸ್ಮಾರಕ ಟ್ರಸ್ಟ್(ರಿ), ಹಾವೇರಿ. ಇವರು ಜಿಲ್ಲಾ ವಾರ್ತಾ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಜಿಲ್ಲೆಯ ಹಲವು ಶಾಲಾ-ಕಾಲೇಜುಗಳು ಮತ್ತು ಜಾನಪದ ವಿಶ್ವವಿದ್ಯಾಲಯ ಶಿಗ್ಗಾವಿ ಮುಂತಾದ ಕಡೆ ರಾಷ್ಟ್ರೀಯತೆಗೆ ಸಂಬಂಧಿಸಿದ ಜಾನಪದ, ಭಕ್ತಿಗೀತೆ-ಭಾವಗೀತೆ, ಕಂಸಾಳೆ ಹೀಗೆ ಮುಂತಾದವುಗಳೊಂದಿಗೆ ಸ್ವಾತಂತ್ರ್ಯ ಯೋಧರ ಬಗ್ಗೆ ಉಪನ್ಯಾಸಗಳು(ನಾನೂ ಹುತಾತ್ಮ ವೀರಯ್ಯ ಹಿರೇಮಠ, ಮೈಲಾರ ಮಹದೇವಪ್ಪ, ಹಾವೇರಿ ಜಿಲ್ಲೆಯಲ್ಲಿ ೧೯೪೨ರ ಚಳುವಳಿ, ಸ್ವಾತಂತ್ರ್ಯ ಹೋರಾಟದಲ್ಲಿ ನೈತಿಕತೆ ಮತ್ತು ರಾಷ್ಟ್ರೀಯತೆ ಕುರಿತಾದ ಉಪನ್ಯಾಸಗಳನ್ನು ನೀಡಿರುತ್ತೇನೆ) ಆ ಸಭೆ ಸಮಾರಂಭಗಳಿಗೆ ಹೋದಾಗ, ಗಮನಿಸಿದಂತೆ ವಿದ್ಯಾರ್ಥಿಗಳು ಅಂದಿನ ಸ್ವಾತಂತ್ರ್ಯಯೋಧರಾದ ನೆಗಳೂರಿನ ಪರಮಣ್ಣ ಹರಕಂಗಿ, ಅಕ್ಕಿಆಲೂರಿನ ಗುಡ್ಡಪ್ಪ ಹರಿಜನ, ಹಾನಗಲ್ಲನ ಸುಬ್ಬಣ್ಣಾಚಾರ್ಯ ಅಕ್ಕಿವಳಿ, ಹಾಲಗಿಯ ಫಕ್ಕೀರಯ್ಯ ಕುಲಕರ್ಣಿ ಇನ್ನೂ ಮುಂತಾದವರಿಗೆ ಕೇಳಿದ (ಹಲವು ಕಡೆ ಹೆಚ್ಚು ವಿದ್ಯಾರ್ಥಿಗಳು)ಪ್ರಶ್ನೆಯೆಂದರೆ 'ಭಗತ್‌ಸಿಂಗ್ ಅವರಿಗೆ ಸಿಕ್ಕ ಪ್ರಚಾರ ಇಷ್ಟೊಂದು ಕಾರ್ಯ ಮಾಡಿದ ಮೈಲಾರ ಮಹದೇವಪ್ಪಗೆ ಯಾಕೆ ಸಿಕ್ಕಿಲ್ಲ'? ಶಾಲಾ ಮಕ್ಕಳ ಮತ್ತು ಕಾಲೇಜು ಯುವಕ-ಯುವತಿಯರ ಈ ಪ್ರಶ್ನೆಗಳಿಗೆ ಚಳುವಳಿಗಾರರು ಕೊಟ್ಟ ಉತ್ತರ ಹೌದು ಎಂದು ಉತ್ತರಿಸುತ್ತಿದ್ದರು. ನನಗೂ ಆ ಪ್ರಶ್ನೆ ಕಾಡುತ್ತಿತ್ತು. ಮಕ್ಕಳ ಆ ಪ್ರಶ್ನೆಗೆ ಯೋಚಿಸಿದರೆ ಹೌದೆನಿಸುತ್ತದೆ, ಕಾರಣ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿರುವುದು ಹಿಂಸೆ-ಅಹಿಂಸೆಯಿಂದಲೋ? ಎಂಬ ಪ್ರಶ್ನೆ ಇಟ್ಟುಕೊಂಡು ಯೋಚಿಸಿದರೆ ಅಹಿಂಸೆಯನ್ನು ಒಪ್ಪಿಕೊಳ್ಳುತ್ತೇವೆ. ಅದಕ್ಕೆ ಕಾರಣ ಅಂದು ಭಾರತೀಯರೆಲ್ಲರೂ ಹಿಂಸಾರೂಪದಲ್ಲಿ ಹೋರಾಟ ಮಾಡಿದ್ದರೆ ಸಿಕ್ಕ ಅಥವಾ ಸಿಗುವ ಸ್ವಾತಂತ್ರ್ಯವನ್ನು ಅನುಭವಿಸಲು ಎಷ್ಟು ಜನ ಭಾರತೀಯರು ಇರುತ್ತಿದ್ದರು ಎಂಬ ಪ್ರಶ್ನೆಯನ್ನು ನಾವು ಕೇಳಿಕೊಂಡರೆ! ಗೊಂದಲದ ಮನಸ್ಥಿತಿ ನಮ್ಮದಾಗುತ್ತದೆ. ನಮ್ಮನ್ನಾಳುವ ಸರಕಾರದ ವಿರುದ್ಧ ಅಷ್ಟು ಸುಲಭವಾಗಿ ಜಯಗಳಿಸುವುದು ಸಾಧ್ಯವಿರಲಿಲ್ಲ. ತನ್ನ ಕೊನೆಯ ಉಸಿರಿರುವವರೆಗೂ ತನ್ನ ಮತ್ತು ತನ್ನ ಸಂಗಡಿಗರಲ್ಲಿ ಆಯುಧಗಳಿದ್ದರೂ ಅವುಗಳನ್ನು ಸರಕಾರಿ ಅಧಿಕಾರಿಗಳಿಗೆ ಹೆದರಿಸಲು ಮಾತ್ರ ಅವುಗಳನ್ನು ಉಪಯೋಗಿಸಿಕೊಂಡು ಸರಕಾರಕ್ಕೆ ಕಾಡಿದ ಅಥವಾ ತೊಂದರೆ ಕೊಟ್ಟ ಮಹದೇವಪ್ಪನ ತಂಡ ತಮ್ಮ ಕೊನೆಯ ವಿಧ್ವಂಸಕ ಕಾರ್ಯ ಹೊಸರಿತ್ತಿಯ ಹಫ್ತಾಲೂಟಿ ಪ್ರಕರಣದಲ್ಲಿ ತಮ್ಮ ಜೀವ ಹೋಗುತ್ತದೆ ಎನ್ನುವಾಗಲೂ ಆಯುಧಗಳನ್ನು ಬಳಸದೇ ಹುತಾತ್ಮರಾಗಿದ್ದನ್ನು ಗಮನಿಸುವುದಾದರೆ ಶಾಲಾ-ಕಾಲೇಜು ವಿದ್ಯಾರ್ಥಿಗಳು ಕೇಳುವ ಪ್ರಶ್ನೆಗೆ ನಾವು ಹೌದು ಭಗತಸಿಂಗ್ ಮತ್ತು ಅವರ ಸಂಗಡಿಗರಿಗೆ ಸಿಕ್ಕ ಗೌರವ, ಮಹದೇವಪ್ಪ ಮೈಲಾರ ಮತ್ತು ತಂಡದ ಸದಸ್ಯರಿಗೆ ಸಿಕ್ಕಿಲ್ಲವೆನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಏಕೆಂದರೆ ಮಹದೇವಪ್ಪ ಅಹಿಂಸಾ ಮಾರ್ಗದಿಂದ ಹುತಾತ್ಮನಾದವನು. ಅವನು ಮತ್ತು ಅವನ ಸಂಗಡಿಗರಿಗೆ ಸಿಗಬೇಕಾದ ಸರಕಾರಿ ಗೌರವಗಳು ಸಿಕ್ಕಿಲ್ಲವೆಂಬುದನ್ನು ಅಲ್ಲಗಳೆಯುವಂತಿಲ್ಲ.

ಮಹದೇವಪ್ಪ ತನ್ನ ಚಳುವಳಿಯಲ್ಲಿ ಜನತೆಯ ಪ್ರೀತಿ ವಿಶ್ವಾಸವನ್ನು ಮತ್ತು ಮಹಿಳೆಯರಲ್ಲಿ ಪ್ರೀತಿ ವಿಶ್ವಾಸ ಗಳಿಸಿಕೊಂಡಿದ್ದನೆಂಬುದಕ್ಕೆ ಹಾವೇರಿಯಲ್ಲಿ ನ್ಯಾಯಾಲಯದಲ್ಲಿ ನಡೆದ ಘಟನೆಯೇ ಸಾಕ್ಷಿ. ದಿನಾಂಕ ೧.೪.೧೯೪೩ರಂದು ಮೈಲಾರ ಮಹದೇವಪ್ಪ ತನ್ನ ಎರಡು ಜನ ಸಂಗಡಿಗರೊಂದಿಗೆ ಹುತಾತ್ಮರಾದ ದಿನ ಹಾವೇರಿಯ ನ್ಯಾಯಾಲಯದಲ್ಲಿ ಹೆಚ್ಚು ಮಹಿಳಾ ಚಳುವಳಿಗಾರರು ಹಾಗೂ ಪುರುಷರು ಸೇರಿದಂತೆ ಹಾವೇರಿಯ ನ್ಯಾಯಾಲಯಕ್ಕೆ ನುಗ್ಗಿದರು, ಅದರಲ್ಲಿ ಹಾವೇರಿ ತಾಲೂಕಿನ ಹಾಲಗಿಯ ೧೦ ಸ್ತ್ರೀಯರು ಇದ್ದದ್ದು ವಿಶೇಷ. ಅವರ ಮುಖಂಡರಾದ ಶ್ರೀಮತಿ ಅಂಬವ್ವಳಿದ್ದು ಅವಳೊಂದಿಗೆ ಹಲವರು ಚಿಕ್ಕ ಚಿಕ್ಕ ಕೂಸುಗಳನ್ನು ಬಗಲಲ್ಲಿ ಇಟ್ಟುಕೊಂಡು ಬಂದಿದ್ದರು. ಕೋರ್ಟ್ ಇನ್ನೇನು ಪ್ರಾರಂಭವಾಗಬೇಕು ಅಷ್ಟರಲ್ಲಿ ಘೋಷಣೆಗಳು ಕೇಳಿಬರಹತ್ತಿದವು.

ಭಾರತ ಮಾತಾಕೀ ಜೈ! ಗಾಂಧೀ ಮಹಾತ್ಮಾಕೀ ಜೈ!
ವಂದೇ ಮಾತರಂ! ಮಾಡು ಇಲ್ಲವೆ ಮಡಿ!

ಅಲ್ಲಿ ಇದ್ದ ನ್ಯಾಯಾಧೀಶರಿಗೂ, ನ್ಯಾಯವಾದಿಗಳಿಗೂ, ನೆರದ ಜನರಿಗೂ ಅಚ್ಚರಿ. ಶ್ರೀಮತಿ ಅಂಬವ್ವ ಗಂಭೀರವಾಗಿ ನ್ಯಾಯಪೀಠವನ್ನೇರಿದಳು. ನಂತರ ಇಂದಿನ ಕೇಸ್ ಯಾವುದು ಎಂದಾಗ ನ್ಯಾಯವಾದಿ ಪಾತ್ರಧಾರಿ(ಕು.ರಾಮಚಂದ್ರ) ದ್ರೋಹಿಗಳಾದ ಬ್ರಿಟಿಷರ ಮೇಲಿನ ಖಟ್ಲೆ ವಿಚಾರಣೆ, ಅಪರಾಧಿಗಳಾದ ಬ್ರಿಟಿಷರು ಅನಧಿಕೃತವಾಗಿ ಭಾರತವನ್ನು ಪ್ರವೇಶ ಮಾಡಿ ದಬ್ಬಾಳಿಕೆಯಿಂದ ಭಾರತೀಯರಿಗೆ ಅನ್ಯಾಯ ಮಾಡುತ್ತಿದ್ದರಿಂದ ಗಾಂಧೀಜಿ ಅವರಿಗೆ(ಬ್ರಿಟಿಷರಿಗೆ) **'ಭಾರತ ಬಿಟ್ಟು ತೊಲಗಿ'** ಎಂದು ಎಚ್ಚರಿಕೆ ನೀಡಿದ್ದರೂ ಅವರು ಹಾಗೆ ಮಾಡದೆ ಗಾಂಧೀಜಿ ಹಾಗೂ ಕಾಂಗ್ರೆಸ್ ನಾಯಕರನ್ನು ಬಂಧಿಸಿದ್ದಲ್ಲದೆ, ನಮ್ಮ ಮಕ್ಕಳ ಮೇಲೆ ಲಾಠಿ, ಗುಂಡುಗಳಿಂದ ದಾಳಿ ಮಾಡಿ ಅನೇಕರನ್ನು ಕೊಂದಿದ್ದಾರೆಂಬುದು ವಾದಿಗಳ ದೂರು ಎಂದು ವಕೀಲನ ಪಾತ್ರದಾರಿ ಹೇಳಿದಾಗ ನ್ಯಾಯಾಧೀಶರ ಸ್ಥಾನದಲ್ಲಿದ್ದ ಅಂಬವ್ವ ಅಪರಾಧಿ ಸ್ಥಾನದಲ್ಲಿರುವ ಬ್ರಿಟಿಷರ ಮೇಲಿನ ಆರೋಪ ಸಿದ್ಧವಾಗಿದೆ. ಅವರು ತತ್‌ಕ್ಷಣದಿಂದ ಭಾರತ ಬಿಟ್ಟು ಹೋಗಬೇಕು...! ಈಗ ಭಾರತ ಸ್ವತಂತ್ರ, ಈ ಕೋರ್ಟ್ ಹಾಗೂ ಎದುರುಗಿರುವ ಮಾಮಲೇದಾರರ ಕಛೇರಿಗಳ ಮೇಲೆ ಇರುವ ಯೂನಿಯನ್‌ಜಾಕ್ ಧ್ವಜವನ್ನು ಕೆಳಗಿಳಿಸಿ, ಭಾರತದ ತಿರಂಗ ಧ್ವಜ ಹಾರಿಸಬೇಕು! ಹೀಗೆ ತೀರ್ಪು ನೀಡಿದರು. ಈ ವೇಳೆಗೆ ಪೊಲೀಸರು ಕೋರ್ಟಿನ ಒಳಗಡೆ ಬಂದು ಎಲ್ಲರನ್ನು ಬಂಧಿಸಿದರು. ಈ ಘಟನೆ ಮೈಲಾರ ಮಹದೇವಪ್ಪನ ತಂತ್ರವಾಗಿತ್ತು ಎಂಬುದು ಅಂದು ಅವರೊಟ್ಟಿಗೆಯಿದ್ದ ಪರಮಣ್ಣ ಹರಕ್ಕಂಗಿ, ದೇವೇಂದ್ರಪ್ಪ ವಿಭೂತಿ, ನಾಗವ್ವ ರಾಮಪ್ಪ ಉಂಡೇರ್, ಫಕ್ಕೀರಯ್ಯ ಹಾಲಯ್ಯ ಕುಲಕರ್ಣಿ ಮತ್ತು ರಾಮಚಂದ್ರ ಕರ್ಪೂರ ಇನ್ನೂ ಮುಂತಾದ ಚಳುವಳಿಗಾರರ ಹೇಳಿಕೆ. ೧.೪.೧೯೪೩ರಂದು ತಾವು ಹೊಸರಿತ್ತಿಯಲ್ಲಿ ಮಾಡುವ ಹಫ್ತಾಲೂಟಿ ಪ್ರಕರಣಕ್ಕೆ ಸಂಬಂಧಿಸಿದಂತೆ ಹಾವೇರಿ ಭಾಗದ ಪೊಲೀಸರು ಹೊಸರಿತ್ತಿಯ

ಕಡೆ ಗಮನಹರಿಸದಂತೆ ಈ ಘಟನೆ ನಡಸಲು ಸ್ವತಃ ಮಹದೇವಪ್ಪನು ಈ ಕಾರ್ಯಕ್ಕೆ ಚಾಲನೆ ನೀಡಿದ್ದ ಎಂಬ ಇವರ ಹೇಳಿಕೆ ಮಹದೇವಪ್ಪನ ಚಾಣಾಕ್ಷತನಕ್ಕೆ ಸಾಕ್ಷಿ.

**ಮಹದೇವಪ್ಪನವರ ತಂಡದ ಪ್ರಮುಖ ಸದಸ್ಯರು**

ಮಹದೇವಪ್ಪನ ತಂಡದಲ್ಲಿ ೫೦ ರಿಂದ ೬೦ ಜನರಿದ್ದು ಅವರಲ್ಲಿ ಪ್ರಮುಖರೆಂದರೆ– ನಿಂಗಪ್ಪ ಕೊರಗುಂದ, ಲಿಂಗಣ್ಣ ಮೈಲಾರ, ಗೋಣೆಪ್ಪ ಕಮತದ, ವೀರಯ್ಯ ಹಿರೇಮಠ, ತಿರುಕಪ್ಪ ಮಡಿವಾಳರ, ಪಕ್ಕಿರಪ್ಪ ಕೊರಗುಂದ, ನೀಲಪ್ಪ ದಿಳ್ಳೆಪ್ಪನವರ, ಚನ್ನಪ್ಪ ಕೊರಗುಂದ, ಹಾಲಪ್ಪ ಉಡಚಣ್ಣನವರ, ವೆಂಕಣ್ಣ ವಾಯಿ, ಬಸವಕುಮಾರ ಮುಳಗುಂದಮಠ, ಯಲ್ಲಪ್ಪ ಕನವಳ್ಳಿ, ಹನುಮಣ್ಣ ಜಂಗ್ಲಿ, ರಮಾನಂದ ಮನ್ನಂಗಿ, ಬುಡನಸಾಬ್ ನದಾಪ(ಓಲೇಕಾರ), ಪಕ್ಕೀರಪ್ಪ ತಾವರೆ, ದೇವೇಂದ್ರಪ್ಪ ವಿಭೂತಿ, ಪರಮಣ್ಣ ಹರಕಂಗಿ, ವಿರುಪಣ್ಣ ಹಾವೇರಿ, ಪಂಚಾಕ್ಷರಿ ಒಳಸಂಗದ, ಫಕ್ಕೀರಯ್ಯ ಕುಲಕರ್ಣಿ ಇನ್ನೂ ಮುಂತಾದವರು.

**ಮಹದೇವಪ್ಪನವರ ತಂಡ ಕ್ಯಾಂಪು ಮಾಡಿದ ಸ್ಥಳಗಳು** – ಕೊಗನೂರಿನ ಭೈರವ ದೇವರಗುಡ್ಡ ಹಾಗೂ ಕಲ್ನಾರು ಪೆಳೆಗಳು. * ಬಾಲೇಹೊಸೂರಿನ ಹಾಗೂ ಹಾಲಗಿ ಗುಡಿಯ ಹಳ್ಳದ ಕೇದಿಗಿ ಮಟ್ಟಿ ಹಾಗೂ ಕಬ್ಬಿನ ತೋಟ. * ನೀರಲಗಿ ವರದಾ ನದಿ ದಂಡೆಯ ಗಡ್ಡಿ, *ನೆಗಳೂರಿನ ಕಬ್ಬಿನ ತೋಟ. * ವಡವಿಗುಡ್ಡ ಮತ್ತು ತೋಟದ ಯಲ್ಲಾಪರದ ಹೆಗ್ಗೇರಿ ಕೆಳಗಿನ ನಿಂಗನಗೌಡರ ಕಬ್ಬಿನ ತೋಟ. * ಕಪ್ಪತ್ತಗುಡ್ಡದ ಗವಿಗಳು ಹಾಗೂ ಹೊಳಲಮ್ಮ ದೇವಿಯ ಗುಡಿ. * ಕಬ್ಬೇರಹಳ್ಳಿ, ಹಾವೇರಿ ಸಮೀಪದ ಶಿವಪುರದ ಈಶ್ವರ ದೇವಾಲಯ. ಇವಲ್ಲದೆ ಒಂದೊಂದು ರಾತ್ರಿ ಅನೇಕ ಜೋಳದ ಹೊಲಗಳಲ್ಲಿ ವಸತಿ ಆಗುತ್ತಿದ್ದರು."[೯೪]

ಹೀಗೆ ಹಾವೇರಿ ಜಿಲ್ಲೆಯ ಹಾವೇರಿ, ಶಿಗ್ಗಾವಿ, ಶಿರಹಟ್ಟಿ, ನೆಗಳೂರು, ಹೊಸರಿತ್ತಿ ಇನ್ನೂ ಮುಂತಾದ ಭಾಗಗಳಲ್ಲಿನ ಗುಡ್ಡ, ತೋಟ, ಕಾಡು, ಗವಿ, ಹೊಲಗಳು ಮಹದೇವಪ್ಪನ ತಂಡದ ಸದಸ್ಯರು ವಸತಿ ಪ್ರದೇಶಗಳು, ಅದರಲ್ಲೂ ಭೈರದೇವರ ಗುಡ್ಡದಲ್ಲಿ ಕಾಡು ಹಂದಿಗಳ ಕಾಟದ ಬಗ್ಗೆ ಪರಮಣ್ಣ ಹರಕ್ಕಂಗಿ, ಹಾಲಯ್ಯ ಕುಲಕರ್ಣಿ ತಾವು ಅನುಭವಿಸಿದ ಅಂದಿನ ಕರಾಳ ಸನ್ನಿವೇಶಗಳನ್ನು ಇಂದು ಹೆಮ್ಮೆಯಿಂದ ಹೇಳುತ್ತಾರೆ. ಸಾಮಾನ್ಯವಾಗಿ ಊರ ಸಮೀಪವಿದ್ದರೆ ಊಟದ ಸಮಸ್ಯೆಯಿರುತ್ತಿರಲಿಲ್ಲ. ಆದರೆ ಒಂದು ಕಾರ್ಯಕ್ರಮ ಮಾಡಿದರೆ ಜನವಸತಿಯಿಂದ ದೂರವಿದ್ದಾಗ (ಭೈರದೇವರ ಗುಡ್ಡ) ಊಟವಿಲ್ಲ ಎಂದು ಹೇಳುವ ಪರಮಣ್ಣ ಒಂದು ರಾತ್ರಿಯ ಹುಗ್ಗಿ ಊಟದ ವಿವರ ಹೇಳಿದ್ದು ಮನಕುಲುಕುವಂತಿದೆ. ವಿಪರೀತ ಹಸಿವಿನಲ್ಲಿರುವ ಎಲ್ಲ ಸದಸ್ಯರು ಊಟ ಬಂತು ಎಂಬ ಸಂತೋಷ ಆದರೆ ಆ ಊಟದ ಗಂಟನ್ನು ಹೊತ್ತುಕೊಂಡು ತರುವಾಗ ರಾತ್ರಿಯಿದ್ದರಿಂದ ಕಲ್ಲಿಗೆ ಎಡವಿ ಬಿದ್ದು ಹುಗ್ಗಿ ನೆಲಪಾಲಾಗಿದ್ದು, ನಾವೆಲ್ಲ ಊಟಕ್ಕಾಗಿ ಕಾಯುತ್ತೇವೆ ಎಂಬ ಭಯದಿಂದ ನೆಲದ ಮೇಲಿನ ಹುಗ್ಗಿಯನ್ನು ಬಳೆದುಕೊಂಡು ತಂದದ್ದು, ನಾವೆಲ್ಲರೂ ಹುಗ್ಗಿ ಉಣ್ಣುವುದಕ್ಕಿಂತ ಸೀಪುತ್ತಿದ್ದೇವೆ. ಕಾರಣ

ಬಾಯಲ್ಲಿ ಕಲ್ಲು, ಮಣ್ಣು ಬಂದರೆ ಉಗಿದು ಹುಗ್ಗಿ ನುಂಗುತ್ತಿದ್ದೆವು ಎಂದು ಹೇಳುವ ಆ ಚಳುವಳಿಗಾರರ ಅಂದಿನ ಆ ಕಾಡು ಜೀವನದ ಕಥೆ, ವ್ಯಥೆ ನಿಜಕ್ಕೂ ರೋಚಕ, ಕರುಣಾಜನಕ ವಾದುದು.

ಹೀಗೆ ಹಾವೇರಿ ಜಿಲ್ಲೆಯ ವಿವಿಧ ಭಾಗಗಳಲ್ಲಿ ೧೯೪೨ರ ಚಲೇಜಾವ್ ಚಳುವಳಿಯಲ್ಲಿ ಮಹದೇವಪ್ಪನ ನಾಯಕತ್ವದ ತಂಡ ಸ್ವಾತಂತ್ರ್ಯಕ್ಕಾಗಿ ಹಲವು ಭೂಗತ ಕಾರ್ಯಕ್ರಮಗಳನ್ನು ಮಾಡಿ ಕೊನೆಗೆ ನಾಯಕ ಮತ್ತು ಅವರ ಸಂಗಡಿಗರಿಬ್ಬರೂ ಹುತಾತ್ಮರಾಗುವುದರೊಂದಿಗೆ ಗಾಂಧೀಜಿಯ **'ಮಾಡು ಇಲ್ಲವೆ ಮಡಿ'** ಸಂದೇಶವನ್ನು ಸಾರ್ಥಕಗೊಳಿಸಿಕೊಂಡು ಭಾರತೀಯ ಸ್ವಾತಂತ್ರ್ಯ ಚಳುವಳಿಯ ಇತಿಹಾಸದ ಪುಟಗಳಲ್ಲಿ ತಮ್ಮದೇ ಅಧ್ಯಾಯವನ್ನು ಬಿಟ್ಟುಹೊಗಿದ್ದಾರೆ.

ಮಹದೇವಪ್ಪ ಮೈಲಾರ ಮತ್ತು ಸಂಗಡಿಗರ ಮರಣದ ನಂತರ ನಡೆದ ಬೆಳವಣಿಗೆ ಎಂದರೆ–ಹಾವೇರಿ ಜಿಲ್ಲೆಯಲ್ಲಿಯೂ ಬಾಂಬ್ ತಯಾರಿಸುವವರು ಯಾರು ಹೇಗೆ ಅದನ್ನು ಅವರು ಕಲಿತರು. ಈ ಭಾಗದಲ್ಲಿ ಅಂಥ ಸಂಸ್ಕೃತಿ ಇತ್ತೇ ಎಂಬ ಪ್ರಶ್ನೆಗಳನ್ನು ಇಟ್ಟುಕೊಂಡು ಅದರ ಹಿನ್ನೆಲೆಯನ್ನು ಗಮನಿಸುವುದಾದರೆ, ಚಿಕ್ಕ ವಯಸ್ಸಿನವರಾದ ರಾಮಚಂದ್ರಪ್ಪ ಕೂರಗುಂದ, ಪೂರ್ವಾಚಾರ್ಯ ಅರ್ಕಸಾಲಿ ಮತ್ತು ನಾಗೇಂದ್ರಪ್ಪ ಕಮ್ಮಾರ ಇವರನ್ನು ಪೊಲೀಸರು ಬಂಧಿಸಿ, ಹಿಂಸೆಗೊಳಪಡಿಸಿದಾಗ ಕೆಲ ಮಾಹಿತಿಗಳನ್ನು ಹೇಳಿದರು. ಹಾವೇರಿ ಭಾಗದಲ್ಲಿ ಬಾಂಬ್ ತಯಾರಿಸುವವರು ಯಾರು? ಯಾರು ಅವುಗಳನ್ನು ಚಳುವಳಿ ನಾಯಕರುಗಳಿಗೆ ಮುಟ್ಟಿಸುತ್ತಾರೆ? ಎಂಬುದು ಪೊಲೀಸರಿಗೆ ದೊಡ್ಡ ಪ್ರಶ್ನೆಯಾಗಿ ಕಾಡುತ್ತಿತ್ತು. ಹೀಗಾಗಿ ಮಹದೇವಪ್ಪನ ಸಾವಿನ ನಂತರ ಈ ಯುವಕರಿಂದ ಮಾಹಿತಿ ಪಡೆದರು.

ಪೊಲೀಸರ ಏಟು ತಾಳಲಾರದೆ ಹಾವೇರಿಯ ನರಸಪ್ಪ ಮಡಿವಾಳರ ಅವರಿಂದಲೇ ಬಾಂಬ್‌ಗಳನ್ನು ಒಯ್ಯುತ್ತಿದ್ದೆವು ಎಂದು ಹೇಳಿದ್ದರಿಂದ ನರಸಪ್ಪ ಮಡಿವಾಳರನ್ನು ಬಂಧಿಸಿ, ಅವರನ್ನು ಅಮಾನುಷವಾಗಿ ಹಿಂಸಿಸಿದರು. ಬಾಂಬ್ ತಯಾರಿಸುವವರು ಜಿನಪ್ಪ ಹಳ್ಳಿ ಮತ್ತು ವಿರುಪಾಕ್ಷಪ್ಪ ಕಡ್ಲಿ ಇವರ ಹೆಸರನ್ನು ಹೇಳಿದ್ದು, ಹಾಗೂ ತಯಾರಾದ ಬಾಂಬ್‌ಗಳನ್ನು ಇಟ್ಟುಕೊಳ್ಳುವವರು ನಾರಾಯಾಣಾಚಾರ್ಯ ಆನವಟ್ಟಿ ಇವರ ಹೆಸರನ್ನು ಹೇಳಲಾಯಿತು. ಈ ರೀತಿಯ ಹಾವೇರಿಯ ಕ್ರಾಂತಿದಳದ ಒಬ್ಬೊಬ್ಬರೆ ಕಾರ್ಯಕರ್ತರು ಬಂಧಿತರಾದ ವಿವರವನ್ನು ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ನೋವಿನಿಂದ ಹೇಳುತ್ತಾರೆ.

"ಈ ಕ್ರಾಂತಿಕಾರಿ ತಂಡವವನ್ನು ಪತ್ತೆ ಹಚ್ಚುವುದಕ್ಕಾಗಿಯೇ ಧಾರವಾಡದಿಂದ ವಿಶೇಷ ಪೊಲೀಸರನ್ನು, ಗುಪ್ತಚರರನ್ನು ಕರೆಸಲಾಗಿತ್ತು. ಅವರು ಹಾವೇರಿ ಭಾಗದ ಕ್ರಾಂತಿಕಾರಿ ಸಂಘದ ಒಬ್ಬೊಬ್ಬ ಸದಸ್ಯನನ್ನು ಬಂಧಿಸುತ್ತ ಹೋದರು. ಮುಖ್ಯವಾಗಿ ಬಾಂಬ್ ತಯಾರಿಸುವ ನಾರಾಯಣಾಚಾರ್ಯ ಆನವಟ್ಟಿ ಆಗಲೇ ತಲೆಮರೆಸಿಕೊಂಡಿದ್ದರೂ ನಂತರ ಅವರೂ ಪೊಲೀಸರಿಗೆ ಸಿಕ್ಕರು. ಅವರ ಮನೆಯ ದೇವರ ಕೋಣೆಯ ಪೀಠದ ಕೆಳಭಾಗದಲ್ಲಿ ತಗ್ಗು ತೆಗೆದು ಇರಿಸಿದ್ದ

೧೦ ಟೆಂಪರೇಚರ್ ಬಾಂಬುಗಳು ದೊರೆತವು. ಅವುಗಳನ್ನು ಕಚೇರಿಗೆ ಒಯ್ದು ಅದರಲ್ಲಿ ಒಂದು ಕಚೇರಿಯಲ್ಲಿಯೇ ಸ್ಫೋಟಗೊಂಡಿತು. ಆದರೆ ಇಲ್ಲಿಯೂ ಯಾರಿಗೂ ಪ್ರಾಣಹಾನಿ ಯಾಗಲಿಲ್ಲ. ಹೀಗೆ ಕ್ರಾಂತಿದಳದ ಸದಸ್ಯರು ಹಾವೇರಿಯ ಸಬ್ ಜೈಲಿಗೆ ಸೇರಿದರು. ನಂತರ ಅವರಿಗೆ ೩ ವರ್ಷ ಶಿಕ್ಷೆಯಾಗಿ ಬೆಳಗಾವಿ, ಯರವಾಡ ಜೈಲಿಗೆ ಕಳುಹಿಸಲಾಯಿತು."[೫] ಜಿಲ್ಲೆಯ ಕ್ರಾಂತಿ ಸಂಘಟನೆಯಿಂದ ಯಾವುದೇ ರೀತಿಯ ಪ್ರಾಣಹಾನಿಯಂಥ ಘಟನೆ ನಡೆದಿರುವುದು ಚಳುವಳಿಗಾರರ ಅಹಿಂಸಾ ನೀತಿಗೆ ಸಾಕ್ಷಿ.

ಗಾಂಧೀಜಿ ಇಚ್ಛೆಯಂತೆ ೧೯೪೪ರ ಜನವರಿ ೨೬ಕ್ಕೆ ಭೂಗತ ಚಟುವಟಿಕೆ ನಿಲ್ಲಿಸಲು ಘೋಷಿಸಲಾಯಿತು. ಇಲ್ಲಿಗೆ ಜಿಲ್ಲೆಯಲ್ಲಿ ಕ್ವಿಟ್ ಇಂಡಿಯಾ ಚಳುವಳಿಗೆ ತೆರೆಬಿತ್ತು. ಅವಿಭಜಿತ ಧಾರಾವಾಡ ಜಿಲ್ಲೆಯಿಂದ ಸುಮಾರು ೨೦೦೦ ಜನ ಚಳುವಳಿಗಾರರನ್ನು ಬಂಧಿಸಿರಬಹುದೆಂದು ಅಂದಾಜಿಸಲಾಗಿದೆ. ಜೈಲಿನಲ್ಲಿ(ಹಿಂಡಲಗಾ, ವಿಸಾಪೂರ, ಧಾರವಾಡ...) ಕಾಲರಾ ಇನ್ನೂ ಮುಂತಾದ ರೋಗಗಳಿಂದ ಹಲವರು ಸತ್ತರು, ಆದರೂ ಹಿಂದೆಂದೂ ಆಗದಂಥ ಚಳುವಳಿ ನಡೆದು ಸರಕಾರವನ್ನು ನಡುಗಿಸಿತು. ಇಡೀ ಕರ್ನಾಟಕದಲ್ಲಿ ಬೆಳಗಾವಿ ಮತ್ತು ಧಾರವಾಡ ಈಗಿನ ಹಾವೇರಿ ಜಿಲ್ಲೆ ಸಹಿತ ಅತಿ ಹೆಚ್ಚಿನ ಚಳುವಳಿಗಳು ಉಗ್ರ ಸ್ವರೂಪ ಪಡೆದಿದ್ದು ಅಂದು ಈ ಭಾಗದ ಬಗ್ಗೆ ರಾಷ್ಟ್ರನಾಯಕರು ಬೆರಗುಗೊಳ್ಳುವಂತೆ ಮಾಡಿದ್ದು, ಈ ಜಿಲ್ಲೆಯ ನಾಯಕರ ಮತ್ತು ಚಳುವಳಿಗಾರರ ರಾಷ್ಟ್ರಭಕ್ತಿಗೆ ನೀಡಿದ ಅವಿಸ್ಮರಣಿಯ ಕಾಣಿಕೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಚಲೇಜಾವ್ ಚಳುವಳಿಯಲ್ಲಿ ಭಾಗವಹಿಸುವ ಮೊದಲೇ ಜೈಲು ಸೇರಿ ಜಿಲ್ಲೆಯ ಚಳುವಳಿ ಗಾರರಿಗೆ ಹಣಕಾಸಿನ ನೆರವು ಮತ್ತು ಯುವಪ್ರತಿಭೆಗಳನ್ನು ಚಳುವಳಿಗೆ ಪ್ರೇರೇಪಿಸುವಲ್ಲಿ ಪ್ರಮುಖ ಪಾತ್ರವಹಿಸಿದವರು ಹಳ್ಳಿಕೇರಿ ಗುದ್ಲೆಪ್ಪ. "೯.೮.೧೯೪೨ರಂದು ರಾಷ್ಟ್ರನಾಯಕರ ಬಂಧನವಾದ ದಿನವೇ ಇವರನ್ನು ಬಂಧಿಸಲಾಯಿತು. ಹೇಗಾದರೂ ಸರಿ ಈ ಚಳುವಳಿಗೆ ನನ್ನಿಂದ ಏನಾದರೂ ಕಾರ್ಯವಾಗಬೇಕು ಎಂಬ ದೃಢನಿರ್ಧಾರ ಅವರದಾಗಿತ್ತು. ಅದಕ್ಕಾಗಿ ತಮ್ಮನ್ನು ಕಾವಲಿಗಿರಿಸಿದ್ದ ಪೊಲೀಸರನ್ನು ತಮ್ಮ ಕಾರ್ಯಕ್ಕೆ ಬಳಸಿಕೊಂಡು, ಜೈಲಿನಿಂದಲೇ ಚಳುವಳಿಗಾರರಿಗೆ ಆರ್ಥಿಕ ಸಹಾಯ ಮಾಡುತ್ತಿದ್ದರು. ಅಷ್ಟೇ ಅಲ್ಲ ನಾಯಕರಿಲ್ಲದ ಈ ಚಳುವಳಿಗೆ ತಮ್ಮಿಂದ ಎಷ್ಟು ಸಾಧ್ಯವೋ ಅಷ್ಟು ಸಲಹೆ-ಸೂಚನೆಗಳನ್ನು ನೀಡುವುದು ಮತ್ತು ಯಾವ ಯಾವ ಭಾಗದಲ್ಲಿ ಹೇಗೆ ಚಳುವಳಿ ನಡೆಯುತ್ತದೆ. ಮತ್ತು ಇನ್ನೂ ಏನೇನು ಮಾಡಬಹುದೆನ್ನುವುದನ್ನು ಜೈಲಿನಿಂದಲೇ ಸಂದೇಶವನ್ನು ಚಳುವಳಿಗಾರರಿಗೆ ಮುಟ್ಟಿಸುತ್ತಿದ್ದರು ಎಂಬ ವಿವರವನ್ನು ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಅಭಿಪ್ರಾಯ. ಅಂದರೆ ಒಬ್ಬ ನಾಯಕನಾದವನು ಜೈಲಿಗೆ ಹೋದಾಗ ಹೇಗೆ ಮಾನಸಿಕವಾಗಿ ತನ್ನ ಸಹ ಚಳುವಳಿಗಾರರಿಗೆ ಯಾವ ರೀತಿಯಲ್ಲಿ ಸಹಾಯ ಮಾಡಬಹುದೆಂಬುದನ್ನು ಗಮನಿಸಲಾಗಿದೆ.

ಚಲೇಜಾವ್ ಚಳುವಳಿಯನ್ನು ಯಶಸ್ವಿಯಾಗಿ ನಡೆಸಿದ್ದರಲ್ಲಿ ಹಳೆಯ ಧಾರವಾಡ ಜಿಲ್ಲೆ ಮತ್ತು ಬೆಳಗಾವಿ ಜಿಲ್ಲೆಗಳು ಕರ್ನಾಟಕದಲ್ಲಿಯೇ ಹೆಚ್ಚು ಪ್ರಭಾವಶಾಲಿಯಾಗಿ ಕಾರ್ಯ ನಿರ್ವಹಿಸಿದ್ದವು. ಅಂದಿನ ಜೈಲು ಪ್ರಕರಣಗಳು, ವಿಧ್ವಂಸಕ ಪ್ರಕರಣಗಳು, ಲೂಟಿ ಪ್ರಕರಣಗಳು, ಲಾಠಿ ಪ್ರಕರಣಗಳು, ನ್ಯಾಯಾಲಯದಲ್ಲಿ ಶಿಕ್ಷೆಯ ಪ್ರಕರಣಗಳು ಇವೆಲ್ಲವುಗಳ ದೃಷ್ಟಿಯಿಂದಲೂ ಹಾವೇರಿ ಸೇರಿದಂತೆ ಈ ಎರಡು ಜಿಲ್ಲೆಗಳಲ್ಲಿ ಹೆಚ್ಚು ಪ್ರಕರಣಗಳು ಆಗಿರುವುದನ್ನು ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

* ಹಾವೇರಿಯಲ್ಲಿ ಎರಡು ಬಾರಿ ಲಾಠಿಚಾರ್ಜ್ ನಡೆದು ೮ ಜನ ಗಾಯಗೊಂಡರು. * ಟೆಲಿಗ್ರಾಫ್ ತಂತಿಗಳ ಕತ್ತರಿಸಿದ ಪ್ರಕರಣಗಳು ೩೯. * ಅಂಚೆ ಕಛೇರಿಗಳನ್ನು ಲೂಟಿ ಮಾಡಿದ ಪ್ರಕರಣಗಳು ೯. * ಅಂಚೆಚೀಲ ಕಸಿದುಕೊಂಡ ಪ್ರಕರಣಗಳು ೨೯. * ಗ್ರಾಮಗಳ ದಾಖಲೆಗಳನ್ನು ಹಾಳು ಮಾಡಿದ ಪ್ರಕರ್ಣಗಳು ೬೨. * ವಿಶ್ರಾಂತಿಗೃಹಗಳ ಮೇಲೆ ಧಾಳಿ ಮಾಡಿದ ಪ್ರಕರಣಗಳು ೯ * ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮತ್ತು ಮುತ್ತಿಗೆ ಹಾಕಿದ ಪ್ರಕರಣಗಳು ೧೮. * ಚಾವಡಿ ಮೊದಲಾದ ಸರಕಾರಿ ಆಸ್ತಿ ಹಾನಿ ಮಾಡಿದ ಪ್ರಕರಣಗಳು ೬೯.”[೬೭] ಈ ಅಂಕಿಅಂಶಗಳು ಅಂದಿನ ಚಳುವಳಿಗಾರರ ಕಾರ್ಯದ ಕುರುಹುಗಳಾಗಿವೆ.

**ಕ್ವಿಟ್ ಇಂಡಿಯಾ ಚಳುವಳಿ ವಿಫಲತೆಗೆ ಕಾರಣಗಳು**

* ಗಾಂಧೀಜಿಯಾದಿಯಾಗಿ ರಾಷ್ಟ್ರ ನಾಯಕರುಗಳ ಬಂಧನವಾಗಿದ್ದರಿಂದ ಹಾಗೂ ಚಳುವಳಿ ಪೂರ್ವಯೋಜಿತವಾಗಿರಲಿಲ್ಲ. ಅದಕ್ಕೆ ನಿರ್ದಿಷ್ಟ ಸಂಘಟನಾ ವ್ಯವಸ್ಥೆ ಇರಲಿಲ್ಲ. ಕಮ್ಯುನಿಸ್ಟರು ಸಾಮ್ರಾಜ್ಯಶಾಹಿ ಏಜೆಂಟರಾಗಿ ಚಳುವಳಿಯ ಧಮನಕ್ಕೆ ಸಹಕರಿಸಿದರು. *ಶ್ರೀಮಂತರು, ಜಮೀನ್ದಾರರು, ರಾಜರು ಮತ್ತು ದೊಡ್ಡ ವರ್ತಕರು ಚಳುವಳಿಗೆ ಬೆಂಬಲ ಕೊಡಲಿಲ್ಲ. *ಕಾಂಗ್ರೆಸ್ **“ಭಾರತ ಬಿಟ್ಟು ತೊಲಗಿ”** ಎಂದು ಕೂಗಿದರೆ ಮುಸ್ಲಿಂ ನಾಯಕರು “ದೇಶವನ್ನು ವಿಭಜಿಸಿ ಹೊರಡಿ” ಎಂದು ಕೂಗಿದರು. * ಲಿಬರಲ್ ಪಕ್ಷದ ಟಿ.ಬಿ.ಸಪ್ರು, ಹಿಂದು ಮಹಾಸಭಾ ಅಧ್ಯಕ್ಷ ಸಾವರ್ಕರ್, ದಲಿತ ನಾಯಕ ಅಂಬೇಡ್ಕರ್, ಸಿಖ್ ಜನಾಂಗ ಈ ಚಳುವಳಿಯನ್ನು ಬೆಂಬಲಿಸಲಿಲ್ಲ. * ಸರ್ಕಾರ ಅನುಸರಿಸಿದ ಧಮನಕಾರಿ ನೀತಿ.”[೯೭] ಚಲೇಜಾವ್ ಚಳುವಳಿಯು ರಾಷ್ಟ್ರಮಟ್ಟದಲ್ಲಿ ವಿಫಲತೆ ಆಗಿರಬಹುದು ಮತ್ತು ಅದಕ್ಕಾಗಿ ಹತ್ತು ಹಲವು ಕಾರಣಗಳು ಇರಬಹುದು.

ಆದರೆ ಹಾವೇರಿ ಜಿಲ್ಲೆಯಲ್ಲಿ ಮಾತ್ರ ಈ ಚಳುವಳಿಯು ಮೇಲೆ ಉಲ್ಲೇಖಿಸಿರುವ ಎಲ್ಲ ಅಂಶಗಳನ್ನು ಗಮನಿಸಿದರೆ, ಇಂದಿಗೂ ನಮ್ಮೊಂದಿಗೆ ಹಲವು ಚಳುವಳಿಗಾರರು, ಅಂದು ಚಿಕ್ಕವರಾಗಿದ್ದು ನೋಡಿದವರು, ಕೆಲವರು ಚಳುವಳಿಗಾರರಿಂದ ವಿವರಗಳನ್ನು ಕೇಳಿದವರು. ಅವೆಲ್ಲವುಗಳನ್ನು ಒಟ್ಟುಗೂಡಿಸಿ ವಿಮರ್ಶಿಸಿದರೆ ಹಾವೇರಿ ಜಿಲ್ಲೆಯಲ್ಲಿ ಚಲೇಜಾವ್ ಚಳುವಳಿ ವಿಫಲವಾಗಲಿಲ್ಲ. ಯಶಸಿನ ಲಕ್ಷಣಗಳನ್ನು ಪಡೆದುಕೊಂಡಿತ್ತು ಎಂಬುದನ್ನು ಗುರುತಿಸಲಾಗಿದೆ.

ಕ್ವಿಟ್ ಇಂಡಿಯಾ ಚಳುವಳಿ ಸಾಧಿಸಿದ್ದೇನು? ಎಂಬ ಪ್ರಶ್ನೆ ಎದುರಾದಾಗ ಈ ಪ್ರಕರಣಗಳು ಅಂದಿನ ಚಳುವಳಿಗಾರರ ಚಳುವಳಿಯ ತೀವ್ರತೆಯನ್ನು ತೋರಿಸುತ್ತವೆ. ಈ ಚಳುವಳಿಯು ಮುಖ್ಯವಾಗಿ ದಬ್ಬಾಳಿಕೆಯಿಂದ ಹತ್ತಿಕ್ಕಲ್ಪಟ್ಟಿತ್ತು ಎಂಬುದನ್ನು ಒಪ್ಪಬಹುದಾದರೂ, ಗಾಂಧೀಜಿ ಕೂಡ ಚಳುವಳಿಯನ್ನು ನಿಲ್ಲಿಸಲು ಆದೇಶಿಸಿದ್ದನ್ನು ಸ್ಮರಿಸಬೇಕಾಗುತ್ತದೆ. ಆದರೆ ಈ ಚಳುವಳಿ ಸೋತಿತು ಎನ್ನುವುದಕ್ಕಿಂತ ೧೯೪೨ರ ಈ ಚಳುವಳಿ ಜರುಗದೇ ಹೋಗಿದ್ದರೆ ಭಾರತ “೧೯೪೭ರಲ್ಲಿ ಸ್ವಾತಂತ್ರ್ಯವಾಗುತ್ತಿತ್ತೇ? ಎಂಬ ಪ್ರಶ್ನೆ ಎದುರಾಗುತ್ತದೆ. ದೀರ್ಘ ಕಾಲಾವಧಿಯ ನಮ್ಮ ಸ್ವಾತಂತ್ರ್ಯ ಹೋರಾಟದಲ್ಲಿ ಹಂತ ಹಂತಗಳಿಗೆ, ಪ್ರತೇಕವಾದ ಸೋಲು ಗೆಲುವುಗಳನ್ನು ನಿರ್ಧರಿಸುವುದು ಸಮಂಜಸವಲ್ಲ”[೯೮] ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಕ್ವಿಟ್ ಇಂಡಿಯಾ ಚಳುವಳಿಯನ್ನು ಸಮಗ್ರ ದೃಷ್ಟಿಯಿಂದ ನೋಡಿದರೆ ಅದರಲ್ಲಿ ಗಾಂಧೀವಾದಿ ಕಾರ್ಯಕ್ರಮಗಳೊಂದಿಗೆ ಕ್ರಾಂತಿಕಾರಿ ಅಂಶಗಳು ಸಹ ಸೇರಿರುವುದು ಕಂಡುಬರುತ್ತದೆ. ಮೇಲ್ನೋಟಕ್ಕೆ ಕ್ವಿಟ್ ಇಂಡಿಯಾ ಚಳುವಳಿ ಸೋತಂತೆ ಕಾಣಬರುವುದಾದರೂ, ೫ ವರ್ಷಗಳಲ್ಲಿ ಭಾರತ ಸ್ವಾತಂತ್ರ್ಯ ಗಳಿಸುವುದರಲ್ಲಿ ಆ ಹೋರಾಟದ ಮಹತ್ವ ಅರ್ಥಗರ್ಭಿತವಾಗಿದೆ. ಈ ಚಳುವಳಿ ಸೋತಿತು ಎನ್ನುವುದಕ್ಕಿಂತ ಗೆಲುವಿನ ಸ್ಫೂರ್ತಿಗೆ ಸೆಲೆಯಾಯಿತು.

ಚಲೇಜಾವ್ ಚಳುವಳಿ ಉಗ್ರ ಸ್ವರೂಪ ತಾಳಲು ಅಂದಿನ ಪತ್ರಿಕೆಗಳ ಪಾತ್ರವನ್ನು ಮೆಚ್ಚಲೇಬೇಕು. ಪತ್ರಿಕೆಗಳು ಈ ಚಳುವಳಿಯನ್ನು ಸಮರ್ಥವಾಗಿ ಬೆಂಬಲಿಸಿದ್ದವು. ಮುಖ್ಯವಾಗಿ ವಿಶ್ವ ಕರ್ನಾಟಕ, ಸಂಯುಕ್ತ ಕರ್ನಾಟಕ, ತಾಯಿ ನಾಡು ಮುಂತಾದ ಪತ್ರಿಕೆಗಳು ಪ್ರತ್ಯಕ್ಷ-ಪರೋಕ್ಷವಾಗಿ ಈ ಚಳುವಳಿಯನ್ನು ಬೆಂಬಲಿಸಿದ್ದು ಮತ್ತು ಪ್ರಚೋಧಿಸಿ ಜನರ ಉತ್ಸಾಹವನ್ನು ವೃದ್ಧಿಸುವ ಕಾರ್ಯಮಾಡಿದ್ದು ಚಳುವಳಿಯ ಯಶಸ್ಸಿಗೆ ಕಾರಣವಾಯಿತು.

ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಮತ್ತೊಂದು ಅಂಶವೆಂದರೆ ಜಿಲ್ಲೆಯ ಅಸಂಖ್ಯ ಮಹಿಳೆಯರು ಪಾಲ್ಗೊಂಡಿದ್ದು ಅಂದಿನ ಚಳುವಳಿಯ ನಾಯಕರು ಮಹಿಳೆಯರಿಗೂ ಸ್ವಾತಂತ್ರ್ಯದ ಬಗ್ಗೆ ರಾಷ್ಟ್ರೀಯತೆಯ ಬಗ್ಗೆ ತಿಳುವಳಿಕೆ ನೀಡಿದ್ದು ಮತ್ತು ಮಹಿಳೆಯರು ಭಾಗವಹಿಸಿದ್ದು ಗಮನಾರ್ಹ ಬೆಳವಣಿಗೆ. ಮುಖ್ಯವಾಗಿ ನಾಗಮ್ಮ ಪಾಟೀಲ, ನಾಗವ್ವ ಉಂಡಿ, ಅಂಬವ್ವ, ದೇವಕ್ಕ ಮನ್ನಂಗಿ, ಸಿದ್ದಮ್ಮ ಮೈಲಾರ ಮುಂತಾದ ಮಹಿಳೆಯರು ಭಾಗವಹಿಸಿದ್ದು ಈ ಚಳುವಳಿಯ ವಿಶೇಷವಾಗಿತ್ತು. ಹಾವೇರಿ ಭಾಗದ ಹಾಲಗಿಯ ಗ್ರಾಮದ ಚಳುವಳಿಗಾರರಲ್ಲಿ ಜೈಲುವಾಸ ಕಂಡವರಲ್ಲಿ ಮಹಿಳೆಯರೇ ೧೨ ಜನವೆಂದರೆ ಮಹಿಳೆಯರ ಪಾತ್ರ ಕೂಡ ಮಹಿಳಾ ಜಾಗೃತಿಯನ್ನು ನೆನಪಿಸುತ್ತದೆ.

೧೯೪೨ರ ಈ ಚಳುವಳಿಯನ್ನು ಸ್ವಾತಂತ್ರ್ಯ ಸಂಗ್ರಾಮದ ಒಂದು ಮೈಲಿಗಲ್ಲು ಎಂದು ಪರಿಗಣಿಸಿದಾಗ, ಜನರನ್ನು ದೇಶದ ಬಂಧ ವಿಮೋಚನೆಗೆ ಸಿದ್ಧಗೊಳಿಸಿದ್ದು, ಅಸಂಖ್ಯ ಕಷ್ಟ ನಷ್ಟಗಳಿಗೆ ಗುರಿಯಾದಾಗಲೂ ಅದು ದೇಶಮಾತೆಯ ಸೇವೆಯ ಕಾರ್ಯವೆಂಬ ಮನಃಸ್ಥಿತಿಯನ್ನು

ನಿರ್ಮಿಸುವಲ್ಲಿ ಈ ಚಳುವಳಿ ವಹಿಸಿದ ಪಾತ್ರ ಶ್ಲಾಘನೀಯ. ಆ ಅಳತೆಗೋಲಿನಲ್ಲಿ ಅದು ಉಜ್ವಲ ಹೋರಾಟದ ಮಹಾಸಮರ ಎನ್ನಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಚಂದ್ರಶೇಖರ ಭಂಡಾರಿ, ಸಶಸ್ತ್ರ ಕ್ರಾಂತಿ-ರಕ್ತರಂಜಿತ ಹೋರಾಟ ರಾಮಸ್ವಾಮಿ ಎಸ್.ಆರ್.(ಸಂ)., ಸ್ವಾತಂತ್ರೋದಯದ ಮೈಲಿಗಲ್ಲುಗಳು ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು. ೧೯೯೭-೨೦೧೦, ಪುಟ ೪೭

೨. ಎಂ. ಚಿದಾನಂದಮೂರ್ತಿ, ಕ್ರಾಂತಿ, ಚಳುವಳಿ ಮತ್ತು ಕನ್ನಡ ಚಳುವಳಿ, ಕರ್ಮವೀರ- ಸಾಪ್ತಾಹಿಕ ಕರ್ಮವೀರ ಪತ್ರಿಕೆ, ಆಗಸ್ಟ್ ೨೪, ೨೦೧೪, ಪುಟ ೧೮ ರಿಂದ ೨೩

೩. ಶಂಕರನಾರಾಯಣ ರಾವ್ ಎನ್.ಪಿ., ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು ಪ್ರಕಾಶಕರು, ನವಕರ್ನಾಟಕ ಪಬ್ಲಿಕೇಶನ್ ಲಿಮಿಟೆಡ್. ಬೆಂಗಳೂರು, ೧೯೯೧,೯೬ ೯೯.೦೬, ೦೮, ೧೦,೨೦೧೧, ಪುಟ ೩೧೯ ಮತ್ತು ೩೨೦

೪. ಅದೇ, ಪುಟ ೩೨೩

೫. ಅದೇ, ಪುಟ ೩೨೭

೬. ಕಾಮತ್ ಸೂರ್ಯನಾಥ(ಸಂ), ಭಾರತದ ಮತ್ತು ಕರ್ನಾಟಕ ಹಾಗೂ ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೫, ಬೆಂಗಳೂರು, ಪುಟ ೧೩೪

೭. ಅದೇ, ಪುಟ ೧೩೧

೮. ಅದೇ, ಪುಟ ೧೩೬

೯. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಪುಟ ೧೩೭ ಮತ್ತು ೧೩೮

೧೦. ಹಾವೇರಿಯ ಚಳುವಳಿಗಾರ ನಾರಾಯಣ ರಾಮಚಂದ್ರ ಕರ್ಪೂರ ನೀಡಿದ ವಿವರ

೧೧. ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮, ಪುಟ ೨೭೪

೧೨. ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಸಂದರ್ಶನದಲ್ಲಿ ನೀಡಿದ ವಿವರ

೧೩. ಸಿದ್ದವ್ವನಹಳ್ಳಿ ಕೃಷ್ಣಶರ್ಮ, ಗಾಂಧೀ ಮತ್ತು ಕರ್ನಾಟಕ, ಕರ್ನಾಟಕ ರಾಜ್ಯ ಗಾಂಧೀ ಸ್ಮಾರಕ ನಿಧಿ, ಗಾಂಧೀ ಭವನ, ಕುಮಾರ ಪಾರ್ಕ್, ಬೆಂಗಳೂರು, ೧೯೭೦, ೨೦೦೮, ಪುಟ ೨೮೫ ಮತ್ತು ೨೮೬

೧೪. ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ಟಿ.ಆರ್. ನೆಶ್ವಿ, ನೆಶ್ವಿ ಪ್ರಕಾಶನ, ಹಂಸಭಾವಿ, ಸೋಮಶೇಖರ ಆಕಳವಾಡಿ, ಧಾರವಾಡ, ೧೯೯೮, ಪುಟ ೫೦

೧೫. ಪೂರ್ವೋಕ್ತ, ರಾಮಸ್ವಾಮಿ ಎಸ್.ಆರ್.(ಸಂ), ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು, ಪುಟ ೨೦೭

೧೬. ಚಂದ್ರ ಬಿಪಿನ್(ಕನ್ನಡಕ್ಕೆ), ಗೋಪಾಲರಾವ್ ಎಚ್.ಎಸ್., ಆಧುನಿಕ ಭಾರತದ ಇತಿಹಾಸ. ನವಕರ್ನಾಟಕ ಪ್ರಕಾಶನ ಬೆಂಗಳೂರು. ೨೦೧೨. ಪುಟ ೨೯೩

೧೭. ಅಶ್ವತ್ಥಪ್ಪ ಕೆ.ಎನ್., ಭಾರತದ ಇತಿಹಾಸ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೩, ಪುಟ ೧೦೪೦

೧೮. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೯೫, ಪುಟ ೧೨೮

೧೯. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂ–೩, ಪುಟ ೨೭೩

೨೦. ಹಾನಗಲ್ಲಿನ ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ನೀಡಿದ ವಿವರ

೨೧ ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್. ಪುಟ ೧೨೯

೨೨. ಪೂರ್ವೋಕ್ತ, ಅಶ್ವತ್ಥಪ್ಪ, ಕೆ.ಎನ್., ಭಾರತದ ಸ್ವಾತಂತ್ರ್ಯ ಚಳುವಳಿ, ಪುಟ ೧೯೭

೨೩. ಪೂರ್ವೋಕ್ತ, ಶಂಕರನಾರಾಯಣ ಎನ್.ಪಿ., ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ೧೯೯೧, ಪುಟ ೧೬೮

೨೪. ಸದಾಶಿವ ಕೆ., ಭಾರತದ ಸ್ವಾತಂತ್ರ್ಯ ಹೋರಾಟ(೧೮೫೭–೧೯೬೧), ಪ್ರಿಯದರ್ಶಿನಿ ಪ್ರಕಾಶನ, ಮೈಸೂರು, ಪುಟ ೧೨೯ ಮತ್ತು ೧೩೦

೨೫. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂ–೩, ಪುಟ ೨೭೫ ಮತ್ತು ೨೭೬

೨೬. ಅಲಿ ಆಸಿಫ್, ಭಾರತದ ಸ್ವಾತಂತ್ರ್ಯ ಚಳುವಳಿ ಮತ್ತು ಮುಸ್ಲಿಮರು, ಶಾಂತಿ ಪ್ರಕಾಶನ, ಮಂಗಳೂರು, ೨೦೦೮, ಪುಟ ೮೪

೨೭. ಪೂರ್ವೋಕ್ತ, ಅಶ್ವತ್ಥಪ್ಪ ಕೆ.ಎನ್., ಭಾರತದ ಇತಿಹಾಸ, ಪುಟ ೧೯೭ ಮತ್ತು ೧೯೮

೨೮. ಅದೇ, ಪುಟ ೧೯೯ ಮತ್ತು ೨೦೦

೨೯. ಪೂರ್ವೋಕ್ತ, ಮೈಸೂರು ರಾಜ್ಯ ಸರಕಾರ, ಕರ್ನಾಟಕ ಪರಂಪರೆ, ಸಂ–೨, ಪುಟ ೫೧೭

೩೦. ಶಿವಪ್ಪ. ಜಿ. ಅರಿವು, ಸಮಗ್ರ ಕರ್ನಾಟಕ ಇತಿಹಾಸ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೪–೧೫. ಪುಟ ೪೫೮

೩೧. ದಾನಿ ಸುರೇಂದ್ರ, ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಾಮ, ಬುರ್ಲಿಬಿಂದು ಮಾಧವ ಸ್ಮಾರಕ ಪ್ರತಿಷ್ಠಾನ, ಹುಬ್ಬಳ್ಳಿ, ೧೯೯೬, ಪುಟ ೧೨

೩೨. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂ-೧, ಪುಟ ೧೩೧ ಮತ್ತು ೬೭೨

೩೩. ಪೂರ್ವೋಕ್ತ, ಸುರೇಂದ್ರ ದಾನಿ, ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಾಮ, ಪುಟ ೧೨ ಮತ್ತು ೧೩

೩೪. ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿಯಿಂದ ಪಡೆದ ವಿವರ

೩೫. ಪೂರ್ವೋಕ್ತ, ಚಂದ್ರಶೇಖರ ಬಂಡಾರಿ(ಲೇಖಕರು), ಸಶಸ್ತ್ರ ಕ್ರಾಂತಿ-ರಕ್ತರಂಜಿತ ಹೋರಾಟ ರಾಮಸ್ವಾಮಿ ಎಸ್.ಆರ್(ಸಂ)., ಸ್ವಾತಂತ್ರೋದಯದ ಮೈಲಿಗಲ್ಲುಗಳು, ಪುಟ ೧೭೨

೩೬. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೨, ಪುಟ ೧೫

೩೭. ಪೂರ್ವೋಕ್ತ, ಅಶ್ವತ್ಥಪ್ಪ ಕೆ.ಎನ್., ಆಧುನಿಕ ಭಾರತದ ಇತಿಹಾಸ. ಪೂರ್ವೋಕ್ತ, ಪುಟ ೧೦೫೭ ಮತ್ತು ೧೦೫೮

೩೮. ಪೂರ್ವೋಕ್ತ, ಗೋವಿಂದ ಮೂರ್ತಿ ದೇಸಾಯಿ(ಲೇಖಕರು), ಅಸಹಕಾರ ಆಂದೋಲನ ಆರ್.ರಾಮಸ್ವಾಮಿ ಎಸ್.ಆರ್(ಸಂ) ಸ್ವಾತಂತ್ರ್ಯೋದಯದ ಮೈಲುಗಲ್ಲುಗಳು, ಪುಟ ೧೩೫ ಮತ್ತು ೧೩೬

೩೯. ಪೂರ್ವೋಕ್ತ, ಚಂದ್ರ ಬಿಪಿನ್(ಕನ್ನಡಕ್ಕೆ), ಗೋಪಾಲರಾವ್ ಎಚ್.ಎಸ್., ಆಧುನಿಕ ಭಾರತದ ಇತಿಹಾಸ, ಪುಟ ೨೭೧

೪೦. ಪೂರ್ವೋಕ್ತ, ಅಶ್ವತ್ಥಪ್ಪ ಕೆ.ಎನ್., ಆಧುನಿಕ ಭಾರತದ ಇತಿಹಾಸ. ಪುಟ ೧೦೩೭

೪೧. ಪೂರ್ವೋಕ್ತ, ಸಿದ್ದವ್ವನಹಳ್ಳಿ ಕೃಷ್ಣಶರ್ಮ, ಗಾಂಧೀ ಮತ್ತು ಕರ್ನಾಟಕ, ಹಿಂದ್ ಸ್ವರಾಜ್ಯ ಶತಮಾನೋತ್ಸವ, ೧೯೭೦ ಮತ್ತು ೨೦೦೮, ಪುಟ ೩೪ ಮತ್ತು ೩೯

೪೨. ಚಳುವಳಿಗಾರ ನೆಗಳೂರಿನ ದೇವೇಂದ್ರಪ್ಪ ವಿಭೂತಿ ಹಾಗೂ ರಾಣೆಬೆನ್ನೂರಿನ ಮಿನ್ನಪ್ಪ ಹಳ್ಳಿ ಸಂದರ್ಶನದಲ್ಲಿ ನೀಡಿದ ವಿವರ.

೪೩. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಪುಟ ೧೨೫

೪೪. ರಾಣೆಬೆನ್ನೂರಿನ ಚಳುವಳಿಗಾರ ಮಿನ್ನಪ್ಪ ಹಳ್ಳಿ ಸಂದರ್ಶನದಲ್ಲಿ ನೀಡಿದ ವಿವರ

೪೫. ಮಹದೇವಪ್ಪ ಮೈಲಾರ ತಂಡದ ಸದಸ್ಯ ಪರಮಣ್ಣ ಹರಕಂಗಿ ನೀಡಿದ ವಿವರ

೪೬. ಮಹದೇವಪ್ಪ ಮೈಲಾರರ ತಂಡದ ಸದಸ್ಯರಾದ ನೆಗಳೂರಿನ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕಂಗಿ ನೀಡಿದ ವಿವರ.

೪೭. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೧, ಪುಟ ೬೫೯

೪೮. ಪೂರ್ವೋಕ್ತ, ಶಂಕರನಾರಾಯಣರಾವ್ ಎನ್.ಪಿ., ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು, ಪುಟ ೨೪೫ ಮತ್ತು ೨೪೮

೪೯. ಪೂರ್ವೋಕ್ತ, ಮೈಸೂರು ರಾಜ್ಯ ಸರಕಾರ, ಕರ್ನಾಟಕ ಪರಂಪರೆ. ಸಂ–೨, ಪುಟ ೪೮೬

೫೦. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂಪುಟ–೩ ಪುಟ ೨೮೨ ಮತ್ತು ೨೯೫

೫೧. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್. ಪುಟ ೧೪೨

೫೨. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯ ಯೋಧ ಟಿ.ಆರ್. ನೆಶ್ವಿ, ಪುಟ ೧೯

೫೩. ಅದೇ, ಪುಟ ೨೫

೫೪. ಅದೇ, ಪುಟ ೨೦ ಮತ್ತು ೨೧

೫೫. ಪೂರ್ವೋಕ್ತ, ಮೈಸೂರು ರಾಜ್ಯ ಸರಕಾರ, ಕರ್ನಾಟಕ ಪರಂಪರೆ, ಸಂ–೨, ಪುಟ ೫೩೦

೫೬. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂ–೩, ಪುಟ ೪೦೨

೫೭. ಕೃಷ್ಣಸ್ವಾಮಿ ಎನ್., ವಿಜ್ಞಾನ ಯುಗದ ಮಹಾಪ್ರಾಜ್ಞ ಗಾಂಧೀಜಿಯವರ ನೂರು ಮುಖಗಳ ದರ್ಶನ., ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೦, ಪುಟ ೬೭

೫೮. ಪೂರ್ವೋಕ್ತ, ಅಶ್ವತ್ಥಪ್ಪ ಕೆ.ಎನ್., ಭಾರತದ ಸ್ವಾತಂತ್ರ್ಯ ಚಳುವಳಿ, ೧೮೫೭–೧೯೪೭, ಪುಟ ೨೧೩ ಮತ್ತು ೨೧೪

೫೯. ಮಳಲಿ ಅ ಸೋಮಲಿಂಗ ಮತ್ತು ಅಚ್ಯುತ ರಾಮಚಂದ್ರ ವಡವಿ, ಸಚಿತ್ರ ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಮತ್ತು ಗಾಂಧೀಜಿ, ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸಂಘ, ಬೆಳಗಾವಿ, ೨೦೧೨, ಪುಟ ೨೧೫

೬೦. ಪೂರ್ವೋಕ್ತ, ಕೃಷ್ಣಸ್ವಾಮಿ ಎನ್., ವಿಜ್ಞಾನಯುಗದ ಮಹಾಪ್ರಾಜ್ಞ ಗಾಂಧೀಜಿಯವರ ನೂರು ಮುಖಗಳ ದರ್ಶನ, ಪುಟ ೬೭

೬೧. ಪೂರ್ವೋಕ್ತ, ಅಶ್ವತ್ಥಪ್ಪ ಕೆ.ಎನ್., ಭಾರತದ ಸ್ವಾತಂತ್ರ್ಯ ಚಳುವಳಿ, ಪುಟ ೨೧೪

೬೨. ಮಹದೇವಪ್ಪನ ಸ್ನೇಹಿತ ಹಾಗೂ ತಂಡದ ಸದಸ್ಯ ದೇವೇಂದ್ರಪ್ಪ ವಿಭೂತಿ ಹಾಗೂ ಮೋಟೆಬೆನ್ನೂರಿನ ಪರಮೇಶಪ್ಪ ಮೈಲಾರರ ವಿವರ

೬೩. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು(ಸಂ), ೧ ಮತ್ತು ೩, ಪುಟ ೩೧೫, ೩೮೭ ಮತ್ತು ೮೪೮

೬೪. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಪುಟ ೧೪೦ ಮತ್ತು ೧೪೧

೬೫. ಚಳುವಳಿಗಾರ ಹಾನಗಲ್ಲಿನ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಅವರ ಹೇಳಿಕೆ

೬೬. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ–೧, ಪುಟ ೮೧೩ ಮತ್ತು ೮೧೯

೬೭. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂಪುಟ-೧, ಪುಟ ೮೧೫ ಮತ್ತು ೮೧೬

೬೮. ಬಣಕಾರ ಬಿ.ಜಿ., ಲೇಖನ:ಪತ್ರಿಕೆ-ವಿಶಾಲ ಕರ್ನಾಟಕ ಮತ್ತು ಮೂಡಣ, ದಿನಾಂಕ ೧೫.೧೦.೧೯೯೮. ಸ್ವಾತಂತ್ರ್ಯ ಹೋರಾಟದಲ್ಲಿ ಹಂಸಬಾವಿಯ ಪಾತ್ರ

೬೯. ಬಣಕಾರ ಎನ್.ಜಿ : ಕ್ರಾಂತಿವೀರ ಮೆಣಸಿನಾಳ ತಿಮ್ಮನಗೌಡ ಅಪ್ರಕಟಿತ ಲೇಖನ ೨೫.೫.೨೦೧೨.

೭೦. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂ-೧, ಪುಟ ೭೭೨

೭೧. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೩, ಪುಟ ೭೭೩

೭೨. ಅದೇ, ಪುಟ ೭೭೪

೭೩. ರಾಣೆಬೆನ್ನೂರಿನ ಚಳುವಳಿಗಾರ ಮಿನ್ನಪ್ಪ ಹಳ್ಳಿ ನೀಡಿದ ವಿವರ

೭೪. ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ನೀಡಿದ ವಿವರ

೭೫. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ೧ ಮತ್ತು ೩, ಪುಟ ೮೪೮, ೪೦೧ ಮತ್ತು ೮೦೮

೭೬. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೩, ಪುಟ ೨೮೫

೭೭. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ಟಿ.ಆರ್. ನೆಶ್ವಿ ಪುಟ ೪೧

೭೮. ಅದೇ, ಪುಟ ೪೨

೭೯. ನರಗುಂದ ರಾಯಪ್ಪ ಬಸಪ್ಪ, ಕಾಯಕಯೋಗಿ ರಾಯಪ್ಪ ನರಗುಂದ, ಶ್ರೀ ಶಾಂತೇಶ್ವರ ಆಶ್ರಮ ಟ್ರಸ್ಟ್, ಹೂವಿನಶಿಗ್ಲಿ ತಾ., ಸವಣೂರು ಜಿ. ಹಾವೇರಿ, ಪುಟ ೧೩

೮೦. ಅದೇ, ಪುಟ ೩೨

೮೧. ಅದೇ, ಪುಟ ೧೪

೮೨. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೩, ಪುಟ, ೮೦೪, ೪೧೬ ಮತ್ತು ೮೩೧

೮೩. ಪೂರ್ವೋಕ್ತ, ಅಶ್ವತ್ಥಪ್ಪ ಕೆ.ಎಸ್., ಭಾರತದ ಸ್ವಾತಂತ್ರ್ಯ ಚಳುವಳಿ, ಪುಟ ೨೨೨

೮೪. ಪೂರ್ವೋಕ್ತ, ರಾಮಸ್ವಾಮಿ ಎಸ್.ಆರ್(ಸಂ), ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು, ಪುಟ ೧೮೮ ಮತ್ತು ೧೮೯

೮೫. ಪೂರ್ವೋಕ್ತ, ಕರಮರಕರ ಡಿ.(ಲೇ. ಅನು), ಎಸ್. ವೆಂಕಟಾಚಲಪತಿ, ಕರ್ನಾಟಕ ಪರಂಪರೆ, ಸಂಪುಟ-೨, ಪುಟ ೫೩೧, ೫೩೨ ಮತ್ತು ೫೩೩

೮೬. ಪೂರ್ವೋಕ್ತ, ದಾನಿ ಸುರೇಂದ್ರ, ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಾಮ, ಪುಟ ೧೧೨

೮೭. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಪುಟ ೧೪೮

೮೮. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ಟಿ.ಆರ್. ನೆಶ್ವಿ, ಪುಟ ೪೩

೮೯. ಅದೇ, ಪುಟ ೪೪

೯೦. ಹಿರೇಅಣಜಿಯ ಚಳುವಳಿಗಾರ ಪುಟ್ಟಪ್ಪ ಹರಭಿ ಸಂದರ್ಶನದಲ್ಲಿ ನೀಡಿದ ವಿವರ

೯೧. ಪೂರ್ವೋಕ್ತ, ಹಿತ್ತಲಮನಿ ವಿ.ಸಿ., ಮಾಡಿ ಮಡಿದ ಮೈಲಾರ ಮಹದೇವ, ಪುಟ ೧೦೬ ಮತ್ತು ೧೦೯

೯೨. ಅದೇ, ಪುಟ ೧೧೦ ಮತ್ತು ೧೨೩

೯೩. ಬಿ. ಶೇಷಾದ್ರಿ ಮತ್ತು ಟಿ.ಆರ್. ಚಂದ್ರಶೇಖರ(ಸಂ), ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೮, ಪುಟ ೧೧೧

೯೪. ಚಳುವಳಿಕಾರ ದೇವೇಂದ್ರಪ್ಪ ವಿಭೂತಿ, ಪರಮಣ್ಣ ಹರಕಂಗಿ, ಫಕ್ಕೀರಯ್ಯ ಹಾಲಯ್ಯ ಕುಲಕರ್ಣಿ ಮತ್ತು ನಾಗವ್ವ ಉಂಡಿ ಸಂದರ್ಶನದಲ್ಲಿ ನೀಡಿದ ವಿವರ

೯೫. ನೆಗಳೂರಿನ ಚಳುವಳಿಗಾರ ಪರಮಣ್ಣ ಹರಕಂಗಿ ಸಂದರ್ಶನದಲ್ಲಿ ನೀಡಿದ ವಿವರ

೯೬. ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ನೀಡಿದ ವಿವರ

೯೭. ಅಶ್ವತ್ಥಪ್ಪ ಕೆ.ಎಸ್., ಭಾರತದ ಸ್ವಾತಂತ್ರ್ಯ ಚಳುವಳಿ. ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೦. ಪುಟ ೨೨೪

೯೮. ಪೂರ್ವೋಕ್ತ, ಪೂರ್ವೋಕ್ತ, ನಾರಾಯಣರಾವ್ ಎನ್.ಪಿ., ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ಪುಟ ೧೮೩ ಮತ್ತು ೧೮೪

೯೯. ಪೂರ್ವೋಕ್ತ, ರಾಮಸ್ವಾಮಿ ಎಸ್.ಆರ್.(ಸಂ). ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು, ಪುಟ ೧೯೩ ಮತ್ತು ೧೯೪



ಅಧ್ಯಾಯ : ಐದು

# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು

೫.೧. ಪ್ರಮುಖ ಪುರುಷ ಹೋರಾಟಗಾರರು
೫.೨. ಮಹಿಳಾ ಹೋರಾಟಗಾರರು
೫.೩. ಸಂದರ್ಶನಕ್ಕೆ ಲಭ್ಯರಾದ ಹೋರಾಟಗಾರರು
೫.೪. ಇತರ ಹೋರಾಟಗಾರರು
೫.೫. ಪರೋಕ್ಷ ಹೋರಾಟಗಾರರು ಮತ್ತು ಘಟನೆಗಳು
೧. ಜಿಲ್ಲೆಯ ಬೆಂಬಲಿಗ ಹೋರಾಟಗಾರರು
೨. ಜಿಲ್ಲೆಯ ನೆರೆಯ ತಾಲೂಕುಗಳಿಂದ ಬಂದ ಸ್ವಾತಂತ್ರ್ಯ ಹೋರಾಟಗಾರರು
೩. ಹೋರಾಟವನ್ನು ಬೆಂಬಲಿಸಿದ ಸರಕಾರಿ ಅಧಿಕಾರಿಗಳು/ಅಧಿಕಾರೇತರರು
೪. ಸ್ವಾತಂತ್ರ್ಯ ನಂತರದ ಸವಣೂರು ಸಂಸ್ಥಾನ

ಅಧ್ಯಾಯ : ಐದು

# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಚಳುವಳಿಗಾರರು ಪ್ರಭುತ್ವಕ್ಕೆ ಅಂಜದೆ ಬೆಂಬಲ ನೀಡಿದ ವೀರರು. ಜಿಲ್ಲೆಯ ಹೋರಾಟಕ್ಕೆ ಗಡಿ ಜಿಲ್ಲೆಯಿಂದಲೂ ಆಗಮಿಸಿ ಚಳುವಳಿಗಳೊಂದಿಗೆ ಗುರುತಿಸಿಕೊಂಡವರಿದ್ದಾರೆ. ರಾಷ್ಟ್ರೀಯ ಹೋರಾಟದಲ್ಲಿ ಜಿಲ್ಲೆಯ ಚಳುವಳಿಗಾರರಿಗೆ ಪರೋಕ್ಷವಾಗಿ ಸಹಕರಿಸಿದ, ಬೆಂಬಲಿಸಿದ ಅಧಿಕಾರಿಗಳಿದ್ದು ಅವರನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ. ೧೯೪೭ರ ಸ್ವಾತಂತ್ರ್ಯ ಲಭಿಸಿದರೂ ಜಿಲ್ಲೆಯ ಸವಣೂರು ಭಾಗಕ್ಕೆ ಸ್ವಾತಂತ್ರ್ಯ ದೊರೆಯಲಿಲ್ಲ. ಈ ವಿಷಯಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಸ್ವಾತಂತ್ರ್ಯದ ಕಿಚ್ಚು ಬಡವ-ಬಲ್ಲಿದ, ಗಂಡು-ಹೆಣ್ಣು, ಜಾತಿಯ ಹಂಗು ಇವುಗಳ ಬಂಧನವಿಲ್ಲದೇ ಜಿಲ್ಲೆಯ ಚಳುವಳಿಗಳಲ್ಲಿ ಜನಸಾಮಾನ್ಯರನ್ನು ಸೆಳೆದಿರುವುದು ಹಲವು ಘಟನೆಗಳಿಂದ ತಿಳಿಯುತ್ತದೆ. ಪತ್ನಿ, ಮಕ್ಕಳು, ಕುಟುಂಬವನ್ನು ಬಿಟ್ಟವರು, ಚಳುವಳಿಯಲ್ಲಿ ಗುರುತಿಸಿಕೊಂಡ ಮಕ್ಕಳಿಗೆ ಸಹಕರಿಸಿದ ಪಾಲಕರು, ಸ್ವಾತಂತ್ರ್ಯ ಸಿಗುವವರೆಗೂ ವಿವಾಹವಾಗುವುದಿಲ್ಲ ಎಂದು ಶಪತ ಮಾಡಿದವರು. ಹೋರಾಟಕ್ಕಾಗಿ ಊರು, ತಾಲೂಕು, ಜಿಲ್ಲೆ ಮತ್ತು ಪ್ರಾಂತವನ್ನೇ ಬಿಟ್ಟು ಹೋದವರು. ಚಳುವಳಿಯಲ್ಲಿಯೇ ಹುತಾತ್ಮರಾದವರು - (ಹೀಗೆ ಜಿಲ್ಲೆಯ ಚಳುವಳಿಕಾರರು ವಿವಿಧ ಘಟನೆಗಳಿಂದಾಗಿ ಚರಿತ್ರೆಯಲ್ಲಿ ರೋಮಾಂಚನವಾಗುವಂತಹ ಸ್ಥಾನ ಪಡೆಯಲು ಅರ್ಹರಾಗಿರುತ್ತಾರೆಂಬುದನ್ನು ಹಲವು ಉಲ್ಲೇಖಗಳಿಂದ, ಸಂದರ್ಶನದಲ್ಲಿ ಕೆಲವರ ಹೇಳಿಕೆಗಳಿಂದ, ಅಂದು ನೋಡಿದವರು ನೀಡಿದ ವಿವರಣೆಗಳಿಂದ ಗೋಚರಿಸಿದ್ದು, ಕೆಲವೊಂದು ಘಟನೆಗಳು ಉತ್ಪ್ರೇಕ್ಷೆಯಾಗಿರಬಹುದೆಂಬ ಅನುಮಾನಗಳ ಛಾಯೆಗೆ ಸತ್ಯಾಸತ್ಯತೆಯ ಪರಿಶೀಲನೆಯ ಮೂಲಕ ಸ್ಪಷ್ಟತೆಯನ್ನು ಕಂಡುಕೊಳ್ಳಲಾಗಿದೆ.

ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರನ್ನು ಅಧ್ಯಯನದ ದೃಷ್ಟಿಯಿಂದ ಪ್ರಮುಖ ಪುರುಷ ಹೋರಾಟಗಾರರು, ಮಹಿಳಾ ಹೋರಾಟಗಾರರು, ಸಂದರ್ಶನಕ್ಕೆ ಲಭ್ಯವಾದ ಹೋರಾಟಗಾರರು ಮತ್ತು ಇತರೆ ಹೋರಾಟಗಾರರೆಂದು ವಿಭಾಗಿಸಿ ವಿಶ್ಲೇಷಿಸಲಾಗಿದೆ.

## ೫.೧. ಪ್ರಮುಖ ಪುರುಷ ಹೋರಾಟಗಾರರು

### ೧. ಪರಮಣ್ಣ ಸಣ್ಣಪ್ಪ ಹೊಸಮನಿ:

ಜನನ: ೧೮೯೩ ಸಾ॥ ಕರ್ಜಗಿ ತಾ॥

**ಪ್ರೇರಣೆ:** ಇವರ ಊರಿಗೆ 'ಯಂಗ್ ಇಂಡಿಯಾ' ಎಂಬ ಆಂಗ್ಲ ಪತ್ರಿಕೆ ಬರುತ್ತಿತ್ತು. ಇಂಗ್ಲೀಷ್ ಬಾರದ ಇವರಿಗೆ ಪಾಂಡುರಂಗ ಜೋಗಳೇಕರ್ ಎಂಬ ಸ್ನೇಹಿತ ಓದಿ ಹೇಳುತ್ತಿದ್ದ. ಓದುವ ಹವ್ಯಾಸವಿದ್ದ ಇವರು ಗಳಗನಾಥರ ಪುಸ್ತಕಗಳನ್ನು ಓದಿ ಕಾಂಗ್ರೆಸ್ ಚಟುವಟಿಕೆಗಳನ್ನು ತಿಳಿದುಕೊಂಡಿದ್ದರು. "ಗಾಂಧೀಜಿ ಅಲಿ ಸಹೋದರರೊಂದಿಗೆ ೧೯೨೦ರಲ್ಲಿ ಧಾರವಾಡಕ್ಕೆ ಬಂದಾಗ ಅವರ ಭಾಷಣವನ್ನು ಕೇಳಲು ಹೋಗಿದ್ದರು. ಧಾರವಾಡದ ಗಾಯಕವಾಡರ ಬಂಗಲೆಯಲ್ಲಿ ಭಾಷಣ ಪ್ರಾರಂಭವಾಯಿತು. ಕಿಡಿಗೇಡಿಗಳು ನೆರೆದ ಜನರ ಮೇಲೆ (ಬಂಗಲೆಯ ಮೇಲೆ)ಕಲ್ಲು ತೂರಲಾರಂಭಿಸಿದ್ದರಿಂದ ಗಲಾಟೆ ಆರಂಭವಾಯಿತು. ಆಗ ಗಾಂಧೀಜಿ 'ಇಷ್ಟೇ ಏಕೆ? ನನ್ನ ಮೇಲೆ ಗುಂಡಿನ ಮಳೆ ಸುರಿಸಿದರೂ ತಾಳಿಕೊಳ್ಳಬೇಕು"[೧] ಎಂಬ ಅವರ ಹೇಳಿಕೆಯು ಪರಮಣ್ಣ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯಿತು. ಅಂದಿನಿಂದ ಮನದಲ್ಲಿ ಗಾಢವಾಗಿ ಸ್ವಾತಂತ್ರ್ಯದ ಮತ್ತು ಕಾಂಗ್ರೆಸ್ಸಿನ ಜ್ಯೋತಿ ಬೆಳಗಿತು.

**ಮೊದಲ ಭಾಷಣ:** ಧಾರವಾಡದಲ್ಲಿ ಶಾಲಾ-ಕಾಲೇಜುಗಳ ಬಹಿಷ್ಕಾರ, ಸೆರೆ, ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವವರ ಮೇಲೆ ಗೋಲಿಬಾರ್ ಮಾಡಲಾಯಿತು. ಆಗ ಮೂರು ಜನ ಸಾವನ್ನಪ್ಪಿದರು ಹಲವರು ಗಾಯಗೊಂಡರು. ಅಲ್ಲದೆ ಧಾರವಾಡದ ಪ್ರಸಿದ್ಧ ವಕೀಲರೂ, ಡಾಕ್ಟರರೂ, ಸಾರ್ವಜನಿಕ ಕೆಲಸಗಾರರ ಮೇಲೆ ಖಟ್ಲೆ ಹಾಕಿಸಿ ಶಿಕ್ಷೆ ಕೊಡಿಸುವುದನ್ನು ಕೇಳಿದ ಪರಮಣ್ಣ ಮನೆಯಲ್ಲಿ ಹಬ್ಬವಿದ್ದರೂ ಕಾಂಗ್ರೆಸ್ ನಾಯಕರ ಭಾಷಣ ಕೇಳಲು ಹುಬ್ಬಳ್ಳಿಗೆ ಹೋದರು. ಅಲ್ಲಿ ಕೃಷ್ಣರಾಯರು ಮಾತನಾಡಿದ ನಂತರ ಅದೇ ಸಭೆಯಲ್ಲಿ ಪರಮಣ್ಣ ಹೊಸಮನಿಗೂ ಮಾತನಾಡಲೂ ಅವಕಾಶ ಕೊಟ್ಟರು. "ಪ್ರಾಂತದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರು ಎಂಬ ಎರಡು ಪ್ರಬಲ ಗುಂಪುಗಳು ಇದ್ದು, ಬ್ರಾಹ್ಮಣೇತರ ಪಾರ್ಟಿ ಕಾಂಗ್ರೆಸ್ಸನ್ನು ವಿರೋಧಿಸುತ್ತಿತ್ತು. ಇಂಥ ಸಮಯದಲ್ಲಿ ಲಿಂಗಾಯತನಾದ ಇವರು ಸೂಕ್ಷ್ಮತೆಯನ್ನು ಅರಿತು ಕಾಂಗ್ರೆಸ್ಸನ್ನು ಬೆಂಬಲಿಸಿ ಉತ್ಸಾಹದಿಂದ ಮಾತನಾಡಿದ್ದು ಕಾಂಗ್ರೆಸ್ ನಾಯಕ ಕೃಷ್ಣರಾಯರಿಗೆ ಹಿಡಿಸಿತು.

**ಬೆಳಗಾವಿ ಮತ್ತು ಅಥಣಿಗಳಲ್ಲಿ:** ಕೃಷ್ಣರಾಯರು ಸಭೆ ಮುಗಿದ ಬಳಿಕ ಪರಮಣ್ಣನಿಗೆ "ನೀವು ಬೆಳಗಾವಿಗೆ ಬರಬೇಕು, ನಿಮ್ಮ ಅವಶ್ಯಕತೆಯಿದೆ ಎಂದು ವಿನಂತಿಸಿಕೊಂಡಾಗ ಬೆಳಗಾವಿಗೆ ಹೊರಟರು. ಬೆಳಗಾವಿಯ ಮಾರುತಿ ದೇವಸ್ಥಾನದಲ್ಲಿ ಇವರ ಭಾಷಣವಾಯಿತು. ನಂತರದಲ್ಲಿ ಲಿಂಗಾಯತ ನಾಯಕರಾದ ರಾವ್ ಸಾಹೇಬ ಸೊಲಬಪ್ಪಣ್ಣಾ ಮಂಗಸೂಳಿ ಆ ಊರಿನ ಲಿಂಗಾಯತ ವಕೀಲರು, ಬ್ರಾಹ್ಮಣೇತರ ಮುಖಂಡರು ಅವರನ್ನು ಭೇಟಿಯಾಗಿ ಕಾಂಗ್ರೆಸ್ಸಿಗೆ ನೆರವಾಗಲು ಪರಮಣ್ಣ ಕೇಳಿಕೊಂಡರು."[೨] ಆದರೆ ಅವರು ಸರಕಾರವನ್ನು ಸಮರ್ಥಿಸಿಕೊಂಡರು. ಆದರೂ ಪರಮಣ್ಣ ತಮ್ಮ ಕಾಂಗ್ರೆಸ್ ಪ್ರಚಾರ ಕಾರ್ಯವನ್ನು ನಿಲ್ಲಿಸಲಿಲ್ಲ.

**ಚಳುವಳಿಗಾಗಿ ಕುಟುಂಬ ಒಡೆದದ್ದು** : ವಕೀಲ ವೃತ್ತಿ ತ್ಯಜಿಸಿದ್ದ ಹಾವೇರಿಯ ವಿಠ್ಠಲರಾವ್ ಜೋಶಿಯೊಂದಿಗೆ ಪ್ರಚಾರ ಕಾರ್ಯಕ್ಕೆ ಹೋದರು. ಇವರ ದೊಡ್ಡಪ್ಪನ ಮಗ ದ್ಯಾಮಪ್ಪ ಇದನ್ನು ಗಮನಿಸಿ, 'ನಮ್ಮ ಘರಾಣೆ(ಕುಟುಂಬ)ಯನ್ನು ಗಂಡಾಂತರಕ್ಕೆ(ಪರಮಣ್ಣ) ದೂಡುತ್ತಿದ್ದಾನೆಂದು ಇವರು ಹೊಂಬಳಕ್ಕೆ ಕಾಂಗ್ರೆಸ್ ಪ್ರಚಾರ ಕಾರ್ಯಕ್ಕೆ ಹೋದಾಗ ಅಲ್ಲಿಗೇ ಬಂದು, ಇವರ ಪ್ರಚಾರ ಕಾರ್ಯವನ್ನು ನಿಲ್ಲಿಸಿ, ಊರಿಗೆ ಕರೆದುಕೊಂಡು ಬಂದು ತಮ್ಮ ಪಾಲು ತೆಗೆದುಕೊಂಡು ಬೇರೆಯಾದನು. ಆದರೂ ಪರಮಣ್ಣ ಮಾತ್ರ ಹೊಳೆಆಲೂರಿಗೆ ಹೋಗಿ ಗ್ರಾಮದ ನಾಯಕರನ್ನು ಕಾಂಗ್ರೆಸ್ಸಿಗೆ ಸೇರಿಕೊಳ್ಳಲು ಕೇಳಿಕೊಂಡರು.

**ಸ್ವದೇಶಿ ಕಾರ್ಯ** : ೧೯೨೧ರಲ್ಲಿ ಅಹಮದಾಬಾದ್ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿ ಬಂದ ಪರಮಣ್ಣ ಮನೆಯ ಎಲ್ಲ ಹೆಣ್ಣು ಮಕ್ಕಳು ರಾಟಿಯಲ್ಲಿ ನೂಲು ತೆಗೆಯಬೇಕೆಂದು ತಮ್ಮ ತಾಯಿಗೆ ಹೇಳಿದರು. ತಾಯಿಯೂ ಮೊದಲೆಲ್ಲ ನೂಲುತಿದ್ದವಳಾಗಿದ್ದರಿಂದ ತಾನೇ ನೂಲಲು ಪ್ರಾರಂಭಿಸಿ ತನ್ನ ಸೊಸೆಯಂದಿರಿಗೂ ಹಾಗೂ ಮಕ್ಕಳಿಗೂ ನೂಲಲಿಕ್ಕೆ ಹಚ್ಚಿದಳು. ಆಗ ಇವರ ಮನೆಯಲ್ಲಿ ಐದು ರಾಟಿಗಳು ತಿರುಗುತಿದ್ದವು. ಇದಾದ ೬ ತಿಂಗಳಲ್ಲಿ ಗಾಂಧೀಜಿ 'ಯಂಗ್ ಇಂಡಿಯಾ'ದಲ್ಲಿ ದೇಶದಲ್ಲಿ ಎಷ್ಟೋ ಜನ ಬಡವರು ತೊಡಲಿಕ್ಕೆ ಬಟ್ಟೆ ಇಲ್ಲದೆ ಬರಿಮೈಯಲ್ಲಿ ಇರುತ್ತಾರೆ; ಆದ್ದರಿಂದ ಇದ್ದವರು ಕಡಿಮೆ ವಸ್ತ್ರ ಬಳಸಬೇಕು ಎಂದು ಬರೆದರು. ಪರಮಣ್ಣ ಅಂದಿನಿಂದ ಅಂಗಿ, ಟೊಪ್ಪಿಗೆ ಬಿಟ್ಟು ಲಂಡಪಂಜೆ ಉಟ್ಟು, ಅದನ್ನೇ ಹೊದ್ದುಕೊಳ್ಳಲು ಉಪಯೋಗಿಸತೊಡಗಿದ ವಿವರವನ್ನು ಪರಮಣ್ಣನವರ ಶಿಷ್ಯ ಹಾವೇರಿಯ ನಾರಾಯಣ ಕರ್ಪೂರ ನೀಡುತ್ತಾರೆ.

**ಗಯಾ ಕಾಂಗ್ರೆಸ್ ಅಧಿವೇಶನಕ್ಕೆ** : ೧೯೨೨ರಲ್ಲಿ ಗಯಾದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿ ರಾಜಾಜಿಯ ಮಾತಿಗೆ ಬಹುಮತ ವ್ಯಕ್ತಡಿಸಿದರು. ಗಯಾದಿಂದ ಬಂದಮೇಲೆ 'ಸ್ವಯಂಸೇವಕ' ಸಂಘ ಸ್ಥಾಪಿಸಿಕೊಂಡು ಅದರ ಮುಖಾಂತರ ಒಂದು ಸ್ವತಂತ್ರ ನ್ಯಾಯಾಲಯವನ್ನು ಸ್ಥಾಪಿಸಿ, ತಮ್ಮ ಊರಿನಲ್ಲಿಯ ಸಣ್ಣಪುಟ್ಟ ಜಗಳಗಳನ್ನು ಬಗೆಹರಿಸತೊಡಗಿದರು.

**ಬ್ರಾಹ್ಮಣೇತರ ನಾಯಕರ ಆಗಮನ** : ಮಾಂಟೆಗ್ಯೂ-ಜೆಮ್ಸ್‌ಫರ್ಡ ಸುಧಾರಣೆಯಂತೆ ಕಾಯ್ದೆ ಮಂಡಳಕ್ಕೆ ಚುನಾವಣೆ ನಡೆದಾಗ ಕಾಂಗ್ರೆಸ್ ಆ ಚುನಾವಣೆಯನ್ನು ಬಹಿಷ್ಕರಿಸಿತ್ತು. ಆದರೆ ಬ್ರಾಹ್ಮಣೇತರರ ಪಕ್ಷದಿಂದ ಧಾರವಾಡ ಜಿಲ್ಲೆಯಿಂದ ಕಂಬಳಿ ಸಿದ್ದಪ್ಪ ಹಾಗೂ ಸಿ.ಎಸ್.ಹುಲಕೋಟಿ ಸ್ಪರ್ಧಿಸಿದ್ದರು. ಪರಮಣ್ಣನ ಅಣ್ಣ ಸಿದ್ದಪ್ಪ ಹೊಸಮನಿ ಬ್ರಾಹ್ಮಣೇತರ ಪಕ್ಷದ ಅಧ್ಯಕ್ಷರಾಗಿದ್ದರಿಂದ ಪ್ರಚಾರಕ್ಕಾಗಿ ಬಂದವರು ಇವರ ಮನೆಗೆ ಬರುತ್ತಿದ್ದರಿಂದ ಅವರೆನ್ನಲ್ಲ ಬರಮಾಡಿಕೊಂಡು ಸತ್ಕರಿಸಿದ ಪರಮಣ್ಣ ಸಿದ್ದಪ್ಪ ಹೊಸಮನಿ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಮಣ್ಣ ಕಾಂಗ್ರೆಸ್ ನೀತಿಯ ವಿರುದ್ಧವಾಗಿ 'ನೀವು ಯಾರು ಚನಾವಣೆಗೆ ನಿಲ್ಲಬಾರದೆಂದು' ವಿನಂತಿಸಿಕೊಂಡದ್ದು ಅವರು ಕಾಂಗ್ರೆಸ್ ಮೇಲಿಟ್ಟಿದ್ದ ಅಭಿಮಾನಕ್ಕೆ ಸಾಕ್ಷಿ.

**೧೯೨೪ರ ಅಧಿವೇಶನಕ್ಕೆ ಶ್ರಮಿಸಿದ್ದು** : ಮೊದಲಬಾರಿಗೆ ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಸುವ ಅವಕಾಶ ದೊರೆಯುತ್ತಿದ್ದರಿಂದ ಉತ್ತರ ಕರ್ನಾಟಕದ ಕಾಂಗ್ರೆಸ್ ಸ್ವಯಂಸೇವಕರಿಗೆ

ಎಲ್ಲಿಲ್ಲದ ಉತ್ಸಾಹ ತುಂಬಿತುಳುಕುತ್ತಿತ್ತು. ಪರಮಣ್ಣ ಹೊಸಮನಿ ಕೆ.ಪಿ.ಸಿ.ಸಿ.ಯ ಸದಸ್ಯರಾಗಿದ್ದರು. ಅವರೆ ಹೇಳುವಂತೆ– "ನಾನು ಅದರ ಸದಸ್ಯನಿದ್ದು, ಸ್ವಂತ ಖರ್ಚಿನಲ್ಲಿಯೇ ಅದರ ಸಭೆಗಳಿಗೆ ಹೋಗುತ್ತಿದ್ದೆ. ೧೯೨೪ರ ಬೆಳಗಾವಿ ಅಧಿವೇಶನಕ್ಕೆ ಗಾಂಧೀಜಿ ಅಧಿವೇಶನದ ಅಧ್ಯಕ್ಷತೆ ವಹಿಸುವುದೆಂದರೆ ನಮಗೆ ಎಲ್ಲಿಲ್ಲದ ಉತ್ಸಾಹ. ಹೀಗಾಗಿ ಪ್ರಾಂತದ ತುಂಬಾ ಒಂದು ತಿಂಗಳು ಮೊದಲೇ ಸಂಚರಿಸಿ ಜನರಲ್ಲಿ ಪ್ರಚಾರ ಮಾಡಿ, ಫಂಡು ಕೂಡಿಸಿ ಬೆಳಗಾವಿಯಲ್ಲಿ ನಡೆದ ಕೆ.ಪಿ.ಸಿ.ಸಿ. ಮೀಟಂಗ್‌ಗೆ ಹೋಗಿ ಅಧಿವೇಶನ ಆಗುವವರೆಗೂ ಅಲ್ಲಿಯೇ ಇದ್ದು, ಪುನಃ ಮಿಟಿಂಗ್ ಮುಗಿಸಿಕೊಂಡು ಬಂದೆನು"[೩] ಎಂಬ ಉಲ್ಲೇಖ ತಮ್ಮ ಮನೆಯ ಕಾರ್ಯವೇನೋ ಎಂಬಂತೆ ತೋರುತ್ತದೆ.

**ವಾರ್ಧಾ ಆಶ್ರಮ** : ಹರ್ಡೀಕರ್ ಮಂಜಪ್ಪ ಮತ್ತು ಮಹಾರಾಷ್ಟ್ರದ ಲಕ್ಷ್ಮಣ ರಘುನಾಥ ಭಿಡೇ ಎಂಬುವವರಿಂದ ಸಾಬರಮತಿ ಮತ್ತು ವಾರ್ಧಾ ಆಶ್ರಮಗಳ ವಿಶೇಷತೆಯನ್ನು ತಿಳಿದು "೧೯೨೮ರಲ್ಲಿ ಕುಟುಂಬ ಪರಿವಾರ ಸಮೇತವಾಗಿ ವಾರ್ಧಾ ಆಶ್ರಮಕ್ಕೆ ಹೋದರು. ಅಲ್ಲಿ ಎರಡು ವರ್ಷ ನೂಲುವುದು, ನೇಯುವುದು ಹಾಗೂ ಸ್ವಾವಲಂಬನೆಯ ಅಭ್ಯಾಸ ಮಾಡಿ ಅಲ್ಲಿಂದ ಬಂದನಂತರ ತಮ್ಮ ಸ್ವಂತ ಖರ್ಚಿನಲ್ಲಿ ಹಾವೇರಿ ಹೊರಭಾಗದಲ್ಲಿ ಒಂದು ಆಶ್ರಮ ಕಟ್ಟಿ, ಹಳ್ಳಿ ಹಳ್ಳಿಗೆ ಹೋಗಿ ಸ್ವಾತಂತ್ರ್ಯದ ಜಾಗೃತಿ ಕಾರ್ಯವನ್ನು ಮಾಡಿದರು. ಹಳ್ಳಿಗಳಿಂದ ಬಂದ ಜನರನ್ನು ಸ್ವಯಂಸೇವಕರನ್ನಾಗಿಸಿ ಆಶ್ರಮದಲ್ಲಿ ತರಬೇತಿ ನೀಡಿ ಅವರನ್ನು ಚಳುವಳಿಗಾರರನ್ನಾಗಿ ರೂಪಿಸುವ ಕಾರ್ಯ ಮಾಡುತ್ತಿದರು."[೪]

**ಅಂಕೋಲಾಕ್ಕೆ ಹೋಗುವವರಿಗಾಗಿ ವ್ಯವಸ್ಥೆ** : ಉಪ್ಪಿನ ಸತ್ಯಾಗ್ರಹಕ್ಕಾಗಿ ಎನ್.ಎಸ್.ಹರ್ಡೀಕರ್ ಹುಬ್ಬಳ್ಳಿಯಿಂದ ಕಾಲ್ನಡಿಗೆಯಲ್ಲಿ ಅಂಕೋಲಾಕ್ಕೆ ಹೋಗುವ ನಿರ್ಧಾರ ಮಾಡಿದರು. ಅವರೊಂದಿಗೆ ಹೋಗುವ ಸ್ವಯಂಸೇವಕರಿಗೆ ಅಂಕೋಲಾ ಮುಟ್ಟುವವರೆಗೂ ವಸತಿ, ಊಟದ ವ್ಯವಸ್ಥೆಗಾಗಿ ಪರಮಣ್ಣ ಹೊಸಮನಿ, ಕೆ.ಎಫ್. ಪಾಟೀಲ ಮತ್ತು ಬಿಂದುಮಾಧವ ಬುರ್ಲಿ ಸೇರಿ ಮುಂಚೂಣಿ ಯಾಗಿ ಹೊರಟು, ಛಬ್ಬಿ, ಶಿಗ್ಗಾವಿ, ಬಂಕಾಪುರ, ಹಾನಗಲ್ಲ, ಪಾಳಾ, ಮಳಗಿ, ಇಸಳೂರು, ಶಿರ್ಸಿ, ಕುಮಟಾಗಳಿಗೆ ಭೇಟಿ ನೀಡಿ ಸತ್ಯಾಗ್ರಹಿಗಳಿಗೆ ವ್ಯವಸ್ಥೆ ಮಾಡಿದರು. ಪರಮಣ್ಣ ಸವಳು ಮಣ್ಣಿನಿಂದ ಉಪ್ಪು ತಯಾರಿಸುವುದನ್ನು ತಿಳಿದುಕೊಂಡಿದ್ದರಿಂದ, ಹಾವೇರಿಯಲ್ಲಿ ಉಪ್ಪು ತಯಾರಿಸಿ ಬಹಿರಂಗವಾಗಿ ಮಾರಿ ಕಾಯ್ದೆ ಭಂಗ ಮಾಡಿದರು.

**ಭಾಷಣ ಮತ್ತು ಬಂಧನ** : ೧೯೩೦ರಲ್ಲಿ ಕಾಯ್ದೆ ಭಂಗ ಚಳುವಳಿ ಕಾಲಕ್ಕೆ ಸವದತ್ತಿಯಲ್ಲಿ ಪರಮಣ್ಣ ಹೊಸಮನಿ ಭಾಷಣ ಮಾಡುವಾಗ ಬಂಧಿಸಲ್ಪಟ್ಟರು. ಒಂದು ವರ್ಷ ಶಿಕ್ಷೆ ಅನುಭವಿ ಸಿದರು. ೧೯೩೨ರಲ್ಲಿ ಹಾವೇರಿಯಲ್ಲಿ ಭಾಷಣ ಮಾಡಿ ಸರಕಾರಿ ನೌಕರರಿಗೆ ಅವರ ನೌಕರಿ ಬಿಡಲು ಆದೇಶ ಕೊಟ್ಟಾಗ ಹಾವೇರಿಯಲ್ಲಿ ಬಂಧಿಸಲ್ಪಟ್ಟರು. ಹಾವೇರಿ ಮ್ಯಾಜಿಸ್ಟ್ರೇಟರು ಎರಡೂವರೆ ವರ್ಷ ಶಿಕ್ಷೆ ವಿಧಿಸಿದ್ದರಿಂದ ಮತ್ತೆ ಜೈಲು ಸೇರಿದರು.

೧೯೪೨ನೇ ಆಗಸ್ಟ್‌ನಲ್ಲಿ ಮುಂಬಯಿಯಲ್ಲಿ ಸಭೆ ಸೇರಿದ್ದ ಐತಿಹಾಸಿಕ ಕಾಂಗ್ರೆಸ್ ಅಧಿವೇಶನಕ್ಕೆ ಎ.ಐ.ಸಿ.ಸಿ ಸದಸ್ಯರಾಗಿದ್ದ ಹೋಗಿದ್ದ ಪರಮಣ್ಣ ಹೊಸಮನಿ ಗಾಂಧೀಜಿಯ 'ಮಾಡು ಇಲ್ಲವೇ

ಮಡಿ' ಸಂದೇಶವನ್ನು ಹೊತ್ತು ಹಾವೇರಿಗೆ ಬಂದರು. ಪರಮಣ್ಣ ಕೇವಲ ಜನಗಳಿಗೆ ಮಾತ್ರ ಚಳುವಳಿಗೆ ಪ್ರೇರಕರಾಗಿರದೇ ಸ್ವತಃ ತಮ್ಮ ಮನೆಯಲ್ಲಿಯೇ ಚಳುವಳಿಯ ವಾತಾವರಣ ಸೃಷ್ಟಿ ಮಾಡಿದರು. ೧೯೪೨ರ ಆಗಸ್ಟ ವೇಳೆಗೆ ಇವರ ಮನೆಯಲ್ಲಿ ತಮ್ಮ ಬಟ್ಟೆಗಳನ್ನು ತಾವೇ ತಯಾರು ಮಾಡಿಕೊಳ್ಳುತ್ತಿದ್ದರು. ಈ ಪದ್ಧತಿಯನ್ನು ಕರ್ಜಗಿ ತುಂಬೆಲ್ಲ ಪಸರಿಸಿದರು. ಕೇವಲ ಭಾಷಣ ಮಾಡುತ್ತಾ ಜನರನ್ನು ಎಚ್ಚರಿಸುವುದರೊಂದಿಗೆ ಮನೆಯಲ್ಲಿ ಆ ಕಾರ್ಯಮಾಡಿ ಆದರ್ಶರಾಗಿದ್ದು ವಿಶೇಷವೇ ಸರಿ.

**ಚಲೇಜಾವ್ ಚಳುವಳಿಯ ಭಾಷಣ ಮತ್ತು ಬಂಧನ**

"ಮುಂಬಯಿಯಲ್ಲಿಯ ಚಲೇಜಾವ್ ಚಳುವಳಿಯ ಸಂದೇಶವನ್ನು ಜನರಿಗೆ ತಿಳಿಸಬೇಕೆಂದು ಹಾವೇರಿಯಲ್ಲಿ ಸಭೆ ಕರೆದಾಗ ಪೊಲೀಸರು ಇವರನ್ನು ಬಂಧಿಸಿ, ರೈಲ್ವೆ ಸ್ಟೇಷನ್ನಿಗೆ ಒಯ್ದರು. ಗಾಡಿ ಹತ್ತುವಾಗ ಬಾಗಿಲ ಬಳಿ ನಿಂತ ಪರಮಣ್ಣ ಜನತೆಯ ಕಡೆ ತಿರುಗಿ **'ಮಾಡು ಇಲ್ಲವೇ ಮಡಿ'** ಸಂದೇಶವನ್ನು ತಿಳಿಸಿದರು. ಎರಡೂವರೆ ವರ್ಷದ ಶಿಕ್ಷೆಯನ್ನು ಹಿಂಡಲಗಾ ಮತ್ತು ವಿಜಾಪುರ ಜೈಲಿನಲ್ಲಿ ಕಳೆದರು. ಸ್ವಾತಂತ್ರ್ಯ ಆಂದೋಲನದಲ್ಲಿ ಪರಮಣ್ಣ ಹೊಸಮನಿ ಅವರಿಗೆ ಒಟ್ಟು ಆರೂವರೆ ವರ್ಷ ಶಿಕ್ಷೆಯಾಗಿದೆ. ನಾಲ್ಕು ಸಲ ಬಂಧಿಯಾಗಿದ್ದಾರೆ."[೫] ಇವರು ತಮ್ಮ ವಿವಿಧ ಕಾರ್ಯಚಟುವಟಿಕೆಗಳಿಂದ ಜನಸಾಮಾನ್ಯರನ್ನು ಸೆಳೆದು ಜಿಲ್ಲೆಯಲ್ಲಿ ಚಳುವಳಿ ವ್ಯಾಪಿಸಲು ಕಾರಣರಾದವರು ಎಂಬುದನ್ನು ಗುರುತಿಸಲಾಗಿದೆ.

**೨. ಗೋವಿಂದಾಚಾರ್ಯ ರಾ. ಅಗ್ನಿಹೋತ್ರಿ**

**ಪ್ರೇರಣೆ** : ಹಾವೇರಿ ಜಿಲ್ಲೆಯ ಚಳುವಳಿಗಾರರಲ್ಲಿ ಪ್ರಮುಖರು. ಇವರು ತಮ್ಮ ಎಂಟನೆಯ ವಯಸ್ಸಿನಲ್ಲಿ ೧೯೦೮ರಲ್ಲಿ ಕಾಂಗ್ರೆಸ್ ಸೇರಿದರು. ಚಳುವಳಿಗೆ ಸೇರಲು ಪ್ರೇರಣೆಯೆಂದರೆ, ನೆರೆಮನೆಯ ಕೃಷ್ಣಾಚಾರ್ಯ ಕೊಲ್ಲಾಪುರ ವಂಗಭಂಗ ಚಳುವಳಿಯಲ್ಲಿ ಮುಷ್ಠಿ ಫಂಡನ್ನು ಸಂಗ್ರಹಿಸಿ ಲೋಕಮಾನ್ಯ ತಿಲಕರಿಗೆ ಕಳುಹಿಸುತ್ತಿದ್ದರು. ಅವರೊಂದಿಗೆ ಗೋವಿಂದಾಚಾರ್ಯ ಅಗ್ನಿಹೋತ್ರಿ ಹೋಗುತ್ತಿದ್ದರು. ಮತ್ತು ಇದೇ ವೇಳೆಗೆ ಧಾರವಾಡದಿಂದ ಬಂದ ನಾರಾಯಣರಾವ್ ಕಬ್ಬೂರವರು ವಿದೇಶಿ ವಸ್ತುಗಳ ಬಹಿಷ್ಕಾರದ ಬಗ್ಗೆ ಉಪನ್ಯಾಸಗಳನ್ನು ಕೊಡುತ್ತಿದ್ದರು. ಆ ಉಪನ್ಯಾಸಗಳ ಪ್ರಭಾವ ಅಥವಾ ಪ್ರೇರಣೆಯಿಂದ ಅಗ್ನಿಹೋತ್ರಿಯವರು ಚಳುವಳಿಗೆ ಸೇರಿ ವಿವಿಧ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವಂತಾಯಿತು.

**ಪ್ರಮುಖ ಕಾರ್ಯಗಳು;**

೧೯೧೮ರ ಆಗಸ್ಟ ತಿಂಗಳಲ್ಲಿ ರೌಲೆಟ್ ಕಾನೂನಿನ ಬಗ್ಗೆ ಸಾರ್ವಜನಿಕ ಸಭೆ ಸೇರಿಸಿ ಹಾವೇರಿಯಲ್ಲಿ ನಿಷೇಧ ವ್ಯಕ್ತಪಡಿಸಲಾಯಿತು. ನಂತರ ಏಪ್ರಿಲ್ ೧೯೧೯ರ ಜಲಿಯನ್ ವಾಲಾಬಾಗ್‌ದಲ್ಲಿ ನಡೆದ ಭೀಕರ ದುರಂತದ ಬಗ್ಗೆ ಸಭೆ ಸೇರಿಸಿ ಚಳುವಳಿ ಪ್ರಚಾರಗೊಳಿಸಲಾಯಿತು. ಈ ಸಮಯದಲ್ಲಿ ಹಾವೇರಿಯ ನಾಗರಿಕರು, ವ್ಯಾಪಾರಿಗಳು ಒಮ್ಮತದಿಂದ ಅಸಹಕಾರ ಚಳುವಳಿಗೆ ಬೆಂಬಲ ನೀಡಿದರು. ಈ ಆಂದೋಲನದಲ್ಲಿ ಪರದೇಶಿ ಬಟ್ಟೆಗಳ ಬಹಿಷ್ಕಾರ, ಸೆರೆ,

ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುವ ನೇತೃತ್ವವನ್ನು ಇವರು ವಹಿಸಿದ ಬಗ್ಗೆ ಚಳುವಳಿಗಾರರಾದ ಪರಮಣ್ಣ ಹರಕಂಗಿ ಅವರು ಸಂದರ್ಶನದಲ್ಲಿ ತಿಳಿಸಿದ್ದಾರೆ.

ಏಪ್ರಿಲ್ ೧೩, ೧೯೩೦ರಂದು ಹಾವೇರಿಯಲ್ಲಿ ಉಪ್ಪನ್ನು ಜಾಹೀರ ಸಭೆಯಲ್ಲಿ ಮಾರಿ ಕಾಯ್ದೆ ಭಂಗ ಮಾಡಿದರು. ೪, ಮೇ ೧೯೩೦ರಂದು ಹಾವೇರಿ ನಗರಸಭೆಯ ಮೇಲೆ ರಾಷ್ಟ್ರಧ್ವಜವನ್ನು ಇವರ ನೇತೃತ್ವದಲ್ಲಿ ಹಾರಿಸಲಾಯಿತು. ೧೯೩೦ರಲ್ಲಿ ನೇತೃತ್ವದಲ್ಲಿ ಹದಿಮೂರು ಜನರ ಸ್ವಯಂಸೇವಕರ ಪಥವು ಅಂಕೋಲಾ ಸತ್ಯಾಗ್ರಹಕ್ಕಾಗಿ ಹೊರಟಿತು. ೨೪, ಜೂನ್ ೧೯೩೦ರಿಂದ ೨೭, ಜೂನ್ ೧೯೩೦ರವರೆಗೆ ಕಬ್ಬೂರು, ಆಲದಕಟ್ಟಿ, ನಾಗನೂರು, ಸಂಗೂರು ಮೊದಲಾದ ಗ್ರಾಮಗಳಲ್ಲಿಯ ಹುಲ್ಲುಬನ್ನಿಯ ಲಿಲಾವನ್ನು ಸತ್ಯಾಗ್ರಹ ಮಾಡಿ ಬಂದು ಮಾಡಿಸಲಾಯಿತು. ೩೦, ಜುಲೈ ೧೯೩೦ರಂದು ಕೊರಡೂರ ಗ್ರಾಮದಲ್ಲಿ ನಡೆದ ಈಚಲಮರ ಸತ್ಯಾಗ್ರಹದಲ್ಲಿ ಬಂಧಿಸಲ್ಪಟ್ಟ ೮೦ ಜನ ಸತ್ಯಾಗ್ರಹಿಗಳ ಪ್ರಚಂಡ ಮೆರವಣಿಗೆಯನ್ನು ಹಾವೇರಿಯಲ್ಲಿ ಹೊರಡಿಸಿ ಅವರನ್ನು ಜೈಲಿಗೆ ಕಳುಹಿಸುವ ಕಾರ್ಯದ ನೇತೃತ್ವ ವಹಿಸಿದ್ದ ಅಗ್ನಿಹೋತ್ರಿ ಬಗ್ಗೆ ದೇವೇಂದ್ರಪ್ಪ ವಿಭೂತಿ ಹೇಳಿಕೆ ಸಾಕ್ಷಿಭೂತವಾಗಿದೆ.

**ಜನಜಾಗೃತಿ ಮತ್ತು ಅರಣ್ಯ ಸತ್ಯಾಗ್ರಹ**

"ಅರಣ್ಯ ಸತ್ಯಾಗ್ರಹವನ್ನು ಬ್ಯಾಡಗಿ ತಾಲೂಕಿನ ಕಲ್ಲೇದೇವರ ಗ್ರಾಮದಲ್ಲಿ ನಡೆಸಲು ದಿನಾಂಕ ೨೬.೧೦.೧೯೩೦ರಂದು ನಿರ್ಧರಿಸಿ ಅದರ ನೇತೃತ್ವವನ್ನು ಅಗ್ನಿಹೋತ್ರಿ ಮತ್ತು ರಾಮಕೃಷ್ಣ ಗಣಪುಲೆಯವರಿಗೆ ವಹಿಸಲಾಗಿತ್ತು."[೬] ಇದಕ್ಕೆ ಸಂಬಂಧಿಸಿದ ವಿವರವನ್ನು ಅಧ್ಯಾಯ ನಾಲ್ಕರ ಅರಣ್ಯ ಸತ್ಯಾಗ್ರಹದಲ್ಲಿ ವಿಶ್ಲೇಷಿಸಲಾಗಿದೆ.

೧.೩.೧೯೩೪ರಲ್ಲಿ ಗಾಂಧೀಜಿ ಹಾವೇರಿಗೆ ಬಂದಾಗ ದೊಡ್ಡ ಸಭೆ ಮತ್ತು ಮೆರವಣಿಗೆ ಕಾರ್ಯಕ್ರಮದ ಜವಾಬ್ದಾರಿಯನ್ನು ಗೋವಿಂದಾಚಾರ್ಯ ಅಗ್ನಿಹೋತ್ರಿ ವಹಿಸಿಕೊಂಡಿದ್ದರು.

"ಹಾವೇರಿ ಭಾಗದ ಕ್ರಾಂತಿಕಾರಿ ತರುಣರು ಒಬ್ಬೊಬ್ಬರಾಗಿ ಪೊಲೀಸರಿಗೆ ಸಿಗುತ್ತಿದ್ದ ಸಮಯದಲ್ಲಿ ಅಗ್ನಿಹೋತ್ರಿ, ಗಣಪುಲೆಯನ್ನು ಸೇರಿಕೊಂಡು ಹೊಸಮನಿ ಸಿದ್ದಪ್ಪ, ನೇಸರಿಗೆ ಶಿವಶಂಕರಪ್ಪ ಮತ್ತು ಸಿ.ಕೆ.ಕುಲಕರ್ಣಿ ವಕೀಲರನ್ನು ಕಂಡು ಬಂಧಿತ ಚಳುವಳಿಗಾರರ ಕಟ್ಲೆಗಳ ವಕಾಲತ್ತು ವಹಿಸಿಕೊಳ್ಳಬೇಕೆಂದು ಕೇಳಿದ್ದರಿಂದ ಈ ಮೂರು ಜನ ವಕೀಲರು ಸೇರಿ ಕೇಸ್ ನಡೆಸಿದರು. ಆದರೂ ಎಲ್ಲರಿಗೂ ಬೇರೆ ಬೇರೆ ಆರೋಪಗಳ ಮೇಲೆ ಮ್ಯಾಜಿಸ್ಟ್ರೇಟರು ಒಂದು ವರ್ಷದಿಂದ ಮೂರು ವರ್ಷಗಳವರೆಗೆ ಶಿಕ್ಷೆ ವಿಧಿಸಿದರು. ಇವರಿಗೂ ಕಲ್ಲೇದೇವರ ಅರಣ್ಯ ಸತ್ಯಾಗ್ರಹಕ್ಕೆ ೭ ತಿಂಗಳ ಶಿಕ್ಷೆಯಾದ ವಿವರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಅವರಿಂದ ತಿಳಿದುಬರುತ್ತದೆ.

**೩. ವಿನಾಯಕ ಪುರುಷೋತ್ತಮ ಗಣಪುಲೆ**

ಜನನ: ೧೯೧೦ ರಾಜೇಂದ್ರ ನಗರ, ಹಾವೇರಿ

**ಶಿಕ್ಷಣ ಮತ್ತು ಪ್ರೇರಣೆ** : ಇವರು ಹಾವೇರಿಯಲ್ಲಿ ಇಂಗ್ಲೀಷ್ ಒಂದನೇ ತರಗತಿ ಓದುತ್ತಿರುವಾಗ ಕಾಂಗ್ರೆಸ್ ಬ್ಯಾಡ್ಜ್ ಹಚ್ಚಿಕೊಂಡ ಬಗ್ಗೆ ಮತ್ತು ಪ್ರತಿದಿನ ಶಾಲೆ ಆರಂಭದಲ್ಲಿ

**"ಗಾಡ್ ಸೇವ್ ದಿ ಕಿಂಗ್"** ಎಂಬ ಪ್ರಾರ್ಥನೆಯಲ್ಲಿ ಭಾಗವಹಿಸಲು ನಿರಾಕರಿಸಿದ ಕಾರಣ ಶಾಲೆಯಿಂದ ಹೊರಹಾಕಲ್ಪಟ್ಟರು. ನಂತರ ಊರಲ್ಲಿಯೇ ಸ್ಥಾಪಿತವಾದ ರಾಷ್ಟ್ರೀಯ ಶಾಲೆಯಲ್ಲಿ ಒಂದು ವರ್ಷ ಅಭ್ಯಾಸ ಮಾಡಿ ಕಾರಣಾಂತರಗಳಿಂದ ಶಾಲೆ ಮುಚ್ಚಲ್ಪಟ್ಟಿದ್ದರಿಂದ ಸೋದರ ಮಾವನವರ ಊರಾದ ನಾಗಪುರದಲ್ಲಿಯ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯಾದ ತಿಲಕ ವಿದ್ಯಾಲಯದಲ್ಲಿ ಐದು ವರ್ಷಗಳವರೆಗೆ ಶಿಕ್ಷಣ ಪಡೆದರು. ಅಲ್ಲಿ ರಾಷ್ಟ್ರೀಯ ವಿಮೋಚನಾ ಚಳುವಳಿ, ಸಭೆ, ಮೆರವಣಿಗೆ ಮುಂತಾದವುಗಳಲ್ಲಿ ಭಾಗವಹಿಸಿ ಪೋಲೀಸರ ದೌರ್ಜನ್ಯಕ್ಕೆ ಒಳಗಾಗಿ ಶಿಕ್ಷೆ ಅನುಭವಿಸಿದವರು.

**ಚಳುವಳಿಗೆ ಪ್ರವೇಶ:** ವಿದ್ಯಾರ್ಥಿಯಾಗಿದ್ದಾಗಲೇ ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹದ ಸಮಯದಲ್ಲಿ ಕಾಲೇಜು ಶಿಕ್ಷಣ ಬಿಟ್ಟು ಉಪ್ಪಿನ ಸತ್ಯಾಗ್ರಹಿಗಳ ಪಥದಲ್ಲಿ ಕಾಲ್ನಡಿಗೆಯಿಂದ ಅಂಕೋಲೆಗೆ ಹೋಗಿ ಅಲ್ಲಿ ನಡೆದ ಪ್ರಭಾತ ಪೇರಿ, ಸಭೆಗಳು, ಮೆರವಣಿಗೆಗಳು ಮತ್ತು ಪ್ರತಿದಿನ ಸಮುದ್ರ ತೀರಕ್ಕೆ ಹೋಗಿ ಉಪ್ಪು ತಯಾರಿಸುವುದು ಮುಂತಾದವುಗಳಲ್ಲಿ ಭಾಗವಹಿಸಿ ಬಂಧನಕ್ಕೆ ಒಳಗಾದರು. ಸಣ್ಣ ವಯಸ್ಸಿನ ಹುಡುಗನೆಂದು ಬಿಡುಗಡೆಗೊಂಡರು. ಸತ್ಯಾಗ್ರಹ ಕ್ಯಾಂಪಿನ ಹಿರಿಯರ ಬಂಧನದ ತರುವಾಯ ಕ್ಯಾಂಪಿನ ಜವಾಬ್ದಾರಿಯನ್ನು ನಡೆಸುತ್ತಿರುವಾಗ ಉಪ್ಪಿನ ಸತ್ಯಾಗ್ರಹ ಹಾಗೂ ಜಂಗಲ್ ಸತ್ಯಾಗ್ರಹಕ್ಕೆ ಪ್ರೋತ್ಸಾಹ ಕೊಡಲು ಜನರನ್ನು ಕೂಡಿಸಿ ಮುಂದಾಳಾಗಿ ಕೆಲಸ ಮಾಡಿದರು. ಸಭೆ ಮೆರವಣಿಗೆ ಕಾನೂನು ಮುರಿದ ಬಗ್ಗೆ ಬಂಧನವಾಗಿ ಖಟ್ಲೆ ಹಾಕಿದರು. ಉಪ್ಪು ಹಾಗೂ ಜಂಗಲ್ ಕಾನೂನು ಮುರಿದ ಬಗ್ಗೆ ಆರು ತಿಂಗಳು ಮತ್ತು ಅಕ್ರಮ ಸಭೆ, ಮೆರವಣಿಗೆ ಬಗ್ಗೆ ಮೂರು ತಿಂಗಳು ಶಿಕ್ಷೆಯಾಗಿ ಕಾರವಾರ ಜೈಲಿಗೆ ಕಳುಹಿಸಿದ ವಿವರ ಸುಬ್ಬಣ್ಣಾಚಾರ್ಯ ಅಕ್ಕಿವಳಿಯಿಂದ ತಿಳಿಯುತ್ತದೆ.

**ಶಿಕ್ಷಣಕ್ಕಾಗಿ ಉತ್ತರ ಪ್ರದೇಶ** : ಜೈಲುವಾಸ ಅನುಭವಿಸಿ ಹೊರಬಂದಾಗ ಚಳುವಳಿ ಸ್ಥಗಿತವಾಗಿದ್ದರಿಂದ ಶಿಕ್ಷಣ ಪಡೆಯುವ ಇಚ್ಚೆಯಿಂದ ವೃಂದಾವನದಲ್ಲಿರುವ(ಉತ್ತರ ಪ್ರದೇಶ) 'ಪ್ರೇಮ ಮಹಾವಿದ್ಯಾಲಯ'ದಲ್ಲಿ ಶಿಕ್ಷಣ ಪಡೆಯಲಾರಂಭಿಸಿದರು.

೧೯೩೨ರಲ್ಲಿ ಗಾಂಧೀಜಿಯನ್ನೊಳಗೊಂಡು ದೇಶದ ಪ್ರಮುಖ ನಾಯಕರ ಬಂಧನದಿಂದಾಗಿ ದೇಶದಲ್ಲೆಲ್ಲಾ ಕ್ಷೋಭೆ ಉಂಟಾಯಿತು. ಈ ಬಗ್ಗೆ ನಿಷೇಧ ವ್ಯಕ್ತಪಡಿಸಲು ವೃಂದಾವನದಲ್ಲಿ ಸರಕಾರದ ಆಜ್ಞೆಯನ್ನು ಲೆಕ್ಕಿಸದೆ ಪ್ರಚಂಡ ಮೆರವಣಿಗೆ ಹೊರಟಾಗ ಲಾಠಿ ಪ್ರಹಾರ ಮಾಡಲಾಯಿತು. ಇವರು ಲಾಠಿಯೇಟು ತಿನ್ನುತ್ತಾ ಸಭೆಯ ಸ್ಥಳದವರೆಗೂ ಹೋಗಿದ್ದರಿಂದ ಇವರನ್ನು ಬಂಧಿಸಿ ಜಿಲ್ಲಾ ಕೇಂದ್ರ ಮಥುರೆಗೆ ಒಯ್ದರು. ಅಲ್ಲಿ ಮೂರು ತಿಂಗಳ ಶಿಕ್ಷೆ ಅನುಭವಿಸಿದರು. ಶಿಕ್ಷೆ ಮುಗಿಸಿ ಹೊರಬಂದಾಗ ಪ್ರೇಮ ಮಹಾವಿದ್ಯಾಲಯವನ್ನು ಸರಕಾರದವರು ವಶಪಡಿಸಿಕೊಂಡಿದ್ದರಿಂದ ಇವರು ಹಾವೇರಿಗೆ ಬರಬೇಕಾಯಿತು.

**ಹಾವೇರಿಗೆ** : ಉತ್ತರ ಪ್ರದೇಶದಿಂದ ಹಾವೇರಿಗೆ ಬಂದ ಸ್ವಲ್ಪ ದಿನಗಳಲ್ಲಿ ೧೯೪೨ರ ಚಲೇಜಾವ್ ಚಳುವಳಿಯು ಪ್ರಾರಂಭವಾಯಿತು. ಈ ಬಾರಿ ಸಾಧ್ಯವಿದ್ದಷ್ಟು ಎಲ್ಲಾ ಚಟುವಟಿಕೆಗಳನ್ನು ಗುಪ್ತವಾಗಿ ಮಾಡಿದರು.

**ಸ್ವಾತಂತ್ರ್ಯ ನಂತರದ ಸ್ಥಿತಿಗತಿ :** ದೇಶವೇನೋ ಸ್ವತಂತ್ರವಾಯಿತು; ಆದರೆ ಅದಕ್ಕಾಗಿ ಕಷ್ಟ ನಷ್ಟಗಳನ್ನು ಅನುಭವಿಸಿದ ನಮ್ಮಂಥ ಬಡವರಿಗೆ ದೇಶ ಸ್ವತಂತ್ರವಾಯಿತು ಎಂಬ ಸಮಾಧಾನ ಆಯಿತು. ನಮ್ಮ ಕಷ್ಟಗಳೇನೂ ಕಡಿಮೆಯಾಗಲಿಲ್ಲ. 'ಸ್ವಾತಂತ್ರ್ಯನಂತರ ನಮ್ಮಂಥವರನ್ನು ಕ್ರೂರ ರೀತಿಯಲ್ಲಿ ನಡೆಸಿಕೊಂಡ ಪೊಲೀಸರಿಗೆ ಮತ್ತು ಸರಕಾರಿ ಅಧಿಕಾರಿಗಳಿಗೆ ಬಡ್ತಿಗಳು ಸಿಕ್ಕು ಮೇಲಿನ ದರ್ಜೆಗೆ ಏರಿಸಲಾಯಿತು. ಆದರೆ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ, ಎಷ್ಟೋ ಜನ ವಿವಾಹವನ್ನೇ ಆಗದೇ ಹಾಗೆ ಉಳಿದವರಿಗೆ, ತಮ್ಮ ಇಡೀ ಬದುಕನ್ನು ತ್ಯಾಗ ಮಾಡಿದ ಬಡವನಿಗೆ ಏನೂ ಇಲ್ಲದಾಯಿತು. ಎಷ್ಟೋ ಜನರಿಗೆ ಸರಕಾರದಿಂದ ಸಿಗುವ ಪೆನ್‌ಷನ್ ಕೂಡ ಸಿಗಲಿಲ್ಲ. ಇನ್ನೂ ಅದು ಬರುವವರೆಗೆ ಅದೆಷ್ಟು ಯೋಧರು ಬದುಕಿರುತ್ತಾರೋ ದೇವರೆ ಬಲ್ಲ"[೭] ಎಂಬ ಅವರ ಹತಾಶೆ ಓದುಗರಿಗೆ ಸಂಕಟವಾಗದಿರದು. ಚಳುವಳಿಗಾರರನ್ನು ಸ್ವಾತಂತ್ರ್ಯನಂತರ ನಮ್ಮ ಆಡಳಿತ ವ್ಯವಸ್ಥೆ ನಡೆಸಿಕೊಂಡ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳ ಬೇಕಾಗಿದೆ. ಇವರು ಒಟ್ಟು ೧೨ ತಿಂಗಳು ಜೈಲು ಶಿಕ್ಷೆ ಅನುಭವಿಸಿದ್ದಾರೆ.

**೪. ರಾಮಕೃಷ್ಣ ಪುರುಷೋತ್ತಮ ಗಣಪುಲೆ :**

**ಪ್ರೇರಣೆ :** ಇವರು ೧೨ ವರ್ಷದವರಿದ್ದಾಗ ೧೯೨೪ರಲ್ಲಿ ಹಾವೇರಿಯಲ್ಲಿ ರಾಜಕೀಯ ಪರಿಷತ್ತು ಕೂಡಿತ್ತು. ಹಾಗೂ ರಾಮಕೃಷ್ಣ ಪುರುಷೋತ್ತಮ ಗಣಪುಲೆ ಹಾವೇರಿಯ ನಲ್ವತ್ತು ಜನ ಸ್ವಯಂಸೇವಕರಲ್ಲಿ ಒಬ್ಬರಾಗಿದ್ದರು.

**ಅರಣ್ಯ ಸತ್ಯಾಗ್ರಹ :** ೧೯೩೦ರಲ್ಲಿ ಹಾವೇರಿ ಭಾಗದಲ್ಲಿ ಈಚಲ ಮರಗಳನ್ನು ನಾಶ ಮಾಡುವ ಜಂಗಲ್ ಕಾಯ್ದೆ ಭಂಗ ಚಳುವಳಿಯನ್ನು ಮಾಡಲು ಸಭೆಯಲ್ಲಿ ನಿರ್ಧರಿಸಿ ಎಲ್ಲ ಕಾರ್ಯಕರ್ತರು ಸತ್ಯಾಗ್ರಹದ ತರಬೇತಿಯಲ್ಲಿ ಕಾರ್ಯನಿರತರಾದರು. ಅರಣ್ಯ ಸತ್ಯಾಗ್ರಹದಲ್ಲಿ ಇವರಿಗೆ ೬ ತಿಂಗಳು ೧೫ ದಿನ ಕನ್‌ಕರೆಂಟ್ ಶಿಕ್ಷೆಯಾಯಿತು. ಇವರನ್ನು ಬೆಳಗಾವಿ ಜೈಲಿಗೆ ೨೯.೧೧.೧೯೩೦ರಂದು ಸೇರಿಸಿದರು. ಆಗ ಇವರ ವಯಸ್ಸು ೧೭ ವರ್ಷ. ಆದುದರಿಂದ ಇವರನ್ನು ಬಾಲಾವರಾಧಿ (ಜುವೆನೈಲ್) ಬ್ಯಾರಕಿನಲ್ಲಿ ಇಡಲಾಯಿತು. ಮುಂದೆ ಧಾರವಾಡ ಜೈಲಿಗೆ ಕಳುಹಿಸಲಾಯಿತು."[೮] ಕಲ್ಲೇದೇವರ ಅರಣ್ಯ ಸತ್ಯಾಗ್ರಹದ ವಿವರವನ್ನು ಈಗಾಗಲೇ ಅಧ್ಯಾಯ ನಾಲ್ಕರ ಅರಣ್ಯ ಸತ್ಯಾಗ್ರಹದಲ್ಲಿ ವಿವರಿಸಲಾಗಿದೆ.

**ಕ್ರಾಂತಿಕಾರಿ ಸಂಘ ಸೇರಿದ್ದು :** ಜೈಲಿನಿಂದ ಬಿಡುಗಡೆಯಾದ ಮೇಲೆ ೧೯೩೪ರಲ್ಲಿ ಚಳುವಳಿ ಶಾಂತವಾದಾಗ ಹಾವೇರಿಯಲ್ಲಿ ಕೆಲ ತರುಣರು ಸೇರಿಕೊಂಡು ವಿರುಪಾಕ್ಷಪ್ಪ ಅಂಗಡಿ ನೇತೃತ್ವದಲ್ಲಿ ಒಂದು ಕ್ರಾಂತಿಕಾರಿ ಸಂಘವನ್ನು ಸ್ಥಾಪಿಸಿದರು. ಈ ವಿಷಯಕ್ಕೆ ಸಂಬಂಧಿಸಿದ ವಿವರವನ್ನು ಅಧ್ಯಾಯ ೪ರ ಚಳುವಳಿಗಳಲ್ಲಿ ವಿವರಿಸಲಾಗಿದೆ.

**ಪುನಃ ಜೈಲಿಗೆ :** ೧೫.೯.೧೯೪೨ ರಂದು ಹಾವೇರಿಯ ಕಾರ್ಯಕರ್ತರ ಗುಪ್ತಸಭೆಯನ್ನು ಯಲ್ಲಾಪುರದ ನಿಂಗನಗೌಡರು ತಮ್ಮ ಮನೆಯಲ್ಲಿ ಕರೆದಿದ್ದರು. ಅಂದು ಜಿಲ್ಲೆಯ ಹಲವು

ನಾಯಕರುಗಳು ಬರುವವರಿದ್ದರು. ಆದರೆ ಇವರನ್ನು ದಾರಿಯಲ್ಲಿಯೇ ಬಂಧಿಸಿ ಮ್ಯಾಜಿಸ್ಟ್ರೇಟ್ ಮುಂದೆ ಹಾಜರುಪಡಿಸಿ ೧೭.೮.೧೯೪೨ರಂದು ಮೆರವಣಿಗೆ ಮಾಡಿದ್ದನ್ನು ಆರೋಪಿಸಿ ಒಂದು ವರ್ಷ ಕಠಿಣ ಶಿಕ್ಷೆ ವಿಧಿಸಿ ೨೧.೯.೧೯೪೨ರಂದು ಬೆಳಗಾವಿ ಸೆಂಟ್ರಲ್ ಜೈಲಿಗೆ ಕಳಿಸಿದರು."[೯]

**ಬಿಡುಗಡೆ** : ಹಲವು ಕಾರ್ಯಕರ್ತರನ್ನು ಬಂಧಿಸಿ ಅನೇಕ ಆರೋಪಗಳನ್ನು ಹೊರಿಸಿ ಖಟ್ಲೆ ಹಾಕಲಾಗಿತ್ತು. ಖಟ್ಲೆ ವಿಚಾರಣೆಯಲ್ಲಿ ಬಂಧಿತರಿಗೆ ನೆರವಾಗಲು ಪ್ರಯತ್ನಸಿದ್ದರಿಂದ ಸರಕಾರ ಇವರನ್ನು ಧಾರವಾಡ ಜಿಲ್ಲೆಯಿಂದ ಬೇರೆ ಕಡೆಗೆ ಗಡಿಪಾರು ಮಾಡಬೇಕೆಂದು ಯೋಚಿಸುತ್ತಿರುವಾಗಲೇ ತಾವೇ ಧಾರವಾಡ ಜಿಲ್ಲೆಯನ್ನು ಬಿಟ್ಟು ಬೇರೆ ಕಡೆ ತಲೆಮರೆಸಿಕೊಂಡರು. ಸ್ವಾತಂತ್ರ್ಯ ದೊರೆಯುವವರೆಗೂ ವಿವಾಹವಾಗಬಾರದೆಂದು ನಿಶ್ವಯಿಸಿದ್ದರಿಂದ ಸ್ವಾತಂತ್ರ ನಂತರ ಗಣಪುಲೆ ವಿವಾಹವಾದರು."[೧೦] ಇವರು ಒಟ್ಟು ಎರಡು ವರ್ಷಗಳ ಜೈಲು ಶಿಕ್ಷೆ ೧೫ ದಿನಗಳ ಕನ್‌ಕರೆಂಟ್ ಶಿಕ್ಷೆ, ೨೫ ರೂ. ದಂಡ ಹಾಗೂ ಜಿಲ್ಲೆಯಿಂದ ಗಡಿಪಾರಿನ ಶಿಕ್ಷೆಗೆ ಗುರಿಯಾಗಿದ್ದರು.

**೫. ವಿರೂಪಾಕ್ಷಪ್ಪ ಗುರುಬಸಪ್ಪ ಅಂಗಡಿ**

ಜನನ: ೧೯೧೫. ಸಾ॥ : ಹಾವೇರಿ

**ಪ್ರೇರಣೆ**–೧೯೩೦ರಲ್ಲಿ ಚಳುವಳಿಗೆ ಗಾಂಧೀಜಿ ಕರೆ ನೀಡಿದಾಗ ಇವರು ಹಾವೇರಿಯಲ್ಲಿ ಶಾಲೆಬಿಟ್ಟು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು. ಇವರ ತಂದೆ-ತಾಯಿ ಹಾಗೂ ಅಣ್ಣಂದಿರು ಇವರ ಶಿಕ್ಷಣಕ್ಕಾಗಿ ಚಳುವಳಿಗೆ ಹೋಗುವುದನ್ನು ತಡೆಯಲು ಮನೆಯಲ್ಲಿಯೇ ಬಂಧಿಸಿಟ್ಟರು. ಆಗ ಉಪವಾಸ ಸತ್ಯಾಗ್ರಹ ಮಾಡಿ ತಂದೆಯನ್ನು ಒಪ್ಪಿಸಿ ಆಂದೋಲನಕ್ಕೆ ಸೇರಿದರು. ಆಗ ಇವರ ವಯಸ್ಸು ಕೇವಲ ೧೫ ವರ್ಷ.

**ಅಂಕೋಲೆಗೆ** : ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹಕ್ಕಾಗಿ ಅಂಕೋಲಾಗೆ ಹೋದ ಸತ್ಯಾಗ್ರಹಿಗಳ ತಂಡದಲ್ಲಿ ಇವರಿದ್ದರು. ಬಾಲಕನಾಗಿದ್ದರಿಂದ ಅಂಕೋಲೆಯಲ್ಲಿ ಸೆರೆಮನೆಗೆ ಕಳುಹಿಸಲಿಲ್ಲ.

**ಚಿಕ್ಕಮಕ್ಕಳಿಗೆ ಪ್ರೇರಣೆ ನೀಡಿದ್ದು** : ಅಂಕೋಲಾದಿಂದ ಬಂದ ಮೇಲೆ ಸ್ವಯಂಸೇವಕ ದಳದ, ವಾನರ ಸೇನೆ (ಚಿಕ್ಕ ಬಾಲಕರ ಸಂಘ), ಬೆಕ್ಕಿನ ಸೇನೆಯ(ಚಿಕ್ಕ ಬಾಲಕಿಯರ ಸಂಘ), ಭಗಿನ ಮಂಡಳಿಗಳನ್ನು ಸಂಘಟಿಸಿರುವುದನ್ನು ಚಳುವಳಿಕಾರ ದೇವೇಂದ್ರಪ್ಪ ವಿಭೂತಿ ಶ್ಲಾಘಿಸಿದ್ದಾರೆ.

**ಸೇಂದಿ ಗಿಡ ಮತ್ತು ಸೇಂದಿ ಅಂಗಡಿ** : "೧೯೩೦ರಲ್ಲಿ ಹಾವೇರಿ ಹತ್ತಿರದ ಯಲ್ಲಾಪುರದ ಹಳ್ಳದಲ್ಲಿ ಸೇಂದಿ ಗಿಡಗಳನ್ನು ಕಡಿಯಲಾಯಿತು. ಸುಮಾರು ೨೫೦ ಜನ ಸ್ವಯಂಸೇವಕರ ನಾಯಕತ್ವವನ್ನು ಗೋವಿಂದಾಚಾರ್ಯ ಅಗ್ನಿಹೋತ್ರಿ ವಹಿಸಿದ್ದರು. ಈ ಸತ್ಯಾಗ್ರಹ ೫-೬ ದಿವಸ ನಡೆಸಿದರು. ಇದರಲ್ಲಿ ಸುಮಾರು ೩೦ ಸ್ವಯಂಸೇವಕರನ್ನು ಬಂಧಿಸಿ ಒಂದೊಂದು ತಿಂಗಳ ಶಿಕ್ಷೆಯನ್ನು ವಿಧಿಸಲಾಯಿತು. ಇಲ್ಲಿಯೂ ಸಹ ಇವರು ಅಲ್ಪವಯಸ್ಸಿವರೆಂದು ಪೊಲೀಸರು ಇವರನ್ನು ಬಂಧಿಸಲಿಲ್ಲ. ನಂತರ ಹಾವೇರಿಯಲ್ಲಿ ನಾಲ್ಕು ಹೆಂಡದ ಅಂಗಡಿಗಳಿದ್ದು, ಅವುಗಳ ನಿಷೇಧಕ್ಕೆ ನಾಲ್ಕೈದು ದಿನ ಧರಣಿ ಸತ್ಯಾಗ್ರಹವನ್ನು ಮಾಡಿದರು, ಹೆಂಡದ ಅಂಗಡಿ ಮಾಲೀಕರು

ಹಾಗೂ ಕುಡುಕರು ಸೇರಿ ಇವರನ್ನು ಬಡಿದರು."[೧೧] ಆದರೂ ಇವರು ತಮ್ಮ ಕಾರ್ಯಕ್ರಮಗಳಿಂದ ಹಿಂದೆ ಸರಿಯಲಿಲ್ಲ.

**ರಾಣೆಬೆನ್ನೂರಲ್ಲಿ ಧರಣಿ** : ರಾಣೆಬೆನ್ನೂರಲ್ಲಿ ಪರದೇಶಿ ಬಟ್ಟೆಗಳನ್ನು ಮಾರಾಟ ಮಾಡುವ ಅಂಗಡಿಗಳ ಮುಂದೆ ಪರದೇಶಿ ಬಟ್ಟೆಗಳನ್ನು ಮಾರದಂತೆ ಚೌಟಿ ವೆಂಕಣ್ಣನವರ ನಾಯಕತ್ವದಲ್ಲಿ ಸುಮಾರು ೩೦ ಜನ ಸ್ವಯಂಸೇವಕರಲ್ಲಿ ಇವರು ಸೇರಿದ್ದರು. ಮೂರು ದಿನಗಳ ಕಾಲ ಅಂಗಡಿಗಳ ಮುಂದೆ ಸತ್ಯಾಗ್ರಹ ನಡೆಸಿ. ಹಲವು ಗಿರಾಕಿಗಳ (ಬಟ್ಟೆ ಕೊಳ್ಳುವವರು) ಮನವೊಲಿಸಿ ಅವರಿಂದ ಪರದೇಶಿ ಬಟ್ಟೆಗಳನ್ನು ಪಡೆದು ಅವುಗಳನ್ನು ಸುಟ್ಟರು. ೧೯೩೧ರ ಅವಧಿಯಲ್ಲಿ ಇವರು ಹೊಸರಿತ್ತಿ ಆಶ್ರಮಕ್ಕೆ ಹೋಗಿ ಸುಮಾರು ೨ ತಿಂಗಳ ಕಾಲ ನೂಲುವುದು, ನೇಯುವುದು, ಸ್ವಚ್ಛತೆ, ಗ್ರಾಮ ಸೇವೆ ಮೊದಲಾದ ವಿಧಾಯಕ ಕಾರ್ಯಗಳನ್ನು ಕಲಿತು ಬಂದರು.

**ಹಾವೇರಿಗೆ** : ಶಿಕ್ಷಣಕ್ಕಾಗಿ ಉತ್ತರ ಪ್ರದೇಶಕ್ಕೆ ಹೋದ ಇವರು ಅಲ್ಲಿಯ ವಿಧ್ವಂಸಕ ಕಾರ್ಯಗಳಲ್ಲಿ ಭಾಗಿಯಾಗಿ ಜೈಲು ಶಿಕ್ಷೆ ಅನುಭವಿಸಿ, ಬಿಡುಗಡೆಯಾಗಿ ಹಾವೇರಿಗೆ ಬಂದಾಗ ಹಾವೇರಿಯ ನಾಗರಿಕರು ಇವರನ್ನು ಆತ್ಮೀಯವಾಗಿ ಸ್ವಾಗತಿಸಿದರು. ಸ್ವಾತಂತ್ರ್ಯ ನಂತರ ೧೯೫೭ ರಿಂದ ೧೯೭೦ರವರೆಗೆ ಮೈಸೂರು ಸರಕಾರದ ಬೇಸಾಯದ ಕ್ಷೇತ್ರದಲ್ಲಿ ವಿಶೇಷ ಅಧಿಕಾರಿಯಾಗಿ ಸೇವೆ ಸಲ್ಲಿಸಿದರು."[೧೨] ಇವರು ಚಳುವಳಿಯ ಕಾಲದಲ್ಲಿ ಒಟ್ಟು ಅನುಭವಿಸಿದ ಶಿಕ್ಷೆಯ ಪ್ರಮಾಣ ೭ ವರ್ಷ ೧೧ ತಿಂಗಳು.

**೬. ಕರಿಯಪ್ಪ ಸಂಗೂರು(ಏರೇಸೀಮಿ)**

ಜನನ: ೧೯೧೦, ಸಾ॥ ಸಂಗೂರು ತಾ॥, ಹಾವೇರಿ.

ಹಾವೇರಿ ಜಿಲ್ಲೆಯ ಪ್ರಮುಖ ಚಳುವಳಿಗಾರ ಹಾಗೂ ಗಾಂಧೀಜಿಯ ಹರಿಜನೋದ್ಧಾರ ಕಾರ್ಯಗಳಲ್ಲಿ ಭಾಗವಹಿಸಿ ಸಮಾಜದ ಏಕತೆಗೆ ಹೋರಾಡಿದವರು. ಬಡಕುರುಬರ ಕುಟುಂಬದಲ್ಲಿ ಜನಿಸಿದ ಇವರು ಮುಲ್ಕಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಯೂ ಓದನ್ನು ನಿಲ್ಲಿಸಿ ಬಾಲಗಂಗಾಧರ ತಿಲಕರ 'ಕೇಸರಿ' ಪತ್ರಿಕೆ ಓದಿ ದೇಶಭಕ್ತಿಗೆ ಒಳಗಾಗಿ ೧೯೨೬ರಿಂದಲೇ ಖಾದಿ ಧರಿಸಲು ಆರಂಭಿಸಿದವರು. 'ಯಂಗ್ ಇಂಡಿಯಾ'ದಲ್ಲಿಯ ಲೇಖನಗಳಿಂದ ಪ್ರಭಾವಿತರಾಗಿ ಸ್ವದೇಶಿ ಚಳುವಳಿ ಪ್ರಚಾರ ಆರಂಭಿಸಿದರು. ಕಾನೂನು ಭಂಗ ಚಳುವಳಿ ಕಾಲಕ್ಕೆ ಅಂಗಡಿಯೊಂದರಲ್ಲಿ ಗುಮಾಸ್ತನಾಗಿದ್ದ ಕೆಲಸವನ್ನು ತ್ಯಜಿಸಿ ಪೂರ್ಣಪ್ರಮಾಣದಲ್ಲಿ ಚಳುವಳಿಗೆ ಧುಮುಕಿದರು.

**ಕೆಲಸ ಕಾರ್ಯಗಳು** : ೧೯೩೦ರಲ್ಲಿ ಹಿರೇಕೆರೂರು ತಾಲೂಕಿನ ಚಿಕ್ಕೇರೂರಲ್ಲಿ ನಾಲ್ಕಾರು ಹುಡುಗರನ್ನು ಕರೆದುಕೊಂಡು ಸೇಂದಿ ಗೊಬ್ಬಿ ಒಡೆಯುವ ಕಾರ್ಯದಲ್ಲಿ ನಿರತರಾದಾಗ ಸೇಂದಿ ಅಂಗಡಿಯ ಮಾಲೀಕರು ೧೦ರಿಂದ ೧೫ ಜನ ಕುಡುಕರ ಮೂಲಕ ಇವರ ಮೇಲೆ ದಾಳಿ ಮಾಡಿಸಿದರು. ಆ ಕುಡುಕರು ಚೆನ್ನಾಗಿ ಹೊಡೆಯುತ್ತಿದ್ದರೆ ತನ್ನನ್ನು ಹೊಡೆಯಬೇಡಿ

ಎನ್ನುವುದಕ್ಕಿಂತ ಕುಡಿದು ನಿಮ್ಮ ಆರೋಗ್ಯ ಹಾಳು ಮಾಡಿಕೊಳ್ಳಬೇಡಿ ಎಂದು ಹೇಳುತ್ತಿದ್ದರು. ಹೊಡೆತದಿಂದಾಗಿ ಇವರು ಮೂರ್ಛೆಹೋದರು. ಅಷ್ಟರಲ್ಲಿ ಇವರ ಜೊತೆಯಿದ್ದ ಹುಡುಗರು ಊರಲ್ಲಿಯ ದೊಡ್ಡವರನ್ನು ಕರೆದುಕೊಂಡು ಬಂದಿದ್ದರಿಂದ, ಕುಡುಕರು ಅಲ್ಲಿಂದ ಜಾಗ ಖಾಲಿಮಾಡಿದರು. ಇದನ್ನು ಗಮನಿಸಿದ ಜನ ಸಾರಾಯಿ ಅಂಗಡಿಗೆ ಬೆಂಕಿ ಹಚ್ಚಲು ಮುಂದಾದಾಗ ಕರಿಯಪ್ಪ ಬೇಡ ನಾವು ಗಾಂಧೀಜಿ ಅನುಯಾಯಿಗಳು; ಹಿಂಸೆ ಮಾಡುವುದು ನಮ್ಮ ಕಾರ್ಯವಲ್ಲ ಎಂದು ಜನತೆಯನ್ನು ಸಮಾಧಾನ ಮಾಡಿ ಅವರವರ ಮನೆಗಳಿಗೆ ಕಳುಹಿಸಿಕೊಟ್ಟರು. ತಾವು ಮಾತ್ರ ಅದೇ ಭಾಗದಲ್ಲಿ ಚಳುವಳಿಯಲ್ಲಿ ಅಸಕ್ತಿಯಿರುವವರನ್ನು ಕರೆದುಕೊಂಡು ಈಚಲಗಿಡಗಳನ್ನು ಕಡಿಯುವ ಕಾರ್ಯ ಮಾಡಿ ಆರು ತಿಂಗಳ ಶಿಕ್ಷೆ ಅನುಭವಿಸಿದ ವಿವರ ಅದೇ ಭಾಗದ ಚಳುವಳಿಗಾರ ಪುಟ್ಟಪ್ಪ ಹರಭಿ ಅವರಿಂದ ತಿಳಿಯುತ್ತದೆ.

**ಮಹಿಳೆಯರಿಗೆ ಚಳುವಳಿಗೆ ಭಾಗಿಯಾಗಲು ಪ್ರಚೋದನೆ:** "೧೯೩೨ರಲ್ಲಿ ಶಿರಸಿ, ಸಿದ್ದಾಪುರ ಭಾಗಗಳಲ್ಲಿ ಕರಬಂಧ ಚಳುವಳಿಯಲ್ಲಿ ಭಾಗವಹಿಸಲು ತೆರಳಿದರು. ಅಲ್ಲಿ ಗುಪ್ತವಾಗಿ ಹಳ್ಳಿ ಹಳ್ಳಿಗಳಲ್ಲಿ ಸಂಚರಿಸಿ ಗಾಂಧೀಜಿ ಸಂದೇಶಗಳನ್ನು ಜನತೆಗೆ ಮುಟ್ಟಿಸುವ ಕಾರ್ಯ ಮಾಡುತ್ತಿದರು. ಯಾರಾದರೂ ಲಿಲಾವಿನಲ್ಲಿ ಜಮೀನಾಗಲಿ, ವಸ್ತುಗಳನ್ನಾಗಲಿ ಕೊಂಡರೆ ಅಂಥವರ ಮನೆಯ ಮುಂದೆ ಧರಣಿ ಸತ್ಯಾಗ್ರಹ ಮಾಡುವ ಕಾರ್ಯಕ್ಕೆ ಹಲವಾರು ಮಹಿಳೆಯರು ಸಿದ್ಧರಾದದ್ದು ವಿಶೇಷ. ಆ ರೀತಿಯಲ್ಲಿ ಮಹಿಳೆಯರನ್ನು ಚಳುವಳಿಗೆ ಸಿದ್ಧ ಮಾಡುವಲ್ಲಿ ಕರಿಯಪ್ಪ ಸಂಗೂರು ಯಶಸ್ವಿಯಾಗಿದ್ದರು.

**ವಾನರ ಸೇನೆ :** ಸರಕಾರ ಜಪ್ತಿ ಮಾಡಿದ ಸಾಮಾನುಗಳನ್ನು ಲಿಲಾವಿಗೆ ಇಟ್ಟಾಗ ಊರ ಬಾಲಕರೆಲ್ಲ ಒಟ್ಟಾಗಿ ಸತ್ಯಾಗ್ರಹದ ಮೂಲಕ ಸತ್ಯಾಗ್ರಹಿಗಳ ಅಥವಾ ಕರ ನೀಡದವರ ವಸ್ತುಗಳನ್ನು ಯಾರು ಕೊಳ್ಳಬಾರದೆಂದು ಪಿಕೆಟಿಂಗ್ ನಡೆಸುತ್ತಿದ್ದರು. ಆದರೆ ಸ್ವಾರ್ಥಿಗಳಾದ ಪಟೇಲರು, ಶಾನುಭೋಗರು, ಓಲೇಕಾರರೂ ಸಾವಿರಾರು ರೂ. ಬೆಲೆಯ ಸಾಮಾನುಗಳನ್ನು ೫-೧೦ ರೂ.ಗಳಿಗೆ ಕೊಂಡು ಮನೆ ತುಂಬಿಸಿಕೊಳ್ಳುತ್ತಿದ್ದರು. ಅಂಥ ಪ್ರಕರಣಗಳು ನಡೆದಾಗ ಸಂಗೂರ ಕರಿಯಪ್ಪ ಪೊಲೀಸರ ದೌರ್ಜನ್ಯ ಖಂಡಿಸಿ ಜನತೆಗೆ ತಿಳಿಸಲು ಕರಪತ್ರಗಳನ್ನು ಛಾಪಿಸಿದರೆ, ವಾನರ ಸೇನೆಯು ಸಾರ್ವಜನಿಕರಿಗೆ ಮುಟ್ಟಿಸುವ ಕಾರ್ಯ ಮಾಡುತ್ತಿತ್ತು.

ಕರಪತ್ರದಿಂದ ತಮ್ಮ ತೇಜೋವಧೆ ಆಗುತ್ತದೆಯೆಂದು ಸಂಬಂಧಪಟ್ಟವರಿಗೆ ತಿಳಿಸಿದಾಗ, ಪೊಲೀಸರು ಆ ಬಾಲಕರನ್ನು ಚೆನ್ನಾಗಿ ಥಳಿಸಿ, ಯಾರು ನಿಮಗೆ ಈ ಕರಪತ್ರಗಳನ್ನು ಕೊಟ್ಟ ಕಾಂಗ್ರೆಸಿಗರು ಎಂದು ಪೀಡಿಸುತ್ತಿದ್ದರೆ ಆ ಬಾಲಕರು ಕರಿಯಪ್ಪ ಹಾಗೂ ಮಹಿಳೆಯರ ಹೆಸರುಗಳನ್ನು ಹೇಳುತ್ತಿರಲಿಲ್ಲ."[೧೩] ಇಲ್ಲಿ ಬಾಲಕರ ರಾಷ್ಟ್ರಪ್ರೇಮವನ್ನು, ಕರಿಯಪ್ಪನವರ ಸಂಘಟನಾ ಚಾತುರ್ಯ ಕಾಣಬಹುದು.

**ವಸ್ತುಗಳನ್ನು ಕೊಂಡವರ ಮನಃಪರಿವರ್ತನೆ :** "ಕರ ನಿರಾಕರಣ ಚಳುವಳಿಯಲ್ಲಿ ಕರ ಕೊಡದವರ ಮನೆಯ ವಸ್ತುಗಳನ್ನು ಸರಕಾರ ಲಿಲಾವು ಮಾಡಿ ಬಂದ ಹಣದಿಂದ ಕರ

ತುಂಬಿಕೊಳ್ಳುತ್ತಿತ್ತು. ಆದರೆ ಅಂಥವರ ಮನೆಯ ವಸ್ತುಗಳನ್ನು ಕೊಂಡವರ ಮನೆಯ ಮುಂದೆ ಚಳುವಳಿಗಾರರು ಉಪವಾಸ ಸತ್ಯಾಗ್ರಹ ಮಾಡುತ್ತಿದ್ದರು. ಅಂಥವರ ರಕ್ಷಣೆಗೆ ವಾನರ ಸೇನೆ ಸದಾ ರಕ್ಷಣೆಯಿರುತ್ತಿತ್ತು. ಈ ರೀತಿಯಲ್ಲಿ ಉಪವಾಸ ಸತ್ಯಾಗ್ರಹ ಮಾಡುವುದರಿಂದ ಆ ಮನೆಯ ಮಹಿಳೆಯ ಮನಸ್ಸು ಕರಗಿ 'ಲಿಲಾವಿನಲ್ಲಿ ತಂದ ವಸ್ತು(ಮಾಲು) ನಮಗೆ ಬೇಡ' ಎಂದು ತಮ್ಮ ಪತಿಗೆ ಹೇಳುವಂತಹ ವಾತಾವರಣ ನಿರ್ಮಾಣವಾಯಿತು. ಅದರ ಹಿಂದಿನ ಶಕ್ತಿಯಾಗಿ ನಿಂತವರು ಕರಿಯಪ್ಪ ಸಂಗೂರು. ಕರಿಯಪ್ಪ ಚಳುವಳಿಗೆ ಸಾಮಾನ್ಯರಿಗೆ ಪ್ರಚೋದನೆ ಮಾಡಿದ ಅಪರಾಧಕ್ಕಾಗಿ ಪೊಲೀಸರಿಂದ ಬಂಧಿಸಲ್ಪಟ್ಟು ೩೦ ತಿಂಗಳ ಶಿಕ್ಷೆಗೆ ಗುರಿಯಾಗಿ ವಿಜಾಪುರದ ಜೈಲು ಸೇರಿದರು."[೧೪]

**ವಿವಾಹ** : ಕರಿಯಪ್ಪ ಹಾವೇರಿ, ಶಿರಸಿ ಮತ್ತು ಸಿದ್ದಾಪುರ ಭಾಗಗಳಲ್ಲಿ ಚಳುವಳಿ ಮಾಡುತ್ತಿರುವಾಗ ಗಾಂಧೀಜಿ ಕರೆಯ ಮೇರೆಗೆ ವಾರ್ಧಾ ಆಶ್ರಮಕ್ಕೆ ಹೋದರು. ಗಾಂಧೀಜಿ **'ನೀನು ನಾನು ಬೆಳೆಸಿದ ವೀರಮ್ಮಳನ್ನು ಮದುವೆಯಾಗಬೇಕು'** ಎಂದು ಹೇಳಿದಾಗ ಕರಿಯಪ್ಪ 'ನಿಮ್ಮಿಚ್ಛೆ' ಎಂದು ೧೯೪೦ರಲ್ಲಿ ಹುಬ್ಬಳ್ಳಿಯ ಹರಿಜನ ಬಾಲಿಕಾಶ್ರಮದಲ್ಲಿ ವೀರಮ್ಮಳನ್ನು ವಿವಾಹವಾದರು.

**ತಡಸ ಆಶ್ರಮ ಮತ್ತು ಕ್ವಿಟ್ ಇಂಡಿಯಾ ಚಳುವಳಿ** : "ಸಂಗೂರ ಕರಿಯಪ್ಪನ ವಿವಾಹವಾದ ಮೇಲೆ ಗಾಂಧೀಜಿ ದಂಪತಿಗಳಿಬ್ಬರನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ೧೯೪೨ರ ಚಳುವಳಿಯ ಪೂರ್ವದಲ್ಲಿ ಗಾಂಧೀಜಿ ದಂಪತಿಗಳನ್ನು ಕರೆದು 'ನೀವು ನಿಮ್ಮ ಭಾಗಕ್ಕೆ ಹೋಗಿ ಈ ಕೊನೆಯ ಹೋರಾಟದಲ್ಲಿ ಅಹಿಂಸಾತ್ಮಕವಾಗಿ ಹೋರಾಡಿ ಬಲಿದಾನ ನೀಡಲು ಸಿದ್ಧರಾಗಬೇಕೆಂದು ಆಜ್ಞಾಪಿಸಿದರು' ದಂಪತಿಗಳಿಬ್ಬರು ಹಿರೇಕೆರೂರು ತಾಲೂಕಿನ ತಡಸ ಆಶ್ರಮಕ್ಕೆ ಬಂದರು. ಈ ಅವಧಿಯಲ್ಲಿ 'ಕ್ವಿಟ್ ಇಂಡಿಯಾ' ಕಹಳೆ ಮೊಳಗಲು ಆಶ್ರಮ ಪೊಲೀಸರಿಂದ ಮುಚ್ಚಲ್ಪಟ್ಟಿತ್ತು. ಪತ್ನಿ ವೀರಮ್ಮಳನ್ನು ಸೂಡಂಬಿಯಲ್ಲಿ ಬಿಟ್ಟು ತಾವು ಚಳುವಳಿಗೆ ಸಿದ್ಧರಾದರು. ಈ ವೇಳೆಗೆ ಮಹದೇವಪ್ಪ ಮೈಲಾರ ಮತ್ತು ಮೆಣಸಿನಾಳದ ತಿಮ್ಮನಗೌಡ ಈ ಎರಡು ಗುಂಪುಗಳಿದ್ದು ಕರಿಯಪ್ಪ ಆ ಎರಡು ಗುಂಪನ್ನು ಸೇರದೆ ತಮ್ಮದೇ ಆದ ತಂಡವನ್ನು ಕಟ್ಟಿದರು. ತಮ್ಮ ಗುಂಪು ತಮ್ಮ ಅಧೀನದಲ್ಲಿ ಇರಬೇಕೆಂದಿರಲಿಲ್ಲ; ಬದಲಾಗಿ ಯಾವ ಯಾವ ಭಾಗದಲ್ಲಿ ಯಾವ ಕಾರ್ಯ ಮಾಡಲಾಗುತ್ತಿತ್ತೋ ಆ ಭಾಗದಲ್ಲಿಯ ನಾಯಕರುಗಳ ಸಂಗಡಿಗರನ್ನು ಸೇರಿಸಿಕೊಂಡು ವಿಧ್ವಂಸಕ ಕಾರ್ಯ ಮಾಡಹತ್ತಿದರು."[೧೫]

**ವಿಧ್ವಂಸಕ ಕಾರ್ಯಗಳು** : ಮಹದೇವಪ್ಪ ಮೈಲಾರ, ಮೆಣಸಿನಾಳ ತಿಮ್ಮನಗೌಡ ಹಾಗೂ ಇವರ ನೇತೃತ್ವದಲ್ಲಿ ೩೫ ಜನರ ತಂಡ ಹರಿಹರ–ಹರಪನಹಳ್ಳಿ ಟಪಾಲು ಲೂಟಿ ಮಾಡಿರುವ ವಿವರವನ್ನು ಅಧ್ಯಾಯ ನಾಲ್ಕರ ಚಲೇಜಾವ್ ಚಳುವಳಿಯಲ್ಲಿ ನೀಡಲಾಗಿದೆ.

* ಹಿರೇಕೆರೂರು–ಬ್ಯಾಡಗಿ ಟಪಾಲು ಲೂಟಿ ಪ್ರಕರಣದಲ್ಲಿ ಹಿರೇಅಣಜಿಯ ೧೨ ಯುವಕರನ್ನು ಕರೆದುಕೊಂಡು ಬಿದರಕಟ್ಟಿಯ ಹತ್ತಿರ ಟಪಾಲು ಲೂಟಿ ಮಾಡಿದರು. ಈ ಪ್ರಕರಣದಲ್ಲಿ ಹಿರೇಕೆರೂರು ನ್ಯಾಯಾಲಯದಿಂದ ಇವರಿಗೆ ಮೂರು ವರ್ಷ ಶಿಕ್ಷೆಯಾಗಿತ್ತು.

* ತಿಮ್ಮನಗೌಡ ಮೆಣಸಿನಾಳ ಮತ್ತು ಇವರ ನೇತೃತ್ವದಲ್ಲಿ ಬ್ಯಾಡಗಿ ರೈಲ್ವೆ ಸ್ಟೇಷನ್ ಸುಟ್ಟದ್ದು; ಇವರು ಆಹುತಿ ತೆಗೆದುಕೊಂಡ ಮೊದಲ ಸ್ಟೇಷನ್. ಇಲ್ಲಿ ದೊರೆತ ನೂರಾರು ರೂಪಾಯಿ ನೋಟುಗಳನ್ನು ಸುಡಲಾಯಿತು. ಕಾರಣ ಬ್ರಿಟಿಷ್ ಸರಕಾರದ ಹಣ ಎಂಬ ಸಿಟ್ಟು. ನಂತರದಲ್ಲಿ ಚಳುವಳಿಗೆ ಹಣವನ್ನು ಬಳಸಿಕೊಳ್ಳತೊಡಗಿದ ವಿವರವನ್ನು ಉಲ್ಲೇಖಿಸಿದ್ದಾರೆ.

* ಹಾನಗಲ್ಲು ಬಳಿ ಹೊಂಕಣದ ಡಾಕ್ ಬಂಗ್ಲೆ ಸುಟ್ಟದ್ದು ದೊಡ್ಡ ಸಾಹಸ. ಕಾರಣ ತುಂಬಿಹರಿಯುವ ನದಿಯನ್ನು ಮೊದಲು ಅಂಬಿಗ ಬಂಗಲೆಯವರಿಗೆ ದಾಟಿಸಿದ. ಆದರೆ ಬಂಗ್ಲೆಯನ್ನು ಸುಟ್ಟನಂತರ ಆ ಕಡೆಯಿಂದ ಕತ್ತಲಲ್ಲಿಯೇ ಈಜಿ ನದಿ ದಾಟಿದ್ದು ವಿಶೇಷವಾಗಿದೆ. ನಂತರ ಹಸಿವಾಗಿದ್ದರಿಂದ ಊಟಕ್ಕೆ ಕುಳಿತಾಗ ಪಕ್ಕದ ಹಳ್ಳಿಯ ಮಿತ್ರರು ಬಂಗ್ಲೆ ಸುಡಲು ಸೀಮೆ ಎಣ್ಣೆ ಬಾಟ್ಲು ಮತ್ತು ರೊಟ್ಟಿ ಕೂಡಿಸಿ ತಂದಿದ್ದರಿಂದ ರೊಟ್ಟಿಯಲ್ಲಿ ಸೀಮೆಎಣ್ಣೆ ಸೇರಿತು. ಹಸಿವು ಹೆಚ್ಚಾಗಿದ್ದರಿಂದ ಅದೇ ರೊಟ್ಟಿ ತಿಂದರು. ಈ ಘಟನೆಗಳಲ್ಲಿ ಚಳುವಳಿಗಾರರು ಅನುಭವಿಸಿದ ಸಂಕಷ್ಟಗಳು ಗೋಚರಿಸುತ್ತವೆ.

* ರಾಣೆಬೆನ್ನೂರು ತಾಲೂಕು ಸುಣಕಲ್ ಬಿದರಿಯಲ್ಲಿ ಕೂಸಗೂರು ಬಸಮ್ಮನವರ ಹೊಲದಲ್ಲಿ ಬಾಂಬ್ ತಯಾರಿಸುವಾಗ ಇವರ ಕೈಯಲ್ಲಿಯ ಬಾಂಬ್ ಸ್ಫೋಟಗೊಂಡು ಇವರ ಒಂದು ಕೈ ಅತೀವ ಗಾಯವಾಗಿ ದಾವಣಗೆರೆಗೆ ಆಸ್ಪತ್ರೆ ಸೇರಿದರು. ಸುಳ್ಳು ಹೆಸರಿನಲ್ಲಿ ದಾಖಲಾಗಿದ್ದರು. ಕೈ ಅಪರೇಶನ್ ಆಗಿ ಬಲಗೈ ಕಟ್ಟಾಯಿತು ಮತ್ತು ಅಲ್ಲಿಯೇ ಇವರ ಬಂಧನವಾಯಿತು”[೧೬](ಜನವರಿ ೧೯೪೩). ಈ ಘಟನೆಯನ್ನು ಚಳುವಳಿಗಾರ ಗುಡ್ಡಪ್ಪ ಹರಿಜನ ರವರು ಸಂದರ್ಶನದಲ್ಲಿ ಹೇಳಿದ್ದಾರೆ.

**೭. ತಿ.ರು. ನೆಶ್ವಿ : ಸಾ॥ ದೀವಿಗಿಹಳ್ಳಿ, ತಾ॥ ಹಿರೇಕೆರೂರು**

ನೆಶ್ವಿ ಮಾಸ್ತರರೆಂದೇ ಖ್ಯಾತನಾಮರಾಗಿದ್ದ ತಿಮ್ಮಪ್ಪ ರುದ್ರಪ್ಪ ನೆಶ್ವಿ, ಇವರು ಶಿಕ್ಷಕರು, ರೈತ ಸಂಘಟಿಕ, ಸ್ವಾತಂತ್ರ್ಯ ಹೋರಾಟಗಾರರು ಮತ್ತು ಕನ್ನಡ ನಾಡು-ನುಡಿಗಾಗಿ ಹೋರಾಟ ಮಾಡಿದವರು.

**ಚಳುವಳಿಯ ಪ್ರಥಮ ಪ್ರಭಾವ :** “ಇವರು ರಾಣೆಬೆನ್ನೂರಿನಲ್ಲಿ ಇಂಗ್ಲೀಷ್‌ನ ಮೂರನೆಯ ವರ್ಗದಲ್ಲಿ ಓದುತ್ತಿರುವಾಗ ‘ಜಲಿಯನ್ ವಾಲಾಬಾಗ್’ ದುರಂತವನ್ನು ರಾಣೆಬೆನ್ನೂರಿನಲ್ಲಿ ಹಾವೇರಿಯ ಪುರುಷೋತ್ತಮಾಚಾರ್ಯ ರಾಯಚೂರು ಬಹಿರಂಗ ಭಾಷಣ ಮಾಡಿದರು. ವಿದ್ಯಾರ್ಥಿಗಳು ಶಾಲಾ-ಕಾಲೇಜುಗಳನ್ನು ಬಹಿಷ್ಕರಿಸಿ ಚಳುವಳಿಗೆ ಭಾಗವಹಿಸಬೇಕೆಂದು ಕರೆಯಿತ್ತರು. ಭಾಷಣ ಕೇಳಿದ ತಿಮ್ಮಪ್ಪ ನೆಶ್ವಿ ಸ್ನೇಹಿತ ಬಾರಂಗಿ ದೊಡ್ಡಗೌಡ ಶಾಲೆಗೆ ಬಹಿಷ್ಕಾರ ಹೇಳಿ ತಮ್ಮ ಊರಿಗೆ ನಡೆದೇಬಿಟ್ಟರು. ದಾರಿಯಲ್ಲಿ ಅಪರಿಚಿತ ವ್ಯಕ್ತಿಯೊಬ್ಬ ಇವರನ್ನು ತಡೆದು **ಈಗ ಸಾಲಿ ಕಲಿರಿ, ಕಲ್ತು ಆದ ಮೇಲೆ ಚಳುವಳಿಗೆ ಇಳಿರಿ, ಆಗ ಹೆಚ್ಚಿನ ಸೇವೆಯನ್ನು ಮಾಡಲಿಕ್ಕ ನಿಮಗಾಗತೈತಿ** ಎಂದು ಉಪದೇಶಿಸಿದರು. ಆ ವ್ಯಕ್ತಿಯ ಮೇಲೆ ನಂಬಿಕೆಯಿಂದ ಪುನಃ ರಾಣೆಬೆನ್ನೂರಿಗೆ ಹೋದರು.

**ಶಿಕ್ಷಕರಾಗಿ :** ೧೯೨೮ರ ಜೂನ್ ತಿಂಗಳಲ್ಲಿ ಹಂಸಬಾವಿಯ ಮೃತ್ಯುಂಜಯ ವಿದ್ಯಾಪೀಠದ ಸಂಸ್ಥೆಯ ಪ್ರೌಢ ಶಾಲಾ ವಿಜ್ಞಾನ ಶಿಕ್ಷಕರಾಗಿ ನೇಮಕರಾದರು. ಆದರೆ ತನ್ನ ಪದವಿ ಕೃಷಿಗೆ ಸಂಬಂಧಿಸಿದ್ದು, ತಮ್ಮಿಂದ ರೈತರಿಗೆ ಏನಾದರೂ ಸಹಾಯವಾಗಬೇಕೆಂದು ಬರಗಾಲದ ಸಂದರ್ಭವಾದ್ದರಿಂದ ರೈತರ ಬೆಳೆಗಳನ್ನು ಆಣೆವಾರಿ ಮಾಡಲು ಹೋಗುತ್ತಿದ್ದರು. ಅಂದು ಆಣೆವಾರಿ ನಿರ್ಧರಿಸಿಯೇ ಕಂದಾಯ ನಿಗದಿಪಡಿಸುತ್ತಿದ್ದರು. ಸಾಮಾನ್ಯವಾಗಿ ನಾಲ್ಕು ಆಣೆ ಆದರೆ ನೀರು ಸಾರಿಗೆ ಸೂಟು, ಕಂದಾಯ ತಹಕೂಬು(ಕಂದಾಯ ಸತತ ಮೂರು ವರ್ಷ ತಹಕೂಬ ಆದರೆ ಒಂದು ವರ್ಷದ ಕಂದಾಯ ಸೂಟ ಆಗುತ್ತಿತ್ತು.) ಆರು ಆಣೆಯಾದರೆ ಅದರ ಅರ್ಧ ಕಂದಾಯ, ೧೨ ಆಣೆಯಾದರೆ ಪೂರ್ಣ ಕಂದಾಯ ಕಟ್ಟಬೇಕಿತ್ತು. ಆದರೆ ಊರ ಗೌಡ, ಕುಲಕರ್ಣಿ, ಸರ್ಕಲ್ ಇವರಲ್ಲದೆ ಆ ಊರಿನ ಈರ್ವರು ಸೇರಿ ಆಣೆವಾರಿ ನಿರ್ಧರಿಸಬೇಕಿತ್ತು. ಇವರು ಮೇಲಾಧಿಕಾರಿಗಳಿಂದ 'ಶಹಭಾಶ್‌ಗಿರಿ' ಪಡೆಯಲು ರೈತರಿಗಿಂತ ಸರಕಾರಕ್ಕೆ ಲಾಭವಾಗುವಂತೆ ಮಾಡುತ್ತಿದ್ದರು."[೧೭] ಇದನ್ನು ಗಮನಿಸಿದ ಟಿ.ಆರ್.ನೆಶ್ವಿ ಶಿಕ್ಷಕ ವೃತ್ತಿಯಲ್ಲಿದ್ದರೂ ಆಣೆವಾರಿ ಕಾರ್ಯದಲ್ಲಿ ತೊಡಗಿದರು. ಇದೇ ಸಮಯಕ್ಕೆ ಕಚವಿ ಗ್ರಾಮದ ವೀರನಗೌಡ ಪಾಟೀಲ್ ಒತ್ತಾಯಕ್ಕೆ ನೆಶ್ವಿಯವರು ೧೯೨೯ರಲ್ಲಿ ಕಾಂಗ್ರೆಸ್ ಸೇರಿದರು.

**ಕರಬಂದ ಚಳವಳಿ :** ಈ ವಿಷಯಕ್ಕೆ ಸಂಬಂಧಿಸಿದ ವಿವರವನ್ನು ಅಧ್ಯಾಯ ನಾಲ್ಕರ ಕರ ನಿರಾಕರಣ ಚಳುವಳಿಯಲ್ಲಿ ನೀಡಲಾಗಿದೆ.

**ಶೈಕ್ಷಣಿಕ ಸೇವೆ ಮತ್ತು ಚಳುವಳಿ :** "ಹಂಸಬಾವಿಯಲ್ಲಿ ವಿದ್ಯಾರ್ಥಿಗಳಿಗಾಗಿಯೇ ಸ್ಥಾಪಿಸಲ್ಪಟ್ಟ 'ಶಿವಯೋಗೀಶ್ವರ' ಉಚಿತ ಪ್ರಸಾದ ನಿಲಯಕ್ಕೆ ಧಾನ್ಯ ಸಂಗ್ರಹಕ್ಕಾಗಿ ಟಿ.ಆರ್.ನೆಶ್ವಿ "೭.೧.೧೯೩೨ರ ಜನವರಿಯಲ್ಲಿ ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪ(ಹಿರೇಕೆರೂರು ತಾಲೂಕಿಗೆ ಸಮೀಪ ವಿರುವ ಪ್ರದೇಶಗಳು) ಜಂಬೂರು ಕಡೆ ಹೊರಟು, ಅಲ್ಲಿಯ ಸುತ್ತಮುತ್ತಲಿನ ಗ್ರಾಮಗಳಿಂದ ಭತ್ತ ಸಂಗ್ರಹ ಕಾರ್ಯ ಮಾಡುವಾಗ **'ಕಾನೂನುಭಂಗ ಚಳುವಳಿ'** ಪ್ರಚಾರದ ಕಾರ್ಯ ಮಾಡುತ್ತಲೇ ನೆಶ್ವಿಯವರು ಸುಮಾರು ೧೫ರಿಂದ ೨೦ ಚಕ್ಕಡಿ ಭತ್ತ ಸಂಗ್ರಹಿಸಿದರು. ಇಲ್ಲಿ ವಿದ್ಯಾರ್ಥಿಗಳಿಗಾಗಿ ಭತ್ತ ಸಂಗ್ರಹ ಕಾರ್ಯದೊಂದಿಗೆ ಚಳುವಳಿಗೆ ಸಂಬಂಧಿಸಿದ ಕಾರ್ಯವನ್ನು ಮಾಡಿದರು. ಈ ವೇಳೆಗಾಗಲೇ ಹಂಸಬಾವಿಯ ೧೪೦ ವಿದ್ಯಾರ್ಥಿಗಳು ೯.೧.೧೯೩೨ ರಂದು ಸೇಂದಿ ಗಿಡ ಕಡಿದು ಕಾನೂನುಭಂಗ ಮಾಡಿ ಜೈಲು ಸೇರಿದ್ದು, ಕೆ.ಎಫ್.ಪಾಟೀಲರನ್ನು ಬಂಧಿಸಿದ್ದು, ತಮಗಾಗಿ ಪೊಲೀಸರು ಹುಡುಕಾಟ ನಡಸುತ್ತಿರುವುದು, ಇವರು ಸಿಗದ ಕಾರಣ ಮನೆಯವರಿಗೆ ತೊಂದರೆ ಕೊಡುವ ವಿಷಯ ತಿಳಿದು, ಊರಿಗೆ ಬರದೆ ಮತ್ತಷ್ಟು ಭತ್ತ ಸಂಗ್ರಹಿಸಿಕೊಂಡೇ ಬಂದರು. ಹಂಸಬಾವಿಗೆ ಬಂದು ಉಚಿತ ಪ್ರಸಾದನಿಲಯಕ್ಕೆ ಭತ್ತವನ್ನು ಮುಟ್ಟಿಸಿ, ನೇರವಾಗಿ ಪೊಲೀಸ್ ಠಾಣೆಗೆ ಹೋದರು. ಎಸ್.ಪಿ ಚಿನ್ನಮುಳಗುಂದ ಎದುರು 'ನಾನು ಟಿ.ಆರ್. ನೆಶ್ವಿ ಬಂದಿದ್ದೇನೆ' ಎಂದರು. ಎಸ್.ಪಿ. ಸಿಟ್ಟಿನಿಂದ ಇಷ್ಟು ದಿನ ಊರು ಬಿಟ್ಟು ಎಲ್ಲಿಗೆ ಹೋಗಿದ್ದಿ? ಎಂದು ಅಬ್ಬರಿಸಿದರೆ, ಟಿ.ಆರ್. ನೆಶ್ವಿ 'ಎಸ್.ಪಿ ಸಾಹೇಬರೇ, ನೀವು ಸುಮ ಸುಮ್ನ ಒದರಾಕ ಹೋಗಬ್ಯಾಡ್ರಿ, ನಿಮಗೆ ಹೆದರುವವರು ಯಾರೂ ಇಲ್ಲಾ, ನಾ ನಿಮ್ಮ ಎದುರು ನಿಂತಿನಿ ನಿಮ್ಮ

ಕಾಯ್ದೆ ಏನ ಇದೇ ಅದನ್ನು ಮಾಡಿ' ಎಂದಾಗ ಎಸ್.ಪಿಗೆ ಮತ್ತಷ್ಟು ಕೋಪಬಂದು ಶಾಂತಿ ಭಂಗದ ಆರೋಪ ಹೊರಿಸಿ, ಹಿಂಡಲಗಾ ಜೇಲಿಗೆ 'ಡಟಿನ್ಯೂ' ಎಂದು ಕಳುಹಿಸಿದರು.

**ಹಿಂಡಲಗಾ** : ಇಲ್ಲಿಯವರೆಗೂ ಶಿಕ್ಷಕ ವೃತ್ತಿ ಮಾಡುತ್ತಿದ್ದ ನೆಶ್ವಿಯವರು, ಈಗ ತಮ್ಮ ವೃತ್ತಿಗೆ ವಿದಾಯ ಹೇಳಿ ಜೈಲುಸೇರಿದರು. 'ಡಟಿನ್ಯೂ' ಕೈದಿಯಾಗಿ ಎರಡು ತಿಂಗಳು ಕಳೆದರು."[೧೮] ಜೈಲಿನಲ್ಲಿಯೇ ಕಾಂಗ್ರೆಸ್ ನಾಯಕರುಗಳೊಂದಿಗೆ ಹಲವು ವಿಚಾರಗಳನ್ನು ಚರ್ಚಿಸಲು ಅವಕಾಶ ಪ್ರಾಪ್ತವಾಯಿತು.

**ಮುಂಡರಗಿಗೆ** : "ಡಟಿನ್ಯೂ ಅವಧಿ ಮುಗಿಯುತ್ತಿದ್ದಂತಿಯೇ ಇವರನ್ನು ಪೆರೋಲ್ ಮೇಲೆ ಬಿಟ್ಟರು. ಅಂದರೆ ದಿನಾಲು ತಾವು ಇರುವ ಪ್ರದೇಶದಲ್ಲಿಯ ಇನ್ಸಪೆಕ್ಟರ್‌ರನ್ನು ಸಂಜೆ ಆರು ಘಂಟೆಗೆ ಕಂಡು ಸಹಿ ಮಾಡಬೇಕು ಎಂಬ ಕರಾರಿನ ಮೇಲೆ ಮುಂಡರರಿಗಿಗೆ ಕರೆತಂದರು. ಅಲ್ಲಿಂದ ತಪ್ಪಿಸಿಕೊಳ್ಳಲು ಟಿ.ಆರ್. ನೆಶ್ವಿ ತಮ್ಮದೇಯಾದ ಯೋಜನೆಯೊಂದನ್ನು ಹಾಕಿ ಅದೇ ಊರಿನ ಕೊಪ್ಪದ ವೀರಭದ್ರಪ್ಪನೊಂದಿಗೆ ಹೊಳೆ ದಾಟಿ ಹೋಗಲು ಸಾಧ್ಯವಿದೆಯಾ ಎಂಬುದನ್ನು ಅರಿತುಕೊಂಡರು. ಪೊಲೀಸ್‌ನವರಿಗೆ ಇವರ ಮೇಲೆ ನಂಬಿಕೆ ಬಂದಿದ್ದರಿಂದ ರಾತ್ರಿ ಇವರನ್ನು ಕಾಯುವುದನ್ನು ನಿಲ್ಲಿಸಿದ್ದರು. ಬೆಳಗಿನ ನಾಲ್ಕು ಘಂಟೆಗೆ ಎದ್ದು ಮೈಮೇಲೆ ಒಂದು ದುಪ್ಪಟ್ಟ ಹೊದ್ದುಕೊಂಡು, ಊರು ದಾಟುವವರೆಗೂ ನಡೆಯುತ್ತ ನಂತರ ಹೊಳೆಯವರೆಗೂ ಒಂದೆ ಸವನೆ ಓಡಿ ದೋಣಿ ನಡೆಸುವವನಿಗೆ ರಾತ್ರಿಯಾದ್ದರಿಂದ ಹೆಚ್ಚಿನ ಹಣ ನೀಡಿ ಹೊಳೆ ದಾಟಿದರು.

**ರಾಣೆಬೆನ್ನೂರಿಗೆ** : ಮುಂಡರಗಿಯಿಂದ ಹೊಳೆ ದಾಟಿ ಹೊಳೆಗುಂದಿ ಗ್ರಾಮ ತಲುಪಿ ಅಲ್ಲಿಂದ ಕಂಬಳಿ ಹೊದ್ದುಕೊಂಡು ರಸ್ತೆ ಬಿಟ್ಟು ಮರಗಿಡಗಳ ಜಾಡು ಹಿಡಿದು ತಮ್ಮ ಊರು ದೀವಿಗಿಹಳ್ಳಿಗೆ ಕತ್ತಲಾಗುವ ಸಮಯಕ್ಕೆ ಸೇರಿದರು. ಊರಲ್ಲಿಯ ತಮ್ಮ ಸ್ನೇಹಿತರನ್ನು ಕರೆಯಿಸಿ ಮಾತನಾಡಿಸಿ ಸ್ನೇಹಿತರ ಇಚ್ಛೆಯಂತೆ ತಮ್ಮ ಮನೆಯಲ್ಲಿ ಇರುವುದು ಸುರಕ್ಷಿತವಲ್ಲವೆಂದು, ಸ್ನೇಹಿತರ ಮನೆಯಲ್ಲಿ ನಾಲ್ಕು ದಿನ ಉಳಿದುಕೊಂಡರು."[೧೯] ಆದರೆ, ಊರಲ್ಲಿಯೂ ದಿನ ಕಳೆಯುವಂತಿರಲಿಲ್ಲ. ಕಾರಣ ಪೊಲೀಸರು ಇವರನ್ನು ಹುಡುಕುತ್ತಿದ್ದರು.

**ಭೂಗತ ಕಾರ್ಯ** : "ಹಿರೇಕೆರೂರು ಭಾಗದಲ್ಲಿ ಪೊಲೀಸರಿಂದ ತಪ್ಪಿಸಿಕೊಳ್ಳಲು ಮೈಸೂರು ಸಂಸ್ಥಾನದ ಶಾಸಕರಾದ ಉಜಮಳ್ಳಿ ವೀರಭದ್ರಪ್ಪನ ಮನೆ ಸೇರಿದರು. ಶಾಸಕರು ಸ್ವಾತಂತ್ರ್ಯ ಹೋರಾಟಗಾರರಿಗೆ ಆಶ್ರಯ ನೀಡುತ್ತಿದ್ದರು. ನಂತರ ಹಿರೇಜಂಬೂರಿನಿಂದ ಶಿರ್ಸಿ, ಸಿದ್ದಾಪುರ ತಾಲೂಕುಗಳ ಕಡೆ ಪ್ರಯಾಣ ಬೆಳೆಸಿದರು. ಕಾಗೋಡು ಗ್ರಾಮವನ್ನೇ ಕೇಂದ್ರವನ್ನಾಗಿ ಮಾಡಿಕೊಂಡು, ಅಲ್ಲಿ ತಾವು ಶಾಲಾ ಶಿಕ್ಷಕರೆಂದು ತಮ್ಮ ಹೆಸರು ಬಸವರಾಜನೆಂದು ಹೇಳಿಕೊಂಡು ತಮ್ಮ ಚಟುವಟಿಕೆ ಪ್ರಾರಂಭಿಸಿದರು. ನಂತರ ಮಾಗಡಿ(ಶಿಕಾರಿಪುರ ತಾ)ಗೆ ಬಂದು ಅಲ್ಲಿ ಹಾಲಪ್ಪಗೌಡರ ಆಶ್ರಯ ಪಡೆದು, ಅಲ್ಲಿಯೂ ಕಛೇರಿ ಪ್ರಾರಂಭಿಸಿದರು. ಸೈಕ್ಲೋಸ್ಟಾಯಿಲ್ ಯಂತ್ರವನ್ನು ತಂದು ಪ್ರಕಟಣೆ ಶಾಖೆಯನ್ನು ತೆರೆದರು. ಮರಿಸ್ವಾಮಿ ಹಿರೇಮಠ ಮಳವಳ್ಳಿ, ವೀರಭದ್ರಪ್ಪ

ಕರೆಗೌಡ, ಚನ್ನಬಸಪ್ಪ ಮಲ್ಲೇನಹಳ್ಳಿ ಇವರೊಂದಿಗೆ ಸೇರಿ ಜನರನ್ನು ಸಂಘಟಿಸುವ ಕಾರ್ಯ ಮಾಡಿದರು. ಎರಡರಿಂದ ಮೂರು ತಿಂಗಳಾದ ಮೇಲೆ ಪೊಲೀಸರಿಗೆ ಸಂಶಯ ಬರಬಾರದೆಂದು ತಮ್ಮ ಕಛೇರಿಯನ್ನು ಮಳಲಗದ್ದೆಗೆ(ಹಳ್ಳಿ) ಸ್ಥಳಾಂತರಿಸಿದರು.

**ನೆಶ್ವಿಯವರ ತಾಯಿಗೆ ಶಿಕ್ಷೆ** : ಟಿ.ಆರ್.ನೆಶ್ವಿ ಭೂಗತ ಕಾರ್ಯ ಮಾಡುತ್ತಿರುವಾಗ ತಮ್ಮ ತಾಯಿಯನ್ನು ತಾವಿರುವಲ್ಲಿಗೆ ಕರೆಸಿಕೊಂಡರು, ಸಿದ್ದಾಪುರ ತಾಲೂಕಿನ ಹಳ್ಳಿಯೊಂದರ ಗೌಡ(ಲಿಂಗಾಯತ)ರು ಲಿಲಾವಿನಲ್ಲಿ ಸತ್ಯಾಗ್ರಹಿಗಳ ಮಾಲು ಕೊಂಡಾಗ, ಆ ಊರ ಗೌಡರ ಮನೆ ಮುಂದೆ ಲಿಲಾವಿನಲ್ಲಿಯ ಮಾಲನ್ನು ವಾಪಾಸ್ ಮಾಡಲು ಆ ಗೌಡರಿಗೆ ಧಿಕ್ಕಾರ ಕೂಗುವ ಮಹಿಳೆಯರಲ್ಲಿ ಟಿ.ಆರ್. ನೆಶ್ವಿ ತಾಯಿ ಪಾರ್ವತಮ್ಮ, ಮರಿಸ್ವಾಮಿ ಹಿರೇಮಠರ ತಾಯಿ, ಮೈಲಾರ ಮಹದೇವಪ್ಪನ ತಾಯಿ ಬಸಮ್ಮ, ಹೀಗೆ ಚಳುವಳಿಯ ನಾಯಕರುಗಳ ತಾಯಂದಿರು ಭಾಗವಹಿಸಿದ್ದು ವಿಶೇಷವಾಗಿತ್ತು. ಈ ವಿಷಯ ಪೊಲೀಸರಿಗೆ ತಿಳಿದು ಎಲ್ಲ ಮಹಿಳೆಯರಿಗೆ ೬ ತಿಂಗಳ ಶಿಕ್ಷೆಯಾದ ಬಗ್ಗೆ ಬಿ.ಜಿ.ಬಣಕಾರ ವಿವರಿಸಿದ್ದಾರೆ.

**ನೆಶ್ವಿಯವರಿಗೆ ಗುಂಡಿಕ್ಕುವ ಆದೇಶ** : ಭೂಗತ ಕಾರ್ಯ ಮಾಡುವ ಟಿ.ಆರ್.ನೆಶ್ವಿ ಸಿಗದಿರಲು ಸರಕಾರ ಕೊನೆಯ ಅಸ್ತ್ರವಾಗಿ **ಕಂಡಲ್ಲಿ ಗುಂಡಿಕ್ಕಿರಿ** ಎಂದು ಆಜ್ಞೆ ಹೊರಡಿಸಿತು. ಅಂಥ ಭಯಾನಕ ಆಜ್ಞೆ ತಲೆಯ ಮೇಲೆ ತೂಗುತ್ತಿದ್ದರೂ ಹೆದರದೆ, ಕಾಲ್ನಡಿಗೆಯಲ್ಲಿಯೇ ಹುಬ್ಬಳ್ಳಿ-ಧಾರವಾಡಕ್ಕೂ ಹೋಗಿ ನಾಯಕರನ್ನು ಕಂಡು ಕಾರ್ಯಾಚರಣೆಯ ಬಗೆಗೆ ಆಲೋಚಿಸಿ ಬಂದಿದ್ದರು. ಅಲ್ಲದೆ ತಮ್ಮ ಊರು ದೀವಿಗಿಹಳ್ಳಿಗೆ ಮೂರು ಸಾರಿ ಹೋಗಿ ಬಂದರು.

**ಗಾಂಧೀಜಿ ಆದೇಶ** : ೧.೮.೧೯೪೪ರಲ್ಲಿ ಗಾಂಧೀಜಿ ಭೂಗತರಾಗಿ ಕಾರ್ಯ ಮಾಡುತ್ತಿರುವ ಚಳುವಳಿಗಾರರು ಬಹಿರಂಗಕ್ಕೆ ಬರಬೇಕೆಂದು ಆದೇಶ ನೀಡಿದರು.

**ಬಂಧನ** : ಹಲವು ಭೂಗತ ಕಾರ್ಯಗಳಿಂದಾಗಿ ಪೊಲೀಸರಿಗೆ ಬೇಕಾಗಿದ್ದ ಟಿ.ಆರ್.ನೆಶ್ವಿ ತಾವೇ ಪೊಲೀಸ್ ಸ್ಟೇಷನ್‌ಗೆ ನೋಟಿಸ್ ಕಳುಹಿಸಿ ೨೮.೮.೧೯೪೪ರಂದು ಸ್ವತಃ ಹಾಜರಾಗುವುದಾಗಿ ತಿಳಿಸಿ ಪಹರೆ ನಿಂತ ಪೊಲೀಸರಿಗೆ ಸಂಶಯ ಬಾರದಂತೆ ಮಾಮಲೇದಾರ ಎದುರು ನಿಂತು 'ನಾನು ತಿ.ರು. ನೆಶ್ವಿ, ನೋಟಿಸ್ ಪ್ರಕಾರ ಹಾಜರಾಗಿದ್ದೇನೆ' ಎಂದು ಶರಣಾದರು. ೪೧.೧.೧೯೪೪ರಂದು ವಿಚಾರಣೆ ನಡೆದು ಒಂದು ವರ್ಷ ನಾಲ್ಕು ತಿಂಗಳು ಶಿಕ್ಷೆಯಾಗಿ ಕಾರವಾರ ಜೈಲಿಗೆ ಕಳುಹಿಸಲಾದ ವಿವರವನ್ನು ಸಂದರ್ಶನದಲ್ಲಿ ನೆಶ್ವಿಯವರ ಒಡನಾಡಿ ಸಂಶೋಧಕ ಭೋಜರಾಜ ಪಾಟೀಲ ತಿಳಿಸಿದರು.

ಇದಾಗಿ ಹದಿನೆಂಟು ದಿನಗಳಲ್ಲಿ ಮುಂಡರಗಿಯಲ್ಲಿ ಪೆರೋಲ್ ಮೇಲೆ ಇದ್ದಾಗ ಪರಾರಿಯಾಗಿದ್ದ ಅಪರಾಧ ವಿಚಾರಣೆಗಾಗಿ "೧೭.೯.೧೯೪೪ರಂದು ಗದಗಿಗೆ ಕಳುಹಿಸಲಾಯಿತು. ಗದಗನ ಲಾಕಪ್‌ನಲ್ಲಿ ಚಿಕ್ಕ ರೂಂನಲ್ಲಿ ೧೫ ಜನರನ್ನು ಹಾಕಲಾಗಿತ್ತು. ಮಲಗಲು ಸ್ಥಳಾವಕಾಶವಿರಲಿಲ್ಲ, ಕೋಣೆಯ ತುಂಬಾ ಚಿಕ್ಕಾಡುಗಳ ಕಾಟ, ನರಕವೆಂದರೆ ಬೇರೆ ಇರಲಾರದೆನಿಸಿದ ಅನುಭವವನ್ನು ಟಿ.ಆರ್. ನೆಶ್ವಿ ಉಲ್ಲೇಖಿಸಿದ್ದಾರೆ; ೧೯.೯.೧೯೪೪ರಂದು ನ್ಯಾಯಾಲಯಕ್ಕೆ

ಟಿ.ಆರ್. ನೆಶ್ವಿಯನ್ನು ಹಾಜರುಪಡಿಸಲಾಯಿತು. ಒಂದು ವರ್ಷ ಶಿಕ್ಷೆ, ರೂ. ೨೦೦/- ದಂಡ, ದಂಡ ಕೊಡದಿದ್ದರೆ ಪುನಃ ೬ ತಿಂಗಳ ಶಿಕ್ಷೆ ವಿಧಿಸಿದರು; ಕಾರವಾರ ಜೈಲಿಗೆ, ನಂತರ ಹಿಂಡಲಗಾ ಜೈಲಿಗೆ ಕಳುಹಿಸಲಾಯಿತು."[೨೦]

**ಹಿಂಡಲಗಾ ಜೈಲಿನಲ್ಲಿ ;** ಜೈಲಿನಲ್ಲಿ ಇದ್ದಾಗ ಇವರ ಮನೆಯಲ್ಲಿದ್ದ ದನಕರುಗಳು ಅಲ್ಲದೆ, ಇವರ ತಾಯಿ, ತಂದೆ, ಹೆಂಡತಿ ಹಾಗೂ ಸೋದರ ಶಿವಣ್ಣ ಇವರ ಕೊರಳಲ್ಲಿದ್ದ ಲಿಂಗದಕಾಯಿಗಳನ್ನು ಕಸಿದುಕೊಂಡು ಸರಕಾರ ಹರಾಜು ಹಾಕಿತು. ಇದರಿಂದ ಬಂದ ೧೨೯/-ರೂ. ೧೪ ಆಣೆ ದಂಡದ ಹಣಕ್ಕೆ ಜಮಾ ಮಾಡಿಕೊಂಡರು. ಈ ದಂಡದ ಹಣಕ್ಕೆ ಆರು ತಿಂಗಳ ಶಿಕ್ಷೆಯು ಎರಡು ತಿಂಗಳಿಗೆ ಇಳಿಕೆಯಾಯಿತು.

ಪರರ ಸಂಕಟದಲ್ಲಿ ಪ್ರಯೋಜನ ಪಡೆಯುವವರು ಇರುವಂತೆ, ಉಪಕಾರ ಮಾಡುವ ಸಜ್ಜನರೂ ಸಮಾಜದಲ್ಲಿರುತ್ತಾರೆ ಎಂಬುದಕ್ಕೆ ಟಿ.ಆರ್. ನೆಶ್ವಿ ಮನೆಯವರ ಲಿಂಗದ ಕಾಯಿಗಳನ್ನು ಹರಾಜು ಹಾಕಿಸಿದ ಸುದ್ದಿ ತಿಳಿದ ಹಾನಗಲ್ಲು ತಾಲೂಕಿನ ಹಳ್ಳಿಬೈಲು(ತುರುಬಿಗುಡ್ಡ) ಗ್ರಾಮದ ಮುರಡಪ್ಪ ಗೌಡ ತಕ್ಷಣವೇ ನಾಲ್ಕು ಲಿಂಗದ ಕಾಯಿಗಳನ್ನು ತರಿಸಿ ಟಿ.ಆರ್. ನೆಶ್ವಿ ಮನೆಯವರಿಗೆ ಮುಟ್ಟಿಸಿದ ವಿವರವನ್ನು ನೆಶ್ವಿಯವರಿಂದ ಕೇಳಿದ ಸಂಶೋಧಕ ಭೋಜರಾಜ ಪಾಟೀಲ ತಿಳಿಸಿದ್ದಾರೆ.

**ಬಿಡುಗಡೆಯ ನಂತರ :** ಟಿ.ಆರ್. ನೆಶ್ವಿ ಒಳ್ಳೆಯ ನಡತೆಗಾಗಿ ಎಂಬತ್ತೊಂಬತ್ತು ದಿನಗಳು ವಜಾ ಆಗಿ, ೧.೬.೧೯೩೦ರಂದು ಸೆರೆಮನೆಯಿಂದ ಬಿಡುಗಡೆಯಾದರು.

**ಹಿಂಡಲಗಾ ಜೈಲಿಗೆ :** ಚಲೇಜಾವ್ ಚಳುವಳಿಯಲ್ಲಿ ಬಂಧಿಸಲ್ಪಟ್ಟ ಟಿ.ಆರ್.ನೆಶ್ವಿ ಅವರನ್ನು ಹಿಂಡಲಗಾ ಜೈಲಿಗೆ ಕಳುಹಿಸಲಾಯಿತು. ಅಲ್ಲಿ ದೊಡ್ಡ ಮೇಟಿ ಅಂದಾನಪ್ಪ, ಹೊಸಮನಿ ಸಿದ್ದಪ್ಪ ಪಕ್ಕದ ಕೋಣೆಯಲ್ಲಿದ್ದರು. ಆಗಸ್ಟ್ ೮, ೧೯೪೨ರಿಂದ ಬಂಧನವಾದವರ ಸಂಖ್ಯೆ ಹೆಚ್ಚುತ್ತಲೇ ಹೋದದ್ದರಿಂದ ಜೈಲಿನಲ್ಲಿ ೧೬.೧೨.೧೯೪೨ ರಿಂದ ಕೈದಿಗಳು ಸಾವನ್ನಪ್ಪತೊಡಗಿದರು. ಕಾಲರಾದಂಥ ರೋಗ ತಗುಲಿ ಮೂರು ದಿನಗಳಲ್ಲಿ ೧೦ ಜನ ಮೃತರಾದರು.

**ಬಿಡುಗಡೆ :** ಭಾರತ ಬಿಟ್ಟು ತೊಲಗಿ ಚಳುವಳಿ ಬ್ರಿಟಿಷರ ದಬ್ಬಾಳಿಕೆಗೂ ಮಣಿಯದೆ ಮುಂದುವರೆಯುತ್ತಿದ್ದಂತೆ, ದೇಶದ ಕಾರಾಗೃಹಗಳು ಕೈದಿಗಳಿಂದ ತುಂಬಿಹೋದವು. ಪರಿಸ್ಥಿತಿ ಬ್ರಿಟಿಷರ ಕೈಮಿರಿತು. ಜಪಾನ್, ಜರ್ಮನ್ ರಾಷ್ಟ್ರಗಳು ಯುದ್ಧದಲ್ಲಿ ಬ್ರಿಟಿಷರ ದರ್ಪ ಚೂರುಚೂರುಗಿಸಿದ್ದವು. ಯುದ್ಧದಲ್ಲಿ ಭಾರತೀಯರ ಸಹಾಯ ಪಡೆಯುವ ಹಂಚಿಕೆಯಿಂದ ಸರಕಾರ ೧೯೪೪ರಿಂದ ಕೈದಿಗಳನ್ನು ಅವಧಿಗೆ ಮುನ್ನವೇ ಬಿಡುಗಡೆ ಮಾಡಿತು. ಹಾಗಾಗಿ ತಿ.ರು. ನೆಶ್ವಿ ಹಿಂಡಲಗಾ ಜೈಲಿನಿಂದ ೬.೪.೧೯೪೪ ರಂದು ಸಂಜೆ ೪ ಘಂಟೆಗೆ ಬಿಡುಗಡೆ ಯಾದರು."[೨೧]

ಟಿ.ಆರ್. ನೆಶ್ವಿ ಜೀವನದ ಈ ಚಳುವಳಿಯಲ್ಲಿ ಕಾಲ್ನಡಿಗೆಯಿಂದ ಕ್ರಮಿಸಿದ ಅಂತರವೆಷ್ಟು? ಎದುರಿಸಿದ ಆಪತ್ತುಗಳು ಎಂಥವು? ಅನುಭವಿಸಿದ ಸಂಕಟಗಳೆಷ್ಟು? ಮನೆತನದವರೂ ಸಹಿಸಿದ

ಕಿರುಕುಳಗಳೆಷ್ಟು? ಲೆಕ್ಕವಿಟ್ಟು ಹೇಳಬಹುದೆ! ಒಂದು ಮಾತಂತೂ ತೀರ ಸತ್ಯ–ಈ ಅವಧಿಯಲ್ಲಿ ಮಾಸ್ತರ ತಿ.ರು.ನೆಶ್ವಿ, ಸ್ವಾತಂತ್ರ್ಯಯೋಧ ತಿ.ರು.ನೆಶ್ವಿಯಾಗಿ ಗುರುತಿಸಿಕೊಂಡರು. ಇವರು ನಾಲ್ಕು ಸಲ ಕಾರಾಗೃಹವಾಸ ಅನುಭವಿಸಿದ್ದಾರೆ. ಮೊದಲ ಸಲ ಕೇವಲ ಎರಡು ತಿಂಗಳು, ಎರಡನೆಯ ಸಲ ೧೯ ತಿಂಗಳು, ಮೂರನೆಯ ಸಲ ೧೦ ತಿಂಗಳು, ನಾಲ್ಕನೆಯ ಸಲ ೨೦ ತಿಂಗಳು ೫ ದಿನಗಳ ಕಾರಾಗೃಹವಾಸ ಅನುಭವಿಸಿದರು.

**೮. ಕಲ್ಲನಗೌಡ ಫಕೀರಗೌಡ ಪಾಟೀಲ**

ಜನನ: ೧೯೦೫ ಸಾ॥ಕಾಕೋಳ ತಾ॥, ರಾಣೆಬೆನ್ನೂರು.

**ಪ್ರಭಾವ** : ಸ್ವಾತಂತ್ರ್ಯ ಹೋರಾಟದಲ್ಲಿ ಜಿಲ್ಲೆಯ ನಾಯಕರಲ್ಲಿ ಪ್ರಮುಖರು. ಇವರು ಪ್ರಾಥಮಿಕ ಶಾಲೆಯಲ್ಲಿ ಗಳಗನಾಥರ ಕಾದಂಬರಿಗಳನ್ನು ಓದಿ ರಾಷ್ಟ್ರೀಯ ವಿಚಾರಗಳನ್ನು ತಿಳಿದುಕೊಂಡರಲ್ಲದೆ ಕಾಂಗ್ರೆಸ್ ಸಭೆಗೆ ಹೋಗುತ್ತಿದ್ದರು, ಗಂಗಾಧರರಾವ್ ದೇಶಪಾಂಡೆ, ದಿವಾಕರರು, ಹುಕ್ಕೇರಿಕರ ಮುಂತಾದವರ ಭಾಷಣಗಳಿಂದ ಮತ್ತಷ್ಟು ಪ್ರಭಾವಿತರಾದವರು.

**ಕಾಲೇಜು ಮತ್ತು ಸಂಘ** : ಕಾಲೇಜು ಶಿಕ್ಷಣಕ್ಕಾಗಿ ಧಾರವಾಡಕ್ಕೆ ಹೋದಾಗ 'ಯಂಗ್ ಇಂಡಿಯಾ' ಪತ್ರಿಕೆಯನ್ನು ತಪ್ಪದೆ ಓದುತ್ತಿದ್ದು, ಸ್ನೇಹಿತರಾದ ಸಿದ್ಧಲಿಂಗಯ್ಯ ಕಜ್ಜರಿಸ್ವಾಮಿ, ಎನ್.ಬಿ.ಹಿರೇಮಠ, ಗುದ್ಲೆಪ್ಪ ಹಳ್ಳಿಕೇರಿ, ವಿ.ಟಿ.ಮಾಗಡಿ ಮುಂತಾದವರ ಮಾರ್ಗದರ್ಶನದಲ್ಲಿ ೧೯೨೭ರಲ್ಲಿ **ಭಾರತೀಯ ತರುಣ ಸಂಘ** ಸ್ಥಾಪಿಸಿ, ಅದರ ಸದಸ್ಯರಾಗಿ, ರಾಷ್ಟ್ರೀಯ ಚಟುವಟಿಕೆಗಳನ್ನು ಆರಂಭಿಸಿದರು.

**ಹಂಸಬಾವಿಯಲ್ಲಿ ಶಿಕ್ಷಕರಾಗಿ** : ಧಾರವಾಡದಲ್ಲಿ ಶಿಕ್ಷಣ ಮುಗಿಸಿಕೊಂಡು ೧೯೨೮–೨೯ರಲ್ಲಿ ಹಂಸಬಾವಿ ಶಾಲೆಗೆ ಚಿತ್ರಕಲಾ ಶಿಕ್ಷಕರಾಗಿ ಸೇರಿದರು. ಆ ಅವಧಿಯಲ್ಲಿ ಹಂಸಬಾವಿಯಲ್ಲಿ ಮೈಲಾರ ಮಹದೇವಪ್ಪ, ಕರಿಯಪ್ಪ ಹುಚ್ಚಣ್ಣನವರ, ಮಲ್ಲೇಶಪ್ಪ ಬಣಕಾರ ಮುಂತಾದವರು ಇವರ ವಿದ್ಯಾರ್ಥಿಗಳಾಗಿದ್ದರು. ಗಾಂಧೀಜಿಯ ೫೦ನೇ ಹುಟ್ಟುಹಬ್ಬದ ನೆನಪಿಗಾಗಿ ಶ್ರಾವಣ ಮಾಸದಲ್ಲಿ 'ಗಾಂಧೀ ಪುರಾಣ'(ಸತ್ಯಶೋಧನೆ) ನಡೆಸಿದರು. ಪಠಣ ಮುಗಿದ ನಂತರ ಆ ಕೃತಿಯನ್ನು ಆನೆಯ ಮೇಲಿಟ್ಟು ಊರಲ್ಲಿ ಮೆರವಣಿಗೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದ ಬಗ್ಗೆ ಚಳುವಳಿಗಾರ ಪುಟ್ಟಪ್ಪ ಹರಬಿ ಸಂದರ್ಶನದಲ್ಲಿ ಹೇಳಿದ್ದಾರೆ.

**ಹಂಸಬಾವಿ ಶಾಲೆ ಮತ್ತು ಚಳುವಳಿ** : "ಇವರು ವಿದ್ಯಾರ್ಥಿಗಳಿಗೆ ಆಲೂರರ 'ಗತವೈಭವ'ವನ್ನು ಭಾವನಾತ್ಮಕವಾಗಿ ಹೇಳುತ್ತಿದ್ದರಿಂದ ವಿದ್ಯಾರ್ಥಿಗಳಿಗೆ ರಾಷ್ಟ್ರಾಭಿಮಾನ ಮೂಡುವಂತೆ ಮಾಡಿದ್ದರು. ವಿದ್ಯಾರ್ಥಿಗಳಿಗೆ ರಂಗನಾಥ ದಿವಾಕರರು, ಹುಕ್ಕೇರಿಕರರು ಮುಂತಾದವರನ್ನು ಕರೆಯಿಸಿ ಅವರಿಂದ ಭಾಷಣ ಏರ್ಪಡಿಸಲಾಗುತ್ತಿತ್ತು."[೨೨] ಇವೆಲ್ಲವುಗಳ ಪರಿಣಾಮವೇ ಇಡೀ ಹಂಸಬಾವಿ ರಾಷ್ಟ್ರೀಯತೆಯ ಊರಾಗಿ ಬೆಳೆಯಿತು. ಜನತೆಗೆ ಮತ್ತು ತಮ್ಮ ವಿದ್ಯಾರ್ಥಿಗಳಿಗೆ ರಾಷ್ಟ್ರೀಯತೆಯನ್ನು ಬಿತ್ತುವಲ್ಲಿ ಇವರು ಪ್ರಮುಖ ಪಾತ್ರವಹಿಸಿದ್ದರು.

**ವಿದ್ಯಾರ್ಥಿಗಳ ಚಳುವಳಿ ಮತ್ತು ಶಿಕ್ಷೆ :** "೧೯೩೨ರಲ್ಲಿ ಕಾನೂನು ಭಂಗ ಚಳುವಳಿ ಭಾಗವಹಿಸಲು ವಿದ್ಯಾರ್ಥಿಗಳು ಇವರಿಗೆ ಗೊತ್ತಾಗದಂತೆ ಸೇಂದಿ ಗಿಡ ಕಡಿದು ಬಂದರು. ಈ ವಿಷಯ ಪೋಲೀಸರಿಗೆ ತಿಳಿದು ಅವರೆಲ್ಲರನ್ನು ಬಂಧಿಸಿ, ಕೋರ್ಟಿಗೆ ಹಾಜರುಪಡಿಸಿದರು. ೧೧ ಜನರಿಗೆ ಒಂದೂವರೆ ವರ್ಷದಿಂದ ಮೂರು ವರ್ಷದವರೆಗೆ ಶಿಕ್ಷೆಯಾಯಿತು. ಇದು ಹಿರೇಕೆರೂರಿನ ಕೋರ್ಟಿನಲ್ಲಿ ಕೇಸ್ ನಂ ೩/೧೯೩೨ರ ಜಡ್ಜ್‌ಮೆಂಟಿನ ಕೆಲ ಅಂಶಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ವಿದ್ಯಾರ್ಥಿಗಳು ಕಾನೂನು ಭಂಗ ಚಳುವಳಿ ಮಾಡಲು ಪ್ರೇರೇಪಿಸಿದವರನ್ನು ಹುಡುಕಿ ಎಂದು ನ್ಯಾಯಾಧೀಶರು ಆದೇಶಿಸಿದಾಗ ಪೊಲೀಸರಿಗೆ ನೆನಪಾಗಿದ್ದೆ ಕೆ.ಎಫ್. ಪಾಟೀಲ್. ಈ ವೇಳೆಗೆ ನೋವಿನ ಘಟನೆಯೊಂದು ನಡೆದಿತ್ತು; ಚನ್ನಯ್ಯ ಸೂಳಕೇರಿಮಠ ಎಂಬ ೧೪ ವರ್ಷದ ಬಾಲಕನಿಗೆ ೧೫ ಛಟಗಿ ಹೊಡೆತದ ಶಿಕ್ಷೆಯಾಗಿತ್ತು. ಆ ವಿದ್ಯಾರ್ಥಿ 'ತಾನು ಮಾಡಿದ ಕಾರ್ಯ ತಪ್ಪೆಂದು ಒಪ್ಪಿಕೊಳ್ಳುವುದಿಲ್ಲ, ಪಶ್ಚಾತ್ತಾಪ ಪಡುವುದಿಲ್ಲ' ಎಂದು ಜಡ್ಜ್‌ಮೆಂಟಿನಲ್ಲಿ ಹೇಳಲಾಗಿತ್ತು. ಛಟಗಿ ಶಿಕ್ಷೆಯ ವಾರ್ತೆ ಹಂಸಬಾವಿಗೆ ತಲುಪಿದಾಗ ಇಡೀ ಊರು ಕನಿಕರ ಪಟ್ಟಿತ್ತು ಎಂಬ ಪಾಟೀಲರ ಉಲ್ಲೇಖ."[೨] ಅಂದಿನ ಚಳುವಳಿಗಾರ ವಿದ್ಯಾರ್ಥಿಗಳ ಬಗ್ಗೆ ಜನತೆಗೆ ಇದ್ದ ಸಂವೇದನೆ ತಿಳಿಯುತ್ತದೆ.

**ಶಿಕ್ಷೆ :** ಕೆ.ಎಫ್.ಪಾಟೀಲರಿಗೆ ಬರುವ ಪತ್ರಗಳು ಬ್ಯಾಡಗಿಯಲ್ಲಿ ಸೆನ್ಸಾರ್ ಆಗಿ ಹಂಸಬಾವಿಗೆ ಬರುತ್ತಿದ್ದವು. ಅಲ್ಲದೆ ನಿತ್ಯ ಪಾಟೀಲರೇ ಹಂಸಬಾವಿ ಪೋಸ್ಟ್ ಆಫೀಸಿಗೆ ಹೋಗಿ ಟಪಾಲು ತರುತ್ತಿದ್ದರು. ಅದನ್ನೇ ಕಾಯುತ್ತಿದ್ದ ಪೊಲೀಸರು ಒಂದು ದಿನ ಪತ್ರ ತರಲು ಹೋದ ಪಾಟೀಲರನ್ನು ಕಾಯುತ್ತ ನಿಂತಿದ್ದರು. ಇದರ ಅರಿವು ಇರದ ಪೋಸ್ಟ್ ಆಫೀಸಿನ ಮಾಸ್ತರ್(ತಿಪ್ಪಣ್ಣ ವೈಶ್ಯ) ಪಾಟೀಲರ ಪತ್ರವನ್ನು ತೆಗೆದಿಡುತ್ತಿದ್ದರು. ಇದನ್ನು ತಿಳಿದ ಇನ್ಸ್‌ಪೆಕ್ಟರ್ ಮಾಸ್ತರರನ್ನು ಬೆದರಿಸಿ(ಹೆದರಿಸಿ) ಪತ್ರ ತೆಗೆದುಕೊಂಡು ಓದಿ, ಮಾಸ್ತರನ್ನು ಅವಾಚ್ಯ ಶಬ್ದಗಳಿಂದ ಬೈಯತೊಡಗಿದ ಮತ್ತು ಪಾಟೀಲರನ್ನು ೨೪.೩.೧೯೩೨ರಂದು ಕೈದು ಮಾಡಲಾಯಿತು. ಹಿರೇಕೆರೂರು ನ್ಯಾಯಾಲಯದಲ್ಲಿ ಇವರಿಗೆ ೬ ತಿಂಗಳ ಶಿಕ್ಷೆಯಾದ ವಿಷಯ ಹಿರೇಅಣಜಿ ಚಳುವಳಿಗಾರ ಪುಟ್ಟಪ್ಪ ಹರಬಿ ಅವರ ಮೂಲಕ ತಿಳಿಯುತ್ತದೆ.

**ಮತ್ತೆ ವಾರೆಂಟ್ :** ಹಿಂಡಲಗಾ ಜೈಲಿನಿಂದ ೧೦.೯.೧೯೩೨ಕ್ಕೆ ಬಿಡುಗಡೆಯಾದ ಕೆ.ಎಫ್. ಪಾಟೀಲ್ ಮೇಲೆ ವಾರೆಂಟ್ ಇದ್ದ ಕಾರಣ ದಾವಣಗೆರೆಗೆ ಖಾದಿ ಸಿದ್ದಲಿಂಗಪ್ಪನವರಲ್ಲಿಗೆ ಹೋದರು. ದಾವಣಗೆರೆಯನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡ ಇವರಿಗೆ 'ಪ್ರಾಣಿ ದಯಾ ಜ್ಞಾನ ಪ್ರಸಾರಕ ಸಂಘ'ವು ಆಶ್ರಯ ನೀಡಿತು. ಅಲ್ಲಿ ಕಾಂಗ್ರೆಸ್ಸಿನ ಸಂದೇಶಗಳನ್ನೆಲ್ಲ ಸಾಯಕ್ಲೋಸ್ಟೈಲ್ ಮಾಡಿ, ಬ್ರಿಟಿಷ್ ಸರಕಾರಕ್ಕೆ ತಿಳಿಯದಂತೆ ದುಡಿಯತೊಡಗಿದರು. ತರಕಾರಿ, ಹಾಲು, ಮೊಸರು ಮಾರಲು ಹೋಗುತ್ತಿದ್ದ ಮಹಿಳೆಯರ ಬುಟ್ಟಿಗಳಲ್ಲಿ ಇವರ ಕರಪತ್ರಗಳು ದಾವಣಗೆರೆ, ರಾಣೆಬೆನ್ನೂರು, ಹಿರೇಕೆರೂರು, ಬ್ಯಾಡಗಿ ಸಾಗರದವರೆಗೂ ಇವರ ಸಂದೇಶಗಳು

ಹೋಗುತ್ತಿದ್ದವು. ಇತ್ತ ಕಲ್ಲನಗೌಡರನ್ನು ಹಿಡಿಯಲು ಹಿರೇಕೆರೂರು ಮತ್ತು ಹಂಸಬಾವಿ ಕಡೆಗಳಲ್ಲಿ ಅವರ ಆತ್ಮೀಯರನ್ನು ಪೊಲೀಸರು ಹಿಂಸಿಸುತ್ತಿದ್ದರು. ಕಲ್ಲನಗೌಡ ಪಾಟೀಲ ಮಿತ್ರರ ಸಲಹೆಯಂತೆ ತಪ್ಪಿಸಿಕೊಂಡು ಮದ್ರಾಸ್‌ಗೆ ಹೋದರು. ಅಲ್ಲಿ 'ಜನವಾಣಿ' ಪತ್ರಿಕೆಯಲ್ಲಿ ೨ ತಿಂಗಳು ಉಪಸಂಪಾದಕರಾಗಿ ಕಾರ್ಯ ಮಾಡಿ ಚಳುವಳಿ ಶಾಂತವಾದಾಗ ಊರಿಗೆ ಬಂದ ವಿವರ ರಾಣೆಬೆನ್ನೂರಿನ ಚಳುವಳಿಗಾರರ ಹೇಳಿಕೆಯಿಂದ ತಿಳಿಯಲಾಗಿದೆ.

**ಭೂಗತ ಕಾರ್ಯಕ್ಕೆ ಗುಪ್ತ ಸಭೆ :** ೧೯೪೨ರ ಚಳುವಳಿಯಲ್ಲಿ ಇವರು ಭಾಗವಹಿಸಲಿಲ್ಲ. ಚಳುವಳಿಯ ಸಂಘಟನೆಗೆ ದುಡಿಯುತ್ತಿದ್ದು, ಆಗಸ್ಟ್ ೩ನೇ ವಾರದಲ್ಲಿ ಶಿವಮೊಗ್ಗ ಜಿಲ್ಲೆ ಆನವಟ್ಟಿ ಹೋಬಳಿಯ ಎಣ್ಣೆಕೊಪ್ಪದ ಮಲ್ಲಿಕಾರ್ಜುನಗೌಡರ ಮನೆಯಲ್ಲಿ ಹಾವೇರಿ ಭಾಗದ ಸುಮಾರು ೫೦ ಜನ ಕಾರ್ಯಕರ್ತರು ಸಭೆ ಸೇರಿದ್ದರು. ಇಲ್ಲಿ ವಿ.ಟಿ.ಮಾಗಡಿ, ದಂದೂರ ವಕೀಲರು, ಸಂಗೂರು ಕರಿಯಪ್ಪ. ವೀರಭದ್ರಪ್ಪ ನ್ಯಾಮತಿ, ಹಾಲಪ್ಪ ತೊರ್ಗಶಿ, ವೀರನಗೌಡ ಪಾಟೀಲ್ ಇನ್ನೂ ಮುಂತಾದವರು ಭಾಗವಹಿಸಿ, ಜಿಲ್ಲೆಯಲ್ಲಿ ಮುಂದಿನ ಕಾರ್ಯ ಚಟುವಟಿಕೆಗಳ ಬಗ್ಗೆ ಮತ್ತು ಯಾರು ಯಾವ ಯಾವ ಕಾರ್ಯಗಳನ್ನು ಹೇಗೆ ಮಾಡಬೇಕೆಂಬ ಬಗ್ಗೆ ಚರ್ಚಿಸಿದ ವಿವರ ಹಲವು ಚಳುವಳಿಗಾರರಿಂದ ತಿಳಿದುಬರುತ್ತದೆ.

**ಜಿಲ್ಲೆಯ ಗುಂಪುಗಳಿಗೆ ರಾಯಭಾರಿಯಾಗಿ :** ಹಾವೇರಿ ಜಿಲ್ಲೆಯಲ್ಲಿ ನಾಲ್ಕು ಜನ ನಾಯಕರುಗಳು ತಮ್ಮ ತಮ್ಮ ಗುಂಪುಗಳನ್ನು ಕಟ್ಟಿಕೊಂಡು ಕಾರ್ಯ ಮಾಡುತ್ತಿದ್ದರು. ಅವರುಗಳೆಂದರೆ; ೧. ಟಿ.ಆರ್. ನೆಶ್ವಿ–ಬಲಭೀಮ ೨. ತಿಮ್ಮನಗೌಡ ಮೆಣಸಿನಾಳ–ಬಲವಂತ. ೩. ಮಹದೇವಪ್ಪ ಮೈಲಾರ–ಕಭೀರ ಮತ್ತು ೪. ಕರಿಯಪ್ಪ ಸಂಗೂರು–ದಶರಥ. ಹೀಗೆ ಎಲ್ಲ ನಾಯಕರಿಗೆ ಗುಪ್ತನಾಮ ಧರಿಸಿ ಅನುಕ್ರಮವಾಗಿ ಹಿರೇಕೆರೂರು, ರಾಣೆಬೆನ್ನೂರು, ಹಾವೇರಿ, ಹಾಗೂ ಬ್ಯಾಡಗಿ ಮತ್ತು ಹಿರೇಕೆರೂರು ಭಾಗಗಳನ್ನು ತಮ್ಮ ಕ್ಷೇತ್ರಗಳನ್ನಾಗಿ ಇರಿಸಿಕೊಂಡಿದ್ದರು.

ಮೇಲ್ಕಾಣಿಸಿದ ನಾಲ್ಕು ಗುಂಪುಗಳು ತಮ್ಮ ನಾಯಕರಿಂದ ಬಂದ ಸಂದೇಶಗಳನ್ನು ಕಾರ್ಯಕರ್ತರಿಗೂ, ಕಾರ್ಯಕರ್ತರಿಂದ ಬಂದ ವರದಿಗಳನ್ನು ಮೇಲಿನ ನಾಯಕರುಗಳಿಗೂ ತಲುಪಿಸುವ ಕಾರ್ಯವನ್ನು ಕೆ.ಎಫ್. ಪಾಟೀಲರಿಗೆ ವಹಿಸಲಾಯಿತು. ಪೊಲೀಸರಿಗೂ ಈ ವಿಷಯ ತಿಳಿದಿತ್ತು. ಆದರೆ ಪೊಲೀಸ್ ಅಧಿಕಾರಿಗಳಾದ ಶೇಖ ಮತ್ತು ಎನ್.ಎಂ. ಪಾಟೀಲ್ ಕೆ.ಎಫ್. ಪಾಟೀಲ್ ಬಗ್ಗೆ ಸಹಾನುಭೂತಿಯುಳ್ಳವರಾಗಿದ್ದರು. ಹೀಗಾಗಿ ಇವರ ಬಂಧನ ಸ್ವಲ್ಪ ಮುಂದೂಡಲ್ಪಟ್ಟ ವಿವರವನ್ನು ಚಳುವಳಿಕಾರ ಪರಮಣ್ಣ ಹರಕಂಗಿ ವಿವರಿಸುತ್ತಾರೆ.

**ಆಫೀಸ್‌ನಲ್ಲಿಯೇ ಬುಲೆಟಿನ್ :** ಕೆ.ಎಫ್. ಪಾಟೀಲ್ ಸ್ಕೂಲ್ ಬೋರ್ಡ್‌ನ ಅಧ್ಯಕ್ಷರಾಗಿದ್ದ ಇವರು ಧಾರವಾಡದಲ್ಲಿದ್ದ ಬೋರ್ಡಿನ ಆಫೀಸಿನಲ್ಲಿಯೇ ಚಳುವಳಿಗೆ ಸಂಬಂಧಿಸಿದ ಬುಲೆಟಿನ್ ಸಿದ್ಧಗೊಳಿಸಿ ಎಲ್ಲಡೆಗೂ ಕಳುಹಿಸುವ ವ್ಯವಸ್ಥೆ ಮಾಡುತ್ತಿದ್ದರು. ಇವರಿಗೆ ಅಂಕೋಲೆಯ ಬೊಮ್ಮಯ್ಯ ನಾಯ್ಕ ಎಂಬ ಪ್ಯೂನ್(ಸಿಪಾಯಿ) ಇವರ ಚಳುವಳಿಗೆ ಸಂಬಂಧಿಸಿದ ಕಾರ್ಯಗಳನ್ನು

ಮಾಡುತ್ತಿದ್ದ."[೨೪] ಕಛೇರಿಯ ಸಿಪಾಯಿ ಕೂಡ ಹೇಗೆ ಚಳುವಳಿಯಲ್ಲಿ ಸಹಾಯ ಮಾಡುತ್ತಿದ್ದ ನೆಂಬುದಕ್ಕೆ ಸ್ಪಷ್ಟನೆಯಂತಿದೆ.

**ಚಳುವಳಿಕಾರರಿಗಾಗಿ :** "ಕೆ.ಎಫ್. ಪಾಟೀಲ್ ಬ್ಯಾಡಗಿ ಸಂತೆಯಲ್ಲಿ ಕಾರ್ಯಕರ್ತರಿಗಾಗಿ ಸಕ್ಕರಿ, ಚಹಾಪುಡಿ ಇತರೆ ಕಿರಾಣಿ ತೆಗೆದುಕೊಳ್ಳಬೇಕಿತ್ತು. ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಹೇಳಿರುವಂತೆ ಭೂಗತರಾದವರಿಗೆ ಪಾಟೀಲರು ಕಾಲಲ್ಲಿ ಹಾಕಿಕೊಳ್ಳುವ ಚಪ್ಪಲಿಗಳನ್ನು ಕೊಡಿಸಿದ ಪುಣ್ಯಾತ್ಮನೆಂದು ಹೇಳಿದ್ದು ಅವರು ಅಂದು ಭೂಗತ ಚಳುವಳಿಗಾರರ ಬೇಕು-ಬೇಡಗಳನ್ನು ಹೇಗೆ ಪೂರೈಸುತ್ತಿದ್ದರು ಎಂಬುದಕ್ಕೆ ನಿದರ್ಶನದಂತಿದೆ. ಆದರೆ ಈ ವೇಳೆಗೆ ಕಾರ್ಯಕರ್ತನನೊಬ್ಬ ಪೊಲೀಸರ ಏಟು ತಾಳಲಾರದೆ ಪಾಟೀಲರ ಕಾರ್ಯಗಳೆಲ್ಲವನ್ನು ಪೊಲೀಸರಿಗೆ ತಿಳಿಸಿದ್ದರಿಂದ ಇವರ ಬಂಧನ ಯಾವ ವೇಳೆಗಾದರೂ ಆಗುತ್ತಿತ್ತು. ಇಂಥ ಸಂದರ್ಭದಲ್ಲಿ ಜೈಲಿನಲ್ಲಿರುವ ಹಳ್ಳಿಕೇರಿ ಗುದ್ಲೆಪ್ಪ ಇವರಿಗೆ 'ನೀವು ಕಲೆಕ್ಟರ್ ಡಾಯಸ್ ಭೇಟಿಯಾಗಿ ಹಿರೇಕೆರೂರು ಭಾಗದಲ್ಲಿ ಪೊಲೀಸರು ಮಹಿಳೆಯರ ಮೇಲೆ ದೌರ್ಜನ್ಯ ಮಾಡುವ ಕುರಿತು ತಿಳಿಸಿ' ಎಂದು ತಿಳಿಸಿದ್ದರಿಂದ, ಪಾಟೀಲ್ ತಮ್ಮ ಸಂಗಡ ಸ್ನೇಹಿತ ಹಿರೇಮಠ ಎಂಬುವವರನ್ನು ಕರೆದುಕೊಂಡು ಕಲೆಕ್ಟರ್‌ನನ್ನು ಭೇಟಿಯಾಗಿ ವಿಷಯ ತಿಳಿಸಿದರು. ಚಳುವಳಿ ವಿಷಯವಾಗಿ ಮಾತನಾಡುತ್ತ 'ನೀವು ಎಣ್ಣಿಕೊಪ್ಪದ ಮಲ್ಲಕಾರ್ಜುನಗೌಡರ ಮನೆಯಲ್ಲಿ ಏನೇನು ಮಾತನಾಡಿದ್ದೀರಿ ಎಂಬುದು ನನಗೆ ಗೊತ್ತು' ಎಂದಾಗ ತಮ್ಮ ಬಂಧನ ಖಾಯಂ ಎಂಬ ನಿರ್ಧಾರವಾದರೂ ಸುಧಾರಿಸಿಕೊಂಡು, ಹೇಗೋ ಹೊರನಡೆದರು.

ದಾರಿಯಲ್ಲಿ ಅಜ್ಞಾತ ವ್ಯಕ್ತಿಯೊಬ್ಬನು ಪಾಟೀಲರಿಗೆ **"ನಿಮ್ಮ ಶಿಷ್ಯ ಮರಡೂರು ಸಾಹೇಬರ ಕಟಗಿ ಅಡ್ಡೆಯಲ್ಲಿ ಕಾದಿದ್ದಾನೆ, ಬರಿಗೈಯಲ್ಲಿ ಹೋಗಬಾರದು'** ಎಂದು ಕಣ್ಮರೆಯಾದ. ದಾರಿಯಲ್ಲಿ ಹೇರೂರು ಶಿವಲಿಂಗಪ್ಪ ಸಿಕ್ಕರು. ಅವರಿಗೆ ಹಣ ಕೇಳಿದಾಗ, ಅವರು ೧೦೦ ರೂ.ಗಳ ಐದು ನೋಟುಗಳನ್ನು ಕೊಟ್ಟರು. ಮರಡೂರು ಸಾಹೇಬರ ಕಟ್ಟಿಗೆ ಅಡ್ಡೆಗೆ ಹೋದಾಗ ಆಗಲೇ ಸಂಜೆಯಾಗಿತ್ತು, ಒಬ್ಬ ವ್ಯಕ್ತಿ ಬಂದು ಇವರ ಕೈಹಿಡಿದು ಒಳಗೆ ಕರೆದೊಯ್ದರು. ಅಲ್ಲಿ ಮಹದೇವಪ್ಪ ಮೈಲಾರ ಬಂದವನೆ. ಇವರ ಕಾಲಿಗೆರಗಿದ. ಇವರಿಗೆ ಕಣ್ಣೀರು ಉಕ್ಕಿಬಂದು ಗಟ್ಟಿಯಾಗಿ ಮಹದೇವಪ್ಪನನ್ನು ತಬ್ಬಿಕೊಂಡರು. ಮಹದೇವಾ ನನ್ನ ಬಂಧನವಾಗುವ ಕಾಲ ಸನಿಹ ಬಂದಿದೆ, ನಿನಗೂ ಅಪಾಯ ಕಾದಿದೆ ನೀನು ಈ ಭಾಗವನ್ನೇ ಬಿಟ್ಟು ಮಲೆನಾಡ ಕಡೆ ಹೊರಟುಹೋಗು ನಿನ್ನ ಮೇಲೆ ಪೊಲೀಸರ ಕಣ್ಣಿದೆ; ನೀನು ತಪ್ಪಿಸಿಕೊಳ್ಳಲೇಬೇಕು ಎಂದಾಗ **'ಗುರೂಜೀ, ಇದು ನಮ್ಮ ಕೊನೆಯ ಹೋರಾಟ ಮಾಡುವೆವು ಇಲ್ಲಾ ಮಡಿಯುವೆವು!** ನಿಮ್ಮ ಆಶೀರ್ವಾದ ಬೇಕು' ಎಂದು ಹೇಳುತ್ತಿದ್ದಂತೆ ಹಣ ಕೊಟ್ಟರು. ಮಹದೇವಪ್ಪ ಗುರುಗಳನ್ನು ಮತ್ತೊಮ್ಮೆ ಬಿಗಿದಪ್ಪಿದ. ಮರುಕ್ಷಣವೇ ಕರಿಕಂಬಳಿ ಹೊದ್ದ ಮಹದೇವಪ್ಪ ಕತ್ತಲಲ್ಲಿ ಮಾಯವಾದ"[೨೫] ಇದು ಇವರಿಬ್ಬರ ಕೊನೆಯ ಭೇಟಿಯಾಯಿತು.

**ಬಂಧನ :** ಮಹದೇವಪ್ಪ ಮೈಲಾರ ಭೇಟಿಯ ನಂತರ ನಾಲ್ಕಾರು ದಿನಗಳಲ್ಲಿ ಕೆ.ಎಫ್.ಪಾಟೀಲರ ಬಂಧನವಾಯಿತು. ೨೬ ಮಾರ್ಚ್ ೧೯೪೩ರಂದು ಹಿಂಡಲಗಾ ಜೈಲಿಗೆ ಕಳುಹಿಸಲಾಯಿತು. ನಂತರ ಅಲ್ಲಿಂದ ಪುಣೆಯ ಜೈಲಿಗೆ ಹಾಕಿದಾಗ ಅಲ್ಲಿ ಮಹದೇವಪ್ಪ ಮತ್ತು ಅವನ ಎರಡು ಜನ ಸಂಗಡಿಗರು ಹುತಾತ್ಮರಾದ ಸುದ್ದಿ ಪತ್ರಿಕೆಗಳಿಂದ ತಿಳಿಯಿತು. ಪುಣೆಯ ಅಂಧೇರಿ ವಾರ್ಡಿನಲ್ಲಿ ಇವರನ್ನು ಡೆಟನ್ಯೂ ಆಗಿ ಜೈಲು ಶಿಕ್ಷೆ ಅನುಭವಿಸಿದ ಬಗ್ಗೆ ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ವಿವರಿಸುತ್ತಾರೆ. ಇವರು ಒಟ್ಟು ಎರಡು ವರ್ಷ ಆರು ತಿಂಗಳು ಜೈಲು ಶಿಕ್ಷೆ ಅನುಭವಿಸಿದ್ದಾರೆ.

**೯. ಮೈಲಾರ ಮಹದೇವಪ್ಪ :**

ಕಾಂತನ ಕಳಕೊಂಡ ಕಾಮಿನಿಯಂತೆ ಭಾರತ ಹಾಕ್ವದು ಕಣ್ಣೀರ ।
ಶಾಂತಿ ಸಮರದೊಳು ಗುಂಡಿನೇಟನೊಳು ಮಡಿದ ಮಹಾದೇವಪ್ಪ ಮೈಲಾ ।
ಕರುನಾಡಿನ ಕಲಿ ವೀರಕೇಸರಿ ನೆನಪಿಲೆನ್ನುತ ನಿರಂತರ ।

ಸಮ್ಮದ್ ಸಾಹೇಬ ಬೆಳ್ಳೂಡಿಯ ಈ ಲಾವಣಿ ಸ್ವಾತಂತ್ರ್ಯಾಂದೋಲನದಲ್ಲಿ ಕರ್ನಾಟಕದ ಮನೆ ಮನೆಗಳ ಮಾತಾಗಿ, ಮೈಲಾರ ಮಹದೇವಪ್ಪನ ಬಲಿದಾನದ ಕಥೆ, ಅಸಂಖ್ಯ ಹೋರಾಟಗಾರರಿಗೆ ಸ್ಫೂರ್ತಿಯ ಚಿಲುಮೆಯಾಗಿತ್ತು. ಮಹದೇವಪ್ಪ ಮನೆ, ಕುಟುಂಬ, ಊರು-ಕೇರಿ ಎಲ್ಲ ತೊರೆದು ತಮ್ಮ ಹದಿಹರೆಯದಲ್ಲೇ ಶಾಲೆಗೆ ಶರಣು ಹೊಡೆದು ಅಪ್ರತಿಮ ಹೋರಾಟ ನಡೆಸಿ, ಕೊನೆಗೆ ಬ್ರಿಟಿಷರ ಗುಂಡಿಗೆ ಆಹುತಿಯಾದರು. ಅಂತೆಯೇ, ಅವರು ಭಾರತ ಸ್ವಾತಂತ್ರ್ಯಾಂದೋಲನಕ್ಕೆ ಕರ್ನಾಟಕ ನೀಡಿದ ಮಹಾನ್ ಕೊಡುಗೆಗಳಲ್ಲಿ ಅಗ್ರಗಣ್ಯರು. 'ಮಾಡು ಇಲ್ಲವೇ ಮಡಿ' ಎಂಬ ಮಹಾತ್ಮರ ಕರೆಯನ್ನು ಅಕ್ಷರಶಃ ಪಾಲಿಸಿದ ಅದಮ್ಯ ಚೇತನ, ಗಾಂಧೀಜಿಯ ಆತ್ಮೀಯ ಶಿಷ್ಯ.

ಮೈಲಾರ ಮಹದೇವಪ್ಪ ಈಗಿನ ಹಾವೇರಿ ಜಿಲ್ಲೆಯ ಮೋಟೆಬೆನ್ನೂರಿನ ರೈತ ಕುಟುಂಬದಲ್ಲಿ ಜೂನ್ ೮, ೧೯೧೧ರಂದು ಜನಿಸಿದರು. ತಂದೆ ಮಾರ್ತಾಂಡಪ್ಪ, ತಾಯಿ ಬಸಮ್ಮ ಸ್ವಾತಂತ್ರ್ಯಾಂದೋಲನದಲ್ಲಿ ತಾಯಿ ಬಸಮ್ಮ ಸೆರೆಮನೆ ವಾಸ ಅನುಭವಿಸಿದವರು. ಹೀಗಾಗಿ ಬಾಲಕ ಮಹದೇವಪ್ಪನಿಗೆ ದೇಶಭಕ್ತಿ ರಕ್ತಗತವಾಗಿಯೇ ಬಂದಿತೆನ್ನಬಹುದು. ಪ್ರಾಥಮಿಕ ಶಿಕ್ಷಣ ಸ್ವಗ್ರಾಮ ಮೋಟೆಬೆನ್ನೂರಿನಲ್ಲೇ ಆಯಿತು. ಆಗ ಹಿರಿಯ ದೇಶಭಕ್ತರೊಬ್ಬರ ಭಾಷಣ ಕೇಳಿ ತನ್ನ ತಲೆ ಮೇಲಿನ ವಿದೇಶಿ ಟೊಪ್ಪಿಗೆ ತೆಗೆದು ನೆಲಕ್ಕೆಸೆದವನು ಈ ಮಹದೇವಪ್ಪ. ಇದು ಅವನ ಸ್ವಾತಂತ್ರ್ಯ ಸಮರದ ಮೊದಲ ಹೆಜ್ಜೆ.

**ಹಂಸಬಾವಿ ಶಾಲೆ ಮತ್ತು ಪ್ರೇರಣೆ:** ಮುಂದಿನ ವ್ಯಾಸಾಂಗಕ್ಕಾಗಿ ಆಗಲೇ ಹೆಸರು ಮಾಡಿದ್ದ ಹಂಸಬಾವಿಯ ಶಾಲೆಗೆ ದಾಖಲಾದ. ಅಲ್ಲಿ ಹಿರಿಯ ಸ್ವಾತಂತ್ರ್ಯ ಸೇನಾನಿಗಳಾದ ಕೆ.ಎಫ್. ಪಾಟೀಲ್ ಹಾಗೂ ಟಿ.ಆರ್. ನೆಶ್ವಿ ಅವರ ಶಿಷ್ಯತ್ವ ದೊರೆತದ್ದು ಒಂದು ಸುಯೋಗ. ಹಂಸಬಾವಿ ಸ್ಕೂಲಿನಲ್ಲಿ ಮಹದೇವಪ್ಪ ವಿದ್ಯಾರ್ಥಿ ಸಂಘಟನೆಯ ನೇತೃತ್ವ ವಹಿಸಿ 'ಸೈಮನ್

ತಿರುಗಿ ಹೋಗಿರಿ' ಮೆರವಣಿಗೆಯನ್ನು ಯಶಸ್ವಿಗೊಳಿಸಿದ. ಸ್ಕೂಲಿನಲ್ಲಿ ಗಜಾನನೋತ್ಸವ ಕಾರ್ಯಕ್ರಮಕ್ಕಾಗಿ ದಿವಾಕರ ರಂಗರಾಯರನ್ನು ಮುಖ್ಯ ಅತಿಥಿಗಳನ್ನಾಗಿ ಕರೆಯಿಸಿದಾಗ, ಅವರ ಅಂದಿನ ಭಾಷಣವು ವಿದ್ಯಾರ್ಥಿಗಳಲ್ಲಿ ನವಸ್ಫೂರ್ತಿಯನ್ನು ತುಂಬಿತು. ಅಲ್ಲಿ ನೆರೆದಿದ್ದವರಲ್ಲಿ ಹಿರೇಕೆರೂರಿನ ಸಿದ್ಧಲಿಂಗಯ್ಯ ಸ್ವಾಮಿ ಎಂಬ ತರುಣ ಕಾವಿಯ ಪರದೇಶಿ ಬಟ್ಟೆಯನ್ನು ಸಭೆಯಲ್ಲಿಯೇ ಸುಟ್ಟು ಖಾದಿಧಾರಿಗಳಾದರು. ಅಂದಿನಿಂದ ಮಹದೇವಪ್ಪನೂ ಖಾದಿಧಾರಿಯಾದನು."[೨೬]

ಒಮ್ಮೆ 'ಕರ್ನಾಟಕ ಗಾಂಧಿ' ಖ್ಯಾತಿಯ ಹರ್ಡೇಕರ್ ಮಂಜಪ್ಪ ಸಮಾರಂಭವೊಂದರಲ್ಲಿ ದೇಶಾಭಿಮಾನದ 'ಧೀರರಾಗಿರಿ ಸ್ವತಂತ್ರರಾಷ್ಟ್ರ ವೀರರಾಗಿರಿ' ಮಾತುಗಳು ಮಹದೇವಪ್ಪನ ಮೇಲೆ ಪ್ರಭಾವ ಬೀರಿದವು. ಮತ್ತೊಂದೆಡೆ ಗಾಂಧೀಜಿಯ 'ಯಂಗ್ ಇಂಡಿಯಾ' ಪತ್ರಿಕೆಯನ್ನು ಓದುತ್ತಾ ಸತ್ಯಾಗ್ರಹದ ಬಗ್ಗೆ ಸಾಕಷ್ಟು ತಿಳಿದಿದ್ದ ಮಹದೇವಪ್ಪ ಗಾಂಧೀಜಿ ಆಗಿನ ಶಿಕ್ಷಣ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದರಿಂದ ಶಿಕ್ಷಣಕ್ಕೆ ಶರಣು ಹೊಡೆದನು.

'ಯಂಗ್ ಇಂಡಿಯಾ'ದಲ್ಲಿ ಖಾದಿ ಬಗ್ಗೆ ಗಾಂಧೀಜಿ ಬರೆದ ಹೊಟ್ಟೆಗಿಲ್ಲದಿದ್ದವರಿಗೆ ಖಾದಿಯೇ ಜೀವನ ಮಾರ್ಗವನ್ನು ಕಲ್ಪಿಸುತ್ತದೆ, ಕೆಲಸವಿಲ್ಲದೆ ತಮ್ಮ ತಮ್ಮಲ್ಲಿಯೇ ಜಗಳ ಮಾಡಿಕೊಳ್ಳುತ್ತಿದ್ದ ಜನರನ್ನು ಉದ್ಯೋಗಶೀಲರನ್ನಾಗಿ ಮಾಡುತ್ತದೆ. ಅಂತೆಯೇ ಖಾದಿಗೊಂದು ವ್ಯಕ್ತಿತ್ವವೂ ಇದೆ. ಎಲ್ಲ ಕಾಲದಲ್ಲಿಯೂ ನಾವು ಖಾದಿಯನ್ನು ಉಪಯೋಗಿಸಬೇಕು"(ಯಂಗ್ ಇಂಡಿಯಾ ಏಪ್ರಿಲ್ ೨೮, ೧೯೨೦)."[೨೭] ಗಾಂಧೀಜಿಯ ಈ ಲೇಖನದಿಂದ ಮಹದೇವಪ್ಪ ಊರೂರು ಸುತ್ತಿ ಖಾದಿ ಬಟ್ಟೆಯನ್ನು ಮಾರುವ ಕಾರ್ಯ ಆರಂಭಿಸಿದನು.

ಮಹದೇವಪ್ಪನ ಈ ಕಾರ್ಯ ಮನೆಯವರಿಗೆ ಸರಿಕಾಣಲಿಲ್ಲ. ಮಹದೇವಪ್ಪ ಮನೆಗೆ ಬಂದಾಗ ದೊಡ್ಡಪ್ಪ 'ನೀನು ವಿದ್ಯಾಭ್ಯಾಸವನ್ನು ನಿಲ್ಲಿಸಿದ್ದಿಯಾ? ಜವಾಬ್ದಾರಿ ಬೇಡವಾ? ಖಾದಿ ಮಾರಿ, ನೇಯ್ಗೆ ಕಲಿತು ನೀನೇನು ಮಗ್ಗ ಹಾಕಬೇಕಾಗಿಲ್ಲ. ಊರಲ್ಲಿ ಸಾಕಷ್ಟು ಜನ ನೇಕಾರರಿದ್ದಾರೆ."[೨೮] ಅಲ್ಲದೆ ಆ ಖಾದಿ ಮಾರಾಟ ಮಾಡೋಕೆ ಹೇಳಿದವರು ಯಾರು? ಆ ಗಾಂಧೀ ಒಬ್ಬ ಮೂರ್ಖ! ಖಾದಿ ಮಾರಿದರೆ, ಧರಿಸಿದರೆ ಸ್ವರಾಜ್ಯ ಸಿಕ್ಕುಬಿಡುತ್ತೇನೋ! ಎಂದು ಗದರಿಸಿದರು. **ನನಗೆ ಮೂರ್ಖನೆನ್ನಿ, ದೊಡ್ಡವರಿಗೆ ಹಾಗೆ ಅನ್ನಬೇಡಿ** ಎಂದು ಮಹದೇವಪ್ಪ ದೊಡ್ಡಪ್ಪನಿಗೆ ಕೇಳಿಕೊಂಡ. ರಾತ್ರಿ ಕಳೆದು ಬೆಳಗಾಗುವಷ್ಟರಲ್ಲಿ ದೊಡ್ಡಪ್ಪ ಗುಡ್ಡಪ್ಪ ಮಹದೇವಪ್ಪನನ್ನು ಕರೆದುಕೊಂಡು ವ್ಯಾಪಾರ ಕಲಿಸಬೇಕೆಂದು ದಾವಣಗೆರೆಗೆ ಕರೆದೊಯ್ದು ವರ್ತಕರೊಬ್ಬರ ಅಂಗಡಿಯಲ್ಲಿ ಲೆಕ್ಕ ಬರೆಯುವ ಕೆಲಸಕ್ಕೆ ಸೇರಿಸಿದರು. ಆದರೆ ತಾಯ್ನಾಡಿಗಾಗಿ ನಡುಕಟ್ಟಿ ನಿಂತಿದ್ದ ಮಹದೇವಪ್ಪ ಯಾರಿಗೂ ತಿಳಿಸದೆ ದಾವಣಗೆರೆಯಿಂದ ಧಾರವಾಡಕ್ಕೆ ಹೋದನು"[೨೯] (೧೯೨೯).

ಧಾರವಾಡದಲ್ಲಿದ್ದ **ಭಾರತೀಯ ತರುಣ ಸಂಘ**ದ ಸದಸ್ಯರು ಮಹದೇವಪ್ಪನನ್ನು ಆದರದಿಂದ ಸಂಘದಲ್ಲಿ ಸೇರ್ಪಡೆ ಮಾಡಿಕೊಂಡರು. ಅಲ್ಲಿ ಎನ್.ಬಿ. ಹಿರೇಮಠ, ಜಿ.ವಿ. ಹಳ್ಳಿಕೇರಿ, ವ್ಹಿ.ಟಿ.

ಮಾಗಡಿ ಮುಂತಾದ ೨೦ಕ್ಕೂ ಹೆಚ್ಚು ಕಾರ್ಯಕರ್ತರಿದ್ದರು. ಅವರನ್ನು ಸೇರಿದ ಮಹದೇವಪ್ಪನಿಗೆ ಬುರ್ಲಿ ಬಿಂದು ಮಾಧವರಾವ್, ದ.ಪ. ಕರಮರಕರ್, ರಂಗನಾಥ ದಿವಾಕರ ಮುಂತಾದ ನಾಯಕರ ಆತ್ಮೀಯ ಒಡನಾಟ ಸಿಕ್ಕಿತ್ತು. ಆದರೂ ಮಹದೇವಪ್ಪ ಮನೆಯವರ ಕಣ್ಣು ತಪ್ಪಿಸಲೆಂದು ಬಹುಕಾಲ ಧಾರವಾಡದಲ್ಲಿ ಇರಲು ಇಷ್ಟಪಡಲಿಲ್ಲ. ಕೌಜಲಗಿ ಹನುಮಂತರಾಯರ ನೇತೃತ್ವದ ಬಾಗಲಕೋಟೆಯ ಬಳಿಯಿರುವ ಕಲಾದಗಿ ಕೇಂದ್ರದಲ್ಲಿ ನೇಯ್ಗೆಯ ಕಲೆಯನ್ನು ಕಲಿಯಲು ತೆರಳಿದನು. ಹೀಗಿರುವಾಗ ಮಹದೇವಪ್ಪನ ಹೋರಾಟದಲ್ಲಿ ಮಹತ್ತರವಾದ ತಿರುವಿಗೆ ಕಾರಣವಾದ ಘಟನೆಯನ್ನು ಮನು ಬಳಿಗಾರ್ ಉಲ್ಲೇಖಿಸಿರುತ್ತಾರೆ.

'೧೯೩೦ರ ಉಪ್ಪಿನ ಸತ್ಯಾಗ್ರಹಕ್ಕೆ ಭಾಗವಹಿಸಲು ಕರ್ನಾಟಕದಿಂದ ಒಬ್ಬ ವೀರನನ್ನು ಆಯ್ಕೆಮಾಡಿ ಕಳುಹಿಸಿ' ಎಂಬ ಸಾಬರಮತಿ ಆಶ್ರಮದಲ್ಲಿ ಗಾಂಧೀ ನೇತೃತ್ವದಲ್ಲಿಯ ಕಾಂಗ್ರೆಸ್ ವರಿಷ್ಠ ಮಂಡಳಿಯಿಂದ ರಂಗನಾಥ ದಿವಾಕರಿಗೆ ಸಂದೇಶ ಬಂದಿತು. ಅಂಥ ಧೈರ್ಯ ಉಳ್ಳ ಮತ್ತು ಅರ್ಹ ವ್ಯಕ್ತಿ ಮೈಲಾರ ಮಹದೇವಪ್ಪ ಎಂದು ಕಾರ್ಯಕರ್ತರು ಹೆಸರನ್ನು ಸೂಚಿಸಿದಾಗ, ದಿವಾಕರರು ಕಾರ್ಯಕರ್ತರ ಆಶೆಯಂತೆ ಕರ್ನಾಟಕದ ಏಕೈಕ ಪ್ರತಿನಿಧಿಯನ್ನಾಗಿ ಸಾಬರಮತಿ ಆಶ್ರಮಕ್ಕೆ ಮಹದೇವಪ್ಪನನ್ನು ಕಳುಹಿಸಿಕೊಟ್ಟರು. ಗಾಂಧೀಜಿ ಆಯ್ಕೆ ಮಾಡಿದ ೭೮ ಜನ ದಂಡಿಯಾತ್ರೆ ವೀರ ಸತ್ಯಾಗ್ರಹಿಗಳಲ್ಲಿ ಎಲ್ಲರಿಗಿಂತ ಚಿಕ್ಕವರಾಗಿ ಮಹದೇವಪ್ಪ ಕರ್ನಾಟಕದ ಕೀರ್ತಿಗೆ ಕಳಸಪ್ರಾಯರಾದರು. ಈ ಸತ್ಯಾಗ್ರಹದಲ್ಲಿ ಮಹದೇವಪ್ಪನಿಗೆ ಆರು ತಿಂಗಳ ಶಿಕ್ಷೆಯಾಗಿ ಸೆರೆಮನೆ ಸೇರಿದ ಮೇಲೆ ಮನೆಯವರಿಗೆ ಪತ್ರ ಬರೆದು ವಿಷಯ ತಿಳಿಸುವವರೆಗೂ ಮನೆಯವರಿಗೆ ಮಗ ಎಲ್ಲಿದ್ದಾನೆ ಎಂಬ ಸುಳಿವು ತಿಳಿದಿರಲಿಲ್ಲ.

**ಕೊರಡೂರು ಗ್ರಾಮ ಸೇವಾಶ್ರಮ ೧೯೩೭ :** ಮಹದೇವಪ್ಪ ಗಾಂಧೀಜಿಯೊಂದಿಗೆ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗಿಯಾದ ವಿಷಯ ತಿಳಿದು ಮನೆಯವರು ತುಂಬ ಸಂತೋಷ ಪಟ್ಟರು. ಗಾಂಧಿ–ಇರ್ವಿನ್ ಒಪ್ಪಂದದ ನಂತರದಲ್ಲಿ ಗಾಂಧೀಜಿ ಎರಡನೆಯ ದುಂಡು ಮೇಜಿನ ಪರಿಷತ್ತಿಗೆ ಲಂಡನ್‌ಗೆ ಹೊರಟ ಸಮಯದಲ್ಲಿ "ನೀನು ಕರ್ನಾಟಕದಲ್ಲಿದ್ದು ವಿಧಾಯಕ ಕಾರ್ಯವನ್ನು ಕೈಗೊಳ್ಳಬೇಕು ಎಂದು ಮಹದೇವಪ್ಪನಿಗೆ ಆದೇಶಿಸಿದ್ದರು. ಅವರ ಆದೇಶದಂತೆ ಹೊಸರಿತ್ತಿಯ ಆಶ್ರಮದಲ್ಲಿ ಸೇರಿ ವಿಧಾಯಕ ಕಾರ್ಯದಲ್ಲಿ ತೊಡಗಿದನು. ಕೆಲ ತಿಂಗಳ ತರುವಾಯ ಹೊಸರಿತ್ತಿ ಬಳಿ ಕೊರಡೂರಲ್ಲಿ ಕಲಕೋಟಿ ಬಂಧುಗಳ ಆಶೆಯಂತೆ ಆಶ್ರಮವನ್ನು ಸ್ಥಾಪಿಸಿ, ತನ್ನ ಪತ್ನಿಯನ್ನು ಕರೆಸಿಕೊಂಡು ವಿಧಾಯಕ ಕಾರ್ಯ ಆರಂಭಿಸಿದನು."[೩೦] ಈ ಆಶ್ರಮದ ಮೂಲಕ ಸುತ್ತಲಿನ ಗ್ರಾಮಗಳ ಜನತೆಗೆ ಚಳುವಳಿಯೊಂದಿಗೆ ಸಾಮಾಜಿಕ ಕಾರ್ಯಗಳಿಗೂ ಆದ್ಯತೆ ನೀಡಿರುವುದನ್ನು ಗಮನಿಸಲಾಗಿದೆ.

ಮಹದೇವಪ್ಪ ಮತ್ತು ಸಿದ್ದಮ್ಮ ದಂಪತಿ ಕೊರಡೂರು ಆಶ್ರಮದ ಭಾರ ಹೊತ್ತು ೧. ಖಾದಿ, ೨. ಸಾಕ್ಷರತೆ, ೩. ವ್ಯಾಯಾಮ, ೪. ಗ್ರಾಮ ಕೈಗಾರಿಕೆ, ೫. ಔಷಧೋಪಚಾರ ಮತ್ತು ೬. ಪ್ರಚಾರ – ಈ ಆರು ಧ್ಯೇಯಗಳನ್ನಿಟ್ಟುಕೊಂಡು ಕಾರ್ಯ ಮಾಡುತ್ತಿದರು.

ಇವರಿಗೆ ಕೊರಡೂರಲ್ಲಿ ಚನ್ನಬಸಪ್ಪ ಕಲಕೋಟಿ ಅವರ ಪತ್ನಿ ಬಸಮ್ಮ ಸಹಾಯಕ್ಕೆ ನಿಂತರು. ಅದರಲ್ಲಿಯೂ ಅಲ್ಲಿಯ ಜನ ಮಹದೇವಪ್ಪನನ್ನು ಊರ ಮಗನೆಂಬಂತೆ ನೋಡಿಕೊಳ್ಳುತ್ತಿದ್ದರು. ಮತ್ತೊಂದು ವಿಶೇಷವೆಂದರೆ ಮಹದೇವಪ್ಪ ಆಶ್ರಮಕ್ಕೆ ಸ್ವಲ್ಪ ಜಮೀನ ಇದ್ದು ಅದರಲ್ಲಿ ಕೃಷಿ ಚಟುವಟಿಕೆಗಳನ್ನು ಮಾಡುತ್ತಿದ್ದ. ಸ್ವತಃ ತಾನೇ ನೇಗಿಲು ಹೊಡೆಯುತ್ತಿದ್ದ. ದಿನಕಳೆದಂತೆ ಮಹದೇವಪ್ಪನ ಬಗ್ಗೆ ಆ ಭಾಗದ ಜನ ಅವನ ಬಗ್ಗೆ ಹಾಡು ಕಟ್ಟಿ ಹಾಡತೊಡಗಿದರು.

"ಮಹದೇವ ನಮ್ಮೂರಿಗೆ ಬರತಾನ
ಗಾಂಧೀತತ್ವ ಸಾರಿ ಹೇಳತಾನ ದಿನಾದಿನಾ
ಸತ್ಯವಂತರು ಸಾವಿರಗಟ್ಟಲೆ ।
ನಿತ್ಯಾಬಂದು ಕೇಳತಾರ
ಸುತ್ತಮುತ್ತಲ ಜನ ಕಿತ್ತ ಬರುತಾರ॥"



ಹೀಗೆ ತನ್ನ ಕಾರ್ಯಗಳಿಂದ ಜನಮನ್ನಣೆ ಗಳಿಸಿಕೊಂಡಿದ್ದಕ್ಕೆ ಸಾಕ್ಷಿಯಾದ ಬಗ್ಗೆ ಅದು ಮುಂದೆ ಭೂಗತ ಕಾರ್ಯಕ್ಕೆ ಅನೂಕೂಲವಾದ ವಾತಾವರಣ ನಿರ್ಮಾಣವಾಯಿತು.

**ಮಹದೇವಪ್ಪನವರಿಗೆ ನೋಟೀಸು :** ರಾಷ್ಟ್ರೀಯ ರಾಜಕಾರಣದಲ್ಲಿ ಗಾಂಧೀಜಿ ಹಾಗೂ ಸುಭಾಸ್‌ಚಂದ್ರ ಭೋಸ್‌ರ ಮಧ್ಯ ಭಿನ್ನಾಭಿಪ್ರಾಯ ಬಂದು ಸುಭಾಸ್‌ರು ಕಾಂಗ್ರೆಸ್ ತ್ಯಜಿಸಿ **ಫಾರ್ವರ್ಡ್ ಬ್ಲಾಕ್** ಪಕ್ಷ ಕಟ್ಟಿದ್ದರು. ಪಕ್ಷದ ಸಂಘಟನೆಗಾಗಿ ಕರ್ನಾಟಕ ಪ್ರವಾಸದಲ್ಲಿ ಹಾವೇರಿಗೆ ಬಂದಾಗ, ಹೊಸಮನಿ ಸಿದ್ದಪ್ಪನ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಹದೇವಪ್ಪ ಮೈಲಾರ ಭಾಗಿಯಾಗಿದ್ದಕ್ಕೆ 'ಕಾಂಗ್ರೆಸ್ಸಿನಿಂದ ಸಿಡಿದು ನಿಂತಿರುವ ಸುಭಾಸ್‌ಚಂದ್ರ ಭೋಸರಿಗೆ ರಾಷ್ಟ್ರವ್ಯಾಪಿ ಕಾಂಗ್ರೆಸ್ಸಿಗರು ಯಾವುದೇ ರೀತಿಯಿಂದ ಸಹಕರಿಸಬಾರದೆಂದು ಕರಪತ್ರ ಹೊರಡಿಸಿದರೂ, ನೀವು ಅವರನ್ನು ಸನ್ಮಾನಿಸುವ ಕಾರ್ಯಕ್ರಮಕ್ಕೆ ಹೋಗಿದ್ದೀರಿ. ಇದಕ್ಕೋಸ್ಕರ ನಿಮ್ಮ ಮೇಲೆ ಶಿಸ್ತಿನ ಕ್ರಮವನ್ನೇಕೆ ಕೈಕೊಳ್ಳಬಾರದು? ಎಂದು ನೋಟೀಸ್ ನೀಡಿದರು. ಇದಕ್ಕೆ ಮಹದೇವಪ್ಪ "ಸ್ವಾತಂತ್ರ್ಯದ ಅಪ್ರತಿಮ ಹೋರಾಟಗಾರರನ್ನು, ವೀರಾಗ್ರಣಿ ದೇಶ ಭಕ್ತರನ್ನು ಗೌರವಿಸಲು, ಸನ್ಮಾನಿಸಲು ಪಕ್ಷದ ಅನುಮತಿ ಪಡೆಯಬೇಕಾದ ಅವಶ್ಯಕತೆ ಇಲ್ಲ. ಊರಿಗೆ ಬಂದ ಸ್ವಾತಂತ್ರ್ಯ ವೀರರನ್ನು ಸನ್ಮಾನಿಸುವುದು ಪಕ್ಷದ ಉಲ್ಲಂಘನೆ ಆಗಲಾರದು. ಈ ಭಾವನೆಯನ್ನು ಕಾಂಗ್ರೆಸ್ಸು ಕಳೆದುಕೊಳ್ಳಬಾರದು. ಸಂಕುಚಿತ ಭಾವನೆ ಇರಿಸಿಕೊಂಡರೆ ಕಾಂಗ್ರೆಸ್ಸು ದುರ್ಬಲಗೊಳ್ಳುತ್ತದೆ ಎಂದು ಮಹದೇವಪ್ಪ ತಮ್ಮ ಎದೆಗಾರಿಕೆ ಹಾಗೂ ರಾಷ್ಟ್ರಪ್ರೇಮವನ್ನು ಕಾಂಗ್ರೆಸ್ಸಿಗೆ ತೋರಿಸಿ ಕೊಟ್ಟರು."[೨೦] ಕಾಂಗ್ರೆಸ್ ಕೂಡ ಈ ವಿಷಯವನ್ನು ಅಷ್ಟಕ್ಕೆ ಬಿಟ್ಟ ವಿವರವನ್ನು ಮತ್ತು ಮಹದೇವಪ್ಪನಿಗೆ ಇಷ್ಟವಿಲ್ಲದಿದ್ದರೂ ತಾಲೂಕು ಕಾಂಗ್ರೆಸ್ ನಾಯಕರ ಒತ್ತಾಯಕ್ಕೆ ೧೯೪೦ರಲ್ಲಿ ಹಾವೇರಿ ತಾಲೂಕು ಕಾಂಗ್ರೆಸ್ಸಿನ ಅಧ್ಯಕ್ಷರನ್ನಾಗಿ ನೇಮಿಸಿದ ಬಗ್ಗೆ ಮಹದೇವಪ್ಪನ ಸ್ನೇಹಿತ ಮತ್ತು ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಹೇಳಿಕೆಯಿಂದ ತಿಳಿದುಬರುತ್ತದೆ.

೧೯೪೨ರ **ಬ್ರಿಟಿಷರೇ ಭಾರತ ಬಿಟ್ಟು ತೊಲಗಿ** ಘೋಷಣೆ–ಇದು ಭಾರತೀಯ ಸ್ವಾತಂತ್ರ್ಯ ಚಳುವಳಿಯ ಮಹತ್ತರವಾದ ಮತ್ತು ಕೊನೆಯ ಪರಿಣಾಮಕಾರಿ ಅಸ್ತ್ರ. ಅದೊಂದು ಬಹಿರಂಗ

ಬಂಡಾಯವಾಗ ಬೇಕಿತ್ತು. ಕರ್ನಾಟಕ ಪ್ರಾಂತೀಯ ಕಮಿಟಿಯು ಅಧಿಕೃತವಾಗಿ ಕಾರ್ಯಕ್ರಮಗಳನ್ನು ಸಿದ್ಧಪಡಿಸಿತು. ತಾರು, ದೂರವಾಣಿ ತಂತಿಗಳನ್ನು ಕತ್ತರಿಸುವುದು ಮತ್ತು ಕಂಬಗಳನ್ನು ಉರುಳಿಸುವುದು, ಸೇಂದಿ, ಸರಾಯಿ ಅಂಗಡಿಗಳನ್ನು ಧ್ವಂಸಗೊಳಿಸುವುದು, ಪೊಲೀಸರ ಸಮವಸ್ತ್ರ ಹಾಗೂ ಬಂದೂಕುಗಳನ್ನು ಕಸಿದುಕೊಳ್ಳುವುದು ಇವೇ ಮೊದಲಾದ ಕಾರ್ಯಗಳಾಗಿದ್ದವು. ಒಟ್ಟಿನಲ್ಲಿ ಸರಕಾರಿ ಯಂತ್ರ ಕುಸಿಯುವಂತೆ ಏನೆಲ್ಲ ಮಾಡಲು ಸಾಧ್ಯವೋ ಅದನ್ನು ಮಾಡಬೇಕಿತ್ತು. ಆದರೆ ಈ ಕಾರ್ಯಕ್ರಮಗಳನ್ನು ಮಾಡುವಾಗ ಯಾರ ಜೀವಕ್ಕೂ, ಖಾಸಗಿ ಆಸ್ತಿಗೂ ಹಾನಿ ಮಾಡಬಾರದು, ಆಯುಧಗಳನ್ನು ಬಳಸಬಾರದು, ತಮ್ಮ ಪ್ರಾಣ ಕೊಡಬಹುದೇ ವಿನಃ ಇತರರನ್ನು ಹಿಂಸಿಸಬಾರದು"[೩೨] ಎಂದು ಪ್ರಾಂತಿಯ ಕಾಂಗ್ರೆಸ್ ತನ್ನ ಕಾರ್ಯ ಪಟ್ಟಿಯನ್ನು ಬಿಡುಗಡೆ ಮಾಡಿತು.

**ಅಹಿಂಸಾ ಮಹಾಯುದ್ಧಕ್ಕೆ ಸಜ್ಜಾದ ಮಹದೇವಪ್ಪ :** "ಗಾಂಧೀಜಿಯ **'ಮಾಡು ಇಲ್ಲವೇ ಮಡಿ'** ಆದೇಶವನ್ನು ಪಾಲಿಸಲು ಮಹದೇವಪ್ಪ ಮೈಲಾರ ನಿರ್ಧರಿಸಿದರು. ವಿಳಂಬ ಮಾಡದೇ ಆಗಸ್ಟ್ ೩೦ರಂದು ಬುರ್ಲಿ ಬಿಂದುಮಾಧವರನ್ನು ಕಂಡು ಚಳುವಳಿಯ ರೂಪುರೇಷೆ ಕುರಿತು ಚರ್ಚೆ ಮಾಡಿದರು. ಆಶ್ರಮದ ಉಸ್ತುವಾರಿಯನ್ನು ಪತ್ನಿ ಸಿದ್ದಮ್ಮಳಿಗೆ ವಹಿಸಿ ಮಹದೇವಪ್ಪ ಭೂಗತನಾಗಿ ಚಳುವಳಿಗೆ ಧುಮುಕಲು ನಿರ್ಧರಿಸಿದರು."[೩೩] ಇದು ಮಹದೇವಪ್ಪನ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತದೆ.

ಹೀಗೆ ರಾಷ್ಟ್ರೀಯ ಹೋರಾಟದಲ್ಲಿ ಸುಮಾರು ೨೪ ವಿಧಾಯಕ ಕಾರ್ಯಗಳನ್ನು ಮಾಡಿದ ಮಹದೇವಪ್ಪ ಹೊಸರಿತ್ತಿಯ ವೀರಭದ್ರೇಶ್ವರ ದೇವಸ್ಥಾನದಲ್ಲಿ ಇರಿಸಿದ್ದ ಕಂದಾಯ ಲೂಟಿ ಪ್ರಕರಣದಲ್ಲಿ ತನ್ನ ಸಹಚರರೊಂದಿಗೆ ಪೊಲೀಸರ ಗುಂಡಿಗೆ ಬಲಿಯಾಗುವುದರೊಂದಿಗೆ ಹುತಾತ್ಮನಾದನು. ಈ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಮಹದೇವಪ್ಪನವರ ಇತರ ಕಾರ್ಯಗಳ ಬಗ್ಗೆ ಅಧ್ಯಾಯ ನಾಲ್ಕರ ಭಾರತ ಬಿಟ್ಟು ತೊಲಗಿ ಚಳುವಳಿಗಳಲ್ಲಿ ವಿಶ್ಲೇಷಿಸಲಾಗಿದೆ.

**೧೦. ವೀರನಗೌಡ ಪಾಟೀಲ**

ಜನನ : ೧೮೮೮, ಕಚವಿ, ಹಿರೇಕೆರೂರು ತಾ॥

**'ಹರಿಜನೋದ್ಧಾರ ಕೂಡ ಸ್ವಾತಂತ್ರ್ಯ ಹೋರಾಟದ ಒಂದು ಭಾಗ,** ನಮಗೆ ಸ್ವಾತಂತ್ರ್ಯಕ್ಕಿಂತ ಮೊದಲು ಹರಿಜನರ ಏಳಿಗೆ ಮುಖ್ಯ. ಅದನ್ನು ಮೊದಲು ಮಾಡಿ' ಎಂದು ಗಾಂಧೀಜಿ ಹೇಳಿಕೆಯಂತೆ ತಮ್ಮ ಜೀವನದ ಗುರಿಯೆಂಬಂತೆ ಸ್ವೀಕರಿಸಿ, ಆ ಕಾರ್ಯವನ್ನು ಮಾಡಿ ತೋರಿಸಿದವರು ವೀರನಗೌಡ ಪಾಟೀಲ. ಇವರು ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದವರು.

**ಪ್ರಭಾವ :** ವೀರನಗೌಡ ಕಚವಿಯ ಪೊಲೀಸ್ ಪಾಟೀಲ ಮನೆತನದವರಾಗಿದ್ದರಿಂದ ಆರ್ಥಿಕವಾಗಿ ಅನುಕೂಲಸ್ಥರಿದ್ದು, ಓದಿಗಾಗಿ ಪುಣೆಯ ಕೃಷಿ ಕಾಲೇಜನ್ನು ಸೇರಿದವರು. ಶಿಕ್ಷಣ ಪಡೆಯುವಾಗ ಲೋಕಮಾನ್ಯ ತಿಲಕರು ಮಾಂಡಲಾ ಸೆರೆಮನೆಯಿಂದ ಬಿಡುಗಡೆಯಾಗಿ ಬಂದಿದ್ದರು.

ಅವರ ರಾಷ್ಟ್ರೀಯ ವೃತ್ತಿ, ಅವರ ಮೇಲೆ ಸಾಮಾನ್ಯ ಜನತೆ ಹೊಂದಿದ ಅಭಿಮಾನ ಕಂಡು ತಿಲಕರಿಗೆ ಆಕರ್ಷಿತರಾದರು.

ತಮ್ಮ ಶೈಕ್ಷಣಿಕ ಪ್ರವಾಸದ ಕಾಲದಲ್ಲಿ ಸಾಬರಮತಿಗೆ ಹೋಗಿ ಗಾಂಧೀಜಿಯ ಸರಳ ಉಡುಪು, ಸರಳ ಜೀವನದ ವಿಧಾನವನ್ನು ಕಂಡದ್ದು ಹಾಗೂ ಸಾಬರಮತಿಯಲ್ಲಿ ಗಾಂಧೀಜಿ ಹೇಳಿದ **'ನಾವು ಕಲಿತ ವಿದ್ಯೆಯು ಸಾರ್ಥಕವಾಗಬೇಕು, ಇದಾಗಬೇಕಾದರೆ ಭಾರತದ ಹಳ್ಳಿಗಳ ಏಳ್ಗೆಯತ್ತ ಗಮನಕೊಡುವುದು ಮುಖ್ಯ'**. ಎಂಬ ಮಾತುಗಳು ಇವರನ್ನು ಮತ್ತಷ್ಟು ರಾಷ್ಟ್ರೀಯತೆಗೆ ಸೆಳೆದವು.

**ಬ್ರಾಹ್ಮಣ-ಬ್ರಾಹ್ಮಣೇತರರ ಮಧ್ಯೆ :** "ರಾಷ್ಟ್ರನಾಯಕರ ಭೇಟಿ ಮಾಡಿ ಉತ್ಸಾಹದಿಂದಲೇ ಕರ್ನಾಟಕಕ್ಕೆ ಬಂದಾಗ ಅದರಲ್ಲಿಯೂ ಮುಂಬೈ ಕರ್ನಾಟಕದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರ ಮಧ್ಯೆ ದೊಡ್ಡ ಕಂದಕ ಎದ್ದುಕಾಣುತ್ತಿತ್ತು. ೧೯೩೦ರಲ್ಲಿ ಬ್ರಾಹ್ಮಣೇತರ ಸಮ್ಮೇಳನ ಜರುಗಿ ಅದರಲ್ಲಿ ಬಹುಸಂಖ್ಯಾತರು (ಲಿಂಗಾಯತರು) ಕಾಂಗ್ರೆಸ್ಸಿನಲ್ಲಿ ಸೇರಬಾರದೆಂದು ಘೋಷಿಸಿದರು. ಅಂದು ಬ್ರಾಹ್ಮಣೇತರ ನಾಯಕರುಗಳೆಂದರೆ- ಕಂಬಳಿ ಸಿದ್ದಪ್ಪ, ಎಸ್.ಎಸ್. ಅಂಗಡಿ, ರಾವ್ ಬಹಾದ್ದೂರು ಪಾಟೀಲ, ಸಿದ್ದಪ್ಪ ಹೊಸ್ಮನಿ ಇನ್ನೂ ಮುಂತಾದ ಗಣ್ಯವ್ಯಕ್ತಿಗಳು ಕಾಂಗ್ರೆಸ್ಸಿನಿಂದ ಹೊರಗಿದ್ದರು.

ಬಹುದೊಡ್ಡ ಸಮಾಜ ಸ್ವಾತಂತ್ರ್ಯ ಚಳುವಳಿಗೆ ಮುಂದಾಗದಿದ್ದರೆ ಈ ಭಾಗದಲ್ಲಿ ಸ್ವರಾಜ್ಯ ಆಂದೋಲನ ಮುನ್ನಡೆಯುವುದೆಂತು? ಇದನ್ನೆಲ್ಲ ಗಮನಿಸಿದ ಇವರು ಕರ್ನಾಟಕದ ಮಧ್ಯಭಾಗ ಹಾಗೂ ವ್ಯಾಪಾರಿ ಕೇಂದ್ರವಾದ ಹುಬ್ಬಳ್ಳಿಗೆ ಬಂದು ನೆಲೆಸಲು ನಿರ್ಧರಿಸಿದರು.

**ಕಾಂಗ್ರೆಸ್ಸಿಗೆ :** ೧೯೩೦ರಲ್ಲಿ ಕರಾಚಿ ಅಧಿವೇಶನಕ್ಕೆ ಹೋದಾಗ ವಲ್ಲಭಭಾಯಿ ಪಟೇಲರ ಕ್ಷೇತ್ರವಾದ 'ಬಾರ್ಡೋಲಿ'ಯಲ್ಲಿಯ ಪ್ರತ್ಯಕ್ಷ ಕಾರ್ಯ ಇವರಿಗೆ ಮತ್ತಷ್ಟು ಸ್ಫೂರ್ತಿ ನೀಡಿತು. ಅಲ್ಲಿಂದ ಹುಬ್ಬಳ್ಳಿಗೆ ಬಂದವರು ತಾವು ಕಾಂಗ್ರೆಸ್ ಸೇರಿರುವುದಾಗಿ ಘೋಷಿಸಿದರು. ವೀರನಗೌಡ ಪಾಟೀಲ ಕಾಂಗ್ರೆಸ್ ಸೇರ್ಪಡೆಯಿಂದ ಬಹುಸಂಖ್ಯಾತ ಸಮಾಜಕ್ಕೆ(ಲಿಂಗಾಯಿತ) ಆಶ್ಚರ್ಯಾಘಾತ ಗಳೆರಡೂ ಉಂಟಾದವು."[೨] ಇದು ಪಾಟೀಲರ ರಾಷ್ಟ್ರೀಯತೆಯ ದೃಢ ನಿರ್ಧಾರಕ್ಕೆ ಸಾಕ್ಷಿಯಾಗಿದೆ.

**ಕರ ನಿರಾಕರಣ ಚಳುವಳಿ :** ವಲ್ಲಭ ಭಾಯಿ ಪಟೇಲರ ಕ್ಷೇತ್ರದಲ್ಲಿ ಬಾರ್ಡೋಲಿಯಲ್ಲಿ ಸಂಘಟಿಸಿದ ರೀತಿಯನ್ನು ನೋಡಿದ ವೀರನಗೌಡ ಪಾಟೀಲ ತಾವು ಅಂತಹದ್ದೊಂದು ಕಾರ್ಯ ಮಾಡಬೇಕೆಂಬ ಆಶೆ ಇಟ್ಟುಕೊಂಡೇ ಕರ್ನಾಟಕಕ್ಕೆ ಬಂದಿದ್ದರು.

೧೯೩೦-೩೧ರಲ್ಲಿ ಹಿರೇಕೆರೂರು ಭಾಗದಲ್ಲಿ ಬರಗಾಲ ಪರಿಸ್ಥಿತಿ ತಲೆದೋರಿತ್ತು. ರೈತರು ತುಂಬಾ ತೊಂದರೆಗೊಳಗಾಗಿದ್ದು ತೆರಿಗೆ ಕಟ್ಟುವ ಶಕ್ತಿ ಇಲ್ಲದಾಯಿತು. "ಸರಕಾರ ಮಾತ್ರ ಜನರ ಆಸ್ತಿ, ದನಕರುಗಳನ್ನು ಲಿಲಾವು ಮಾಡಿ ತೆರಿಗೆ ವಸೂಲಿ ಮಾಡುವುದರಲ್ಲಿತ್ತು. ಈ ವೇಳೆಗೆ ಹಂಸಬಾವಿಗೆ ಆಗಮಿಸಿದ ಪಾಟೀಲರು ೬.೧.೧೯೩೧ರಂದು ಹಂಸಬಾವಿಯಲ್ಲಿ

ಟಿ.ಆರ್.ನೆಶ್ವಿ ಮತ್ತು ಹಲವು ಗ್ರಾಮಗಳ ಮುಖಂಡರನ್ನು ಸೇರಿಸಿ ಸಮಾಲೋಚಿಸಿದರು. ಆಣೆವಾರಿ ಸರಿಯಾಗಿ ನಡೆಸಿದರೆ ಬರುವ ತೊಂದರೆ ಕೆಲಮಟ್ಟಿಗಾದರೂ ನಿವಾರಿಸಿ ಕೊಳ್ಳಬಹುದೆಂದು ನಿರ್ಧರಿಸಿ ಆ ಹೊಣೆಯನ್ನು ಟಿ.ಆರ್.ನೆಶ್ವಿಗೆ ವಹಿಸಿದರು."[೨೫] ಟಿ.ಆರ್. ನೆಶ್ವಿ ತಮಗೆ ವಹಿಸಿದ ಕಾರ್ಯವನ್ನು ವ್ಯವಸ್ಥಿತವಾಗಿ ನಡೆಸಿದರು. ಹಿರೇಕೆರೂರು ಭಾಗದ ಕರ ನಿರಾಕರಣೆಯ ಚಳುವಳಿಯಿಂದಾಗಿ ೪೬,೦೦೦/-ರೂ ನೀರು ಸಾರಿಗೆ ಸೂಟ ಆಗಿದ್ದಕ್ಕೆ ಕಾರಣರಾಗಿದ್ದರಿಂದ ವೀರನಗೌಡ ಪಾಟೀಲರನ್ನು ತಾಲೂಕಿನ ರೈತರು 'ಸರದಾರ'ನೆಂದು ಅಭಿಮಾನದಿಂದ ಕರೆಯತೊಡಗಿದರು.

೧೯೩೪ರಲ್ಲಿ ಗಾಂಧೀಜಿ ಕರ್ನಾಟಕದಲ್ಲಿ ಹರಿಜನ ಪ್ರವಾಸವನ್ನು ಕೈಗೊಂಡಾಗ ವೀರನಗೌಡ ಪಾಟೀಲ ಅವರೊಂದಿಗೆ ಕಾರವಾರ, ಅಂಕೋಲಾ, ಶಿರಸಿ, ಸಿದ್ಧಾಪುರದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ನಂತರ ಹಾವೇರಿ ಭಾಗವನ್ನು ಪ್ರವೇಶಿಸಿದಾಗ ಹಾವೇರಿ, ಬ್ಯಾಡಗಿ, ಮೋಟೆಬೆನ್ನೂರು, ಕಾಕೋಳ ಮತ್ತು ರಾಣೆಬೆನ್ನೂರು ಭಾಗಗಳ ಜನತೆಗೆ ಗಾಂಧೀಜಿಯ ದರ್ಶನ ಮಾಡಿಸಿದರು. ಪ್ರವಾಸದ ಸಮಯದಲ್ಲಿ ಅವರ ಹರಿಜನ ಉದ್ಧಾರದ ಕಾರ್ಯಗಳಿಂದ ಪ್ರಭಾವಿತರಾದ ವೀರನಗೌಡ ಪಾಟೀಲ ಸ್ವಾತಂತ್ರ್ಯ ಚಳುವಳಿಗಿಂತ ಹೆಚ್ಚಾಗಿ ಹರಿಜನೋದ್ಧಾರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವಕಾಶ ಸಿಕ್ಕಾಗ ಮಾತ್ರ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗಿಯಾಗುತ್ತಿದ್ದ ಬಗ್ಗೆ ದೇವೇಂದ್ರಪ್ಪ ವಿಭೂತಿ ತಿಳಿಸಿರುವರು.

"೧೯೪೨ರಲ್ಲಿ ಮುಂಬೈಯಲ್ಲಿ ನಡೆದ ಸಭೆಗೆ ಎ.ಐ.ಸಿ.ಸಿಯ ಸದಸ್ಯರಾದ ವೀರನಗೌಡ ಪಾಟೀಲರು ಹೋಗಿದ್ದು ಅಲ್ಲಿ ಗಾಂಧೀಜಿ **'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ'** ಎಂದು ಗರ್ಜಿಸಿದರೆ, ಭಾರತೀಯರಿಗೆ ಸ್ವಾತಂತ್ರ್ಯಕ್ಕಾಗಿ **ಮಾಡು ಇಲ್ಲವೇ ಮಡಿ** ಎಂಬ ಕರೆಯನ್ನು ನೀಡಿದ್ದರಿಂದ ಸರಕಾರ ಅವರನ್ನು ಮತ್ತು ಎಲ್ಲ ರಾಷ್ಟ್ರೀಯ ನಾಯಕರನ್ನು ಬಂಧಿಸಿತು. ವೀರನಗೌಡರು ಅಲ್ಲಿಂದ ತಪ್ಪಿಸಿಕೊಂಡು ಭೂಗತರಾಗಿ ಸಂಚರಿಸುತ್ತ ಎಣ್ಣಿಕೊಪ್ಪ(ಹಿರೇಕೆರೂರು, ತಾ॥ ಹೊಂದಿಕೊಂಡಿರುವ ಗ್ರಾಮ)ದ ಮಲ್ಲಿಕಾರ್ಜುನಗೌಡರ ಮನೆಯಲ್ಲಿ ಗುಪ್ತ ಸಭೆಯನ್ನು ಮುಗಿಸಿಕೊಂಡು ಬರುವಾಗ, ಅರಣ್ಯ ಪ್ರದೇಶದಲ್ಲಿಯ ಕಟ್ಟಿಗೆಯನ್ನು ಸರಕಾರ ಲಾರಿಗಳಲ್ಲಿ ಸಾಗಿಸುತ್ತಿತ್ತು. ಅಲ್ಲಿಯ ಕಟ್ಟಿಗೆ ಅಡ್ಡೆಗಳಿಗೆ ಬೆಂಕಿ ಹಚ್ಚಿ ಹಿರೇಕೆರೂರು ತಾಲೂಕನ್ನು ಪ್ರವೇಶ ಮಾಡಿದರು.

**ಬಂಧನ ಮತ್ತು ಜೈಲು** : ೧೯೪೨ರ ಚಳುವಳಿಯಲ್ಲಿ ಹಳೆ ಹುಬ್ಬಳ್ಳಿಯಲ್ಲಿ ಒಂದು ಗುಪ್ತ ಸಭೆ ಮುಗಿಸಿಕೊಂಡು ಬರುವಾಗ ವೀರನಗೌಡ ಮತ್ತು ವೆಂಕಟೇಶ ಮಾಗಡಿಯನ್ನು ಬಂಧಿಸಿ ಹಿಂಡಲಗಾ ಜೈಲಿಗೆ ಕಳುಹಿಸಿದರು. ನಂತರ ೧೯೪೭ರವರೆಗೆ ನಾಸಿಕ್ ಜೈಲಿನಲ್ಲಿ ಇಡಲಾಯಿತು.

ಸ್ವಾತಂತ್ರ್ಯ ನಂತರ ೧೯೭೨(೧೦.೪.೧೯೭೨)ರಲ್ಲಿ ಸ್ತ್ರೀಯರ ಶಿಕ್ಷಣಕ್ಕಾಗಿ ವೀರನಗೌಡ ಪಾಟೀಲ ಶ್ರಮಿಸಿದ್ದಕ್ಕಾಗಿ ರಾಜ್ಯದ ಮುಖ್ಯಮಂತ್ರಿ ಕೆ.ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಸನ್ಮಾನ ಮಾಡಲಾಯಿತು. ಕೇಂದ್ರ ಸರಕಾರ ಇವರಿಗೆ 'ಪದ್ಮಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಸಿದೆ."[೨೬]

ಹೀಗೆ ಸ್ವಾತಂತ್ರ್ಯ ಚಳುವಳಿ ಮತ್ತು ಹರಿಜನೋದ್ಧಾರ ಕಾರ್ಯಗಳ ಮೂಲಕ ಗೌರವಕ್ಕೆ ಪಾತ್ರರಾದವರು.

**೧೧. ಮೆಣಸಿನಾಳ ತಿಮ್ಮನಗೌಡ್ರು**

'ದತ್ತೇಡಿ ಜನ ನೂರಾವಂದಕ್ಕೆ ಮುತ್ತಿನಂಥ ಒಬ್ಬ ಮಗ ಬರೋಬ್ಬರಿ, ತೊಟ್ಟು ಛಲದ ಕೈಮಿಕ್ಕಿ ಮಡಿದು ಹೋದ ತಿಮ್ಮನಗೌಡ ಮಿಡಿನಾಗರಮರಿ' ಇದು ಜಿಲ್ಲೆಯ ಖ್ಯಾತ ಲಾವಣಿಕಾರ ಸಮ್ಮದ್ ಸಾಹೇಬರು ಮೆಣಸಿನಾಳ ತಿಮ್ಮನಗೌಡರ ಹೋರಾಟದ ಚಿತ್ರಣವನ್ನು ಕುರಿತು ಹಾಡಿದ ಲಾವಣಿ.

ರಾಣೆಬೆನ್ನೂರು ತಾಲೂಕಿನ ಮೆಣಸಿನಾಳದಲ್ಲಿ ೧೯೧೧ರ ಅಕ್ಟೋಬರ್ ೮ ರಂದು ಹನುಮಗೌಡ–ನೀಲಮ್ಮ ದಂಪತಿಗಳ ಕೊನೆಯ(ಮೂರನೆ)ಮಗನಾಗಿ ಜನಿಸಿದರು. ಊರಲ್ಲಿ ಶಾಲೆ ಇರದ ಕಾರಣ ತುಮ್ಮಿನಕಟ್ಟೆಯಲ್ಲಿ ಏಳನೇ ತರಗತಿಯವರೆಗೆ ಶಿಕ್ಷಣ ಪಡದವರು.

**ಪ್ರೇರಣೆ** : ಇವರು ಏಳನೆಯ ತರಗತಿಯಲ್ಲಿರುವಾಗಲೇ ಗುರುಗಳಾದ ಬಸನಗೌಡ ಬಳ್ಳೂರು ಎಂಬುವವರು ದೇಶದ ಹಾಗೂ ಧಾರವಾಡ ಜಿಲ್ಲೆಯ ಚಳುವಳಿಗಳ ಬಗ್ಗೆ ವಿವರಿಸುತ್ತಿದ್ದರು. ಅಲ್ಲದೆ ಕಿತ್ತೂರಿನ ರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ನರಗುಂದದ ಬಾಬಾಸಾಹೇಬ, ಜಲಿಯನ್ ವಾಲಾಬಾಗ್ ಹತ್ಯಾಕಾಂಡ ಹೀಗೆ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹನೀಯರ ಬಗ್ಗೆ ಮತ್ತು ಘಟನೆಗಳನ್ನು ಕುರಿತು ಮನಮುಟ್ಟುವಂತೆ ಹೇಳುತ್ತಿದ್ದು, ನಂತರದಲ್ಲಿ ಇವರು ತಮ್ಮ ಭಾಗದ ಟಿ.ಆರ್.ನೆಶ್ವಿ, ವೀರನಗೌಡ ಪಾಟೀಲ, ಕೆ.ಎಫ್. ಪಾಟೀಲ್, ವೀರಭದ್ರಪ್ಪ ನ್ಯಾಮತಿ, ಹೇಮಣ್ಣ ಅಂಗಡಿ ಮೊದಲಾದ ಚಳುವಳಿಗಾರರ ಬಗ್ಗೆ ತಿಳಿದುಕೊಂಡಿದ್ದರು.

**ಆರಿಕಟ್ಟಿ ಜಂಗಲ್ ಸತ್ಯಾಗ್ರಹ** : ಹಿರೇಕೆರೂರು ತಾಲೂಕಿನ ನಾಗವಂದದ ಹತ್ತಿರ ಆರಿಕಟ್ಟಿ ಜಂಗಲ್ ಬ್ರಿಟಿಷ್ ಸರಕಾರದ ನಿಷೇಧಿತ ಅರಣ್ಯವಾಗಿತ್ತು. ಗಾಂಧೀಜಿ ಕಾನೂನು ಭಂಗ ಚಳುವಳಿಗೆ ಕರೆ ನೀಡಿದಾಗ ಸ್ನೇಹಿತರಾದ ತುಳಜಪ್ಪ ಸಣ್ಣಬೊಮ್ಮಜ್ಜಿ, ಸಿದ್ದಪ್ಪ ನವಾತಿ, ಕೂಸಗಟ್ಟಿ ಹನುಮಣ್ಣ, ಸಿದ್ದಪ್ಪ ಕೂಸಗಟ್ಟಿ, ಪುಟ್ಟರೆಡ್ಡಿ ಬಲ್ಲೂರು ಮೊದಲಾದವರೊಂದಿಗೆ ಮುಕ್ಕಾಲು ಭಾಗ ಅರಣ್ಯ ನಾಶ ಮಾಡಿದರು. ಎಲ್ಲರನ್ನು ಬಂಧಿಸಲಾಗಿ ಹಿರೇಕೆರೂರು ನ್ಯಾಯಾಲಯದಲ್ಲಿ ಇವರೆಲ್ಲರೂ ತಮ್ಮ ಕಾರ್ಯಗಳನ್ನು ಒಪ್ಪಿಕೊಂಡಿದ್ದರಿಂದ ಕೇಸ್ ನಂ.೬/೧೯೩೨ ನೇದ್ದರಲ್ಲಿ ಇವರಿಗೆ ೨ ವರ್ಷ ಶಿಕ್ಷೆ ಹಾಗೂ ೫೦ ರೂ. ದಂಡ ವಿಧಿಸಿದ ಬಗ್ಗೆ ಶಿವನಗೌಡ ಮರಿಗೌಡ್ರ(ತಿಮ್ಮನಗೌಡರ ತಂಡದ ಸದಸ್ಯ) ವಿವರಿಸುವರು.

**ಯರವಡಾ ಜೈಲಿಗೆ** : "ಯರವಡಾ ಜೈಲಿನಲ್ಲಿ ಉತ್ತರ ಭಾರತದ ಚಳುವಳಿಗಾರರಿಂದ ಹಿಂದಿ ಭಾಷೆಯನ್ನು, ಚರಕದಿಂದ ನೂಲು ತೆಗೆಯುವದು ಮತ್ತು ನೇಯುವುದನ್ನು ಕಲಿತುಕೊಂಡರು. ಇವರು ಬಿಡುಗಡೆಯಾಗಿ ತುಮ್ಮಿನಕಟ್ಟೆಗೆ ಬಂದಾಗ ಇವರಿಗೂ ಭಾರೀ ಮೆರವಣಿಗೆಯಿಂದ ಸ್ವಾಗತಿಸಲಾಯಿತು.

**ಸುಭಾಸ್‌ಚಂದ್ರ ಭೋಸ್ ಭಾಷಣ** : ಬ್ಯಾಡಗಿಯಲ್ಲಿ ಸುಭಾಸ್ ಚಂದ್ರ ಭೋಸ್‌ರ ಭಾಷಣವಿದೆ ಎಂಬ ಸುದ್ದಿ ತಿಳಿದು ತಿಮ್ಮನಗೌಡರು ಬ್ಯಾಡಗಿ ಕಂಡು ಸುಭಾಸ್‌ರ ಭಾಷಣ ಕೇಳಿದ ನಂತರ ತಮ್ಮನ್ನು ಸಂಪೂರ್ಣವಾಗಿ ಚಳುವಳಿಗೆ ಅರ್ಪಿಸಿಕೊಂಡರು."[೨೭]

**ಚಲೇಜಾವ್ ಚಳುವಳಿ** : ೧೯೪೨ ಚಳುವಳಿ ಸಮಯದಲ್ಲಿ ತುಮ್ಮಿನಕಟ್ಟಿಯಲ್ಲಿ ತಿಮ್ಮನಗೌಡರ ನಾಯಕತ್ವದಲ್ಲಿ ಮೆರವಣಿಗೆ ಹೊರಟು **'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ'** ಎಂಬ ಘೋಷಣೆಗಳು ಮೊಳಗಹತ್ತಿದವು. ಪೊಲೀಸರು ಬಂಧಿಸಲು ಬರುತ್ತಿದ್ದಂತೆ ತಿಮ್ಮನಗೌಡರ ತಂಡ ಸಿಗದೇ ಮಾಯವಾಗುತ್ತಿತ್ತು.

**ತಾಯಿಗೆ ಜವಾಬ್ದಾರಿ** : ಮನೆಯ ಜವಾಬ್ದಾರಿಯನ್ನು ತಮ್ಮ ತಾಯಿಗೆ ವಹಿಸಿ, ಅಂದು ರಾತ್ರಿಯೇ ಊರಜನರನ್ನು ಸೇರಿಸಿದರು. ಲೇವಾದೇವಿ ವ್ಯವಹಾರ ಮಾಡುತ್ತಿದ್ದ ಇವರು ರೈತರಿಗೆ ಕೊಟ್ಟ ಹಣಕ್ಕಾಗಿ ಸಾಲಪತ್ರ ಬರೆಸಿಕೊಂಡಿದ್ದ ಎಲ್ಲ ಕಾಗದ ಪತ್ರಗಳನ್ನು ಅವರೆದುರು ಹರಿದು ಹಾಕಿದರು. ನೀವು ಯಾರು ನನಗೆ ನಾ ಕೊಟ್ಟ ಹಣ ಕೊಡುವುದು ಬೇಡ. ಅಲ್ಲದೇ ನೀವುಗಳು ನನ್ನಲ್ಲಿಟ್ಟಿರುವ ಬಂಗಾರ, ಬೆಳ್ಳಿ ಒಡವೆಗಳನ್ನು ತೆಗೆದುಕೊಂಡು ಹೋಗಿ ಎಂದು ಸುಮಾರು ೪೦,೦೦೦ ರೂ. ಗಳ ಸಾಲಪತ್ರಗಳನ್ನು ಹರಿದು ಹಾಕಿದ ಬಗ್ಗೆ ಚಳುವಳಿಗಾರ ಸಿದ್ದಪ್ಪ ನವಾತಿ ಸಂದರ್ಶನದಲ್ಲಿ ತಿಳಿಸಿದ್ದು ತಿಮ್ಮನಗೌಡ ಹೋರಾಟಕ್ಕಾಗಿ ತನ್ನ ವ್ಯಾಪಾರಿ ವೃತ್ತಿಯನ್ನು ಬಿಟ್ಟು ಪೂರ್ಣಪ್ರಮಾಣದ ಚಳುವಳಿಗಾರರಾಗಿರುವುದನ್ನು ಗುರುತಿಸಲಾಗಿದೆ.

**ತಮ್ಮದೇ ತಂಡ ಕಟ್ಟಿದರು** : ತಿಮ್ಮನಗೌಡರ ನಾಯಕತ್ವದಲ್ಲಿ ಇರುವ ಪ್ರಮುಖ ಚಳುವಳಿ ಗಾರರೆಂದರೆ-ಶಿವಣ್ಣ ನೆಶ್ವಿ, ತಿರುಕಪ್ಪ ಹುಯ್ಯಪ್ಪನವರ, ವೀರಪ್ಪ ಹಂಚಿನ ಮನೆ, ಶ್ರೀರಾಯಚೋಟಪ್ಪ ಚನ್ನಪ್ಪ ಹಾವೇರಿ, ವೆಂಕಪ್ಪ ದೊಡ್ಮನಿ, ಲಕ್ಷ್ಮಣ ವಡ್ಡರಹಳ್ಳಿ, ವೆಂಕಪ್ಪ ಶೇತ್ಸನದಿ, ಚನ್ನಬಸಪ್ಪ ವಾಸನದ, ಮಲ್ಲೇಶಪ್ಪ ಬಣಕಾರ, ಜಯದೇವ ಚಿಕ್ಕೇರಿ, ದೇಸಾಯಿ ಸೂಡಂಬಿ, ಶಿವಪ್ಪ ತಳವಾರ, ತಡಕನಹಳ್ಳಿಯ ಗಂಗನಗೌಡ ಪಾಟೀಲ, ಬಾಲಪ್ಪನವರ ಮಾಸ್ತರು, ಶ್ರೀಪತಿ ಅಂತರವಳ್ಳಿ, ಮಾಸೂರಿನ ವೀರಭದ್ರಪ್ಪ ನ್ಯಾಮತಿ, ಶಿವನಗೌಡ ಮರಿಗೌಡ್ರ, ಹೊಳಿಯಪ್ಪ ಬ್ಯಾಳಿ, ಬಲ್ಲೂರು ವೀರಣ್ಣ, ಭೀಮಣ್ಣ ಓಲೇಕಾರ, ಪುಟ್ಟರಡ್ಡಿ ಬಲ್ಲೂರು, ಸಿದ್ದಪ್ಪ ನವಾತಿ ಮೊದಲಾದ ತರುಣರ ಗುಂಪನ್ನು ಕಟ್ಟಿಕೊಂಡು ವಿಧ್ವಂಸಕ ಕಾರ್ಯಗಳಿಗೆ ನಿರ್ಧರಿಸಿದ ಬಗ್ಗೆ ಆ ಭಾಗದ ಚಳುವಳಿ ಗಾರರಿಂದ ತಿಳಿದುಬರುತ್ತದೆ.

**ಪ್ರಮುಖ ವಿಧಾಯಕ ಕಾರ್ಯಗಳು** : * ವೀರಭದ್ರಪ್ಪ ನ್ಯಾಮತಿ ಬುಲೆಟಿನ್ ಹಂಚುವುದರಲ್ಲಿ ಚಾಣಾಕ್ಷನಾಗಿದ್ದರಿಂದ ಆ ಕಾರ್ಯವನ್ನು ಅವರಿಗೆ ವಹಿಸಿದರು. ಅವರಿಗೆ ತುಮ್ಮಿನಕಟ್ಟಿ ರಾಮಚಂದ್ರಪ್ಪ ಸಹಾಯಕ್ಕೆ ನಿಂತರು. * ಮೈಲಾರ ಮಹದೇವಪ್ಪ, ಸಂಗೂರು ಕರಿಯಪ್ಪ ಮತ್ತು ಮೆಣಸಿನಾಳ ತಿಮ್ಮನಗೌಡರ ನೇತೃತ್ವದಲ್ಲಿ ಹರಿಹರ-ಹರಪನಹಳ್ಳಿ ಮಧ್ಯದದಲ್ಲಿ ೧೯೪೨ ಆಗಸ್ಟ್‌ನಲ್ಲಿ ಟಪಾಲು ಲೂಟಿ ಮಾಡಲಾಯಿತು. ಇವರಿಗೆ ಸಂಬಂಧಿಸಿದ ವಿದಾಯಕ ಕಾರ್ಯ ಗಳನ್ನು ಅಧ್ಯಾಯ ನಾಲ್ಕರ ಚಲೇಜಾವ್ ಚಳುವಳಿಯಲ್ಲಿ ವಿವರಿಸಲಾಗಿದೆ.

**ಜಿಲ್ಲಾಧಿಕಾರಿಯ ಆದೇಶ :** ತಿಮ್ಮನಗೌಡರ ತಂಡ ಮಾಡುತ್ತಿರುವ ಭೂಗತ ಕಾರ್ಯಗಳು ಮತ್ತು ಆ ತಂಡದ ಸದಸ್ಯರು ಪೊಲೀಸರಿಗೆ ಸಿಗದ ಕಾರಣ ಗಂಭೀರವಾಗಿ ಪರಿಗಣಿಸಿದ ಜಿಲ್ಲಾಧಿಕಾರಿ ತಿಮ್ಮನಗೌಡರನ್ನು ಹಿಡಿದು(ಹೆಣವಾದರೂ ಸರಿ) ಕೊಟ್ಟವರಿಗೆ ೨,೦೦೦ ರೂ.ಗಳ ಬಹುಮಾನ ಸಾರಿದರು. ಅಲ್ಲದೆ ತಿಮ್ಮನಗೌಡರಿಗೆ ಸೇರಿದ ೮೦ ಎಕರೆ ಜಮೀನು ಹಾಗೂ ಜಮೀನಿನ ಬೆಳೆಯು ಸರಕಾರಕ್ಕೆ ಸೇರಿದ್ದೆಂದು ಆದೇಶ ಹೊರಡಿಸಿದರು. ಸರಕಾರದ ಆದೇಶ ತಿಳಿಯುತ್ತಿದ್ದಂತೆ ತಿಮ್ಮನಗೌಡರು ಊರ ಜನತೆಯನ್ನು ಸೇರಿಸಿ 'ನನ್ನ ೮೦ ಎಕರೆಯ ಬೆಳೆ ಸರಕಾರದ ಪಾಲಾಗುವ ಮೊದಲು ನೀವೆಲ್ಲರೂ ಆ ಬೆಳೆಯನ್ನು ತೆಗೆದುಕೊಳ್ಳಬೇಕು. ಸರಕಾರಕ್ಕೆ ಒಂದು ಕಾಳು ಸಿಗಬಾರದು' ಎಂದು ಹೇಳಿ ಊರ ಜನತೆಗೆ ತಮ್ಮ ಹೊಲದ ಬೆಳೆಯನ್ನು ಸಿಗುವಂತೆ ಮಾಡಿದರು.

**ಮೆಣಸಿನಾಳ ಮತ್ತು ತುಮ್ಮಿನಕಟ್ಟೆಗೆ ಮಿಲಿಟರಿ ಪಡೆ :** ತಿಮ್ಮನಗೌಡರು ಮತ್ತು ಅವರ ತಂಡದ ಭೂಗತ ಕಾರ್ಯಗಳನ್ನು ತಡೆಗಟ್ಟಲು ಮತ್ತು ಅವರನ್ನು ಹಿಡಿಯಲೇಬೇಕೆಂದು ಸರಕಾರ ಮಿಲಿಟರಿ (ಆಸ್ಟ್ರೇಲಿಯನ್ ಪಡೆ)ಪಡೆಯನ್ನು ಕಳುಹಿಸಿಕೊಟ್ಟಿತು. ಈ ಪಡೆ ತುಮ್ಮಿನಕಟ್ಟಿ ಮತ್ತು ಮೆಣಸಿನಾಳದಲ್ಲಿ ಸಿಕ್ಕ ಸಿಕ್ಕವರನ್ನು ಹಿಡಿದು ಚಿತ್ರಹಿಂಸೆ ನೀಡಿತ್ತು; ಆದರೂ ಯಾರು ಆ ತಂಡದ ಸುಳಿವನ್ನು ನೀಡಲಿಲ್ಲ. ಮಿಲಿಟರಿ ಮತ್ತು ಪೊಲೀಸರು ದರ್ಪ ತೋರಿದ್ದು ಸಾಮಾನ್ಯರಿಗೆ ಮತ್ತಷ್ಟು ಸರಕಾರದ ಮೇಲೆ ಕೋಪಬರುವಂತೆ ತಿಮ್ಮನಗೌಡರ ತಂಡಕ್ಕೆ ಬೆಂಬಲ ನೀಡುವಂತೆ ಪ್ರೇರೇಪಿಸಿತು. ತಿಮ್ಮನಗೌಡರ ತಾಯಿ ಹಾಗೂ ಸಹೋದರರನ್ನು ಬಂಧಿಸಿ ನಾಲ್ಕಾರು ದಿನ ಜೈಲಿನಲ್ಲಿ ಇರಿಸಲಾಯಿತು.

ಮಿಲಟರಿ ಮತ್ತು ಪೊಲೀಸರ ದರ್ಪ ಕೇಳಿದ ತಿಮ್ಮನಗೌಡರು ಭೂಗತ ಕಾರ್ಯಗಳನ್ನು ಹೆಚ್ಚಿಸಿದರು. ತುಮ್ಮಿನಕಟ್ಟಿಯಲ್ಲಿ ಪೊಲೀಸ್ ಕ್ವಾಟರ್ಸ್‌ಗೆ ಮತ್ತು ಹೊನ್ನಾಳಿ ಪೊಲೀಸ್ ಠಾಣೆಗೆ, ಕಡೂರಿನ ಚಾವಡಿಗೆ, ರಟ್ಟಿಹಳ್ಳಿ ಪ್ರವಾಸಿ ಮಂದಿರಕ್ಕೆ ಬೆಂಕಿ ಹಚ್ಚಿದರು.

**ಮಾರುವೇಷ ಧರಿಸಿದುದು :** ರಟ್ಟಿಹಳ್ಳಿಯ ಪೊಲೀಸ್ ಠಾಣೆಯಿಂದ ೫ ರೈಫಲ್ ಅಪಹರಿಸಿದ ನಂತರ ತಿಮ್ಮನಗೌಡರು ನಾಗವಂದದ ಬಣಕಾರರ ಮನೆಯಲ್ಲಿದ್ದಾರೆ ಎಂಬ ಸುಳಿವಿನ ಮೇಲೆ ಪೊಲೀಸರು ಅವರ ಮನೆಗೆ ನುಗ್ಗಿದರು. ತಿಮ್ಮನಗೌಡರ ಸೀರೆಯುಟ್ಟು ರೊಟ್ಟಿ ಬಡಿಯುತ್ತ ಪೊಲೀಸರನ್ನು ಯಾಮಾರಿಸಿದರು. ಹಗಲು ತುಮ್ಮಿನಕಟ್ಟಿಯ ಪೊಲೀಸ್ ಠಾಣೆ ಎದುರು ಮುಸ್ಲಿಂ ಮಹಿಳೆಯಂತೆ ಬುರ್ಖಾ ಧರಿಸಿ ತಮ್ಮ ಊರಿಗೆ ಹೋಗಿ ಬರುತ್ತಿದ್ದರು. ಒಮ್ಮೆ ಪೊಲೀಸರಿಗೆ ಸುಳಿವು ಸಿಕ್ಕು ಅವರನ್ನು ಪೊಲೀಸರು ಬೆನ್ನಟ್ಟಿದಾಗ ಫತ್ತೇಪುರದವರೆಗೂ ಓಡಿ ನಾಟಕದ ತಾಲೀಮಿನ ಮನೆ ಸೇರಿ ಸ್ತ್ರೀ ವೇಷಧಾರಿಯಾಗಿ ತಾಲೀಮು ಮಾಡುತ್ತಿದರು. ಇವರು ದೊಡ್ಡಾಟದಲ್ಲಿ ಪರಿಣತರಾಗಿದ್ದರು. ಅಲ್ಲಿಯೂ ಪೊಲೀಸರಿಗೆ ಇವರು ಸಿಗಲಿಲ್ಲ.

**ಕುಪ್ಪೇಲೂರು ಹಫ್ತಾಲೂಟಿ ಘಟನೆ :** (೧೮.೨.೧೯೪೩) ಈ ಘಟನೆಯ ವಿವರವನ್ನು ಅಧ್ಯಾಯ ನಾಲ್ಕರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ವಿವರಿಸಲಾಗಿದೆ. ಈ ಘಟನೆಯಲ್ಲಿ

ತಿಮ್ಮನಗೌಡರು ಸಾವನ್ನಪ್ಪಿದರು. ಇವರ ಶವಪರೀಕ್ಷೆ ಮಾಡಿ ರಾಣೆಬೆನ್ನೂರಿನ ಕೋರ್ಟ್ ಹಿಂಭಾಗದಲ್ಲಿಯ ರುದ್ರಭೂಮಿಯಲ್ಲಿ ಸಮಾಧಿ ಮಾಡಲಾಯಿತು. ಶ್ರೀಮಂತಿಕೆಯಲ್ಲಿ ಹುಟ್ಟಿ ಸುಖ-ಸುಪ್ಪತ್ತಿಗೆಯನ್ನು ತ್ಯಾಗ ಮಾಡಿ ದೇಶಕ್ಕಾಗಿ ಹೋರಾಡಿ 'ಮಾಡು ಇಲ್ಲವೇ ಮಡಿ' ಮಂತ್ರವನ್ನು ಪಾಲಿಸಿ ಅಮರರಾದ ಬಗೆಗೆ ತಂಡದ ಸದಸ್ಯ ಶಿವನಗೌಡ ಮರಿಗೌಡ್ರ ಮತ್ತು ಸಿದ್ದಪ್ಪ ನವಾತಿ ಸಂದರ್ಶನದ ಹೇಳಿಕೆಯಿಂದ ಹೆಚ್ಚಿನ ವಿವರಗಳು ತಿಳಿದುಬರುತ್ತವೆ.

೧೨. **ಸಿದ್ದಪ್ಪ ಹೊಸಮನಿ** : ಜನನ; ೧೮೯೦, ಡಿಸೆಂಬರ್ ೧೩. ಊರು-ಕರ್ಜಗಿ

ಇವರು ಪ್ರಾಥಮಿಕ ಶಿಕ್ಷಣ ಕರ್ಜಗಿಯಲ್ಲಿ, ಬಿ.ಎ. ಪುಣೆಯ ಡೆಕ್ಕನ್ ಕಾಲೇಜ್ ಮತ್ತು ಎಲ್.ಎಲ್.ಬಿ ಮುಂಬೈನಲ್ಲಿ ಮುಗಿಸಿದವರು. ೧೯೦೮ರಿಂದ ಹಾವೇರಿಯಲ್ಲಿ ವಕೀಲ ವೃತ್ತಿ ಆರಂಭಿಸಿದ ಇವರು ಬಡವರ ವಕೀಲರೆಂದು ಖ್ಯಾತಿ ಪಡೆದವರು.

ಸಿದ್ದಪ್ಪ ಹೊಸಮನಿ ಸ್ವಾತಂತ್ರ್ಯ ಚಳುವಳಿಯಲ್ಲಿ ಬ್ರಾಹ್ಮಣೇತರ ಪಕ್ಷದಲ್ಲಿ ಗುರುತಿಸಿಕೊಂಡವರು. ಇಡೀ ದೇಶದಲ್ಲಿ ಮತ್ತು ಜಿಲ್ಲೆಯಲ್ಲಿ ನಡೆದ ಉಪ್ಪಿನ ಸತ್ಯಾಗ್ರಹ ಕಾಲಕ್ಕೆ(೧೯೨೯-೧೯೩೦)ಕಾಂಗ್ರೆಸ್ ಸೇರಿದವರು. ಕಾಂಗ್ರೆಸಿಗೆ ಸೇರುವ ಪೂರ್ವದಲ್ಲಿ ಇವರು ಇಂಗ್ಲಿಷರ ಪರವೆಂದು ಹೇಳಲಾಗದು- ೧೯೨೨ರಿಂದ ೧೯೩೨ರವರೆಗೆ ಹಾವೇರಿಯ ಮುನಿಸಿಪಾಲಿಟಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದವರು. ಆ ಅವಧಿಯಲ್ಲಿ ನೌಕರ ವರ್ಗದವರು ಇವರ ಹತ್ತಿರ ಬಂದು 'ಸರ್ ಇಂದು ಕಲೆಕ್ಟರ್ ಸಾಹೇಬರು ಬರುತ್ತಾರೆ' ಎಂದು ಭಿನ್ನವಿಸಲು, ಅದಕ್ಕೆ ಪ್ರತಿಯಾಗಿ ಸಿದ್ದಪ್ಪ ಹೊಸಮನಿ ಆಫೀಸನಲ್ಲಿ ನನ್ನದೇನು ಕೆಲಸ? ಕಾಗದ ಪತ್ರಗಳಿವೆ, ಅಧಿಕಾರಿಗಳಿದ್ದಾರೆ. ನೋಡಿಕೊಂಡು ಹೋಗಲು ತಿಳಿಸಿರಿ ಎಂದು ಹೇಳುವ ಮೂಲಕ ಸಿದ್ದಪ್ಪನವರ ಕಳಂಕರಹಿತ ಆಡಳಿತ ಮತ್ತು ಎಂಥವರಿಗೂ ತಲೆಬಾಗದ ಅವರ ವ್ಯಕ್ತಿತ್ವ ಎಂಬುದು ತಿಳಿದುಬರುತ್ತದೆ.

ಸಿದ್ದಪ್ಪ ಹೊಸಮನಿಯ ಮತ್ತೊಂದು ಸಾಧನೆಯೆಂದರೆ, ಇಡೀ ಹಿಂದುಸ್ಥಾನದಲ್ಲಿಯೇ ಮೊದಲನೇ ಬಾರಿಗೆ ಮುನಿಸಿಪಾಲಿಟಿಯಲ್ಲಿ ಠರಾವು ಪಾಸು ಮಾಡಿ ರಾಷ್ಟ್ರಧ್ವಜವನ್ನು ಹಾವೇರಿಯ ಮುನಿಸಿಪಾಲಿಟಿ ಆಫೀಸಿನ ಮೇಲೆ ಹಾರಿಸಿದ್ದು. ಅದಕ್ಕಾಗಿ ೧೯೩೨ರಲ್ಲಿ ಹಿಂದೂಸ್ಥಾನ ಸಂರಕ್ಷಣ ಕಾಯಿದೆ ಅಡಿಯಲ್ಲಿ ಇವರನ್ನು ಜಿಲ್ಲಾ ಮ್ಯಾಜಿಸ್ಟ್ರೇಟರು ಜಿಲ್ಲೆಯ ಹದ್ದನ್ನು ಬಿಟ್ಟು ಹೊರಗೆ ಹೋಗಬಾರದೆಂದು, ಪ್ರತಿದಿನ ಎರಡು ಬಾರಿ ಪೊಲೀಸ್ ಸ್ಟೇಷನ್‌ಗೆ ಹಾಜರಿ ಕೊಡಬೇಕೆಂದು ನಿರ್ಬಂಧ ಹೇರಿದರು. ಆದರೆ ಸಿದ್ದಪ್ಪ ಆ ಅವಮಾನಕರವಾದ ಆಜ್ಞೆಯನ್ನು ಉಲ್ಲಂಘಿಸಿದರು. ಹಾಗಾಗಿ ಇವರಿಗೆ ಒಂದು ವರ್ಷ ಜೈಲುಶಿಕ್ಷೆ ವಿಧಿಸಲಾಯಿತು. ಇವರಿಗೆ ಜೈಲಿನಲ್ಲಿ 'ಬಿ'ಕ್ಲಾಸ್ ಕೊಠಡಿ ನೀಡಿ, ಜೊತೆಗಾರರನ್ನು 'ಸಿ' ಕ್ಲಾಸ್‌ನಲ್ಲಿ ಇಟ್ಟರು. ಆದರೆ ಸಿದ್ದಪ್ಪ ಹೊಸಮನಿ ತಮ್ಮ ಜೊತೆಗಾರರೊಂದಿಗೆ 'ಸಿ' ಕ್ಲಾಸ್ ಕೊಠಡಿಯಲ್ಲಿ ತಮ್ಮ ಬೆಳಗಾವಿಯ ಹಿಂಡಲಗಾ ಜೈಲಿನಲ್ಲಿಯ ಶಿಕ್ಷೆಯನ್ನು ಮುಗಿಸಿದರು. ಜೈಲಿನಲ್ಲಿ ಸಿದ್ದಪ್ಪ ತಾವು ಆಗರ್ಭ ಸಿರಿವಂತರಿದ್ದರೂ ತಮ್ಮ ಜೊತೆಗಾರರೊಂದಿಗೆ ಇರಲು ನಡೆದುಕೊಂಡ ರೀತಿ ಅವರ ನಾಯಕತ್ವದ ಗುಣಕ್ಕೆ ಸಾಕ್ಷಿಯಾದ ವಿವರ ನೆಗಳೂರಿನ ಚಳುವಳಿಗಾರರ ಪರಮಣ್ಣ ಹರಕ್ಕಂಗಿಯಿಂದ ತಿಳಿದುಬಂದಿದೆ.

೧೯೩೯ರ ವೇಳೆಗೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿಯು ಇವರನ್ನು ಅಧ್ಯಕ್ಷರನ್ನಾಗಿ ನೇಮಿಸಿತು. ನಂತರದ ರಾಜಕೀಯ ಬೆಳವಣಿಗೆಯಲ್ಲಿ ಅಧ್ಯಕ್ಷ ಪದವಿಯಯನ್ನು ಧಿಕ್ಕರಿಸಿ ಸುಭಾಸ್‌ಚಂದ್ರ ಭೋಸರು ಹೊಸದಾಗಿ ಸ್ಥಾಪಿಸಿದ್ದ **'ಫಾರ್ವರ್ಡ್ ಬ್ಲಾಕ್'** ಸೇರಿ ಕರ್ನಾಟಕ ಪ್ರಾಂತದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡರು."[೩೮] ಇವರ ಈ ಕಾರ್ಯದಲ್ಲಿ ಆ ಸಂಸ್ಥೆಗಾಗಿ ಕೈ ಜೋಡಿಸಿದವರೆಂದರೆ ಬೆಳಗಾವಿಯ ಎ.ಎ. ಮಂಡಗಿ ಹಾಗೂ ಕೆ.ಎಫ್.ಪಾಟೀಲ್ ಒಡಗೂಡಿ 'ಫಾರ್ವರ್ಡ್ ಬ್ಲಾಕ್' ಸಂಸ್ಥೆಯನ್ನು ಪ್ರಭಾವಪೂರ್ಣವಾಗಿ ಸಂಘಟಿಸಿದರು.

ಒಟ್ಟಾರೆಯಾಗಿ ಪ್ರಮುಖ ಚಳುವಳಿಕಾರರು ಜಿಲ್ಲೆಯಲ್ಲಿ ಚಳುವಳಿಯನ್ನು ವಿಸ್ತರಿಸಲು ಖಾದಿ ಹಾಗೂ ಕಾಂಗ್ರೆಸ್ ಪ್ರಚಾರರೊಂದಿಗೆ ಹಲವು ರೀತಿಯಲ್ಲಿ ಸಮಾಜಮುಖಿ ಕಾರ್ಯಗಳೊಂದಿಗೆ ಜನ-ಸಾಮಾನ್ಯರನ್ನು ತಲುಪಿದ್ದು ತಮ್ಮ ವ್ಯಕ್ತಿತ್ವ ಹಾಗೂ ಭಾಷಣಗಳಿಂದ ಪ್ರೇರಕರಾಗಿ ರಾಷ್ಟ್ರೀಯತೆಯ ಜ್ವಾಲೆಯು ಜಿಲ್ಲೆಯನ್ನು ವ್ಯಾಪಿಸುವಂತೆ ಮಾಡಿದ ಚಳುವಳಿಯ ನಾಯಕರುಗಳ ಕಾರ್ಯಗಳೊಂದಿಗೆ ಸ್ಪಷ್ಟಪಡಿಸಲಾಗಿದೆ.

### ೫.೨. ಮಹಿಳಾ ಹೋರಾಟಗಾರರು

ಚಳುವಳಿ, ಹೋರಾಟಗಳು ಪುರುಷರಿಗೆ ಮಾತ್ರ ಎಂಬ ಸಾಮಾಜಿಕ ವ್ಯವಸ್ಥೆಯಲ್ಲಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರ ಹೋರಾಟದ ಹೆಜ್ಜೆಯ ಗುರುತುಗಳು ಅವರ ವೀರತನಕ್ಕೆ ಸಾಕ್ಷಿಭೂತವಾಗಿವೆ. ಕುಟುಂಬದಾಚೆ ಬಂದು ಚಳುವಳಿಗಳಲ್ಲಿ ತಾವು ಏನು? ಎಂಬುದನ್ನು ತಮ್ಮ ಕಾರ್ಯಚಟುವಟಿಕೆಗಳಿಂದ ತೋರಿಸಿಕೊಟ್ಟಿರುವುದು ಹಲವು ಉಲ್ಲೇಖಗಳಿಂದ, ಹಲವು ಚಳುವಳಿಗಾರರ ಸಂದರ್ಶನಗಳ ವಿಷಯಗಳನ್ನು ಪರಿಶೀಲಿಸಿ ಸತ್ಯಾಸತ್ಯತೆಯನ್ನು ಗಮನಿಸಿದಾಗ ಜಿಲ್ಲೆಯ ಮಹಿಳಾ ಹೋರಾಟಗಾರ್ತಿಯರ ಹೋರಾಟದ ಕಿಚ್ಚು ಹಾಗೂ ಅವರ ಕಾರ್ಯಚಟುವಟಿಕೆಗಳನ್ನು ವಿಶ್ಲೇಷಿಸಲಾಗಿದೆ.

#### ೧. ಸಿದ್ಧಮ್ಮ ಮಹದೇವಪ್ಪ ಮೈಲಾರ

ಮೈಲಾರ ಮಹದೇವಪ್ಪನ ಪತ್ನಿ ಸಿದ್ದಮ್ಮ ಮೈಲಾರ. ಹಾವೇರಿಯ ಸಾಮಾನ್ಯ ಕೃಷಿ ಕುಟುಂಬದ ತಿಪ್ಪಶೆಟ್ಟಿ ಮನೆತನದ ಕಾಳಪ್ಪ ಮತ್ತು ನಿಂಗವ್ವ ದಂಪತಿಗಳ ಮಗಳಾಗಿ ೨೯.೧೧.೧೯೧೬ರಂದು ಜನಿಸಿದರು. ಸಿದ್ಧಮ್ಮ ಜನಿಸುವ ಮೊದಲೇ ತಂದೆ ಕಾಳಪ್ಪನವರು ಈಜಲು ಹೋಗಿ ಅಸುನೀಗಿದ್ದರು. ಸಿದ್ದಮ್ಮಳ ತಾಯಿ ಮೋಟೆಬೆನ್ನೂರಿನ ಮೈಲಾರ ಮಹದೇವಪ್ಪನ ತಂದೆಯ ಸಹೋದರಿ. ಹಾಗಾಗಿ ಗರ್ಭಿಣಿ ಸಹೋದರಿಯನ್ನು ಮಾರ್ತಾಂಡೆಪ್ಪ(ಮಹದೇವಪ್ಪನ ತಂದೆ)ಮೈಲಾರ ತಮ್ಮ ಊರಿಗೆ ಕರೆದುಕೊಂಡು ಬಂದರು.

ಮೋಟೆಬೆನ್ನೂರಿನಲ್ಲಿ ಸಿದ್ಧಮ್ಮ ಐದನೆಯ ತರಗತಿಯವರೆಗೆ ಶಿಕ್ಷಣ ಮುಗಿಸಿದರು. ಈ ವಯಸ್ಸಿಗೆ ಸಿದ್ದಮ್ಮಳಿಗೆ ವಿವಾಹ ಮಾಡಲು ಮನೆಯಲ್ಲಿ ಮಾತುಕತೆ ನಡೆಯಿತು. ತಂದೆಯನ್ನು ಕಳೆದುಕೊಂಡ ಸೊಸೆ ಮನೆಯಲ್ಲಿಯೇ ಇರಲೆಂದು ಭಾವಿಸಿ ಮನೆಯ ಮಗ ಮಹದೇವಪ್ಪನಿಗೆ

ವಿವಾಹ ಮಾಡಲು ಹಿರಿಯರು ನಿರ್ಧರಿಸಿದರು."[೩೯] ಬಹುಶಃ ಈ ವೇಳೆಗೆ ಮಹದೇವಪ್ಪ ಶಿಕ್ಷಣದ ಕಡೆ ಗಮನಕೊಡುವ ಬದಲು ಚಳುವಳಿಯ ಬಗ್ಗೆ ಮಾತಾಡುತ್ತ ಊರೂರು ತಿರುಗುತ್ತಿದ್ದ, ಅವನಿಗೆ ಈ ಮದುವೆ ಮಾಡಿದರೆ ಮನೆಯಲ್ಲಿ ಇರುತ್ತಾನೆಂದು ಹಿರಿಯರ ಅಭಿಪ್ರಾಯವಾಗಿರಬಹುದೆಂದು ತಿಳಿದುಬರುತ್ತದೆ.

"ಮದುವೆಯ ನಂತರ ಪತಿ ಮಹದೇವಪ್ಪ ಹಂಸಬಾವಿಗೆ ಶಿಕ್ಷಣಕ್ಕಾಗಿ ತೆರಳಿದನು. ಆದರೆ ಶಾಲೆ ಬಿಟ್ಟು ಚಳುವಳಿಗಾಗಿ ಊರೂರು ತಿರುಗುತ್ತಿರುವ ವಿಷಯ ಮನೆಯವರಿಗೆ ತಿಳಿದು ಒಮ್ಮೆ ಮನೆಗೆ ಬಂದ ಪತಿಯನ್ನು ಅವರ ದೊಡ್ಡಪ್ಪ ಮಹದೇವಪ್ಪ ಮಾಡುತ್ತಿರುವ ಕಾರ್ಯಗಳ ಬಗ್ಗೆ ಅಸಮಧಾನ ವ್ಯಕ್ತಪಡಿಸಿದರು. ಮತ್ತು ಪತಿಗೆ ಬುದ್ಧಿ ಹೇಳುತ್ತಿದ್ದರೆ, ಗಂಡನಿಗೆ ಅವರು ಏನ್ನನ್ನು ಹೇಳುತ್ತಿದ್ದಾರೆಂದು ಸಿದ್ಧಮ್ಮಳಿಗೆ ತಿಳಿಯುತ್ತಿರಲಿಲ್ಲ"[೪೦] ಎಂಬುದು ಸಂಕಮ್ಮನವರ ಅಭಿಮತ.

ಮಹದೇವಪ್ಪನನ್ನು ವ್ಯಾಪಾರದ ತರಬೇತಿ ಕೊಡಿಸಲು ಅವರ ದೊಡ್ಡಪ್ಪ ಗುಡ್ಡಪ್ಪ ಮೈಲಾರ ದಾವಣಗೆರೆಗೆ ಪರಿಚಯದವರ ಹತ್ತಿರ ಬಿಟ್ಟು ಮಹದೇವಪ್ಪನ ಕೈಯಲ್ಲಿ ದುಡ್ಡಿನ ಹಮ್ಮಿಣಿ ಕೊಟ್ಟು 'ಸ್ವಲ್ಪ ಹೊತ್ತಿಗೆ ಬರುತ್ತೇನೆ ಇಲ್ಲಿರು ಎಂದು ಹೇಳಿಹೋದರು. ಇದೇ ಸಮಯ ನಾ ಇದ್ದರೆ ಇವರು ನನ್ನ ಬಿಡುವುದಿಲ್ಲವೆಂದುಕೊಂಡ ಮಹದೇವಪ್ಪ ತನ್ನ ಕೈಯಲ್ಲಿ ಕೊಟ್ಟಿದ್ದ ಆ ದುಡ್ಡಿನ ಹಮ್ಮಿಣಿಯನ್ನು ಅಂಗಡಿಯ ಮಾಲೀಕನಿಗೆ ಕೊಟ್ಟು 'ನಮ್ಮ ದೊಡ್ಡಪ್ಪನಿಗೆ ಮುಟ್ಟಿಸಿ' ಎಂದು ಹೇಳಿ ಹೊರಟು ಹೋದನು.

ಮಹದೇವಪ್ಪ ಹೋದ ವಿಷಯಕ್ಕೆ ದೊಡ್ಡಪ್ಪ ತುಂಬಾ ದುಃಖಪಟ್ಟರು. ಅಲ್ಲದೆ ಒಂದು ಪೈಸೆಯನ್ನು ತೆಗೆದುಕೊಳ್ಳದೆ ಮಹದೇವಪ್ಪ ಹೋಗಿದ್ದೂ ಮನೆಯವರ ಕಳವಳಕ್ಕೆ ಕಾರಣವಾಗಿತ್ತು. ಇದರಿಂದ ಪತ್ನಿ ಸಿದ್ಧಮ್ಮ ತುಂಬ ವ್ಯಥೆಪಟ್ಟ ಮಾಹಿತಿ ಅದೇ ಕುಟುಂಬದ ಪರಮಣ್ಣ ಮೈಲಾರರಿಂದ ತಿಳಿದುಬರುತ್ತದೆ.

**ಪತಿಯಿಂದ ಪತ್ರ ಮತ್ತು ಅವರಿಗೆ ಸಿಕ್ಕ ಗೌರವ :** ಪತಿ ಹೇಳದೆ ಕೇಳದೆ ಹೋಗಿ ತಿಂಗಳುಗಳು ಕಳೆದ ನಂತರ ಗಾಂಧೀಜಿಯೊಂದಿಗೆ ದಂಡಿ ಸತ್ಯಾಗ್ರಹದಲ್ಲಿ ಭಾಗಿಯಾಗಿ ಸೆರೆಮನೆ ಸೇರಿರುವುದಾಗಿ ಪತ್ರದ ಮೂಲಕ ತಿಳಿಸಿದಾಗ ಸಿದ್ಧಮ್ಮಳಿಗೆ ಸಂತೋಷವಾಯಿತು.

"ಮಹದೇವಪ್ಪ ಬಿಡುಗಡೆಯ ನಂತರ ಧಾರವಾಡ, ಮತ್ತು ಹಾವೇರಿಗೆ ಬಂದಾಗ ದಾಂಡೀ ಸತ್ಯಾಗ್ರಹದಲ್ಲಿ ಪ್ರಾಂತ ಹಾಗೂ ಜಿಲ್ಲೆಯ ಏಕಮೇವ ಪ್ರತಿನಿಧಿಯಾಗಿ ಭಾಗವಹಿಸಿ ಬಂದದ್ದಕ್ಕಾಗಿ ಗೌರವ ಸಿಗುತ್ತಿರುವ ವಿಷಯ ಮನೆಯವರಿಗೆ ತಿಳಿಯಿತು. ಇನ್ನು ಸ್ವಗ್ರಾಮ ಮೋಟೆಬೆನ್ನೂರಿನಲ್ಲಿ ಊರ ಮಗ ಅಂಥದ್ದೊಂದು ಮಹಾನ್ ಕಾರ್ಯಮಾಡಿ ಬಂದದ್ದಕ್ಕೆ ಇಡೀ ಊರಲ್ಲಿ ಮಹದೇವಪ್ಪನಿಗೆ ಮೆರವಣಿಗೆ ಮಾಡಿದಾಗ ಸಿದ್ಧಮ್ಮ ತನ್ನ ಗಂಡನ ಬಗ್ಗೆ ಇಡೀ ಊರು ಸಂಭ್ರಮಿಸುವುದನ್ನು ಕಂಡು ಸಂತೋಷಪಟ್ಟಳು.

ಊರಲ್ಲಿ ಸ್ವಲ್ಪ ಕಾಲವಿದ್ದ ಮಹದೇವಪ್ಪ ಪತ್ನಿಗೆ "ನನ್ನ ಆದರ್ಶದ ಆವೇಶದಲ್ಲಿ ನಿನ್ನ ಬಗ್ಗೆ ಅಲಕ್ಷ್ಯ ಮಾಡುತ್ತಿರುವ ನೋವು ನನಗಿದೆ. ನಿನ್ನ ಜೀವನ ಎಲ್ಲರಂತಾಗಬಾರದು. ನಾವು ಸಮಾಜಕ್ಕಾಗಿ, ದೇಶಕ್ಕಾಗಿ ಮೀಸಲೆಂದು ತಿಳಿಯಬೇಕು, ನಾನು ಕಷ್ಟದ ಜೀವನ ಆಯ್ದುಕೊಂಡಿರುವೆ. ನಾನು ಯಾವಾಗ ಎಲ್ಲಿ ಹೇಗೆ ಜೈಲು ಸೇರುತ್ತೇನೋ ನನಗೆ ಗೊತ್ತಿಲ್ಲ'. ಎಂದು ಹೇಳುತ್ತಿದ್ದರೆ, ಸಿದ್ಧಮ್ಮ ಪ್ರತಿಯಾಗಿ **ಯಾಕಿಷ್ಟು ಯೋಚನೆ. ನಾನು ನಿಮ್ಮ ಪತ್ನಿ, ಈಗ ನಾನು ಏನು ಮಾಡಬೇಕು ಹೇಳಿ** 'ನೀವು ದೇಶಕ್ಕಾಗಿ ದುಡಿಯುವಾಗ ನಿಮ್ಮೊಂದಿಗೆ ಎಲ್ಲಿಗಾದರೂ ಬರುತ್ತೇನೆಂದು' ಗಂಡನೊಂದಿಗೆ ಹೆಜ್ಜೆಯಿಡಲು ನಿರ್ಧರಿಸಿದ ಕುರಿತು ತಿಳಿದು ಬರುತ್ತದೆ.

**ಗಾಂಧೀಜಿ ದಂಪತಿಗಳೆಡೆಗೆ** : ೧೯೩೨ರಲ್ಲಿ ಸಾಬರಮತಿ ಆಶ್ರಮ ತಲುಪುತ್ತಿದ್ದಂತೆ ಗಾಂಧೀಜಿ ಆತ್ಮೀಯವಾಗಿ ಮೈಲಾರ ದಂಪತಿಗಳನ್ನು ಬರಮಾಡಿಕೊಂಡರು. 'ನೀನು ಬಂದೇ ಬರುತ್ತೀಯಾ ಅಂತಾ ನಾ ನಿರೀಕ್ಷಿಸಿದ್ದೆ. ನನ್ನ ಪ್ರೀತಿಯ ಶಿಷ್ಯ ಮಹದೇವಪ್ಪನ ಪತ್ನಿ ದೇಶ ಸೇವೆಯಿಂದ ದೂರ ಉಳಿಯಲು ಅದ್ಹೇಗೆ ಸಾಧ್ಯ?' ಎಂದಾಗ ಸಿದ್ಧಮ್ಮಳಿಗೆ ಹಿಂದಿ ಭಾಷೆ ಬರದಿದ್ದರೂ ಗಾಂಧೀಜಿಯ ಭಾವನೆ ಅರ್ಥವಾಗುತ್ತಿತ್ತು. ಗಾಂಧೀಜಿ ಸಿದ್ಧಮ್ಮಳಿಗೆ 'ನೀನು ಓರಿಗೆಯವರೊಂದಿಗೆ, ನಕ್ಕು ನಲಿಯುವುದನ್ನು ಬಿಟ್ಟು, ಇಷ್ಟು ಚಿಕ್ಕ ವಯಸ್ಸಿನಲ್ಲಿ ಆಶ್ರಮವಾಸಕ್ಕೆ ಬಂದುದೇಕೆ? ಆಶ್ರಮದಲ್ಲಿ ಬಹಳ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಇಲ್ಲಿಯ ಕಠೋರ ನಿಯಮಗಳನ್ನು ಚಾಚು ತಪ್ಪದೇ ಪಾಲಿಸಬೇಕು ಇದು ಒಪ್ಪಿಗೆಯೇ? ಎಂದು ಪ್ರಶ್ನಿಸಿದರು. ಪತಿಯಿಂದ ಗಾಂಧೀಜಿಯ ಪ್ರಶ್ನೆಯನ್ನು ತಿಳಿದುಕೊಂಡು ಒಪ್ಪಿಗೆ ಸೂಚಿಸಿದಳು. ಅಲ್ಲದೇ ಸ್ವಲ್ಪ ದಿನಗಳಲ್ಲಿಯೆ ಗಾಂಧೀಜಿ ಮತ್ತು ಕಸ್ತೂರಬಾ ಅವರ ಮನಗೆದ್ದಳು."[೧] ಮಹದೇವಪ್ಪ ದಂಪತಿಗಳಿಗೆ ಗಾಂಧೀಜಿ 'ಮಹದೇವ ನನ್ನ ಪ್ರಿಯ ಶಿಷ್ಯನಾದಂತೆ, ಸಿದ್ಧಮತಿಯು ಬಾ ಜೊತೆಗಿದ್ದು ಶ್ರೇಷ್ಠ ಸತ್ಯಾಗ್ರಹಿಯಾಗಲಿ, ಗ್ರಾಮೀಣ ಮಹಿಳೆಯರಲ್ಲೇ ನಮ್ಮ ಸಂಸ್ಕೃತಿ, ದೇಶಾಭಿಮಾನ, ನಿಷ್ಠೆಯಿರುವುದು. ಸಿದ್ಧಮತಿ ಬಾ ಕೈಜೋಡಿಸಿದರೆ ಸಾಕು ಅವಳು ಸಿದ್ಧವಸ್ತು ಆಗೇ ಆಗುತ್ತಾಳೆ. ನೀವಿಬ್ಬರೂ ತ್ಯಾಗಜೀವಿಗಳಾಗಿ, ನಿಮ್ಮ ಭಾಗಕ್ಕೆ ಹೋಗಿ ನೀವು ಕಾಂಗ್ರೆಸ್ ಚಟುವಟಿಕೆಗಳನ್ನು ಮತ್ತು ಖಾದಿ ಪ್ರಚಾರವನ್ನು ಮಾಡಬೇಕಾಗುತ್ತದೆ, ಕರ್ನಾಟಕವು ಸತ್ಯ, ಅಹಿಂಸೆಗಳ ಪ್ರಯೋಗ ಭೂಮಿ ಆಗಬೇಕೆಂದು ನನ್ನ ಅಪೇಕ್ಷೆ, ನಾನು ನಿಮ್ಮ ಮೇಲೆ ಬಹಳಷ್ಟು ಭರವಸೆಯಿಟ್ಟಿದ್ದೇನೆ' ಎಂದು ಹೇಳಿದಾಗ ದಂಪತಿಗಳಿಬ್ಬರು ಒಪ್ಪಿಗೆ ಸೂಚಿಸಿದ ಬಗ್ಗೆ ಅದೇ ಕುಟುಂಬದ ಪರಮಣ್ಣ ಮೈಲಾರ ವಿವರವನ್ನು ನೆನಪಿಸಿಕೊಳ್ಳುತ್ತಾರೆ.

**ಸಿದ್ಧಮ್ಮ ಸೆರೆಮನೆಗೆ** : ಸಾಬರಮತಿ, ಬಾರ್ಡೋಲಿಗಳಲ್ಲಿ ಕಸ್ತೂರಬಾರ ನೇತೃತ್ವದಲ್ಲಿ ಮಹಿಳೆಯರೂ ಚಳುವಳಿಯಲ್ಲಿ ಭಾಗವಹಿಸಿದವರು. ಪ್ರೇಮಾ ಪಂತರ್, ದುರ್ಗಾಬೆನ್ ದೇಸಾಯಿ, ಅಮಿನಾ ಬೇಗಂ, ವೇಲಾಜಿನ್ ಮಣಿಜಿನ್, ಸಿದ್ಧಮತಿ ಮೈಲಾರ ಹೀಗೆ ಆಶ್ರಮದ ಹದಿನೈದು ಜನ ಮಹಿಳೆಯರು ಸೇರಿದ್ದರು. ಆಗಸ್ಟ್ ತಿಂಗಳಲ್ಲಿ ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ಇವರನ್ನು ಬಂಧಿಸಿ ಜೈಲಿಗೆ ಕಳುಹಿಸಲಾಯಿತು. ಎಲ್ಲರಿಗೂ ಆರು ತಿಂಗಳ ಶಿಕ್ಷೆಯಾಯಿತು.

ಪತಿ ದಂಡೀ ಸತ್ಯಾಗ್ರಹದಲ್ಲಿ ಕರ್ನಾಟಕದ ಪ್ರತಿನಿಧಿಯಾಗಿ ಗಾಂಧೀಜಿ ಜೊತೆ ಹೆಜ್ಜೆಹಾಕಿದರೆ, ಸತಿ ಸಿದ್ದಮ್ಮ ಕಸ್ತೂರಬಾ ಜೊತೆ ಕರ್ನಾಟಕದ ಮಹಿಳಾ ಪ್ರತಿನಿಧಿಯಾಗಿ ಜೈಲುವಾಸ ಅನುಭವಿಸಿದರು."[೪೨] ಇತ್ತ ಸ್ವಗ್ರಾಮ ಮೋಟೆಬೆನ್ನೂರಿನಲ್ಲಿ ಸಿದ್ಧಮ್ಮ ಅವರ ಅತ್ತೆಯೂ ಸಹ ಚಳುವಳಿಯಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದರು.

**ಮೋಟೆಬೆನ್ನೂರಿಗೆ** : ಕರ್ನಾಟಕದಲ್ಲಿ ಮಹದೇವಪ್ಪನನ್ನು ಚಳುವಳಿಯಲ್ಲಿ ಭಾಗವಹಿಸಿದ್ದಕ್ಕೆ ಬಂಧಿಸಿ ಪೊಲೀಸರು ಹಿಂಡಲಗಾ ಜೈಲಿಗೆ ಕಳುಸಿದ್ದರು. ಸಿದ್ಧಮ್ಮ ಸೆರೆಮನೆಯಿಂದ ಬಿಡುಗಡೆಯಾಗಿ ಮೋಟೆಬೆನ್ನೂರಿಗೆ ಬಂದಾಗ ಊರ ಜನರೆಲ್ಲ ಸೇರಿ ತಮ್ಮ ಮಣ್ಣಿನ ಮಗಳು ಮಹಾತ್ಮರ ಜೊತೆಗಿದ್ದು ಪಾವನಳಾಗಿ ಬಂದ ಸಂತೋಷದಿಂದ ಮತ್ತು ಕಸ್ತೂರಬಾ ಜೊತೆ ಚಳುವಳಿ ಮಾಡಿ ಜೈಲುವಾಸ ಅನುಭವಿಸಿ ಬಂದದ್ದಕ್ಕೆ ಆತ್ಮೀಯವಾಗಿ ಬರಮಾಡಿಕೊಂಡ ಬಗ್ಗೆ ಚಳುವಳಿಗಾರ ದೇವೇಂದ್ರಪ್ಪ ವಿಭೂತಿಯಿಂದ ಹೆಮ್ಮೆಯಿಂದ ತಿಳಿಸುತ್ತಾರೆ.

ಮೋಟೆಬೆನ್ನೂರಿಗೆ ಬಂದ ಸಿದ್ದಮ್ಮ ಹರಿಜನೋದ್ಧಾರ ಕಾರ್ಯಕ್ರಮಗಳನ್ನು ಅತ್ತೆ ಬಸಮ್ಮ, ಮೈದುನ ಲಿಂಗಣ್ಣ, ಚಿಕ್ಕಪ್ಪ ನಿಂಗಣ್ಣರೊಂದಿಗೆ ಸೇರಿ ಗಾಂಧೀ ಆಶ್ರಮದಲ್ಲಿಯ ಎಲ್ಲ ಕಾರ್ಯ ವಿಧಾನಗಳನ್ನು ಪ್ರಾರಂಭಿಸಿದಾಗ ಊರಜನರೆಲ್ಲ ಅವರೊಂದಿಗೆ ಸೇರಿ ಅವರ ತತ್ವಗಳನ್ನು ಅನುಸರಿಸತೊಡಗಿದ್ದು ಮತ್ತು ತಮ್ಮ ಊರಲ್ಲಿಯೂ ರಾಷ್ಟ್ರೀಯತೆಯ ಜ್ವಾಲೆಯನ್ನು ಮತ್ತಿಷ್ಟು ಹೆಚ್ಚಿಸುವಲ್ಲಿ ಸಿದ್ದಮ್ಮ ಪ್ರಮುಖ ಪಾತ್ರವಹಿಸಿದರು.

**ಮೋಟೆಬೆನ್ನೂರಿಗೆ ಗಾಂಧೀಜಿ** : ಗಾಂಧೀಜಿ ಹರಿಜನೋದ್ಧಾರ ಕಾರ್ಯನಿಮಿತ್ತ ಕರ್ನಾಟಕ ಪ್ರವಾಸ ಕೈಗೊಂಡಾಗ ಮೋಟೆಬೆನ್ನೂರಿಗೆ "೧೯೩೪ರ ಮಾರ್ಚ್ ೧ರಂದು ಆಗಮಿಸಿದಾಗ ಮೊದಲು ಕೇಳಿದ್ದು ಮಹದೇವಪ್ಪ ಮತ್ತು ಸಿದ್ಧಮ್ಮಳನ್ನು. ಬಸಮ್ಮನವರು ಮಗ ಹಿಂಡಲಗಾ ಜೈಲಿನಲ್ಲಿದ್ದಾನೆ ಎನ್ನುತ್ತಾ ತಾವೇ ನೂತನೂಲಿನ ಮಾಲೆಯನ್ನು ಗಾಂಧೀಜಿಗೆ ಹಾಕಿ ಆನಂದಭಾಷ್ಪ ಹರಿಸಿದರು.

ಮೋಟೆಬೆನ್ನೂರಿನ ಕೋಟೆ ಮೈದಾನದಲ್ಲಿ ನಡೆದ ಸಮಾರಂಭಕ್ಕೆ ಕೆ.ಎಫ್. ಪಾಟೀಲ್, ಉಕ್ಕುಂದ ಲಿಂಗರಾಜ, ಹಾವನೂರು ಬಸಪ್ಪನವರು ನೇತೃತ್ವ ವಹಿಸಿದ್ದರು. ಗಾಂಧೀಜಿ ಜೊತೆ ಬಂದಿದ್ದ ಅವರ ಶಿಷ್ಯೆ ಮೀರಬೆನ್‌ರೊಂದಿಗೆ ಸಿದ್ಧಮ್ಮ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಗಾಂಧೀಜಿಗೆ ಮೋಟೆಬೆನ್ನೂರಿನಲ್ಲಿ ಹರಿಜನರಿಗೆ, ಅವರ ಮಕ್ಕಳಿಗೆ ಊರು ಹಾಗೂ ಶಾಲೆಯಲಿ ಯಾವುದೇ ಭೇದವಿಲ್ಲವೆಂದೂ ಎಲ್ಲರೂ ಸಮಾನತೆ ಕಾಪಾಡಿಕೊಂಡಿದ್ದೇವೆಂದು ಹೇಳಿದ್ದನ್ನು ಕೇಳಿ ಗಾಂಧೀಜಿ ಖುಷಿಪಟ್ಟರು. ಕೊನೆಯಲ್ಲಿ ಗಾಂಧೀಜಿ ಮಹದೇವನನ್ನು ಭೇಟಿ ಮಾಡಿಸುತ್ತೇನೆಂದು ಸಿದ್ಧಮ್ಮಳನ್ನು ತಮ್ಮೊಂದಿಗೆ ಕರೆದುಕೊಂಡು ಹೋದರು.

ಬೆಳಗಾವಿಯ ಹಿಂಡಲಗಾ ಜೈಲಿನಲ್ಲಿ ಮಹದೇವಪ್ಪನನ್ನು ಗಾಂಧೀಜಿ ಸಿದ್ಧಮ್ಮಳಿಗೆ ಭೇಟಿ ಮಾಡಿಸಿದರು. ಆದರೆ ಎಷ್ಟು ಹೊತ್ತಾದರೂ ಸಿದ್ಧಮ್ಮ ಗಂಡನೊಂದಿಗೆ ಮಾತನಾಡಲಿಲ್ಲ,

ನಂತರ ಗಾಂಧೀಜಿ ಮಾತನಾಡಿಸುವ ಪ್ರಯತ್ನ ಮಾಡಿದರೂ ಆಗದಿದ್ದಾಗ ಸಿದ್ಧಮ್ಮಳನ್ನು ತಮ್ಮೊಂದಿಗೆ ಭಾವನಗರಕ್ಕೆ ಕರೆದುಕೊಂಡು ಹೋದ ಬಗ್ಗೆ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕ್ಕಂಗಿ ವಿವರಣೆಯಿಂದ ತಿಳಿದುಬರುತ್ತದೆ.

**ಹುಬ್ಬಳ್ಳಿಯ ಹರಿಜನ ಬಾಲಿಕಾಶ್ರಮದಲ್ಲಿ** : ಗಾಂಧೀಜಿಯೊಂದಿಗೆ ತೆರಳಿದ್ದ ಸಿದ್ಧಮ್ಮ ಸ್ವಲ್ಪ ದಿನಗಳ ನಂತರ ಹುಬ್ಬಳ್ಳಿಯ ಬಾಲಿಕಾಶ್ರಮದಲ್ಲಿ ನಾಗಮ್ಮನೊಂದಿಗೆ ಹರಿಜನ ಮಕ್ಕಳ ಸೇವೆಯಲ್ಲಿ ಸಹಾಯಕ್ಕೆ ನಿಂತರು. ಅಲ್ಲಿಯ ಮಕ್ಕಳಿಗೆ ಶಿಕ್ಷಣ ಮತ್ತು ಸ್ವಚ್ಛತೆಯ ಬಗ್ಗೆ ತಿಳಿವಳಿಕೆ ನೀಡಿ, ಜಾತೀಯತೆಯ ಭೂತ ಹೊಡೆದೋಡಿಸುವಲ್ಲಿ ತಮ್ಮಿಂದ ಸಾಧ್ಯವಾದಷ್ಟು ಶ್ರಮಿಸಿದರು. ಆಗ ಕೆ.ಎಫ್. ಪಾಟೀಲ್ ಕಾರ್ಯದರ್ಶಿಗಳಾಗಿದ್ದರು. ಸಿದ್ಧಮ್ಮ ಮೈಲಾರ, ಶ್ರೀಮತಿ ಸುಶೀಲಾತಾಯಿ ಕೊಟ್ಟೂರು ಇಲ್ಲಿ ಕಾರ್ಯಕರ್ತೆಯರಾಗಿ ಕೆಲಸವನ್ನು ನಿಷ್ಠೆಯಿಂದ ಮಾಡಿದ ವಿವರವನ್ನು ನಾಗಮ್ಮನ ಮಗಳು ಲೀಲಾವತಿ ಮಾಗಡಿ ಉಲ್ಲೇಖಿಸಿರುತ್ತಾರೆ.

**ಕೊರಡೂರು ಆಶ್ರಮ** : ಪತಿಯೊಂದಿಗೆ ಕೊರಡೂರಿನಲ್ಲಿ ೧೯೩೭ರಲ್ಲಿ 'ಗ್ರಾಮಸೇವಾ ಆಶ್ರಮ'ವನ್ನು ಪ್ರಾರಂಭಿಸಿದರು. ಅಲ್ಲಿ ಬಡತನ ಅಜ್ಞಾನಗಳಿಂದ ತುಂಬಿದ ಹಳ್ಳಿಗಾಡಿನ ಪ್ರದೇಶಗಳಲ್ಲಿ ಗ್ರಾಮೋದ್ಯೋಗ ಕಾರ್ಯವನ್ನು ಆರಂಭಿಸಿದರು. ಪ್ರಮುಖವಾಗಿ–

* ಹಳ್ಳಿಗರೊಂದಿಗೆ ಬೆರೆತು ಅವರ ಆರ್ಥಿಕ, ನೈತಿಕ ಮತ್ತು ಸಾಮಾಜಿಕ ಉನ್ನತಿಗಾಗಿ ಶ್ರಮಿಸುವುದು. * ಶಾರೀರಕ ಸಂಪತ್ತನ್ನು ಬೆಳೆಸುವುದು. * ರಾಷ್ಟ್ರೀಯ ಕಾಂಗ್ರೆಸ್ಸಿನ ಸಂದೇಶಗಳನ್ನು ಜನರಿಗೆ ಮುಟ್ಟಿಸುವುದು. * ಹಳ್ಳಿಗಳ ಏಳ್ಗೆಗೆ ರಚನಾತ್ಮಕ ಕಾರ್ಯಗಳನ್ನು ರೂಪಿಸುವುದು. * ಸ್ವಾತಂತ್ರ್ಯಕ್ಕಾಗಿ ಜನತೆಯನ್ನು ಸಿದ್ಧಪಡಿಸುವುದು. * ಸ್ವಾವಲಂಬನೆ ಜೀವನ ಪಾಠವನ್ನು ಗ್ರಾಮೋದ್ಯೋಗಗಳ ಮುಖಾಂತರ ತೋರಿಸಿಕೊಡುವುದು. * ಅಸ್ಪೃಶ್ಯತಾ ನಿವಾರಣೆಗೆ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದು ಇತ್ಯಾದಿ ಕಾರ್ಯಕ್ರಮಗಳನ್ನು ತಮ್ಮ ಧ್ಯೇಯವನ್ನಾಗಿಸಿ ಸಾಬರಮತಿ ಆಶ್ರಮದ ಪದ್ಧತಿಯಂತೆ ನಡೆಯುವ ವ್ಯವಸ್ಥೆಯನ್ನು ಸತಿ–ಪತಿಗಳು ಮಾಡುತ್ತಿದ್ದ ಬಗ್ಗೆ ಮತ್ತು ಆಶ್ರಮದ ದಾಸೋಹದ ನೇತೃತ್ವವನ್ನು ಸಿದ್ಧಮ್ಮ ವಹಿಸಿ, ಸ್ವತಃ ತಾವೇ ರೊಟ್ಟಿ ಬಡಿದು ಚಳುವಳಿಗಾರರಿಗೆ ಊಟ ಬಡಿಸುತ್ತಿದ್ದ ವಿವರ ಅಂದಿನ ಚಳುವಳಿಕಾರರ ಹೇಳಿಕೆಯಿಂದ ತಿಳಿಯಲಾಗಿದೆ.

**ಚಲೇಜಾವ್ ಚಳುವಳಿ** : ಈ ಚಳುವಳಿಯು ಸ್ವಾತಂತ್ರ್ಯ ಹೋರಾಟದ ಅಂತಿಮ ಹೋರಾಟವೆಂದು ಗಾಂಧೀಜಿ ಕಾರ್ಯಕರ್ತರಿಗೆ **'ಮಾಡು ಇಲ್ಲವೇ ಮಡಿ'** ಎಂಬ ಸಂದೇಶವನ್ನು ಘೋಷಿಸಿದಾಗ ಕೊರಡೂರಿನ ಆಶ್ರಮದಲ್ಲಿದ್ದ ಮಹದೇವಪ್ಪ ತನ್ನ ತಂಡವನ್ನು ಸಜ್ಜುಗೊಳಿಸಿದ. ಅಂತಿಮ ಹೋರಾಟದ ಮೊದಲು ಮಹದೇವಪ್ಪ ಪತ್ನಿಗೆ ಆಶ್ರಮದ ಮತ್ತು ಪುಟ್ಟ ಮಗಳ ರಕ್ಷಣೆಯನ್ನು ನೀಡಿದಾಗ, ಸಿದ್ಧಮ್ಮ ಅಂಜಲಿಲ್ಲ, ಅಳುಕಲಿಲ್ಲ ಬದಲಾಗಿ ಆಶ್ರಮದಲ್ಲಿದ್ದುಕೊಂಡೆ ಚಳುವಳಿಯಲ್ಲಿ ಭಾಗವಹಿಸಿರುವುದು ಆಶ್ರಮವಾಸಿಗಳಿಂದ ತಿಳಿದುಬರುತ್ತದೆ.

೧೯೪೩ರಲ್ಲಿ ಚಳುವಳಿಯ ವ್ಯಾಪ್ತಿ ಹೆಚ್ಚುತ್ತಾ ಹೋದಂತೆ ಆಶ್ರಮದ ಮೇಲೆ ಪೊಲೀಸರ ಕಣ್ಗಾವಲು ಪ್ರಾರಂಭವಾಯಿತು. ಮಹದೇವಪ್ಪನ ಆಜ್ಞೆಯಂತೆ ಕೊರಡೂರು ಆಶ್ರಮ ಬಿಟ್ಟು ಹರಪನಹಳ್ಳಿಯ ಜೈಲಿನಲ್ಲಿರುವ ಮೈದುನ ಲಿಂಗಣ್ಣನನ್ನು ನೋಡಲು ಹೊರಟ ಸಿದ್ಧಮ್ಮಳಿಗೆ ಪತಿಯ ಬಗ್ಗೆ ಕಳವಳವಿದ್ದರೂ ಪತಿಯ ಛಲ ಹಾಗೂ ದೇಶ ಸೇವೆಯ ಕಾಂತಿ ಕಂಡು ಭಾರವಾದ ಹೆಜ್ಜೆಯಿಂದ ಆಶ್ರಮದಿಂದ ಹೊರಟರು.

ಹೀಗೆ ಹೊರಟ ಸಿದ್ಧಮ್ಮಳಿಗೆ ಆಶ್ರಮ ಬಿಡುವಾಗ ತಂದೆಯನ್ನು ಕಂಡು ಬಿಡದೇ ಅಳುತ್ತಿರುವ ಎರಡು ವರ್ಷದ ಮಗಳು ಒಂದೆಡೆಯಾದರೆ, ದಾರಿಯುದ್ದಕ್ಕೂ ಆದ ಅಪಶಕುನಗಳು ಸಿದ್ಧಮ್ಮನವರ ಮನಸ್ಸಿಗೆ ವಿವಿಧ ರೀತಿಯ ಆಲೋಚನೆಗಳಿಗೆ ಅವಕಾಶ ಮಾಡಿಕೊಟ್ಟ ವಿವರ ಪರಮೇಶಪ್ಪ ಮೈಲಾರ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ.

**ಗೊತ್ತಾಗದ ಪತಿಯ ಸಾವು :** "೧೯೪೩ರ ಏಪ್ರಿಲ್ ೧ರಂದು ಮಹದೇವಪ್ಪ ಸಂಗಡಿಗರಾದ ವೀರಯ್ಯ ಹಿರೇಮಠ ಮತ್ತು ತಿರುಕಪ್ಪ ಮಡಿವಾಳರ ಮೂರು ಜನ ಹೊಸರಿತ್ತಿ ಕಂದಾಯ ಲೂಟಿ ಪ್ರಕರಣದಲ್ಲಿ ಪೊಲೀಸರ ಗುಂಡಿಗೆ ಬಲಿಯಾದರು. ಪತಿಯ ಸಾವು ಸಿದ್ಧಮ್ಮಳಿಗೆ ತಿಳಿಯಲಿಲ್ಲ. ಲಿಂಗಣ್ಣನನ್ನು ನೋಡಿಕೊಂಡು ಬರಲು ಹೋಗಿದ್ದ ಸಿದ್ಧಮ್ಮಳಿಗೆ ಅಪಶಕುನಗಳಿಂದ ತುಂಬ ಗಾಬರಿಗೊಂಡು ಪತಿಯನ್ನು ಕಾಣಲೇಬೇಕೆಂದು ನಿರ್ಧರಿಸಿ ಪುನಃ ಬರುತ್ತಿದ್ದಳು. ಮಹದೇವಪ್ಪ ಹುತಾತ್ಮನಾದ ಮಾರನೇ ದಿನ ಹುಬ್ಬಳ್ಳಿ ಬಸ್‌ಸ್ಟಾಂಡ್‌ನಲ್ಲಿ ದಿನಪತ್ರಿಕೆ ಮಾರುವ ಹುಡುಗ ಮಹದೇವಪ್ಪ ಮತ್ತು ಸಂಗಡಿಗರು ಪೊಲೀಸರ ಗುಂಡಿಗೆ ಬಲಿ! ಎಂದು ಕೂಗುತ್ತ ಪತ್ರಿಕೆ ಮಾರುತ್ತಿದ್ದ ಹುಡುಗನ ಧ್ವನಿ ಸಿದ್ಧಮ್ಮಳಿಗೆ ಆಘಾತವನ್ನು ತಂದಿತ್ತು. ಆಗಲೇ ಕಾಲ ಮಿಂಚಿತ್ತು. ಪತಿಯನ್ನು ತಾನು, ತನ್ನ ಪುಟ್ಟ ಮಗು ನೋಡುವ ಮೊದಲೇ ಪೊಲೀಸರು ಅನಾಥರಂತೆ ಹಾವೇರಿ ಸ್ಮಶಾನದಲ್ಲಿ ಸಮಾಧಿ ಮಾಡಿದ್ದು ತಿಳಿದು ತುಂಬಾ ದುಃಖಿತರಾದರು. ಅಲ್ಲಿ ಸಂತೈಸಲು ಯಾರೂ ಇರಲಿಲ್ಲ. ಕೊನೆಗೆ ಧೈರ್ಯ ತೆಗೆದುಕೊಂಡು ಕೊರಡೂರು ಆಶ್ರಮದ ಕಡೆ ಹೊರಟರು. ಕೊರಡೂರು ಆಶ್ರಮದಲ್ಲಿ ಸಿದ್ಧಮ್ಮ ಕಾಲಿಡುತ್ತಲೇ ದುಃಖ ತಡೆಯಲಾಗಲಿಲ್ಲ. ಅಲ್ಲಿಯೇ ಇದ್ದ ಗೊರ್ಲಿ ರುದ್ರಮ್ಮ ಸಿದ್ಧಮ್ಮಳನ್ನು ಸಂತೈಸಿದರು."[೪೩] ಈ ಘಟನೆ ಅಂದು ಅವರು ಎದುರಿಸಿದ ಕರಾಳ ಸನ್ನಿವೇಶ ಎಂಥವರಿಗೂ ನೋವು ಕೊಡುವಂತಹದ್ದು ಮತ್ತು ಚಳುವಳಿಗಾರರ ಕುಟುಂಬಗಳು ಅನುಭವಿಸಿದ ಯಾತನೆಯ ಸನ್ನಿವೇಶಕ್ಕೆ ಈ ಘಟನೆ ಸಾಕ್ಷಿಯಾಗಿದೆ.

**ಮೋಟೆಬೆನ್ನೂರಿನಲ್ಲಿ :** ಪತಿಯನ್ನು ಕಳೆದುಕೊಂಡ ಸಿದ್ಧಮ್ಮ ಸ್ವಗ್ರಾಮಕ್ಕೆ ಬಂದಾಗ ಮನೆಯಲ್ಲಿ ಒಬ್ಬರಿಗೊಬ್ಬರು ಸಂತೈಸಿಕೊಳ್ಳಬೇಕಾದ ಸ್ಥಿತಿ. ಮಹದೇವಪ್ಪನ ಆತ್ಮಕ್ಕೆ ಶಾಂತಿ ಸಿಗಬೇಕಾದರೆ ನಾವು ಅವನಿಗಾಗಿ ಸಾಮಾಜಿಕ ಕಾರ್ಯವನ್ನು ಮಾಡೋಣವೆಂದು ನಿರ್ಧರಿಸಿ ಮೋಟೆಬೆನ್ನೂರಿನಲ್ಲಿ 'ಮಹದೇವ ಮೈಲಾರ ಗ್ರಾಮ ಸೇವಾ ಸಂಘ'ವೊಂದನ್ನು ಮಾಡಿ, ಅಲ್ಲಿ ಉಣ್ಣೆ ನೂಲುವುದು,

ನೇಯ್ಗೆ, ಸ್ವೆಟರ್ ಹೆಣೆಯುವುದು, ಹೊಲಿಗೆ, ಬಟ್ಟೆಗೆ ಅಚ್ಚು ಹಾಕುವುದು ಮೊದಲಾದ ವಿಧಾಯಕ ಕಾರ್ಯಕ್ರಮಗಳನ್ನು ಹಳ್ಳಿಯ ಮಹಿಳೆಯರಿಗಾಗಿ ಕೈಗೊಂಡರೆಂಬ ಮಾಹಿತಿ ಹಲವು ಚಳುವಳಿಗಾರರಿಂದ ಲಭಿಸುತ್ತದೆ.

**೨. ನಾಗಮ್ಮ ವೀರನಗೌಡ ಪಾಟೀಲ**

ಸಮಾಜದಲ್ಲಿ ಶತಮಾನಗಳಿಂದ ಅಲಕ್ಷ್ಯಕ್ಕೊಳಗಾಗಿ, ಶೋಷಣೆ ದಾರಿದ್ರ್ಯಗಳಿಂದ ಬಳಲಿ, ಪ್ರೀತಿ, ವಾತ್ಸಲ್ಯಗಳಿಂದ ವಂಚಿತರಾಗಿರುವ ಹರಿಜನ ಮಕ್ಕಳಿಗೆ ತಾಯ್ತನದ ಮಮತೆಯನ್ನು ಧಾರೆಯರೆದು ಅವರ ಶೈಕ್ಷಣಿಕ ಜೀವನಕ್ಕೆ ಶ್ರಮಿಸಿ ಕೀರ್ತಿಶೇಷರಾದವರು ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದ ಶ್ರೀಮತಿ ನಾಗಮ್ಮ ವೀರನಗೌಡ ಪಾಟೀಲ.

೧೬.೧೨.೧೯೦೬ರಂದು ಧಾರವಾಡದ ಖೋರದಾನಪುರದ ಮಲ್ಲೇಶಪ್ಪ-ಲಿಂಗಮ್ಮರ ಪುತ್ರಿಯಾಗಿ ಜನಿಸಿದ ಇವರು ಶಿಕ್ಷಣವನ್ನು ಹುಬ್ಬಳ್ಳಿಯಲ್ಲಿ ಮುಗಿಸಿದರು. ಕಚವಿ ಗ್ರಾಮದ ವೀರನಗೌಡ ಪಾಟೀಲರ ಎರಡನೆಯ ಪತ್ನಿಯಾಗಿ ೧೯೨೩ರಲ್ಲಿ ಇವರ ವಿವಾಹವಾಯಿತು.

**ಚಳುವಳಿಗೆ :** ೧೯೨೪ರ ಬೆಳಗಾವಿಯ ಕಾಂಗ್ರೆಸ್ ಅಧಿವೇಶನಕ್ಕೆ ಪತಿಯೊಂದಿಗೆ ಭಾಗವಹಿಸುವುದರೊಂದಿಗೆ ಇವರ ಸ್ವಾತಂತ್ರ್ಯ ಚಳುವಳಿ ಆರಂಭವಾಯಿತು. ನಂತರ ೧೯೩೦-೩೧ರ ಕರನಿ ರಾಕರಣ ಚಳುವಳಿಯಲ್ಲಿಯೂ ಪತಿಯೊಂದಿಗೆ ಹೆಜ್ಜೆಯಿಟ್ಟರು.

**ಗಾಂಧೀಜಿ ಭೇಟಿ :** "೧೯೩೩ರಲ್ಲಿ ಗಾಂಧೀಜಿ ಹರಿಜನೋದ್ಧಾರ ಕಾರ್ಯಕ್ಕಾಗಿ ಪ್ರವಾಸ ಕೈಗೊಂಡಾಗ ಪಾಟೀಲ ದಂಪತಿಗಳಿಬ್ಬರೂ ಮೋಟೆಬೆನ್ನೂರಿನಲ್ಲಿ ಭೇಟಿಯಾದರು. ಪತಿ ವೀರನಗೌಡ ಸ್ವಾತಂತ್ರ್ಯ ಚಳುವಳಿಯಲ್ಲಿ ನನಗೂ ಒಂದು ಕೆಲಸವನ್ನು ವಹಿಸಬೇಕೆಂದು ಕೇಳಿದರು.- 'ಸ್ವಾತಂತ್ರ್ಯ ಚಳುವಳಿಯಲ್ಲಿ ಅಸ್ಪೃಶ್ಯತೆಯು ದೇಶದ ಸ್ವಾತಂತ್ರ್ಯಕ್ಕೆ ಅಡ್ಡಿ ತಂದಿದೆ. ನಮ್ಮ ಸಮಾಜದಲ್ಲಿ ಈ ಕೆಟ್ಟ ಭಾವನೆ ತೊಲಗುವವರೆಗೂ ನಾವು ಸ್ವತಂತ್ರರಾಗಲು ಸಾಧ್ಯವಿಲ್ಲ. ಅಸ್ಪೃಶ್ಯತಾ ನಿವಾರಣೆಯು ಸ್ವಾತಂತ್ರ್ಯ ಚಳುವಳಿಯ ಮುಖ್ಯ ಕೆಲಸವೇ ಪತಿ-ಪತ್ನಿ ಸೇರಿ ಆ ಕಾರ್ಯವನ್ನು ಮಾಡಿ' ಎಂದು ಗಾಂಧೀಜಿ ಹೇಳಿದರು. ನಾಗಮ್ಮ 'ನಾನು ಓದಿದವಳಲ್ಲ, ನಾನು ಏನು ಮಾಡಬಲ್ಲೆ?' ಎನ್ನಲು 'ನೀನು ಒಂದೆರಡು ಹರಿಜನ ಮಕ್ಕಳನ್ನು ನಿನ್ನ ಮನೆಯಲ್ಲಿ ತಂದಿಟ್ಟುಕೊ, ಅವರನ್ನು ಮಕ್ಕಳಂತೆ ನೋಡು, ಅವರಿಗೆ ತಲೆಬಾಚಿ ಸ್ನಾನ ಮಾಡಿಸು. ಇದು ನಿನಗೆ ಬರುವುದಿಲ್ಲವೇ?' ಎಂದು ನಾಗಮ್ಮಗೆ ಕೇಳಿದರು."[೪೪] ಅವರ ಮಾತುಗಳು ದಂಪತಿಗಳನ್ನು ಹರಿಜನ ಕಲ್ಯಾಣಕ್ಕಾಗಿ ಶ್ರಮಿಸುವಂತೆ ಮಾಡಿತು. ಅದರ ಫಲವೆ "೧೯೩೪ರಲ್ಲಿ ಗಾಂಧೀಜಿ ಆಶ್ರಮದಂತೆ ಹುಬ್ಬಳ್ಳಿಯಲ್ಲಿ 'ಹರಿಜನ ಬಾಲಿಕಾಶ್ರಮ' ಸ್ಥಾಪಿಸಿದರು. ಇದು ದೇಶದಲ್ಲಿಯೇ ಎರಡನೇ ಬಾಲಿಕಾಶ್ರಮವೆಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಹರಿಜನ ಅಭಿವೃದ್ಧಿಯ ಕಾರ್ಯ ಹುಕ್ಕೇರಿ ತಾಲೂಕಿನ ಹರಿಜನ ಹುಡುಗಿ ಮಥುರಾ ಮತ್ತು ತಾರಾ ಇಬ್ಬರು ಬಾಲಕಿಯರಿಂದ ಹುಬ್ಬಳ್ಳಿಯಲ್ಲಿ ಬಾಲಿಕಾಶ್ರಮ ೧೯೩೪ರಲ್ಲಿ ನಾಗಮ್ಮನವರ ಮನೆಯಲ್ಲಿ ಪ್ರಾರಂಭವಾಯಿತು.

**ಕುಟುಂಬ ಮತ್ತು ಸಮಾಜ ವಿರೋಧ :** ಹರಿಜನ ಬಾಲಕಿಯರನ್ನು ಇವರ ಮನೆಯಲ್ಲಿ ಇರಿಸಿಕೊಂಡಿದ್ದರಿಂದ ದಂಪತಿಗಳಿಬ್ಬರು ಕೆಲವು ಪರಿಣಾಮಗಳನ್ನು ಎದುರಿಸಬೇಕಾಯಿತು. ನಾಗಮ್ಮನವರ ಅತ್ತೆಗೆ ಇವರ ಕಾರ್ಯಗಳು ಅವರಿಗೆ ಇಷ್ಟವಾಗುತ್ತಿರಲಿಲ್ಲ. ಸಂಬಂಧಿಗಳು, ಸ್ನೇಹಿತರು ಇವರನ್ನು ಶುಭ-ಸಮಾರಂಭಗಳಿಗೆ ಕರೆಯುತ್ತಿರಲಿಲ್ಲ. ಸಾಮಾಜಿಕವಾಗಿ ಈ ದಂಪತಿಗಳನ್ನು ನೋಡುವ ದೃಷ್ಟಿ ಕೆಟ್ಟದಾಗಿತ್ತು."[೪೫] ಆ ಸಮಯದಲ್ಲಿ ಇವರಿಗೆ ಹರಿಜನ ಸಂಘದ ಕಾರ್ಯದರ್ಶಿಗಳಾದ ಕೆ.ಎಫ್. ಪಾಟೀಲ್, ಸೋಮಣ್ಣ ತೆರಗಾಂಕರ ಹಾಗೂ ಸಂಗೂರ ಕರಿಯಪ್ಪ ಧೈರ್ಯ ತುಂಬಿದರು.

**ಹರಿಜನ ಮಕ್ಕಳೊಂದಿಗೆ ನಾಗಮ್ಮನವರ ಪ್ರವಾಸ**

ನಾಗಮ್ಮನವರಿಗೆ ಸಾರ್ವಜನಿಕರು, ಸಂಬಂಧಿಗಳ ಹಾಗೂ ಅಣಕದ ಮಾತುಗಳನ್ನು ಕೇಳಿ ಏನೇ ನೋವಾಗಿದ್ದರೂ ಹರಿಜನ ಮಕ್ಕಳ ಮೇಲಿನ ಪ್ರೀತಿ ಮಾತ್ರ ಕಡಿಮೆಯಾಗಲಿಲ್ಲ. "ಹರಿಜನ ಮಕ್ಕಳನ್ನು ಎಡೆಯೂರ ಸಿದ್ಧಲಿಂಗೇಶ್ವರನ ದರ್ಶನ ಮಾಡಿಸಲು ಕರೆದುಕೊಂಡು ಹೋದರೆ ದೇವಾಲಯದ ಒಳಗೆ ಪ್ರವೇಶ ನೀಡಲಿಲ್ಲ. ಆದರೆ ನಾಗಮ್ಮ ಎಲ್ಲ ಮಕ್ಕಳಿಗೆ ದೇವರ ದರ್ಶನ ಮಾಡಿಸಿಯೇ ಹೋಗುವುದಾಗಿ ದೇವಾಲಯದ ಕಟ್ಟೆಯ ಮೇಲೆ ಮಕ್ಕಳೊಂದಿಗೆ ಸತ್ಯಾಗ್ರಹಕ್ಕೆ ಕುಳಿತರು. ಮಧ್ಯಾಹ್ನದ ನಂತರ ದೇವರ ದರ್ಶನಕ್ಕೆ ಅವಕಾಶ ಮಾಡಿಕೊಟ್ಟರು. ಇದೇ ರೀತಿ ಬಾದಾಮಿ, ಬನವಾಸಿ, ಉಳವಿ ದೇವಸ್ಥಾನಗಳಿಗೂ ಮಕ್ಕಳಿಗೆ ದೇವರ ದರ್ಶನ ಮತ್ತು ಹರಿಜನ ಮಕ್ಕಳಿಂದಲೇ ಪೂಜೆ ಮಾಡಿಸಿದ್ದು"[೪೬] ವಿಶೇಷವಾಗಿತ್ತು.

**ಮಕ್ಕಳಿಗೆ ಶಿಕ್ಷಣ :** ಹರಿಜನ ಬಾಲಿಕಾಶ್ರಮದ ಮಕ್ಕಳ ಸಂಖ್ಯೆ ಬರುಬರುತ್ತಾ ಹೆಚ್ಚಾಯಿತು. ಅವರಿಗೆ ಶಿಕ್ಷಣದೊಂದಿಗೆ ನೈತಿಕ ಪಾಠ, ಇತಿಹಾಸ, ಸಾಮಾನ್ಯ ಜ್ಞಾನ ನೀಡುವ ಕಾರ್ಯ ಪ್ರಾರಂಭವಾದಾಗ ಇವರ ಸಹಾಯಕ್ಕೆ ಕ್ರಿಶ್ಚಿಯನ್ ಮಹಿಳೆ ಲೀಲಾ ಪೀಟರ್ಸ್ ಮುಂದೆ ಬಂದದ್ದು ನಾಗಮ್ಮಗೆ ಸ್ವಲ್ಪ ಕಾರ್ಯಭಾರ ಕಡಿಮೆಯಾದ ಬಗ್ಗೆ ಲೀಲಾವತಿ ಮಾಗಡಿಯವರ ಉಲ್ಲೇಖ. ಹರಿಜನ ಮಕ್ಕಳು ಬಂದಾಕ್ಷಣ ಅವರ ತಲೆಗೂದಲನ್ನು ಕತ್ತರಿಸುವ ಕಾರ್ಯವನ್ನು ಸಂಗೂರು ಕರಿಯಪ್ಪ ಮಾಡುತ್ತಿದ್ದರು. ಏಕೆಂದರೆ ಕ್ಷೌರಿಕರೂ ಕೂಡ ಹರಿಜನ ಮಕ್ಕಳನ್ನು ಮುಟ್ಟುತ್ತಿರದ ಬಗ್ಗೆ ಗುಡ್ಡಪ್ಪ ಹರಿಜನರ ಸಂದರ್ಶನದಿಂದ ತಿಳಿಯಲಾಗಿದೆ.

**ಮಕ್ಕಳಿಂದಲೇ ಜಾಗೃತಿ ಕಾರ್ಯ**

ಹರಿಜನರ ಅಭಿವೃದ್ಧಿಯಾಗಬೇಕಾದರೆ ಕೇವಲ ಮಕ್ಕಳನ್ನು ಆಶ್ರಮದಲ್ಲಿ ಬೆಳಸುವುದರಿಂದ ಕಾರ್ಯ ಯಶಸ್ಸು ಪಡೆಯುವುದಿಲ್ಲ, ಬದಲಾಗಿ ಅದೇ ಮಕ್ಕಳನ್ನು ಕರೆದುಕೊಂಡು ಗ್ರಾಮಗಳಲ್ಲಿ ಸುತ್ತಾಡಿ ಎಲ್ಲ ಜನತೆಗೆ ಜಾಗೃತಿ ಮೂಡಿಸಬೇಕೆಂದು ನಿರ್ಧರಿಸಿದ ನಾಗಮ್ಮ ಹುಬ್ಬಳ್ಳಿ ಸುತ್ತಮುತ್ತಲಿನ ಹಳ್ಳಿಗಳಿಗೆ ಮಕ್ಕಳನ್ನು ಕರೆದುಕೊಂಡು ಹೋಗಿ ಪ್ರಭಾತ ಫೇರಿ, ದೇಶಭಕ್ತಿ ಗೀತೆಗಳ ಮೂಲಕ, ಲಾಠಿ ಲೇಜೀಮ್, ವ್ಯಾಯಾಮ ಶಿಕ್ಷಣ, ಹಂಜಿ ಮಾಡುವುದು, ನೂಲು ತೆಗೆಯುವುದು ಇನ್ನು ಮುಂತಾದ ಚಟುವಟಿಕೆಗಳಿಂದ ಸಾಮಾಜಿಕ ವಾತಾವರಣವನ್ನು ತಿಳಿಗೊಳಿಸುವ ಕಾರ್ಯ ಕೈಗೊಂಡರು.

ನಾಗಮ್ಮನವರ ಈ ರೀತಿಯ ಸತತ ಪರಿಶ್ರಮದ ಫಲವಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆಗಳಾಗುತ್ತಿದವು. ವಿವಾಹ, ಸಭೆ–ಸಮಾರಂಭಗಳಿಗೆ ಮಕ್ಕಳಿಗೆ ಆಮಂತ್ರಣ ಬರುತ್ತಿದವು. ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀಗಳು ಹರಿಜನ ಮಕ್ಕಳಿಗೆ ಆಮಂತ್ರಣವಿತ್ತು ಸಹ ಪಂಕ್ತಿ ಭೋಜನ ಮಾಡಿಸುವುದರೊಂದಿಗೆ ವರ್ಷಕ್ಕೊಮ್ಮೆ ಪ್ರಸಾದಕ್ಕೆ ಹರಿಜನ ಮಕ್ಕಳಿಗೆ ಕರೆಯುವ ಪರಿಪಾಠ ಹಾಕಿದರು. ಕಲ್ಲನಗೌಡ ಪಾಟೀಲ ರಾಣೆಬೆನ್ನೂರಿನಲ್ಲಿ ತಮ್ಮ ವಿವಾಹ ನಡೆದಾಗ ಹುಬ್ಬಳ್ಳಿಯಿಂದ ಎಲ್ಲ ಮಕ್ಕಳಿಗೆ ಆಮಂತ್ರಣ ನೀಡಿದರು. ೧೯೩೬ರಲ್ಲಿ ಹುಬ್ಬಳ್ಳಿ ತಾಲೂಕಿನ ಮೂವತ್ತು ಹಳ್ಳಿಗಳಿಗೆ ಕಾಲ್ನಡಿಗೆ ಪ್ರವಾಸ ಕೈಗೊಂಡು ಜಾಗೃತಿ ಕಾರ್ಯ ಯಶಸ್ವಿ ಮಾಡಲಾಯಿತು. ಹಳ್ಳಿಗಳ ಪ್ರವಾಸದ ಸಮಯದಲ್ಲಿ ಯಾವುದೇ ರೀತಿಯ ಭೇದಭಾವವಿಲ್ಲದೆ ಇವರಿಗೆ ಊಟ, ವಸತಿ ಸೌಕರ್ಯ ಮಾಡಿಕೊಡುತ್ತಿದ್ದರು. ಅಲ್ಲಿ ನಡೆಯುವ ಪ್ರಭಾತ ಫೇರಿ, ಮೆರವಣಿಗೆ, ಸಭೆ–ಸಮಾರಂಭಗಳಿಗೆ ಜನತೆ ಸೇರುವುದು, ಅಲ್ಲಿಯ ಕೆರೆ, ಬಾವಿ, ಹೊಂಡಗಳಲ್ಲಿ ನೀರು ತುಂಬಿಸುವ ಕಾರ್ಯಗಳಿಗೆ ಜನತೆ ಸ್ಪಂದಿಸಿದ ರೀತಿಯ ಬಗ್ಗೆ ಗುಡ್ಡಪ್ಪ ಹರಿಜನ ನೋವು–ಅಭಿಮಾನದಿಂದಲೇ ವಿವರಿಸುತ್ತಾರೆ.

**ಜೈಲುವಾಸ** : ವೈಯಕ್ತಿಕ ಸತ್ಯಾಗ್ರಹಕ್ಕಾಗಿ ನಾಗಮ್ಮನವರು ತಮ್ಮ ಹುದ್ದೆಗೆ ರಾಜೀನಾಮೆ ನೀಡಿ ಸತ್ಯಾಗ್ರಹದಲ್ಲಿ ಭಾಗಿಯಾಗಿ ಸೆರೆಮನೆ ಸೇರಿದರು. ಹೀಗೆ ನಾಗಮ್ಮ ಕೇವಲ ಹರಿಜನ ಬಾಲಿಕಾಶ್ರಮ ಕಾರ್ಯಗಳಲ್ಲದೆ ಚಳುವಳಿಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ತಿಳಿಸುತ್ತಾರೆ.

ಹರಿಜನ ಬಾಲಿಕಾಶ್ರಮದ ಬಗ್ಗೆ ವೀರಮ್ಮ ಕರಿಯಪ್ಪ ಸಂಗೂರು ಉಲ್ಲೇಖಿಸಿರುವಂತೆ "ಆಶ್ರಮಕ್ಕೆ ಬಂದಾಗ ನನಗೆ ಎಂಟು ವರ್ಷ. ನಾನು ತಾಯಿ–ತಂದೆಯರನ್ನು ಕಳೆದುಕೊಂಡ ಹರಿಜನ ಹುಡುಗಿ. ಆಶ್ರಮದಲ್ಲಿ ತಾಯಿ ನಾಗಮ್ಮ ತನ್ನ ಮಗಳಂತೆ ಕಂಡರು. ಕೊಳಕು ಬಟ್ಟೆಯನ್ನು ತೆಗೆಯಿಸಿ ಹೊಸ ಬಟ್ಟೆ ನೀಡಿದರು. ಅಷ್ಟೇ ಅಲ್ಲ ಹರಿಜನ ಸೇವೆಯಿಂದಾಗಿ ಆ ದಂಪತಿಗಳಿಗೆ ವಿರೋಧದ ಬಿರುಗಾಳಿಯೇ ಅವರೆದುರು ಬೀಸುತ್ತಿತ್ತು. ಅದಕ್ಕೆ ಉದಾಹರಣೆ ನನ್ನದೇ ಒಂದು ಘಟನೆ ಸಾಕ್ಷಿ. ನನ್ನನ್ನು ನಾಗಮ್ಮ ಬೆಳಗಾವಿಯ ಅವರ ಸಂಬಂಧಿಯೊಬ್ಬರ ಮನೆಗೆ ಕರೆದುಕೊಂಡು ಹೋದಾಗ ಅವರು ಈ ಹುಡುಗಿ ಯಾರೆಂದಾಗ ನಾಗಮ್ಮ ನನ್ನ ಮಗಳು ಎಂದದ್ದು, ನಂತರದಲ್ಲಿ ಹುಬ್ಬಳ್ಳಿಯ ಯಾರೋ ಒಬ್ಬರು ಇಲ್ಲ ಹರಿಜನ ಹುಡುಗಿ ಅವಳನ್ನು ಯಾಕೇ ಮನೆಯೊಳಗೆ ಸೇರಿಸಿದಿರಿ,? ಎಂದಾಗ ಇವರನ್ನು ಕುರಿತು ಹಲವರು ಹಲವು ರೀತಿಯಲ್ಲಿ ಕೆಟ್ಟದಾಗಿ ಮಾತನಾಡಿದರು, ನಾಗಮ್ಮ ಮಾತ್ರ ಆಗಲೂ 'ಇವಳು ನನ್ನ ಮಗಳೆ; ಬಸವಣ್ಣ ಮತ್ತು ಗಾಂಧೀಜಿ ಉದಾತ್ತ ವಿಚಾರಗಳನ್ನು ಇಟ್ಟುಕೊಂಡು, ಜಾತಿಯೆಂಬ ಹುಚ್ಚು ಭಾವನೆಯನ್ನು ಕಿತ್ತು ಹಾಕಿ ಹರಿಜನ ಸೇವೆಯೆ ದೇವರ ಸೇವೆ ಎಂದು ನಂಬಿ ನಾವು (ಪತಿಯೂ ಸೇರಿ) ಅಸ್ಪೃಶತೆಯನ್ನು ಸಂಪೂರ್ಣ ಕಿತ್ತು ಹಾಕಿದ್ದೇವೆ' ಎಂದು ಹೇಳಿದ್ದಲ್ಲದೆ, ಅವಳೇ ಬೇಡ ಅಂದಾಗ ನಾನೆಂದೂ ಇಲ್ಲಿಗೆ ಬರುವುದಿಲ್ಲವೆಂದು ಹೊರಬಂದರು."[೬] ಈ

ಘಟನೆ ನಾಗಮ್ಮನ ಹರಿಜನ ಮಕ್ಕಳ ಸೇವೆಗೆ ಸ್ಪಷ್ಟತೆಗೆ ಹಾಗೂ ಸಂಬಂಧಿಗಳೊಂದಿಗೆ ಎದುರಿಸಿದ ಸಮಸ್ಯೆಗಳಿಗೆ ಸಾಕ್ಷಿ.

ಹುಬ್ಬಳ್ಳಿಯ ಹರಿಜನ ಬಾಲಿಕಾಶ್ರಮ ಕೇವಲ ಎರಡು ಜನ ಹರಿಜನ ಬಾಲಕಿಯರಿಂದ ಆರಂಭವಾಗಿ ಮುಂದೆ ಹಂತಹಂತವಾಗಿ ಅಭಿವೃದ್ಧಿ ಹೊಂದಿತು. ೧೯೫೫ರಲ್ಲಿ ಈ ಸಂಸ್ಥೆಗೆ ಜವಹರಲಾಲ ನೆಹರು 'ಮಹಿಳಾ ವಿದ್ಯಾಪೀಠ'ವೆಂದು ನಾಮಕರಣ ಮಾಡಿದರು.

ಈ ಸಂಸ್ಥೆಯ ಅಭಿವೃದ್ಧಿಯಲ್ಲಿ ನಾಗಮ್ಮನವರ ಸತತ ಪ್ರಯತ್ನದ ಫಲ ಕಾಣುತ್ತೇವೆ. ೧೯೩೪ರಲ್ಲಿ ನಾಗಮ್ಮ ಪಾಟೀಲ್ ಹರಿಜನ ಉದ್ಧಾರದ ಕಾರ್ಯಗಳು ಅವರ ಕಷ್ಟಗಳ ವಿರೋಧದ ಮಧ್ಯ ನಿಂತು ಹೋರಾಡಿದ್ದು ಇತಿಹಾಸ. ಆದರೆ ಇಂದು ಆಧುನಿಕ ಯುಗ, ವೈಜ್ಞಾನಿಕ ಯುಗದಲ್ಲಿ ಯಾವ ಜಾತಿ-ಭೇದವಿಲ್ಲವೆಂದು ಹೇಳುತ್ತವೆ. ಆದರೆ ಅಧ್ಯಯನ ಕ್ಷೇತ್ರವಾದ ರಾಣೆಬೆನ್ನೂರು ತಾಲೂಕಿನ ಇಟಗಿ ಗ್ರಾಮದಲ್ಲಿ ಸೆಪ್ಟೆಂಬರ್ ೨೦೧೬ರಲ್ಲಿ ನಡೆದ ಹರಿಜನರ ಕ್ಷೌರ ನಿರಾಕರಣೆಯ ಘಟನೆಯು ಇಂಥ ಆಧುನಿಕ ಕಾಲದಲ್ಲಿಯೂ ನಾವು ಎಲ್ಲಿದ್ದೇವೆ ಎಂಬುದನ್ನು ಅವಲೋಕಿಸಿಕೊಳ್ಳಬೇಕಾಗಿದೆ.

**೩. ಲೀಲಾವತಿ ವೆಂಕಟೇಶ ಮಾಗಡಿ**

ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದ ವೀರನಗೌಡ ಹಾಗೂ ನಾಗಮ್ಮ ಪಾಟೀಲ ದಂಪತಿ ಮಗಳು. ಇವರು ಚಳುವಳಿಗೆ ಧುಮುಕಲು ಪ್ರೇರಣೆಯೆಂದರೆ, ಇವರ ತಂದೆ ಇವರನ್ನು ಚಿಕ್ಕವರಾಗಿದ್ದಾಗಲೇ ಚಳುವಳಿಗೆ ಸಂಬಂಧಿಸಿದ ಸಭೆ ಸಮಾರಂಭಗಳಿಗೆ ಕರೆದುಕೊಂಡು ಹೋಗುತ್ತಿದ್ದರು. ಹಾಗೂ ಇವರು ಚಿಕ್ಕವರಾಗಿದ್ದಾಗ ೧೯೨೭ರಲ್ಲಿ ಹುಬ್ಬಳ್ಳಿಯ ಇವರ ಮನೆಯ ಎದುರಿನ ರಸ್ತೆಯಲ್ಲಿ ಕ್ರೈಸ್ತ ಕುಟುಂಬದ ಜಾರ್ಜ್ ಸಹೋದರರು ಗಾಂಧೀಜಿ ಮತ್ತು ಬಾಲಗಂಗಾಧರ ತಿಲಕರ ಕರೆಗೆ ಓಗೊಟ್ಟು ತಮ್ಮ ವಿದೇಶಿ ವಸ್ತ್ರಗಳನ್ನು ಅಗ್ನಿಗೆ ಆಹುತಿ ಕೊಟ್ಟ ಘಟನೆ, ಅಲ್ಲದೆ ಬೆಳಗಾವಿಯಲ್ಲಿಯ ಸಾರ್ವಜನಿಕ ಸಭೆಗಳಲ್ಲಿ ನಡೆಯುತ್ತಿದ್ದ ಕೃಷ್ಣಬಾಯಿ ಪಂಜೇಕರ ಹಾಗೂ ಗಂಗಾಧರರಾವ್ ದೇಶಪಾಂಡೆ ಇವರ ಭಾಷಣಗಳಿಗೆ ಜನರು ಆಕರ್ಷಿತರಾಗುತ್ತಿದ್ದ ಬಗ್ಗೆ ಲೀಲಾವತಿಯವರನ್ನು ಸಂದರ್ಶಿಸಿದ ಸಂಪಳ್ಳಿ ಕಮಲಾ ಅವರು ತಮ್ಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರವನಿತೆಯರು ಎಂಬ ಕೃತಿಯಲ್ಲಿ(ಪುಟ ೧೧೭) ಉಲ್ಲೇಖಿಸಿದ್ದಾರೆ.

**ವಿದ್ಯಾರ್ಥಿಯಾಗಿದ್ದಾಗ :** ಇವರು ಚಿಕ್ಕಮಕ್ಕಳ ಮೆರವಣಿಗೆಯ ನಾಯಕತ್ವ ವಹಿಸಿ, 'ತಕಲೀ ಚಲಾ ಚಲಾಕೆ ಲೇಂಗೆ ಸ್ವರಾಜ್ಯ ಲೇಂಗೆ' ಎಂದು ಹಾಡುತ್ತಾ ಹೋಗುತ್ತಿದ್ದಾಗ, ಇವರನ್ನು ಪೊಲೀಸರು ಲಾಕಪ್ಪಿಗೆ ಹಾಕಿದ್ದು ಇವರು ವಿದ್ಯಾರ್ಥಿಯಾಗಿದ್ದಾಗ ಎಂಬುದು ವಿಶೇಷ

**ಅಂತರ್ಜಾತಿ ವಿವಾಹ :** ಸೂರ್ಯನಾಥ ಕಾಮತ್ ಅವರು ಉಲ್ಲೇಖಿಸುವಂತೆ "ಗಾಂಧೀಜಿಯ ವಿಚಾರಗಳಿಂದ ಪ್ರಭಾವಿತಳಾದ ಲೀಲಾವತಿ ಪಾಟೀಲ್ ಬೇರೆ ಜಾತಿಯ ತರುಣ ದೇಶಭಕ್ತ

ವೆಂಕಟೇಶ ಮಾಗಡಿ ಅವರನ್ನು ೧೯೪೨ರ ಜನವರಿ ೨೬ರಂದು ವಿವಾಹವಾದರು.[೬೮] ೧೯೪೨ರ ಚಲೇಜಾವ್ ಚಳುವಳಿಯಲ್ಲಿ ವೀರನಗೌಡ ಪಾಟೀಲರ ಬಂಧನವನ್ನು ವಿರೋಧಿಸಿ ಹುಬ್ಬಳ್ಳಿಯ ಹರಿಜನ ವಿದ್ಯಾಪೀಠದ ವಿದ್ಯಾರ್ಥಿನಿಯರು ಘೋಷಣೆ ಕೂಗಿ ಮೆರವಣಿಗೆ ನಡೆಸಿದ್ದರಿಂದ ನಾಲ್ಕರಿಂದ ಐದು ಜನ ಬಂಧನವಾದರು. ಆ ಗುಂಪಿನ ನಾಯಕತ್ವವನ್ನು ವಹಿಸಿದವರು ಗಂಗು ಬೆಳವಡಿ, ಸರೋಜಾ, ಲೀಲಾ ಚವಟಿ, ಇಂದಿರಾ ಬೆಳವಡಿ; ಇವರಿಗೆಲ್ಲರಿಗೂ ಮೂರು ತಿಂಗಳ ಜೈಲು ಶಿಕ್ಷೆಯಾಯಿತು. ವಿದ್ಯಾರ್ಥಿನಿಯರ ಬಂಧನದ ನಂತರ ಇವರ ತಾಯಿ ನಾಗಮ್ಮ ಮತ್ತು ಇವರನ್ನು ಬಂಧಿಸಲಾಯಿತು. ಕಾರಣ ಆಶ್ರಮದ ಬಾಲಕಿಯರನ್ನು ಚಳುವಳಿಗೆ ಪ್ರೇರೇಪಿಸಿದ್ದೀರಿ ಎಂಬ ಕಾರಣ ನೀಡಿ ಇವರನ್ನು ೧೧ ತಿಂಗಳ ಡೆಟಿನ್ಯೂ ಕೈದಿಯೆಂದು ಹಿಂಡಲಗಾ ಜೈಲಿಗೆ ಕಳುಹಿಸಿದರು. ಇವರ ತಾಯಿಯನ್ನು ಯರವಾಡ ಜೈಲಿಗೆ ಕಳುಹಿಸಲಾಯಿತು.

ಜೈಲಿನಲ್ಲಿರುವಾಗ ಕೈದಿಗಳ ಸಂಖ್ಯೆ ಹೆಚ್ಚಿ ಕಾಲರಾ ಅಂಟು ಜಾಡ್ಯ ಹರಡಿ ಹಲವು ಮಹಿಳೆಯರು ಸತ್ತ ಮೇಲೆ ಎಚ್ಚತ್ತ ಸರ್ಕಾರ ಮಿಕ್ಕವರನ್ನು ಜೈಲಿನಿಂದ ಬಿಡುಗಡೆ ಮಾಡಿತು. ಖಾಯಲೆಯಿಂದ ಬಳಲಿದೆವಾದರೂ ಜೀವಂತ ಉಳಿದು ಸ್ವರಾಜ್ಯವನ್ನು ಕಂಡೆವೆಂದು ಮಾಗಡಿ ಯವರು ಅಭಿಮಾನದಿಂದ ನುಡಿದಿದ್ದಾರೆ. ಲೀಲಾವತಿಯವರನ್ನು ಸಂದರ್ಶಿಸಿದ ಸಂಪಳ್ಳಿ ಕಮಲಾ ಅವರು ತಮ್ಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರವನಿತೆಯರು ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

**೪. ದೇವಕ್ಕ ರಮಾನಂದ ಮನ್ನಂಗಿ**

ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಾವೇರಿ ಜಿಲ್ಲೆಯ ಚಳುವಳಿ ಕಾಲಕ್ಕೆ ದಂಪತಿಗಳಿಬ್ಬರೂ ಚಳುವಳಿಯಲ್ಲಿ ಧುಮುಕಿದ ಅಪರೂಪದ ಪ್ರಕರಣಗಳು ಕಂಡುಬರುತ್ತವೆ. ಅಂತಹ ದಂಪತಿಗಳ ಸಾಲಿಗೆ ಹಾವೇರಿ ತಾಲೂಕಿನ ಜಂಗಮನಕೊಪ್ಪ ಗ್ರಾಮದ ರಮಾನಂದರು ಮತ್ತು ಅವರ ಪತ್ನಿ ದೇವಕ್ಕ ಮನ್ನಂಗಿ ಸೇರುತ್ತಾರೆ. ದೇವಕ್ಕ ದಂಪತಿಗಳು ಗಾಂಧೀಜಿಯ ಆದರ್ಶಗಳನ್ನು ಉಸಿರಿರುವವರೆಗೂ ಪಾಲಿಸಿದವರು; ಅವರ ಸಮಕಾಲೀನ ಜನ ಇವರನ್ನು ಜಿಲ್ಲೆಯ ಗಾಂಧೀ ದಂಪತಿಗಳೆಂದು ಕರೆದದ್ದು ವಿಶೇಷ.

**ಕೌಟುಂಬಿಕ ಜೀವನ** : ದೇವಕ್ಕ "೧೯೨೩ರಲ್ಲಿ ಹಾವೇರಿ ತಾಲೂಕಿನ ಹತ್ತಿಮತ್ತೂರಲ್ಲಿ ಜನಿಸಿದರು. ದೇವಕ್ಕನವರ ಬಗ್ಗೆ ಸಾಮಾಜಿಕ ಕಾರ್ಯಕರ್ತ ಜಿ.ಎಂ. ಹಾಲಪ್ಪ ಉಲ್ಲೇಖಿಸಿರುವಂತೆ– 'ಹೆಣ್ಣನ್ನು ದಾಸ್ಯದಿಂದ ಮನೆಯೊಳಗೆ ಇಡತಕ್ಕ ಆ ಕಾಲದಲ್ಲಿ ಧಾರವಾಡದಲ್ಲಿ ಮಹಿಳಾ ಜಾಗೃತಿಗೊಳಿಸಿದವರಲ್ಲಿ ಕುಸುಗೂರು ಬಸಮ್ಮ, ಮೈಸೂರು ಸಿದ್ದಮ್ಮ ಸಿದ್ದಮ್ಮ ಮೈಲಾರ ಪ್ರಮುಖರು. ಸಮಾಜದಲ್ಲಿ ಕಟ್ಟುಪಾಡಿದ್ದ ಕಾಲ, ಹೆಣ್ಣು ಮಕ್ಕಳು ರಸ್ತೆಯಲ್ಲಿ ಬಂದು ಸರ್ಕಾರದ ವಿರುದ್ಧ ಹೋರಾಟದಲ್ಲಿ ಭಾಗವಹಿಸಲು ಧೈರ್ಯ ಬೇಕು. ಅಂತಹ ಧೈರ್ಯ ಮಾಡಿದವರಲ್ಲಿ ದೇವಕ್ಕನವರೂ ಒಬ್ಬರು."[೬೯] ಅಂದು ಮಹಿಳೆಯರ ಸಾಮಾಜಿಕ ಸ್ಥಿತಿಗತಿ ಮತ್ತು ಅಂಥ ಸ್ಥಿತಿಯಲ್ಲಿ ಮನೆಯಿಂದ ಹೊರಬಂದ ದೇವಕ್ಕನವರ ಧೈರ್ಯ ಮೆಚ್ಚುವಂಥದಾಗಿತ್ತು.

"ಶಾಲಾ ದಿನಗಳಲ್ಲಿ ಲೇಜಿಮ್, ಲಾಠಿ ಕಲಿತದ್ದು, ಇಪ್ಪತ್ತೈದು ಹುಡುಗಿಯರೊಂದಿಗೆ 'ವಂದೇ ಮಾತರಂ' ಹೇಳುತ್ತಾ ಇವರೇ ನಾಯಕತ್ವ ವಹಿಸಿ ಮೆರವಣಿಗೆ ಸಮಯದಲ್ಲಿ ಪೊಲೀಸರು ತಡೆದಾಗ, 'ನೀವೇನು ಬೇರೆ ದೇಶದವರಾ? ನಮ್ಮೊಂದಿಗೆ ಹುಟ್ಟಿದವರಲ್ಲವೇ? ಎಂದು ಧೈರ್ಯವಾಗಿ ಕೇಳಿದ್ದು' ಅವರ ಸ್ವಾತಂತ್ರ್ಯದ ಕಿಚ್ಚನ್ನು ಪ್ರದರ್ಶಿಸುತ್ತದೆ.

ಪತಿ ರಮಾನಂದರು ತಾವೇ ನೂತ, ನೇಯ್ದ ಖಾದಿಯನ್ನು ಕತ್ತರಿಸಿ ಹೊಲಿದುಕೊಂಡು ಕೊನೆಯವರೆಗೂ ಖಾದಿ ಬಟ್ಟೆ ಧರಿಸಿದವರು. ಪತ್ನಿ ದೇವಕ್ಕ ಪತಿಯಂತೆ ಖಾದಿಧಾರಿಯಾಗಿ ಒಡವೆ ವಸ್ತ್ರ ಶೃಂಗಾರಗಳ ಬಗೆಗೆ ಆಸೆ ಇಟ್ಟುಕೊಳ್ಳದೆ ಸರಳ ಜೀವನವನ್ನು ನಡೆಸುತ್ತಾ ಪತಿಯನ್ನು ಹಿಂಬಾಲಿಸುತ್ತ ಚಳುವಳಿಯಲ್ಲಿ ಭಾಗಿಯಾದವರು.

ರಮಾನಂದ ಮನ್ನಂಗಿ ಜಿಲ್ಲೆಯ ಚಳುವಳಿಯ ಪ್ರಮುಖ ನಾಯಕ ಮೈಲಾರ ಮಹದೇವಪ್ಪನ ತಂಡದ ಸದಸ್ಯರಾಗಿದ್ದು, ಮಹದೇವಪ್ಪನ ಗಾಂಧಿ ತತ್ವಗಳನ್ನು ಕಂಡು ತಾವು ಗಾಂಧಿ ಆಶ್ರಮಕ್ಕೆ ಹೋಗಿ ಬರಬೇಕೆಂದು ಕನಸು ಕಂಡು ಅದಕ್ಕಾಗಿ ದೇವಕ್ಕಳನ್ನು ಕರೆದುಕೊಂಡು ೧೯೩೬ರಲ್ಲಿ ವಾರ್ಧಾ ಜಿಲ್ಲಾ ಸೇವಾಶ್ರಮ ಶೇಗಾಂವಕ್ಕೆ ಹೋದರು.

ಆಶ್ರಮದಲ್ಲಿ ಅವರ ದಿನಚರಿಯ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಸದಾವಕಾಶ ಈ ದಂಪತಿಗಳಿಗೆ ಸಿಕ್ಕಿತು. ದೇಶದ ಅನೇಕ ಗಣ್ಯವ್ಯಕ್ತಿಗಳ ಪರಿಚಯವು ಇವರಿಗೆ ಲಭಿಸಿತು. ಗಾಂಧೀಜಿ ಅಲ್ಲದೇ ಕಸ್ತೂರಬಾ, ಮೀರಾಬೆಹನ್, ಕಿಶೋರಲಾಲ ಮಶ್ರೂವಾಲ, ಕುಮಾರಪ್ಪ ಬಂಧುಗಳು, ಮಹದೇವ ಭಾಯಿ ಪ್ಯಾರೇಲಾಟ, ವಿನೋಭಾ ಭಾವೆ, ಸೋನುಭಾಪಾ ಜಾಜೂಜಿ ಹೀಗೆ ಮೊದಲಾದವರ ದರ್ಶನವಾಯಿತು."[೫೦] ಅಲ್ಲದೆ ಆಶ್ರಮ ಚಟುವಟಿಕೆಗಳಲ್ಲಿ ದಂಪತಿಗಳಿಬ್ಬರು ಭಾಗವಹಿಸಿದ್ದರು. "ಹಳ್ಳಿಗಳಿಗೆ ಹೋಗಿ ಗಾಂಧೀವಾದದ ಕಾರ್ಯಕ್ರಮಗಳನ್ನು ಜನತೆಯಲ್ಲಿ ವಿವರಿಸುವ ಕಾರ್ಯ ಮಾಡಿದ್ದಲ್ಲದೆ, ವಾರದಲ್ಲಿ ಮೂರು ದಿನ ಹರಿಜನ ಕೇರಿಗೆ ಹೋಗಿ ಸ್ವಚ್ಛತಾ ಕಾರ್ಯ ಮಾಡಿಬರುವುದು ಸಾಮಾನ್ಯ ಕಾರ್ಯವಾಗಿತ್ತು."[೫೧] ವಿಶೇಷವೆಂದರೆ ಒಮ್ಮೊಮ್ಮೆ ಗಾಂಧೀಜಿ ಆಶ್ರಮವಾಸಿಗಳ ನೇತೃತ್ವ ವಹಿಸುತ್ತಿದ್ದರು.

ಆಶ್ರಮದಲ್ಲಿ ಸಿರಿವಂತರು, ಬಡವರು, ಉನ್ನತ ಪದವಿ ಪಡೆದವರು, ವಿದೇಶಿಯರು ಇದ್ದು ಅವರೆಲ್ಲರೂ ಬಕೀಟು ಬರ್ಲು ಹಿಡಿದು ಸ್ವಚ್ಛ ಮಾಡುವ ಮನಸ್ಸು ಹೊಂದಿದವರು ಆಗಿದ್ದವರು. ಇದು ದೇವಕ್ಕನವರಿಗೆ ಬೇರೆಯವರಿಗೆ ಸ್ವಚ್ಛತೆ ಬಗ್ಗೆ ಹೇಳುವುದಕ್ಕಿಂತ ನಾವು ಮಾಡಬೇಕು ಎಂಬ ಸತ್ಯವನ್ನು ಅರಿತುಕೊಂಡರು.

"ಮಹಿಳಾ ಆಶ್ರಮದಲ್ಲಿದ್ದ ದೇವಕ್ಕನವರ ಹೇಳಿಕೆಯಂತೆ ೪೦ ಜನ ಮಹಿಳೆಯರಿದ್ದು, ಅವರೊಂದಿಗೆ ಆಶ್ರಮಕ್ಕೆ ಇಷ್ಟೆಲ್ಲಾ ಸಹಾಯ ಮಾಡುತ್ತಿದ್ದ ಸೇಠ ಜಮನಾಲಾಲ ಬಜಾಜರು ಸರಳತೆ ಮೆರೆದು ತಮ್ಮೊಂದಿಗೆ ಊಟ ಮಾಡುತ್ತಿದ್ದದ್ದು ವಿಶೇಷವಾಗಿತ್ತು."[೫೨] ತಮ್ಮೆಲ್ಲರಿಗೆ ಸಾಮಾಜಿಕ ಕಾರ್ಯಕ್ಕೆ, ಸರಳತೆಗೆ ಆದರ್ಶರಾಗಿದ್ದರು ಎಂದು ತಮ್ಮ ಆಶ್ರಮದ ಅನುಭವಗಳನ್ನು ಉಲ್ಲೇಖಿಸಿರುತ್ತಾರೆ.

**ಭೂಗತ ಹೋರಾಟದಲ್ಲಿ ಪತಿ** : ೧೯೪೨ರ ಆಗಸ್ಟ್ ೯ರಂದು **'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ'** ಚಳುವಳಿ ಆರಂಭವಾದಾಗ ಮಹದೇವಪ್ಪ ಮೈಲಾರ ತಂಡ ಭೂಗತ ಕಾರ್ಯಗಳನ್ನು ಮಾಡುತ್ತಿತ್ತು. ಆ ತಂಡದಲ್ಲಿ ದೇವಕ್ಕನವರ ಪತಿ ರಮಾನಂದ ಮನ್ನಂಗಿಯಿದ್ದರು. ಅವರು ಪೊಲೀಸರಿಗೆ ಸಿಗದೇಹೋದಾಗ ದೇವಕ್ಕನವರನ್ನು ಪೊಲೀಸರು ನಿಮ್ಮ ಪತಿ 'ಎಲ್ಲಿದ್ದಾರೆ' ಎಂದು ಪೀಡಿಸುತ್ತಿದರು. ಹಾಗೂ ಬೆಳಗಿನಿಂದ ಸಾಯಂಕಾಲದವರೆಗೂ ಠಾಣೆಯಲ್ಲಿ ಕೂರಿಸಿಕೊಂಡು ಸಾಯಂಕಾಲ ಕಳುಹಿಸುತ್ತಿದ್ದರು. ಆದರೆ ದೇವಕ್ಕ ಗರ್ಭಿಣಿ ಎಂಬ ವಿಚಾರ ತಿಳಿದ ಫೌಜುದಾರ ಮಜೀದ ಸಾಹೇಬ ದೇವಕ್ಕನನ್ನು 'ಇನ್ನು ನೀವು ಬರುವುದು ಬೇಡ' ಎಂದು ಕಳುಹಿಸಿದ ಬಗ್ಗೆ ಹಾಗೂ 'ಮಜೀದ ಫೌಜುದಾರ ದೇಶಭಕ್ತನಾಗಿದ್ದ ಮತ್ತು ಆತ ನಿಜವಾಗಿಯೂ ಸ್ವಾತಂತ್ರ್ಯ ಯೋಧರಿಗೂ ಸರಕಾರಕ್ಕೂ ಅನುಕೂಲವಾಗಿಯೇ ಚಾಣಾಕ್ಷತನದಿಂದ ಕಾರ್ಯ ನಿರ್ವಹಿಸುತ್ತಿದ್ದ' ಎಂಬುದನ್ನು ಪಾಲಕರಿಂದ ತಿಳಿದುಕೊಂಡಿದ್ದ ರಮಾನಂದ ಮತ್ತು ದೇವಕ್ಕ ದಂಪತಿಗಳ ಮಗ ಅರುಣಕುಮಾರ ಮನ್ನಂಗಿ ತಿಳಿಸುತ್ತಾರೆ.

**ಪ್ರಥಮ ಧ್ವಜಾರೋಹಣ** : "೧೯೪೭ರ ಆಗಸ್ಟ್ ೧೪ರ ರಾತ್ರಿ ಸ್ವಾತಂತ್ರ್ಯ ಘೋಷಣೆಯಾದಾಗ ದಂಪತಿಗಳಿಬ್ಬರೂ ಚಿಕ್ಕಮಕ್ಕಳಂತೆ ಸಂಭ್ರಮಿಸಿದರು. "ಆಗಸ್ಟ್ ೧೫ ರಂದು ದೇಶಾದ್ಯಾಂತ ಸ್ವಾತಂತ್ರ್ಯೋತ್ಸವವನ್ನು ಆಚರಿಸುವಂತೆ ಹಾವೇರಿಯಲ್ಲಿಯೂ ಹೊಸಮನಿ ಸಿದ್ದಪ್ಪನ ಸಮ್ಮುಖದಲ್ಲಿ ಅವರ ಅಪೇಕ್ಷೆಯಂತೆ ದೇವಕ್ಕನವರಿಗೆ ಹಾವೇರಿಯಲ್ಲಿ ಸ್ವಾತಂತ್ರ್ಯದ ಮೊದಲ ಧ್ವಜಾರೋಹಣ ಮಾಡುವ ಸೌಭಾಗ್ಯ ಲಭಿಸಿತು"[೫೩] ಎಂಬ ವಿವರವನ್ನು ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ವಿವರಿಸುತ್ತಾರೆ.

**೫. ಸಾವಿತ್ರಮ್ಮ ಪರಮಣ್ಣ ಹೊಸಮನಿ** : ಜಿಲ್ಲೆಯ ಪ್ರಮುಖ ಚಳುವಳಿಗಾರ ಪರಮಣ್ಣ ಹೊಸಮನಿಯ ಧರ್ಮಪತ್ನಿ. ಇವರ ಕುಟುಂಬದಲ್ಲಿ ಪತಿ ಪರಮಣ್ಣ, ಮಾವನವರಾದ ಸಿದ್ದಪ್ಪ ಹೊಸಮನಿ, ಸಿದ್ಧಲಿಂಗಪ್ಪ ಎಸ್.ಕೆ. ಮಕ್ಕಳಾದ ಸಣ್ಣ ಪರಮಣ್ಣ ಮತ್ತು ಕರಿಯಪ್ಪ ಹೀಗೆ ಇಡೀ ಕುಟುಂಬವೇ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗಿಯಾಗಿದ್ದಾಗ ಸಾವಿತ್ರಮ್ಮ ಸಹ ಚಳುವಳಿಗೆ ಧುಮುಕುವ ಘಟನೆ ನಡೆಯಿತು.

"೧೯೩೦ರಲ್ಲಿ ಪತಿ ಪರಮಣ್ಣ ಹೊಸಮನಿ ಹಾವೇರಿಯಲ್ಲಿ ಕ್ರಾಂತಿಕಾರಿ ಭಾಷಣ ಮಾಡಿದ್ದಕ್ಕೆ ಎರಡೂವರೆ ವರ್ಷಗಳ ಜೈಲು ಶಿಕ್ಷೆಯಾಗಿ ಕಾರಾಗೃಹಕ್ಕೆ ಹೋದರು. ಆಗ ಸಾವಿತ್ರಮ್ಮ ತಮ್ಮೊಂದಿಗೆ ಮೂರು ಜನ ಮಹಿಳೆಯರನ್ನು ಕರೆದುಕೊಂಡು ಹುಬ್ಬಳ್ಳಿಯ ಸತ್ಯಾಗ್ರಹದಲ್ಲಿ ಭಾಗಿಯಾಗಿದ್ದಕ್ಕೆ ಇವರನ್ನು ಪೊಲೀಸರು ಬಂಧಿಸಿ ನ್ಯಾಯಾಲಯಕ್ಕೆ ಹಾಜರುಪಡಿಸಿದರು. ನ್ಯಾಯಾಲಯದಲ್ಲಿ ನ್ಯಾಯಾಧೀಶರಾದ ಕಲಕೋಟಿ ಅವರು ಸಿದ್ದಪ್ಪ ಹೊಸಮನಿ ನನ್ನ ಸ್ನೇಹಿತರು, ಅವರ ಮನೆಯವರಾದ ನಿಮಗೆ ಶಿಕ್ಷೆ ಕೊಡಲಾರೆ. ನೀವು ನಿಮ್ಮ ಮನೆಗೆ ಹೋಗಿರಿ ಎಂದಾಗ, ಪ್ರತಿಯಾಗಿ ಸಾವಿತ್ರಮ್ಮ ನಮ್ಮ ಮನೆಯವರು ಜೈಲಿನಲ್ಲಿರುವಾಗ ನಾವು ಮನೆಯಲ್ಲಿ ನೆಮ್ಮದಿ ಯಿಂದಿರಲು ಮನಸ್ಸು ಒಪ್ಪುವುದಿಲ್ಲ"[೫೪] ಎಂದು ಶಿಕ್ಷೆಗಾಗಿ ಹಟಹಿಡಿದು ಕುಳಿತರು. ನ್ಯಾಯಾಧೀಶರು

ನಾಲ್ಕು ಜನ ಮಹಿಳೆಯರಿಗೆ ಆರು ತಿಂಗಳ ಶಿಕ್ಷೆ ವಿಧಿಸಿದರು. ಹೀಗೆ ಪತಿ ಜೈಲಿನಲ್ಲಿರುವಾಗ ನಾನು ಮನೆಯಲ್ಲಿ ಇರಲು ಸಾಧ್ಯವಿಲ್ಲ ಎಂಬ ಅಂದಿನ ಜಿಲ್ಲೆಯ ಮಹಿಳೆಯರ ಮನೋಸ್ಥಿತಿಯ ಪರಿಚಯವಾಗುತ್ತದೆ.

**೬. ಶ್ರೀಮತಿ ಗದಿಗೆಮ್ಮ ಬಸಪ್ಪ ಹಂಪಾಳಿ** : ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ರಾಣೆಬೆನ್ನೂರು ತಾಲೂಕಿನ ತುಮ್ಮಿನಕಟ್ಟಿ ಗ್ರಾಮದ ಗದಿಗೆಮ್ಮ ಹಂಪಾಳಿ ಕೂಡ ಪ್ರಮುಖ ಪಾತ್ರವಹಿಸಿದ್ದಾರೆ. ಇವರು ಮೆಣಸಿನಾಳ ತಿಮ್ಮನಗೌಡರ ನೇತೃತ್ವದಲ್ಲಿ ಚಳುವಳಿಯಲ್ಲಿ ಹೋರಾಡಿದ ಮಹಿಳೆ. ತಿಮ್ಮನಗೌಡರ ಭೂಗತ ಕಾರ್ಯದಲ್ಲಿ ಗುರುತಿಸಿಕೊಂಡಿದ್ದ ಇವರು ಆರು ತಿಂಗಳ ಶಿಕ್ಷೆಗೆ ಗುರಿಯಾಗಿ ರಾಣೆಬೆನ್ನೂರಿನ ಜೈಲಿನಲ್ಲಿ ಶಿಕ್ಷೆ ಅನುಭವಿಸಿರುವುದು ತಿಳಿದುಬಂದಿದೆ.

**ಸ್ವಾತಂತ್ರ್ಯ ಹೋರಾಟದಲ್ಲಿ ಜಿಲ್ಲೆಯ ಇತರ ಮಹಿಳೆಯರು**

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಇತರ ಮಹಿಳೆಯರ ಪಾತ್ರವು ಮಹತ್ವದ್ದಾಗಿದೆ. ಅದರಲ್ಲಿ–**ಹಾಲಗಿ ಗ್ರಾಮದ**–ಅಂಬವ್ವ ಕಾಕಡೆ, ಪುಟ್ಟವ್ವ ಅಗಡಿ, ಭಾಗವ್ವ ಜಾಧವ, ಭವಾನೆವ್ವ ಪೀರಪ್ಪ ಡಿಸಾಲೆ, ಅಂಬವ್ವ ಹಳ್ಳಿಗುಡಿ, ಭರಮವ್ವ ಹಡಪದ, ಫೀರಮಾ ನದಾಪ, ಕರಿಯವ್ವ ಮುದ್ದಿ, ಭೀಮವ್ವ ವಾಲೀಕಾರ, ನಾಗವ್ವ ಉಂಡಿ, ಭಾಗವ್ವ ಜಾದವ, ಭಾಗ್ಯವ್ವ ಪಾಟೀಲ್. **ಹೊಸರಿತ್ತಿಯ**–ಬಸಮ್ಮ, ಗಂಗಮ್ಮ, ಮುರಿಗೆಮ್ಮ, ಚನ್ನಮ್ಮ ಹಳ್ಳಿಕೇರಿ, ಭಾಗೀರತಿ ಬಾಯಿ ಕುಬೇರಪ್ಪ ಬಡಗೇರ, ಜಾನಕವ್ವ ಏಕಬೋಟೆ, ಕಮಲಾಬಾಯಿ, ನಾಗಮ್ಮ ನರಗುಂದ, ಗೌರಮ್ಮ ಹಿರೇಮಠ, ರುದ್ರವ್ವ ಯಲ್ಲಪ್ಪ ಅಂಗಡಿ, ಗಂಗವ್ವ ಮಡಿವಾಳರ, **ಕೊರಡೂರಿನ**–ಯಲ್ಲವ್ವ ಅಡರಗಟ್ಟಿ, **ಕೋಳೂರಿನ** ಪದ್ಮವ್ವ ದೊಡ್ಡಹೋಳಗಿ, **ನೆಗಳೂರಿನ** ಬಸಮ್ಮ ತಾವರೆ, ಈರಮ್ಮ ತಾವರೆ, **ಕಾಕೋಳದ**–ಕೆ.ಎಫ್.ಪಾಟೀಲ ಪತ್ನಿ ಶಾಂತಾ, **ಕಚವಿಯ**–ವೀರನಗೌಡರ ಪತ್ನಿ ನಾಗಮ್ಮ ಪಾಟೀಲ, ಮಗಳು ಲೀಲಾವತಿ ಮಾಗಡಿ, **ಮೋಟೆಬೆನ್ನೂರಿನ**–ಬಸಮ್ಮ ಮೈಲಾರ, ಸಿದ್ಧಮ್ಮ ಮೈಲಾರ, ಸುಶೀಲಮ್ಮ ಕದರಗಾರ, **ದೀವಿಗಿಹಳ್ಳಿಯ**– ಪಾರ್ವತೆಮ್ಮ ನೆಶ್ವಿ

ಹೀಗೆ ಜಿಲ್ಲೆಯ ಹಲವಾರು ಮಹಿಳೆಯರು ಸೀಮಿತ ಪರಿಧಿಯಲ್ಲಿಯೇ ಬಿಡುಗಡೆಯ ಹೋರಾಟಕ್ಕೆ ಸಿದ್ಧರಾಗಿ ಭೂಗತ ಕ್ರಾಂತಿಕಾರರಿಗೆ ನಾನಾ ರೀತಿಯ ಸಹಾಯ ಮಾಡುತ್ತಾ ಪೊಲೀಸರ ಕಿರಿಕಿರಿಗಳನ್ನೆಲ್ಲ ಸಹಿಸುತ್ತ ಸ್ವಾತಂತ್ರ್ಯ ಬಯಸುತ್ತ ಪುರುಷರೊಂದಿಗೆ ಹೆಜ್ಜೆ ಹಾಕಿರುವುದು ಜಿಲ್ಲೆಯಲ್ಲಿ ವಿಶೇಷವೆನ್ನಬಹುದು.

**೫.೩. ಸಂದರ್ಶನಕ್ಕೆ ಲಭ್ಯರಾದ ಹೋರಾಟಗಾರರು**

ಅಧ್ಯಯನದ ಅವಧಿಯಲ್ಲಿ ನಮ್ಮೊಂದಿಗಿರುವ, ಚಳುವಳಿಯ ಘಟನೆಗಳಿಗೆ ಸಾಕ್ಷಿಯಾಗಿ ನಿಂತು ತಾವು ಕೇಳಿದ, ನೋಡಿದ, ತಾವು ಹಲವು ಘಟನೆಗಳಿಗೆ ಭಾಗಿಯಾದ ಬಗ್ಗೆ ಮತ್ತು ಅಂದು ಅನುಭವಿಸಿದ ಸಂಕಷ್ಟಗಳನ್ನು ಕುರಿತು ಹಲವು ವಿವರಗಳನ್ನು ಹಂಚಿಕೊಂಡಿದ್ದಾರೆ. ಅಲ್ಲದೆ, ಅವರೊಂದಿಗೆ ಅವರ ಒಡನಾಡಿಗಳ ಹೇಳಿಕೆಗಳನ್ನು ಗಮನಿಸಲಾಗಿದೆ. ವಯೋಸಹಜ ಅನಾರೋಗ್ಯಕ್ಕೆ ತುತ್ತಾದ ಕೆಲವರಿಗೆ ಕಣ್ಣು ಕಾಣದಿರುವುದು, ಕಿವಿ ಕೇಳದಿರುವುದು ಹೀಗೆ

ಹಲವು ಆರೋಗ್ಯ ಸಮಸ್ಯೆಯ ಸುಳಿಯಲ್ಲಿಯೂ ಅವರ ಅಂದಿನ ಹೋರಾಟದ ಕಿಚ್ಚು, ಆವೇಶವನ್ನು ಅವರ ಭಾಷೆಯಲ್ಲಿ ಅರಿಯಲಾಗಿದೆ. ಅವರೊಂದಿಗಿನ ಸಂದರ್ಶನದಲ್ಲಿ ಕಂಡುಕೊಂಡ ವಿವರಗಳಲ್ಲಿ ನನ್ನ ಕೆಲ ಅನುಮಾನಗಳಿಗೆ ಸ್ಪಷ್ಟತೆಯನ್ನು ಕಂಡುಕೊಳ್ಳಲಾಗಿದ್ದು ಹಲವು ಚಳುವಳಿಗಾರರನ್ನು ಈ ಕೆಳಗಿನಂತೆ ಪರಿಚಯಿಸಲಾಗಿದೆ.

೧. **ಪರಮಣ್ಣ ಲಿಂಗನಗೌಡ ಹರಕಂಗಿ** : ಸಾ॥ ನೆಗಳೂರು, ತಾ॥ ಜಿ॥ ಹಾವೇರಿ

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಈಗಲೂ ತಾವು ಮಾಡಿದ ಘಟನೆಗಳನ್ನು ಸ್ಪಷ್ಟವಾಗಿ ಹೇಳುವ ಮತ್ತು ಇನ್ನಿತರ ಚಳುವಳಿಗಾರರಿಗಿಂತ ದೈಹಿಕವಾಗಿ ಆರೋಗ್ಯವಾಗಿರುವ ಸ್ಪಷ್ಟ ಮಾಹಿತಿ ನೀಡುವುದಲ್ಲದೆ ಇನ್ನಿತರ ಚಳುವಳಿಕಾರರ ಬಗ್ಗೆಯೂ ಮಾಹಿತಿ ಕೊಡುವ ಮತ್ತು ಸಂದರ್ಶನದ ಅವಧಿಯಲ್ಲಿ ನೆಗಳೂರಿನ ಸುತ್ತಮುತ್ತಲ ಗ್ರಾಮಗಳಿಗೆ ಬಂದು ಚಳುವಳಿಗಾರರನ್ನು ಭೇಟಿ ಮಾಡಿಸಿದಂಥ ಚಳುವಳಿಗಾರರಲ್ಲಿ ನೆಗಳೂರಿನ ಪರಮಣ್ಣ ಹರಕಂಗಿ. ಇವರು ಹಾವೇರಿಯ ಮೈಲಾರ ಮಹದೇವಪ್ಪ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ (ಈ ಟ್ರಸ್ಟ್‌ನ ಸದಸ್ಯರು ಹೌದು) ಜಿಲ್ಲೆಯಲ್ಲಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗ ತಪ್ಪದೆ ಭಾಗವಹಿಸಿ, ಶಾಲಾ ಮಕ್ಕಳು, ಸಾಮಾನ್ಯ ಜನತೆ ಕೇಳುವ ಪ್ರಶ್ನೆಗಳಿಗೆ ಉತ್ತರಿಸಿದವರು.

**ಪ್ರೇರಣೆ** :ಇವರು ಚಳುವಳಿಗೆ ಭಾಗವಹಿಸುವಲ್ಲಿ ಪ್ರಮುಖ ಪ್ರೇರಣೆಯೆಂದರೆ ಮೈಲಾರ ಮಹದೇವಪ್ಪನ **'ಗ್ರಾಮ ಸೇವಾ ಆಶ್ರಮ'** ಕೊರಡೂರ. ಅಲ್ಲದೆ ಹೊಸರಿತ್ತಿ ಗಾಂಧಿ ಆಶ್ರಮ. ಹೊಸರಿತ್ತಿ ಜಾತ್ರೆಯಲ್ಲಿಯ ಕವಾಯತ್ತು ಇವರಿಗೆ ಪ್ರೇರಣೆ. ಇವರು ಚಳುವಳಿಗೆ ಬರುವ ವೇಳೆಗೆ ಚಳುವಳಿಯಲ್ಲಿದ್ದವರೆಂದರೆ ಮಹದೇವಪ್ಪ ಮೈಲಾರ, ಜಂಗಳಿ ಹನುಮಣ್ಣ, ಮನ್ನಂಗಿ ರಮಾನಂದ, ಪಕ್ಕೀರಪ್ಪ ತಾವರೆ, ವೀರಣ್ಣ ಹಾವೇರಿ, ರಾಮಣ್ಣ ಹಳ್ಳಿಕಾರ, ದೇವೇಂದ್ರಪ್ಪ ವಿಭೂತಿ, ಹಾಲಗಿಯ ಪಕ್ಕೀರಯ್ಯ, ವೆಂಕಣ್ಣ ವಾಯಿ, ಪಂಚಾಕ್ಷರಿ ಒಳಸಂಗದ, ಗೋಣೆಪ್ಪ ಕಮತದ ಮೊದಲಾದವರು.

**ಪ್ರಮುಖ ಘಟನೆಗಳು** : ಇವರು ಭಾಗವಹಿಸಿದ ಪ್ರಮುಖ ಘಟನೆಗಳೆಂದರೆ, ಆರಂಭದಲ್ಲಿ ೧೬ ವರ್ಷವಾಗಿದ್ದರಿಂದ, ಚಳುವಳಿಯ ನಾಯಕರುಗಳು ಕೊಡುವ ಪತ್ರಗಳನ್ನು ಅವರು ಹೇಳಿದವರಿಗೆ ಮುಟ್ಟಿಸುವ ಹಾಗೂ ಅವರಿಂದ ಪತ್ರಗಳನ್ನು ಇಸಿದುಕೊಂಡು ಇವರಿಗೆ ಮುಟ್ಟಿಸುವ ಕಾಯಕ, ನಂತರದಲ್ಲಿ ಚಳುವಳಿಕಾರರಿಗೆ ಊಟ, ಉಪಹಾರವನ್ನು ತಂದುಕೊಡುವ ಕಾಯಕ ಮಾಡಿದ ಇವರು. ನಂತರ ಚಳುವಳಿಕಾರರು ಟೆಲಿಫೋನ್ ತಂತಿ ಕೀಳುವ ಮತ್ತು ಕಂಬಗಳನ್ನು ಕೀಳುವ ಕಾರ್ಯದಲ್ಲಿ ಇವರು ಕಂಬವನ್ನು ಹತ್ತಿ ತಂತಿಸುತ್ತಿದ ಕಪ್ಪನ್ನು ಒಡೆಯುವ ಕಾರ್ಯಮಾಡಿದರು. ನಂತರದಲ್ಲಿ ವಿಧ್ವಂಸಕ ಕಾರ್ಯಮಾಡುವ ಸಂದರ್ಭದಲ್ಲಿ ಕಾವಲುಗಾರರನ್ನು ಕಾಯುವ ಕಾಯಕ, ಕಾವಲುಗಾರರು ಆಕಸ್ಮಿಕ ಇವರ ಮೈಮೇಲೆ ಕೈ ಮಾಡಿದರೆ, ಇವರು ಅವರ ಮೇಲೆ ಕೈಮಾಡುವ ಹಾಗಿಲ್ಲ, ಕಾರಣ ನಾವು ಗಾಂಧೀಜನ, ಅಹಿಂಸೆ ಪಾಲಿಸಬೇಕು; ಹಾಗಾಗಿ ಯಾರ ಮೇಲೂ ಕೈ ಮಾಡುವ ಹಾಗಿಲ್ಲವೆಂದು ಮಹದೇವಪ್ಪನ ಆಜ್ಞೆಯಾಗಿತ್ತು.

ನಂತರದಲ್ಲಿ ಹಲವು ಚಾವಡಿಗಳನ್ನು ಲೂಟಿಮಾಡಿದ್ದು, ಪೋಸ್ಟ್‌ಗಳನ್ನು ಲೂಟಿ ಮಾಡಿದ್ದು, ರೇಲ್ವೇ ಸ್ಟೇಷನ್ ಲೂಟಿ ಮತ್ತು ಬೆಂಕಿ ಹಚ್ಚುವ ಕಾರ್ಯಮಾಡಿದ್ದು, ಕಂದಾಯ ಲೂಟಿ ಮಾಡುವುದು, ಕಂದಾಯದ ಕಾಗದ ಪತ್ರಗಳನ್ನು ಸುಡುವುದು ಹೀಗೆ ಹಲವು ಕಾರ್ಯಗಳನ್ನು ಮಾಡಿದರು.

**೧೯೪೨ರ ಚಳುವಳಿ :** ೧೯೪೨ರ ಚಳುವಳಿಯಿಂದ ಪೂರ್ಣಪ್ರಮಾಣದ ಚಳುವಳಿಗಾರನಾಗಿದ್ದ ಬಗ್ಗೆ ಹೇಳುವ ಇವರು ಇಲ್ಲಿಯವರೆಗೂ ಚಳುವಳಿ ಮಾಡುವ ಸಮಯಕ್ಕೆ ಮಾತ್ರ ಹೋಗುತ್ತಿದ್ದು, ಈಗ ಪೂರ್ಣ ಪ್ರಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹೊಸರಿತ್ತಿ, ಯಲಗಚ್ಚು, ನೆಗಳೂರು ಈ ಭಾಗದ ಕಂದಾಯ ಕೇಂದ್ರಗಳಿಗೆ ದಾಳಿ ಮಾಡಿ ದಫ್ತರಗಳನ್ನು ಸುಡಲಾಯಿತು. ನೆಗಳೂರಲ್ಲಿ ಕಂದಾಯ ಅಧಿಕಾರಿಗಳು ಕಂದಾಯ ವಸೂಲಿಗೆ ಬಂದಾಗ ಮಧ್ಯಾಹ್ನ ೨:೩೦ ರಿಂದ ೩ ಘಂಟೆಯ ಅವಧಿಯಲ್ಲಿ ಅವರ ಕಾರಿಗೆ ಬೆಂಕಿಹಚ್ಚಿ ಪರಾರಿಯಾಗಿ ಕಾಡು ಸೇರಿದ ಬಗ್ಗೆ ಹೆಮ್ಮೆಯಿಂದ ಹೇಳುತ್ತಾರೆ.

**ಮೊದಲ ಬಂಧನ :** ಮೈಲಾರ ಮಹದೇವಪ್ಪನ ನಾಯಕತ್ವದಲ್ಲಿ ಇವರ ತಂಡ ವಿವಿಧ ರೀತಿಯಲ್ಲಿ ವಿಧ್ವಂಸಕ ಕಾರ್ಯಗಳನ್ನು ಮಾಡುತ್ತಿದ್ದುದರಿಂದ ಪೊಲೀಸರಿಗೆ ಪರಮಣ್ಣ ಹರಕಂಗಿ ಮೇಲೂ ದೂರುಗಳಿದ್ದು, ಇವರನ್ನು ಬಂಧಿಸಲು ನಿರ್ಧರಿಸಿದರು. ಸ್ವಲ್ಪ ಪ್ರಮಾಣದಲ್ಲಿ ಇವರಿಗೂ ಆ ವಿಷಯ ತಿಳಿದು ಮನೆಯಲ್ಲಿ ಮಲಗುವುದನ್ನು ಬಿಟ್ಟು, ತಮ್ಮದೇ ಕಣದಲ್ಲಿ ರಾತ್ರಿಯ ವಾಸ್ತವ್ಯ ಆಗುತ್ತಿದ್ದರು. ಒಂದು ದಿನ ಪೊಲೀಸರು ರಾತ್ರಿ ೨ ಘಂಟೆಯ ಸಮಯದಲ್ಲಿ ಮನೆಗೆ ಹೋಗಿ ತಮ್ಮ ತಂದೆ-ತಾಯಿಯರನ್ನು ಇವರ ಬಗ್ಗೆ ಕೇಳಿದಾಗ, ಅವರು ಹೇಳದ ಕಾರಣ ನಿಮ್ಮ ಮಗನ ಬಗ್ಗೆ ಯಾವ ದೂರುಗಳು ಬಂದಿಲ್ಲ. ಅವನ ಬಗ್ಗೆ ದೂರುಗಳು ಬಂದರೆ ನಾವು ಬಂಧಿಸಬೇಕಾಗುತ್ತದೆ; ಈಗಲೇ ಅವರನ್ನು ಹಾವೇರಿಗೆ ಕರೆದುಕೊಂಡು ಹೋಗಿ, ಅವನಿಂದ ನನ್ನ ತಪ್ಪಿಲ್ಲವೆಂದು ಬರೆಸಿಕೊಂಡು ಬಿಡುತ್ತೇವೆ, ಇಲ್ಲವೆಂದರೆ ಅವನಿಗೆ ಜೈಲು ಕಾಯಂ ಆಗುತ್ತದೆ ಎಂದು ಗುತ್ತಲದ ಫೌಜುದಾರ ಪತ್ರೋಳಿ ನಂಬುವ ರೀತಿಯಲ್ಲಿ ಹೇಳಿದ್ದರಿಂದ ಇವರ ತಾಯಿ ನಂಬಿ ಇವರಿರುವ ಸ್ಥಳಕ್ಕೆ ಕಳುಹಿಸಿಕೊಟ್ಟರು. ಕಣದಲ್ಲಿ ಮಲಗಿದ ಇವರನ್ನು ಪೊಲೀಸರು ಬಂದು ಇವರನ್ನು ಹಾವೇರಿಗೆ ಕರೆದೊಯ್ದರು.

**ದೇಶಭಕ್ತ ಅಧಿಕಾರಿ :** ಹಾವೇರಿಯಲ್ಲಿ ಪೊಲೀಸ್ ಠಾಣೆಯ ಅಧಿಕಾರಿ 'ಲೇ ನೀವೇನು ಚಳುವಳಿ ಮಾಡ್ತೀರಿ ಮಕ್ಕಳಾ ನಾ ಹೇಳಿದ ಹಾಗೆ ಬರೆದುಕೊಟ್ಟು ತಪ್ಪಾಯಿತು ಅಂತಾ ಹೇಳಿ ಮನಿಗೆ ಹೋಗಿ' ಎಂದಾಗ ಇವರ ಗುಂಪು 'ಇಲ್ಲಾ ನಾವು ಗಾಂಧೀಜಿ ಜನ, ಸುಳ್ಳು ಹೇಳಬಾರದೆಂದು ನಮ್ಮ ನಾಯಕರು ಹೇಳಿದ್ದಾರೆ' ಎಂದು ತಾವು ಮಾಡಿದ ಕಾರ್ಯಗಳನ್ನು ಒಪ್ಪಿದರು. ಅನಂತರ ಮಜೀದ್ ಎಂಬ ಅಧಿಕಾರಿ ಎದುರು ಸತ್ಯವನ್ನೇ ಹೇಳಿದರು. ಆ ಮೇಲೆ ಇವರಿಗೆ ಗೊತ್ತಾಗಿದ್ದು ಆ ಅಧಿಕಾರಿಗಳು ಮೈಲಾರ ಮಹದೇವಪ್ಪ ಮತ್ತು ದೇವೇಂದ್ರಪ್ಪ ವಿಭೂತಿ ಸ್ನೇಹಿತರೆಂಬುದು.

**ಶಿಕ್ಷೆ :** ಹಾವೇರಿಯಲ್ಲಿ ಒಂದು ತಿಂಗಳು ಕಳೆದ ನಂತರ ಧಾರವಾಡಕ್ಕೆ ಕಳುಹಿಸಲಾಯಿತು. ಅಲ್ಲಿ ಮತ್ತೆ ವಿಚಾರಣೆಯಾಗಿ ಅಲ್ಲಿಯೂ ಸತ್ಯವನ್ನೇ ಹೇಳಿದ್ದರಿಂದ ದೊಡ್ಡವರಿಗೆ ಐದು ವರ್ಷ ಪರಮಣ್ಣ ಹರಕಂಗಿ ಮತ್ತು ವಿರುಪಣ್ಣ ಹಾವೇರಿ ಇವರಿಗೆ ನ್ಯಾಯಾಧೀಶ ಧಳವಿ ಮೂರು ವರ್ಷಗಳ ಶಿಕ್ಷೆಯನ್ನು ವಿಧಿಸಿದರು. ಮೊದಲು ಧಾರವಾಡದ ಸೆಂಟ್ರಲ್ ಜೈಲಿನಲ್ಲಿ ಎಂಟರಿಂದ ಹತ್ತು ದಿನವಿದ್ದು, ನಂತರ ವಿಸಾಪುರ ಜೈಲಿಗೆ ಕಳಿಸಿದರು. ಅಲ್ಲಿ ಇವರಿಗೆ ರಾಜಕೀಯ ಕೈದಿ ಎಂದು ಪರಿಗಣಿಸದೇ ಕ್ರಿಮಿನಲ್ ಕೈದಿಯೆಂದು ಪರಿಗಣಿಸಿ ಕ್ರಿಮಿನಲ್ ಕೈದಿಗಳ ಕೊಠಡಿಗೆ ಹಾಕಿದರು. ಅಲ್ಲಿ ೮-೮ ಇಟ್ಟಂಗಿಗಳನ್ನು ಹೊರುವ ಕೆಲಸ ಕೊಟ್ಟರು. ನಂತರದಲ್ಲಿ ಒಬ್ಬರೇ ಒಂದೇ ಕೊಠಡಿಯಲ್ಲಿ ಕತ್ತಲೆಯಲ್ಲಿಯೇ ಇರಬೇಕು. ಅದು ನಿಜಕ್ಕೂ ಹುಚ್ಚು ಹತ್ತುವಂತಹ ಪರಿಸರ; ಅಂಥಲ್ಲಿ ಇಡಲಾಗಿ, ದಿನಕ್ಕೆ ಒಂದು ಊಟ ಅದು ಸ್ವಲ್ಪ ಗಂಜಿ ಮಾತ್ರ. ಅಂಥ ಸ್ಥಿತಿಯಲ್ಲಿ ಎರಡು ತಿಂಗಳು ಕಳೆಯುವ ವೇಳೆಗೆ ಒಂದು ಆಶಾಕಿರಣ ಕಂಡ ಹಾಗಾಗಿತ್ತು.

**ನಮ್ಮವರಿಂದ ನೆಮ್ಮದಿ ದೊರೆತ್ತಿದ್ದು :** ಈ ರೀತಿಯಲ್ಲಿ ಜೈಲಿನಲ್ಲಿ ಕ್ರೂರ ರೀತಿಯ ಶಿಕ್ಷೆಯನ್ನು ಅನುಭವಿಸುವ ವೇಳಗೆ ಕೆ.ಎಫ್.ಪಾಟೀಲ್, ಸಂಗೂರು ಕರಿಯಪ್ಪ ಅದೇ ಜೈಲಿಗೆ ಬಂದಾಗ ತಮ್ಮ ಸಮಸ್ಯೆಯನ್ನು ಹೇಳಿಕೊಂಡರು. ಅವರು ಜೈಲಿನಲ್ಲಿಯೇ ಸತ್ಯಾಗ್ರಹ ಆರಂಭಿಸಿದ್ದರಿಂದ ಇವರನ್ನು ರಾಜಕೀಯ ಕೈದಿಯೆಂದು ಪರಿಗಣಿಸಿ ಕೊಠಡಿಯನ್ನು ಬದಲಾಯಿಸಿ ಉಪಕಾರ ಮಾಡಿದಂತಾಯಿತು. ಹೀಗೆ ಮೂರು ವರ್ಷಗಳ ಶಿಕ್ಷೆ ಅನುಭವಿಸಿ ಹೊರ ಬಂದರು.

**ಸಹಾಯ :** ಚಳುವಳಿಯ ಸಂದರ್ಭದಲ್ಲಿ ಇವರ ಗುಂಪಿಗೆ ಸಹಾಯಮಾಡಿದ ಗ್ರಾಮಗಳೆಂದರೆ, ಹಾಲಗಿ, ನೆಗಳೂರು, ಹೊಸರಿತ್ತಿ, ಅಂಕಲಿ, ಕೊಗನೂರ. ಇಲ್ಲಿಯ ಜನತೆ ಮತ್ತು ಶಿರಹಟ್ಟಿ ತಾಲೂಕಿನ ಮೂರಾಡಿ-ವಿರಾಪುರದ ಲಂಬಾಣಿಗರು ಇವರಿಗೆ ಊಟ, ವಸತಿ, ಆಶ್ರಯ ನೀಡಿ ಸಲುಹಿದರು.

**ಹುತಾತ್ಮರಾದವರ ಬಗ್ಗೆ :** ಇವರ ತಂಡದ ನಾಯಕ ಮತ್ತು ಎರಡು ಜನ ಸಂಗಡಿಗರು ಹುತಾತ್ಮರಾದ ಬಗ್ಗೆ ನೋವು, ಸಂಕಟ ಅನುಭವಿಸಿದರು. 'ಮಹದೇವಪ್ಪ ಸ್ವಲ್ಪ ಕಾಯಬೇಕಿತ್ತು' ಎಂದು ವ್ಯಥೆ ಪಡುತ್ತಾರೆ. ಕಾರಣ ಮಹಾರಾಷ್ಟ್ರದಿಂದ ಪೊಲೀಸರು ಬಂದಿದ್ದು ಒಂದೆಡೆಯಾದರೆ, ಮಹದೇವಪ್ಪನಿಗೆ ಸಲಹೆ ನೀಡುವ ಚಾಣಾಕ್ಷ ಬುದ್ದಿಯ ವೆಂಕಣ್ಣ ವಾಯಿ ಆರೋಗ್ಯ ಸರಿಯಾಗುವವರೆಗೂ ಮೈಲಾರ ಮಹದೇವಪ್ಪ ಕಾದಿದ್ದರೆ, ಹೊಸರಿತ್ತಿ ಹಫ್ತಾ ಲೂಟಿಯಾಗುತ್ತಿತ್ತು. ಯಾರ ಸಾವು-ನೋವುಗಳಾಗದ ಹಾಗೆ ಯೋಜನೆ ರೂಪಿಸುವ ಬುದ್ಧಿ ಅವರಿಗಿತ್ತು. ಎಂದು ಆ ನೋವಿನ ಘಟನೆಯನ್ನು ಸ್ಮರಿಸಿಕೊಳ್ಳುತ್ತಾರೆ. ಆದರೂ ಒಬ್ಬ ವ್ಯಕ್ತಿ ಇಷ್ಟು ಕಾರ್ಯಗಳನ್ನು ಮಾಡಲು ಸಾಧ್ಯವಾ ಎಂದು ತಮ್ಮ ನಾಯಕನನ್ನು ನೆನಪಿಸಿಕೊಂಡು ಕಣ್ಣೀರಿಡುತ್ತಾರೆ. ಅಂಥ ನಾಯಕನನ್ನು ಪಡೆದ ನಾನು ಧನ್ಯ ಎಂದು ಹೆಮ್ಮೆ ಪಡುತ್ತಾರೆ.

**ರಾಷ್ಟ್ರ ನಾಯಕರು :** ಪರಮಣ್ಣ ರಾಷ್ಟ್ರೀಯ ನಾಯಕರಾದ ಗಾಂಧೀಜಿ, ಜವಾಹರಲಾಲ್ ನೆಹರು, ಅಬ್ದುಲ್ ಗಫರಖಾನ್, ಸರ್ದಾರ ವಲ್ಲಭಭಾಯಿ ಪಟೇಲ್, ಸರೋಜಿನಿ ನಾಯ್ಡು ಇವರನ್ನು ಹತ್ತಿರದಿಂದ ನೋಡಿ, ಮಾತನಾಡಿದ್ದಾರೆ. ಅಲ್ಲದೆ ಗಾಂಧೀಜಿಯೊಂದಿಗೆ ಪೂನಾದಲ್ಲಿ ೯ ದಿನ ಪ್ರಾರ್ಥನೆ ಮಾಡಿದ್ದೇನೆ ಎಂಬ ಅಭಿಮಾನ, ಗೌರವವ್ಯಕ್ತಪಡಿಸುತ್ತಾರೆ.

**ಸ್ವಾತಂತ್ರ್ಯ ನಂತರ :** ೧೯೪೭ ಆಗಸ್ಟ್ ೧೫ಕ್ಕೆ ಧ್ವಜಾರೋಹಣ ಮಾಡಿ, ಧ್ವಜದ ಅಡಿಯಲ್ಲಿ ಇವರ ನಾಯಕರುಗಳ ಹಾರೈಕೆಗಳೊಂದಿಗೆ ವಿವಾಹವಾದ ಬಗ್ಗೆ ಹೆಮ್ಮೆಪಟ್ಟಿದ್ದಾರೆ.

ಇತ್ತೀಚಿನ ರಾಜಕೀಯ, ರಾಜಕಾರಣ, ಆಡಳಿತ, ಲಂಚಗುಳಿತನ ಇವುಗಳನ್ನು ಕಂಡು ದ್ವೇಷಿಸುವ ಇವರು ಇವುಗಳಿಗಾಗಿಯೇ ಬ್ರಿಟಿಷರೊಂದಿಗೆ ಹೋರಾಡಬೇಕಾಗಿತ್ತು. ಈಗ ನಮ್ಮವರು ಅದನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಮುಂದುವರೆಸುತ್ತಿದ್ದಾರೆ. ಮುಂದಿನ ಪೀಳಿಗೆಗೆ ರಾಷ್ಟ್ರೀಯ ಪ್ರೇಮ ಇದ್ದರೆ, ಭ್ರಷ್ಟ ರಾಜಕಾರಣಿಗಳು, ಅಧಿಕಾರಿಗಳಿಂದ ದೇಶ ರಕ್ಷಣೆಗಾಗಿ ಮತ್ತೊಂದು ದೊಡ್ಡ ಪ್ರಮಾಣದ ಹೋರಾಟವನ್ನು ನಡೆಸಿದರೂ ಆಶ್ಚರ್ಯವಿಲ್ಲ. ತಾವು ಸರಕಾರದಿಂದ ಗೌರವಧನ ಮತ್ತು ಸವಲತ್ತುಗಳನ್ನು ಪಡೆಯುತ್ತೇನೆ. ಆದಷ್ಟು ಸಮಾಜ ಸೇವೆಯನ್ನು ಈ ವಯಸ್ಸಿನಲ್ಲಿ ಮುಂದುವರಿಸಿದ್ದೇನೆ ಎಂದು ಹೇಳುತ್ತಾರೆ ಪರಮಣ್ಣ. ಭೂಗತ ಕಾಲದಲ್ಲಿ ಸಂಕಷ್ಟಗಳ ಕುರಿತು ಪದ್ಯಗಳನ್ನು ರಚಿಸಿದ್ದಾರೆ. ಅದನ್ನು ಅನುಬಂಧದಲ್ಲಿ ನೀಡಲಾಗಿದೆ.

**೨. ಶಿವನಗೌಡ ಭರಮಗೌಡ ಮರಿಗೌಡ್ರ :** ಸಾ॥ ಮೆಣಸಿನಾಳ ತಾ॥ ರಾಣೆಬೆನ್ನೂರು

ಹಾವೇರಿ ಜಿಲ್ಲೆಯ ಹುತಾತ್ಮ ಸ್ವಾತಂತ್ರ್ಯ ಹೋರಾಟಗಾರ ಮೆಣಸಿನಾಳ ತಿಮ್ಮನಗೌಡರ ಅಳಿಯ ಹಾಗೂ ಅವರ ಗುಂಪಿನ ಸದಸ್ಯ. ಇವರು ಸ್ವಾತಂತ್ರ್ಯ ಚಳುವಳಿಗೆ ಧುಮುಕಿದ್ದು ಮೂರನೇ ತರಗತಿಯಲ್ಲಿ ಓದುವಾಗ, ನಂತರ ತಿಮ್ಮನಗೌಡರ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ಅವರ ಕೊನೆ ಉಸಿರಿರುವವರೆಗೂ ಅವರೊಂದಿಗೆ ಇದ್ದು, ಅವರ ಎಲ್ಲ ಚಟುವಟಿಕೆಗಳಲ್ಲಿ ಭಾಗವಹಿಸಿದರು.

**ಪ್ರೇರಣೆ :** ತುಮ್ಮಿನಕಟ್ಟಿಯಲ್ಲಿ ಇವರ ಪ್ರಾಥಮಿಕ ವಿದ್ಯಾಭ್ಯಾಸವಾಯಿತು. ಕಾರಣ ಇವರ ಚಿಕ್ಕ ಗ್ರಾಮವಾಗಿದ್ದರಿಂದ ಶಾಲೆಯಿರಲಿಲ್ಲ, ಒಂದು ದಿನ ಶಾಲೆಯಲ್ಲಿ ಗುರುಗಳು ಹೇಳುವ ಪಾಠ ಕೇಳುವಾಗ, ಕಿಟಕಿಯಿಂದ ಮಾವ ಮೆಣಸಿನಾಳ ತಿಮ್ಮನಗೌಡರು. 'ಲೇ ಏನ್ ಶಾಲಿ ಕಲಿತಿ, ದೇಶಕ್ಕ ಮೊದಲು ಸ್ವಾತಂತ್ರ್ಯ ಬೇಕು ಎದ್ದು ಹೊರಗ ಬಾ' ಎಂದು ಕರೆದರು. ಮಾಸ್ತರರಿಗೂ ಏನೂ ಹೇಳದೆ, ಪಾಟಿಯ ಚೀಲವನ್ನು ತೆಗೆದುಕೊಳ್ಳದೆ ಹಾಗೆ ಬಿಟ್ಟು, ಹೊರಗೆ ತಮ್ಮನ್ನು ಕರೆದ ಮಾವನೊಂದಿಗೆ ಏಕೆ? ಏನು? ಎಂದು ಕೇಳದೆಯೇ ಹೊರಟುಹೋದರು. ಆಗ ತಿಮ್ಮನಗೌಡರು ಇವರಿಗೆ, ನಮಗ ಈಗ ಸ್ವಾತಂತ್ರ್ಯ ಬೇಕು, ಆ ಓದು ಅವಶ್ಯವಿಲ್ಲ, ಅದಕ್ಕಾಗಿ ನಾವು ಹೋರಾಟ ಮಾಡಬೇಕಾಗಿದೆ, ನನ್ನೊಂದಿಗೆ ಬಾ, ಎನ್ನಲು ಇವರಿಗೆ ಸ್ವಾತಂತ್ರ್ಯ ಅಂದರೆ ಏನು? ಅದನ್ನು ಪಡೆಯುವುದು ಅಂದರೆ ಹೇಗೆ? ಇದು ಯಾವುದರ

ಅರಿವಿರಲಿಲ್ಲ. ಆದರೆ ಮಾವ ಏನೇ ಮಾಡಿದರೂ ಒಳ್ಳೆಯದೆ ಮಾಡುತ್ತಾನೆ ಅನ್ನುವ ನಂಬಿಕೆಯಿಂದ ಮಾವನ ದಾರಿಹಿಡಿದರು. ಹೀಗೆ ಸ್ವಾತಂತ್ರ್ಯದ ಬಗ್ಗೆ ಸ್ಪಷ್ಟತೆ ಇಲ್ಲದಿದ್ದರೂ ಚಳುವಳಿಗೆ ಧುಮುಕಿದರು. ಅಲ್ಲಿಂದ ಮೆಣಸಿನಾಳ ತಿಮ್ಮನಗೌಡರು ಸಾಯುವ ಕ್ಷಣದವರೆಗೂ ಅವರೊಟ್ಟಿಗೆ ಇದ್ದವರು. ಅವರ ಸಾವಿನ ನಂತರ ಈ ದೇಹವಿದೆ. ಮನಸ್ಸು, ಪ್ರಾಣ ಅವರೊಂದಿಗೆ ಹೋಗಿದೆ ಎಂದು ಕಣ್ಣೀರಿನಿಂದಲೇ ಅಂದಿನ ಘಟನೆಗಳ ವಿವರ ನೀಡಿದರು.

ತಿಮ್ಮನಗೌಡರೊಂದಿಗೆ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ ಮೇಲೆ ಅವರು ಹೇಳಿದ್ದು ಒಂದೇ ಮಾತು. ನಾವು ಮಾಡುವ ಯೋಚನೆಗಳು, ಚರ್ಚೆಗೆ ಕೂಡುವ ಸ್ಥಳ, ನಾವು ಸರಕಾರ ಆಡಳಿತ ಯಂತ್ರ ಕುಸಿಯುವ ಹಾಗೆ ಮಾಡಲು ಮಾಡುತ್ತಿರುವ ಕಾರ್ಯಗಳನ್ನು ನಮ್ಮನ್ನು ಬಿಟ್ಟು ಹೆತ್ತ ತಾಯಿಗೂ ತಿಳಿಯಬಾರದು ಮತ್ತು ನೀವು ಯಾರು ನಿಮ್ಮಗಳ ಫೋಟೋಗಳನ್ನು ತೆಗೆಸಬಾರದು ಎಂದು ತಿಮ್ಮನಗೌಡರು ಹೇಳಿದ್ದನ್ನು ಸ್ವಾತಂತ್ರ್ಯ ಸಿಗುವವರೆಗೂ ಯಾವ ಕಾರಣಕ್ಕೂ ಚಾಚೂ ತಪ್ಪದೆ ಪಾಲಿಸಿದ್ದನ್ನು ಖುಷಿಯಿಂದ ಹೇಳುತ್ತಾರೆ.

ಇವರು ಚಳುವಳಿಗೆ ಧುಮುಕಿದಾಗ ಇವರೊಂದಿಗೆ ಭಾಗವಹಿಸಿದವರು-ಶಿವಪ್ಪ ತಳವಾರ, ಪುಟ್ಟರೆಡ್ಡಿ ಬಲ್ಲೂರು, ಸಣ್ಣನಿಂಗಪ್ಪ ಪಾಟೀಲ, ಕೂಸಗಟ್ಟಿ ಹನುಮಣ್ಣ, ಸಿದ್ದಪ್ಪ ಕೂಸಗಟ್ಟಿ, ಸಿದ್ದನಗೌಡ ಹುಲ್ಮನಿ... ಮುಂತಾದವರು; ಇವರೆಲ್ಲ ಮೆಣಸಿನಾಳದವರು. ಇವರೆಲ್ಲರೂ ರಾತ್ರಿಯಾದ ನಂತರ ಚಳುವಳಿಯ ಬಗ್ಗೆ ಚರ್ಚಿಸಲು ಸೇರುತ್ತಿದ್ದ ಸ್ಥಳವೆಂದರೆ ತಿಮ್ಮನಗೌಡರ ಹೊಲದಲ್ಲಿ. ಇವರು ಮಾಡುವ ಕಾರ್ಯಗಳ ಬಗ್ಗೆ ಕುರಿತು ಕಾರ್ಯತಂತ್ರಗಳನ್ನು ರೂಪಿಸುತ್ತಿದ್ದ ಬಗ್ಗೆ, ಮತ್ತು ಇವರು ಚಿಕ್ಕವರಾಗಿದ್ದರಿಂದ ಆರಂಭದಲ್ಲಿ ನಾಯಕರ ಯೋಜನೆಗಳ ಪ್ರಕಾರ ಕಾರ್ಯಮಾಡುತ್ತಿದ್ದ ವಿವರ ನೀಡುತ್ತಾರೆ.

**ಪ್ರಮುಖ ಕಾರ್ಯಗಳು**

* ತುಮ್ಮಿನಕಟ್ಟಿಯಲ್ಲಿ ಭೀಮಾಜಿ ಎಂಬ ಹವಲ್ದಾರ ತುಂಬಾ ಗರ್ವದಿಂದ ಮೆರೆಯುತ್ತಿದ್ದು, ಇವರಿಗೆ ಆಗಾಗ ಅವಮಾನಿಸುತ್ತಿದ್ದ ಮತ್ತು ಹಲವು ರೀತಿಯಲ್ಲಿ ತೊಂದರೆ ಕೊಡುತ್ತಿದ್ದ. ಹೀಗಾಗಿ ತಿಮ್ಮನಗೌಡರ ನೇತೃತ್ವದಲ್ಲಿ ತುಮ್ಮಿನಕಟ್ಟಿಯ ಪೊಲೀಸ್ ಸ್ಟೇಷನ್ ಎದುರಿಗೆ ಆ ಹವಲ್ದಾರನನ್ನು ತಡೆದಾಗ ಆಗಲೂ ಅವನು ಇವರ ಕೈಯಲ್ಲಿಯಿದ್ದ ಧ್ವಜವನ್ನು ಕಸಿದುಕೊಂಡು ಕಾಲಲ್ಲಿ ತುಳಿದಾಗ, ವಿಪರೀತ ಕೋಪ ಬಂದು ಹವಲ್ದಾರನ ತಲೆಯ ಮೇಲೆಯಿರುವ(ಟೋಪಿ) ರೂಮಾಲು ತೆಗೆದು ತಮ್ಮ ಕಾಲಲ್ಲಿ ತುಳಿದು ನಂತರ ಅದನ್ನು ತಿಮ್ಮನಗೌಡರಿಗೆ ಕೊಟ್ಟರು ಆಗ ಆ ಟೋಪಿಗೆ ಸಿದ್ದಪ್ಪ ನವಾತಿ ಬೆಂಕಿಹಚ್ಚಿದರು. ಇವರು ಮೆಣಸಿನಾಳ ತಿಮ್ಮನಗೌಡರ ತಂಡದಲ್ಲಿ ಕಾರ್ಯಮಾಡಿರುವುದರಿಂದ ಇವರಿಗೆ ಸಂಬಂಧಿಸಿದ ಕಾರ್ಯಗಳನ್ನು ಅಧ್ಯಾಯ ನಾಲ್ಕರ ಚಲೇಜಾವ್ ಚಳುವಳಿಯಲ್ಲಿ ವಿವರಿಸಲಾಗಿದೆ.

**ಬಂಧನ :** ಹಲವು ಪ್ರಕರಣಗಳಲ್ಲಿ ಬೇಕಾಗಿದ್ದ ಇವರನ್ನು ಸೂಡಂಬಿಯಲ್ಲಿ ಬಂಧಿಸಿದರು. ಅಲ್ಲಿಂದ ಹಂಸಬಾವಿ ನಂತರ ಹಿರೇಕೆರೂರು ಜೈಲಿಗೆ ಕಳುಹಿಸಿ, ನ್ಯಾಯಾಲಯದಿಂದ ಶಿಕ್ಷೆಯಾಗಿ ಹಿಂಡಲಗಾ ಜೈಲಿನಲ್ಲಿ ಒಂದು ವರ್ಷ ಶಿಕ್ಷೆ ಅನುಭವಿಸಿ ಊರಿಗೆ ವಾಪಾಸಾದರು.

ಇವರಿಗೆ ಹೋರಾಟದ ಬಗ್ಗೆ ಹೆಮ್ಮೆಯಿದೆ. ಗಾಂಧೀಜಿ ಮತ್ತು ನೆಹರೂ ಅವರನ್ನು ಹತ್ತಿರದಿಂದ ಕಂಡಿದ್ದು, ಅತೀವ ಸಂತೋಷದ ಕ್ಷಣವಾದರೆ, ಅವರ ಮಾವ ಹಾಗೂ ನಾಯಕ ತಿಮ್ಮನಗೌಡರ ಸಾವಿನ ಘಟನೆ ಇಂದಿಗೂ ಅವರನ್ನು ಕಾಡುತ್ತಿರುವ ಬಗ್ಗೆ ನೋವು ಅಭಿಮಾನಗಳ ಮಿಶ್ರವಾದ ಘಟನೆಗಳನ್ನು ನೆನಪಿಸಿಕೊಂಡು ಹೇಳುತ್ತಾರೆ. ಸುಮಾರು ೯೫ ವರ್ಷದ ಇವರು ಸ್ವಲ್ಪ ಪ್ರಮಾಣದ ಕಿವಿ ಕೇಳದಿರುವುದನ್ನು ಬಿಟ್ಟರೆ ಆರೋಗ್ಯವಾದಿಂದಿದ್ದು ಖುಷಿ ಖುಷಿಯಿಂದಲೇ ಎಲ್ಲ ವಿವರವನ್ನು ಅಭಿಮಾನದಿಂದ ಹೇಳುತ್ತಾರೆ.

೩. **ಮಿನ್ನಪ್ಪ ಮಲ್ಲಪ್ಪ ಹಳ್ಳಿ** : ಹಲಗೇರಿ ರಸ್ತೆ, ಕುರುಬರ ಓಣಿ, ರಾಣೆಬೆನ್ನೂರು

೯೬ ವರ್ಷದ ಮಿನ್ನಪ್ಪ ಹಳ್ಳಿ ಸಾಧಾರಣ ಆರ್ಥಿಕ ಸ್ಥಿತಿಯ ಕುಟುಂಬದಿಂದ ಬಂದವರು. ಮಿನ್ನಪ್ಪ ತಮ್ಮ ಹೋರಾಟದ ಅನುಭಗಳನ್ನು ಕುಟುಂಬದವರಿಗೆ, ಸ್ನೇಹಿತರಿಗೆ, ಬಂಧು-ವರ್ಗದವರಿಗೆ ಹೇಳಿರುವುದಾಗಿ ಹೇಳುವ ಇವರು ಚಳುವಳಿಯ ವಿಚಾರಕ್ಕೆ ಬರುತ್ತಿದ್ದಂತೆ ಉದ್ವೇಗ, ಅಭಿಮಾನದಿಂದ ವಿವರಣೆ ನೀಡುತ್ತಾರೆ.

**ಪ್ರೇರಣೆ** : ತಾವು ಚಳುವಳಿಗೆ ಭಾಗವಹಿಸಲು ಪ್ರೇರಣೆಯೆಂದರೆ ಹಲಗೇರಿಯ ಹೇಮಣ್ಣ ಅಂಗಡಿ ಮತ್ತು ತಮ್ಮೊಂದಿಗೆ ಲಕ್ಷ್ಮಣ ಒಡೇಯರಹಳ್ಳಿ, ಯಂಕಪ್ಪ ದೊಡ್ಡಮನಿ, ಕರಿಯಪ್ಪ ಗಂಧಣ್ಣೇರ, ಶಂಕ್ರಪ್ಪ ದೇವಗಿರಿ ಶಿವಪ್ಪ ಅಸುಂಡಿ ಮೊದಲಾದವರು ಭಾಗವಹಿಸಿದ್ದವರ ವಿವರವನ್ನು ನೀಡುತ್ತಾರೆ.

ಚಳುವಳಿಯಲ್ಲಿ ಭಾಗವಹಿಸಿದಾಗ ಆರಂಭದಲ್ಲಿ ನಾಯಕರು ಇವರಿಗೆ ವಹಿಸಿದ ಕಾರ್ಯ, ಹಲಗೇರಿಯಲ್ಲಿ ಕೋಡದ ರಸ್ತೆಯ ಹೊಲದಲ್ಲಿರುತ್ತಿದ್ದ ಚಳುವಳಿಗಾರರಿಗೆ ರಾತ್ರಿ ೯ ಘಂಟೆಗೆ ಊಟ ಕೊಟ್ಟು ಬರುವುದು. ತದನಂತರ ಹಲಗೇರಿಯ ಹೇಮಣ್ಣ ಅಂಗಡಿ ಜಿಲ್ಲೆಯ ಇನ್ನಿತರ ನಾಯಕರುಗಳಿಗೆ ಪತ್ರಗಳನ್ನು ಕೊಟ್ಟು ಬರುವುದು ಮತ್ತು ಅವರಿಂದ ಪತ್ರಗಳನ್ನು ತೆಗೆದುಕೊಂಡು ಬರುವ ಕಾರ್ಯವನ್ನು ವಹಿಸಿದ್ದರು. ತಮ್ಮ ಬಗ್ಗೆ ಯಾರಿಗೂ ಸಂಶಯ ಬರಬಾರದೆಂದು ಹರಿದ ಅಂಗಿ ಹಾಗೂ ಲುಂಗಿ ಹಾಕಿಸಿ ಕಳುಹಿಸುತ್ತಿದ್ದು, ಯಾವತ್ತೂ ಯಾವುದೇ ತೊಂದರೆ ಯಾಗದಂತೆ ವಿವಿಧ ಕಾರ್ಯಗಳನ್ನು ಮಾಡಿ ನಾಯಕರುಗಳಿಂದ ಹೊಗಳಿಸಿ ಕೊಂಡಿರುವುದನ್ನು ಅಭಿಮಾನದಿಂದ ವಿವರಿಸುತ್ತಾರೆ.

ಪ್ರಭಾತ್ ಫೇರಿ ಮಾಡಿಕೊಂಡಿರುತ್ತಿದ್ದ ಇವರಿಗೆ ಹೇಮಣ್ಣ ಸಾರ್ವಜನಿಕ ಭಾಷಣ ಮಾಡುವ ತರಬೇತಿ ನೀಡಿ ಭಾಷಣಕಾರರನ್ನಾಗಿ ಮಾಡಿದ ಬಗ್ಗೆ ಹೇಳುವ ಇವರು ಆ ಭಾಷಣದಿಂದಾಗಿಯೇ ಪೊಲೀಸರು ಹುಡುಕಾಟ ನಡೆಸಿದರು. ಇವರು ಮನೆ ಬಿಟ್ಟು ಹೊಲಗದ್ದೆ ಗಳಲ್ಲಿ ಇರುತ್ತಿದ್ದರು. ಇವರಿಗೆ ಸಂಬಂಧಿಸಿ ಪತ್ರಗಳನ್ನು ಇವರ ಮನೆಯ ಆಳು ಪೊಲೀಸರಿಗೆ ಗೊತ್ತಾಗದಂತೆ ಮುಟ್ಟಿಸುತ್ತಿದ್ದನು. ಆದರೂ ಕೊನೆಗೂ ಪೊಲೀಸರಿಗೆ ಸಿಕ್ಕು ಆರು ತಿಂಗಳ ಶಿಕ್ಷೆ ಅನುಭವಿಸಿದರು.

ತಮ್ಮ ಚಳುವಳಿಯ ಸಂದರ್ಭದಲ್ಲಿ ಸಾರ್ವಜನಿಕರು ಕರೆದು ಊಟ ನೀಡುತ್ತಿದ್ದ ಬಗ್ಗೆ ಹೇಳುವ ಇವರು ಅಂದಿನ ಸಮಾಜ ಚಳುವಳಿಗಾರರನ್ನು ಹೇಗೆ ಗೌರವಿಸುತ್ತಿತ್ತು ಎಂಬುದನ್ನು ನೆನಪಿಸಿಕೊಳ್ಳುತ್ತಾರೆ.

**೪. ನಾಗವ್ವ ರಾಮಣ್ಣ ಉಂಡೇರ** : ಸಾ॥ ಹಾಲಗಿ, ತಾ॥ ಹಾವೇರಿ, ವಯಸ್ಸು ೯೨

ಸ್ವಾತಂತ್ರ್ಯ ಹೋರಾಟದಲ್ಲಿ ಅಂದಿನ ಚಳುವಳಿಗಾರರು ಮಹಿಳೆಯರಿಗೂ ಹೋರಾಡಲು ಅವಕಾಶ ಕಲ್ಪಿಸಿದ್ದರು ಎಂಬುದಕ್ಕೆ ಜಿಲ್ಲೆಯಲ್ಲಿ ಚಳುವಳಿಯಲ್ಲಿ ಮಹಿಳೆಯರು ಮಾಡಿದ ಕಾರ್ಯಗಳೇ ಸಾಕ್ಷಿ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಬಡತನ ಅಡ್ಡಿಯಾಗಿಲ್ಲ ಎಂಬುದಕ್ಕೂ ಇವರೇ ಸ್ಪಷ್ಟ ಉದಾಹರಣೆ.

ಪತಿ ರಾಮಣ್ಣ ಉಂಡೇರ ಹಾಲಗಿಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದವರು. ಸಾಮಾನ್ಯ ವ್ಯಕ್ತಿಯೊಬ್ಬ ತನ್ನೊಂದಿಗೆ ಪತ್ನಿಯನ್ನೂ ಚಳುವಳಿಗೆ ಕರೆದುಕೊಂಡು ಹೋದದ್ದು ವಿಶೇಷವೇ ಸರಿ. ಯಾವುದೇ ಆಸ್ತಿಯಿಲ್ಲದ ಇವರು ಕೂಲಿ ಮಾಡಿ ಜೀವನ ಸಾಗಿಸುವ ಪತಿ-ಪತ್ನಿ ಸೇರಿ ಚಳುವಳಿಯಲ್ಲಿ ಭಾಗಿಯಾಗಿದ್ದು ಅಂದಿನ ಸಮಾಜದಲ್ಲಿ ಚಳುವಳಿ ಬಗ್ಗೆ ಇದ್ದ ಅಭಿಮಾನದ ದ್ಯೋತಕವಾಗಿದೆ. ತಾವು ಅಷ್ಟೇ ಅಲ್ಲದೆ, ತಮ್ಮೊಂದಿಗೆ ಕೂಲಿ ಕೆಲಸಕ್ಕೆ ಜೊತೆಯಲ್ಲಿ ಬರುವ ಹೆಣ್ಣು ಮಕ್ಕಳಿಗೂ ಇವರು ಪ್ರೇರಣೆಯಾಗಿರುವುದು ಇವರ ಹೇಳಿಕೆಯಿಂದ ತಿಳಿಯುತ್ತದೆ.

**ಪ್ರೇರಣೆ:** ನಾಗವ್ವ ಉಂಡೇರ ಮೊದಲು ಚಳುವಳಿಗೆ ಬರಲು ನಿರಾಕರಿಸುತ್ತಿದ್ದರು. ಕಾರಣ ಚಳುವಳಿಯೆಂದರೆ ಗಂಡಸರು ಮಾತ್ರ ಮಾಡುವಂಥ ಕಾರ್ಯ; 'ನಮ್ಮಂತ ಮಹಿಳೆಯರಿಗಲ್ಲ' ಎಂದು ಹಿಂಜರಿಯುತ್ತಿದ್ದರು. ಆದರೆ, ಮೈಲಾರ ಮಹದೇವಪ್ಪ ಮತ್ತು ಪರಸನಗೌಡ ಕಾಕಡೆ ಅವರ ಮಾತುಗಳು ತಮ್ಮನ್ನು ಚಳುವಳಿಗೆ ಸೇರುವಂತೆ ಮಾಡಿದವು ಎಂದು ಅಭಿಮಾನದಿಂದ ಸ್ಮರಿಸುತ್ತಾರೆ. ನಾಯಕರು ಹೇಗೆ ಪ್ರೇರೇಪಿಸಿದರು ಎಂಬ ಪ್ರಶ್ನೆಗೆ 'ಸರಕಾರ ಹೇಗೆ ನಮ್ಮನ್ನು ನಡೆಸಿಕೊಳ್ಳುತ್ತದೆ. ಮತ್ತು ನಾವು ಜಾತಿ ಹೆಸರಿನಲ್ಲಿ ಹೇಗೆ ಸಮಾಜವನ್ನು ಒಡೆದುಕೊಂಡು ಹಾಳಾಗುತ್ತಿದ್ದೇವೆ, ನಮ್ಮಲ್ಲಿಯ ಹರಿಜನರಿಗೆ ನಾವು ಯಾವ ಸ್ಥಾನ ಕೊಟ್ಟಿದ್ದೇವೆ, ಅವರು ನಮ್ಮ ಹಾಗೆ ಮನುಷ್ಯರಲ್ಲವೇ? ಹೊಂಡ, ಬಾವಿಗಳಲ್ಲಿ ನೀರು ತುಂಬುವುದರಿಂದ ಯಾರಿಗೆ ಏನು ತೊಂದರೆ ಆಗುತ್ತೆ? ಸತ್ತಮೇಲೆ ಏನಾಗುತ್ತೋ ಗೊತ್ತಿಲ್ಲ ಇದ್ದಾಗ ನಾವು ಮಾಡುವ ಜಾತೀಯತೆ ಬಗ್ಗೆ ಬೇರೆಯವರ ಮನಸ್ಸಿನ ಮೇಲೆ ಎಂಥ ದುಷ್ಪರಿಣಾಮ ಬೀರುತ್ತೆ ಎಂಬುದನ್ನು ಅರ್ಥ ಮಾಡಿಕೊಳ್ಳಿ, ಮುಂದಿನ ಜನ್ಮದಲ್ಲಿ ನೀವು ಹರಿಜನರಾಗಿ ಹುಟ್ಟಿದರೆ? ಎಂಬ ಅವರ ಮಾತುಗಳು ಊರಲ್ಲಿ ಎಲ್ಲರ ಗಮನ ಸೆಳೆದವು. ತಾವು ತಮ್ಮ ಪತಿ ಸಹ ಈ ಮಾತುಗಳಿಂದ ಅವರನ್ನು ನಂಬಿದ ಬಗ್ಗೆ, ನಮಗೆ ಯಾಕೆ ಸ್ವಾತಂತ್ರ್ಯ ಬೇಕು ಎಂಬುದನ್ನು ತಿಳಿಸಿದ್ದರಿಂದ ಚಳುವಳಿಗೆ ಧುಮುಕಿದೆವು ಎಂದು ಹಿನ್ನೆಲೆಯನ್ನು ವಿವರಿಸುತ್ತಾರೆ.

ನಾಗವ್ವನೊಂದಿಗೆ ಚಳುವಳಿಯಲ್ಲಿ ಭಾಗವಹಿಸಿದ ಮಹಿಳೆಯರೆಂದರೆ- ಅಂಬವ್ವ ಹಳ್ಳಿಗುಡಿ, ಕರಿಯವ್ವ ಮುದ್ದಿ, ಭರಮವ್ವ ಹಡಗದ ಇನ್ನೂ ಮೊದಲಾದವರು. ಆದರೆ ಅವರ್‍ಯಾರು ಇಂದು ನಮ್ಮೊಂದಿಗಿಲ್ಲ. ಆದರೆ ಅವರೆಲ್ಲರೂ ಕೂಲಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದವರು. ಆದರೆ ನಮ್ಮ ನಾಯಕರ ಮಾತುಗಳು ಮತ್ತು ದೇಶದ ಸ್ವಾತಂತ್ರ್ಯಕ್ಕಾಗಿ ತಾವುಗಳು ಉತ್ಸಾಹದಿಂದ ೧೯೪೨ರ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಅಭಿಮಾನದಿಂದ ಹೇಳುತ್ತಾರೆ.

**ಇವರು ಮಾಡಿದ ಪ್ರಮುಖ ಕಾರ್ಯಗಳೆಂದರೆ :**

* ಹಾವೇರಿಯ ವೀರಭದ್ರೇಶ್ವರ ದೇವಸ್ಥಾನದಿಂದ ಹಳೆ ತಾಲೂಕಾ ಕಛೇರಿಯವರೆಗೆ ಜೈಕಾರ ಹಾಕುತ್ತಾ ಪ್ರಭಾತ ಫೇರಿ ಹೋದದ್ದು. ಕೈಯಲ್ಲಿ ಧ್ವಜ ಹಿಡಿದುಕೊಂಡು ಹೋಗಿದ್ದರಿಂದ ಪೊಲೀಸರು ಇವರನ್ನು ಬಂಧಿಸಿದರು. * ದೇವರಗುಡ್ಡ ಹಾಗೂ ಮೈಲಾರ ಜಾತ್ರೆಗಳಲ್ಲಿ ಧ್ವಜಹಿಡಿದು ಜೈಕಾರ ಹಾಕಿದ್ದರಿಂದ ಅಲ್ಲಿಯೂ ಪೊಲೀಸರು ಇವರನ್ನು ಬಂಧಿಸಿದರು. * ವಿವಿಧ ಹಳ್ಳಿಗಳಿಗೆ ಹೋಗಿ ಪ್ರಭಾತ್ ಫೇರಿ ಮಾಡುವುದು ಮತ್ತು ಹರಿಜನ ಕೇರಿಗೆ ಹೋಗಿ ಸ್ವಚ್ಚತಾ ಕಾರ್ಯ ಮಾಡುವುದು.

ಹಾವೇರಿ, ದೇವರಗುಡ್ಡ ಮತ್ತು ಮೈಲಾರ ಜಾತ್ರೆಯಲ್ಲಿ ಇವರನ್ನು ಬಂಧಿಸಿ ರಾಣೆಬೆನ್ನೂರು, ಹಾವೇರಿ, ಧಾರವಾಡ ಮತ್ತು ಹಿಂಡಲಗಾ ಜೈಲಿನಲ್ಲಿ ಆರು ತಿಂಗಳ ಶಿಕ್ಷೆ ಅನುಭವಿಸಿದರು.

**ಪ್ರಮುಖ ಘಟನೆ;** ಇವರ ಪ್ರಮುಖವಾದ ಚಳುವಳಿಯೆಂದರೆ, ಮಹದೇವಪ್ಪ ಮೈಲಾರ ಹೊಸರಿತ್ತಿ ಹಫ್ತಾ ಲೂಟಿ ಸಮಯಕ್ಕೆ ಸರಿಯಾಗಿ ಹಾವೇರಿಯಲ್ಲಿಯ ನ್ಯಾಯಾಲಯದಲ್ಲಿ ಘಟನೆ ನಡೆಯುವ ಯೋಜನೆ ರೂಪಿಸಿದ್ದರು. ಆ ಘಟನೆಯಲ್ಲಿ ತಾವು ಇದ್ದ ಬಗ್ಗೆ ಹೆಮ್ಮೆಪಡುತ್ತಾರೆ. ನ್ಯಾಯಾಲಯದಲ್ಲಿ ಬ್ರಿಟಿಷರಿಗೆ ಶಿಕ್ಷೆ ನೀಡುವ ಕಾರ್ಯಕಲಾಪದ ಬಗ್ಗೆ ಮೊದಲೇ ಮಾಡಿದ ಯೋಜನೆ, ಅದು ಮಹದೇವಪ್ಪನ ಯೋಜನೆಯಂತೆ ನಡೆಯಿತು. ಎಲ್ಲರೂ ಬಂಧಿಯಾದದ್ದಕ್ಕಿಂತ, ತಮ್ಮ ನೆಚ್ಚಿನ ನಾಯಕ ಅವರ ಸಂಗಡಿಗರ ಸಾವಿನ ಬಗ್ಗೆ ದುಃಖದಿಂದಲೇ ವಿವರಿಸುತ್ತಾರೆ. ಅದೇ ರೀತಿ ಪೊಲೀಸರ ನಡವಳಿಕೆ ಬಗ್ಗೆ ಕೊಪಗೊಳ್ಳುತ್ತಾರೆ. ತಮ್ಮ ಹೋರಾಟದ ಬಗ್ಗೆ ಹೆಮ್ಮೆಪಡುವ ಇವರು ಸದ್ಯದ ರಾಜಕೀಯ ತಮಗೆ ಅರ್ಥವಾಗುತ್ತಿಲ್ಲ, ಆದರೆ ಸ್ವಾತಂತ್ರ್ಯ ನಂತರ ಆಳಿದ ನಾಯಕರ ಆದರ್ಶಗಳು ಈಗ ಕಾಣುತ್ತಿಲ್ಲ ಎಂಬ ನೋವಿದೆ ಎನ್ನುತ್ತಾರೆ.

**೫. ಫಕ್ಕೀರಯ್ಯ ಹಾಲಯ್ಯ ಕುಲಕರ್ಣಿ** : ಸಾ॥ ಹಾಲಗಿ, ತಾ॥ ಹಾವೇರಿ ವಯಸ್ಸು; ೯ಳ

ಭಾರತೀಯ ಸ್ವಾತಂತ್ರ್ಯ ಹೋರಾಟದಲ್ಲಿ ಇಡೀ ಗ್ರಾಮವೇ ಭಾಗಿಯಾಗಿ ಚಳುವಳಿಗೆ ಧುಮುಕಿದ್ದು ಅಪರೂಪ. ಆದರೆ ಜಿಲ್ಲೆಯ ಹಾವೇರಿ ತಾಲೂಕಿನ ಹಾಲಗಿ ಎಂಬ ಚಿಕ್ಕ ಗ್ರಾಮ ದೊಡ್ಡದೊಂದು ಪ್ರಶಸ್ತಿಗೆ ಪಾತ್ರವಾಯಿತು. ಆ ಊರಿನ ಚಳುವಳಿಗಾರರಲ್ಲಿ ಫಕ್ಕೀರಯ್ಯ ಹಾಲಯ್ಯ ಕುಲಕರ್ಣಿಯೂ ಒಬ್ಬರು.

ಬಡಕುಟುಂಬದಲ್ಲಿ ಜನಿಸಿದವರು ಇವರು ಮಹದೇವಪ್ಪ ಮೈಲಾರ ಮಾತುಗಳಿಂದ ಚಳುವಳಿಗೆ ಧುಮುಕಿದರು. ಮಹದೇವಪ್ಪ ತಮ್ಮ ಊರಿಗೆ ಬಂದಾಗ ಶಾಲೆಗೆ ಹೋಗುವ ಮಕ್ಕಳಿಗೆ ನೀವು ಶಾಲೆಗೆ ಹೋಗುವ ಪೂರ್ವದಲ್ಲಿ ಹರಿಜನ ಕೇರಿಗೆ ಹೋಗಿ ಕಸ ಗೂಡಿಸಿ ನಂತರ ಶಾಲೆಗೆ ಹೋಗಬೇಕೆಂದು ಶಾಲಾ ಮಕ್ಕಳಿಗೆ ಹೇಳಿದರು. ವಿಶೇಷವೆಂದರೆ ಹಾಲಗಿಯ ಶಾಲಾ ಮಕ್ಕಳು ಹಾಗೆ ಮಾಡುತ್ತಿದ್ದರು. ಇದನ್ನು ಸ್ವತಃ ಪಾಲಿಸಿದ ಅಂದು ಶಾಲಾ ಬಾಲಕರಾಗಿದ್ದ ಫಕ್ಕೀರಯ್ಯ ನೆನಪಿಸಿಕೊಳ್ಳುತ್ತಾರೆ.

ಇವರೊಂದಿಗೆ ಶಾಲಾ ಸ್ನೇಹಿತ ಮತ್ತು ತಮ್ಮೊಂದಿಗೆ ಹರಿಜನ ಕೇರಿಯಲ್ಲಿ ಕಸ ಗುಡಿಸಲು ಬರುತ್ತಿದ್ದ ಚಂದುಸಾಬ್ ವಾಲೀಕಾರ, ಯಮನೂರು ಸಾಬ್ ನದಾಫ್, ರಾಮಣ್ಣ ಬಡಗಿ, ನಿಂಗನಗೌಡ ಕಾಕಡೆ, ರಾಮಣ್ಣ ಉಂಡಿ, ಬುಡ್ನೇಸಾಬ್ ವಾಲೀಕಾರ ಮುಂತಾದವರು ಚಳುವಳಿಗೆ ಧುಮುಕಿದರು. ಇಂದು ರಾಮಣ್ಣನ ಪತ್ನಿ ಶ್ರೀಮತಿ ನಾಗವ್ವ ಮಾತ್ರ ನಮ್ಮೊಂದಿಗಿದ್ದಾರೆ. ಉಳಿದವರು ನೆನಪು ಮಾತ್ರ ಎನ್ನುತ್ತಾರೆ.

ಹರಿಜನ ಕೇರಿಯ ಸ್ವಚ್ಛತೆಯಿಂದ ಆರಂಭವಾದ ಸಾಮಾಜಿಕ ಕಾರ್ಯ ಚಳುವಳಿಗೆ ತಿರುಗಲು ಬಹಳ ಕಾಲ ಹಿಡಿಯಲಿಲ್ಲ. ಕಾರಣ ಮಹದೇವಪ್ಪನಂಥ ನಾಯಕನಿರುವಾಗ ಶಾಲೆ ಕಲಿತು ಮಾಡುವುದು ಏನು? ಎಂಬ ವಿಚಾರ ಮಾಡಿ ಮಹದೇವಪ್ಪನೊಂದಿಗೆ ಹೊರಟರು. ಪ್ರಾರಂಭದಲ್ಲಿ ಪ್ರಭಾತ್ ಫೇರಿ ಮಾಡುವುದು, ನೀಲಗಿರಿ ಅಡವಿಯಲ್ಲಿದ್ದ ಚಳುವಳಿಗಾರರಿಗೆ ರಾತ್ರಿ ಊಟ ತೆಗೆದುಕೊಂಡು ಹೋಗುವ ಕಾರ್ಯವನ್ನು ಮಹದೇವಪ್ಪ ಇವರಿಗೆ ವಹಿಸಿದ್ದರು.

**ಹಾಲಗಿ ಭಾಗದ ಮಹಿಳೆಯರು ಮಾಡಿದ ಸಹಾಯ** : ಚಳುವಳಿ ಸಮಯದಲ್ಲಿ ಮೈಲಾರ ಮಹದೇವಪ್ಪನ ತಂಡ ಹೆಚ್ಚು ಕಾರ್ಯ ಮಾಡಿದ್ದು ಹೊಸರಿತ್ತಿ, ನೆಗಳೂರು, ಹಾಲಗಿ ಭಾಗಗಳಲ್ಲಿ. ಈ ಸಮಯದಲ್ಲಿ ಆ ಭಾಗದ ಹಳ್ಳಿಗರು ಚಳುವಳಿಗಾರರಿಗೆ ಊಟ-ಉಪಹಾರದ ಸಹಾಯ ಮಾಡಿದ್ದು ವಿಶೇಷವೇ. ಆದರೆ ಹಾಲಗಿ ಗ್ರಾಮದ ಮಹಿಳೆಯರು ಮಾತ್ರ ಇದಕ್ಕೂ ವಿಶೇಷವಾದ ರೀತಿಯಲ್ಲಿ ಸಹಾಯ ಮಾಡಿದ್ದಾರೆ. ಆ ಊರಿನ ಜನ ತಮ್ಮ ತಮ್ಮ ಜಮೀನುಗಳ(ಹೊಲದ) ಕೆಲಸಕ್ಕೆ ಹೋಗುವಾಗ ತಾವು ಒಯ್ಯುವ ಊಟವನ್ನು ತಮಗೆ ಮಾತ್ರ ತೆಗೆದುಕೊಂಡು ಹೋಗದೆ ತಮ್ಮ ತಮ್ಮ ಮನೆಯ ಆರ್ಥಿಕ ಸ್ಥಿತಿಗತಿಗನುಗುಣವಾಗಿ ಹೆಚ್ಚು ಹೆಚ್ಚು ಊಟವನ್ನು ತೆಗೆದುಕೊಂಡು ಹೋಗುತ್ತಿದ್ದರು. ಕಾರಣ ತಮ್ಮ ಹೊಲದ ಬದಿಯಲ್ಲಿ ಊಟವಿಟ್ಟು ತಮ್ಮ ಕೆಲಸ ತಾವು ಮಾಡುತ್ತಿದ್ದರೆ, ಯಾರಾದರೂ ಚಳುವಳಿಗಾರರು ಬಂದರೆ, ಅವರಿಗೆ ಊಟ ಕೊಟ್ಟು ಸಹಾಯ ಮಾಡುತ್ತಿದ್ದರು. ಚಳುವಳಿಗಾರರಿಗೂ ಈ ವಿಷಯ ಗೊತ್ತಿದ್ದು ಆ ಭಾಗದಲ್ಲಿ ಹಾಲಗಿಯವರ ಹೊಲಗಳೆಂದರೆ, ತಮಗೆ ಊಟದ ಕಷ್ಟವಿಲ್ಲ ಎನ್ನುವುದನ್ನು ಅರಿತುಕೊಂಡಿದ್ದರು. ಅಷ್ಟರಮಟ್ಟಿಗೆ ಹಾಲಗಿಯ ಜನತೆ ಚಳುವಳಿಗಾರರಿಗೆ ಊಟ ನೀಡಿ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ ಎಂದು ಹಾಲಯ್ಯ ಸಂದರ್ಶನದಲ್ಲಿ ಅಭಿಮಾನದಿಂದ ಹೇಳುತ್ತಾರೆ.

**ಶರಣಾಗಿದ್ದು** : ಹಾಲಯ್ಯ ಕುಲಕರ್ಣಿ ಮಹದೇವಪ್ಪನ ತಂಡದ ಸದಸ್ಯನೆಂಬುದು ಪೊಲೀಸರಿಗೆ ತಿಳಿದು, ಇವರನ್ನು ಬಂಧಿಸಲು ಮನೆಗೆ ಬರುತ್ತಾರೆ. ಆಗ ಇವರ ಮನೆಯ ಕೆಲಸದಾಳು ದಾದಾಪೀರ ಹುಡುಗ ಇವರು ತಪ್ಪಿಸಿಕೊಳ್ಳಲು ಆಗದ ಸ್ಥಿತಿಯಲ್ಲಿ ಇದ್ದಾಗ ಮನೆಯ ಹಿಂದೆ ದನಗಳನ್ನು ಕಟ್ಟುವ ಕೊಟ್ಟಿಗೆಯಿದ್ದು, ಅಲ್ಲಿಗೆ ಇವರನ್ನು ಕರೆದುಕೊಂಡು ಜೆಲ್ಲಿ(ದೊಡ್ಡ ಬುಟ್ಟಿ)ಯಲ್ಲಿ ಕುಳ್ಳಿರಿಸಿ, ಇವರ ಮೇಲೆ ಸೊಪ್ಪಿಯ ದಂಟುಗಳನ್ನು ಮುಚ್ಚಿ ಹೊತ್ತುಕೊಂಡು ತಿಪ್ಪೆಯ ಕಡೆ

ನಡೆದು ಇವರನ್ನು ಪೊಲೀಸರಿಂದ ತಪ್ಪಿಸಿದ ಘಟನೆಯನ್ನು ಅಭಿಮಾನದಿಂದ ಹೇಳುತ್ತಾರೆ. ಆದರೆ ಇವರು ಸಿಗದ ಕಾರಣ ಮನೆಯವರಿಗೆ ತೊಂದರೆ ನೀಡುತ್ತಿರುವ ವಿಷಯ ತಿಳಿದು ಪೊಲೀಸರಿಗೆ ಶರಣಾಗಿ, ೮ ತಿಂಗಳ ಶಿಕ್ಷೆಯನ್ನು ಅನುಭವಿಸಿದರು.

ಸ್ವಾತಂತ್ರ್ಯ ಚಳುವಳಿಯಲ್ಲಿ ಗಾಂಧೀಜಿಯನ್ನು ಹತ್ತಿರದಿಂದ ಕಂಡ ಬಗ್ಗೆ ಸಂತೋಷ ಪಡುವ ಇವರು ತಮ್ಮ ನಾಯಕ ಮಹದೇವಪ್ಪ ಮತ್ತು ಸ್ನೇಹಿತರಾದ ತಿರುಕಪ್ಪ ಮಡಿವಾಳರ ಹಾಗೂ ವೀರಯ್ಯ ಹಿರೇಮಠ ಇವರು ಹುತಾತ್ಮರಾದ ವಿಷಯಕ್ಕೆ ತುಂಬಾ ಭಾವುಕರಾಗಿ ಅಂದಿನ ಘಟನೆಯನ್ನು ನೆನಪಿಸಿಕೊಳ್ಳುತ್ತಾರೆ.

**೬. ಪುಟ್ಟಪ್ಪ ಹನುಮಂತಪ್ಪ ಹರಬಿಮನಿ:**

ಜನನ : ೧೬.೧೨.೧೯೧೯ ಸಾ॥ ಹಿರೇಅಣಜಿ, ತಾ॥ ಬ್ಯಾಡಗಿ

ಇವರು ಶಿಕ್ಷಕರಾಗಿದ್ದರಿಂದ ದೇಶದ ಸ್ಥಿತಿ ಮತ್ತು ಇಂಗ್ಲಿಷರ ದಬ್ಬಾಳಿಕೆಗಳನ್ನು ಗಮನಿಸಿದ್ದರು. ಇದಕ್ಕೆ ಪುಷ್ಟಿ ನೀಡುವಂತೆ, ಟಿ.ಆರ್. ನೆಶ್ವಿ, ಸಂಗೂರ ಕರಿಯಪ್ಪ, ಮಲ್ಲೇಶಪ್ಪ ಬಣಕಾರ, ಶಿವಣ್ಣ ನೆಶ್ವಿ, ವೀರನಗೌಡ ಪಾಟೀಲ್ ಇವರ ಪ್ರೇರಣೆಯಿಂದ ಚಳುವಳಿಗೆ ಸೇರಲು ಕಾರಣವಾಯಿತು ಎನ್ನುತ್ತಾರೆ.

ಮೂಕಪ್ಪ ಹರಭಿಮನಿ, ಕರಬಸಪ್ಪ ಅಡವೇರ, ಮಲ್ಲನಗೌಡ ಗೂಳಪ್ಪಗೌಡ್ರ, ಮಲ್ಲನಗೌಡ ನಿಂಗನಗೌಡ್ರ, ಮೂಕನಗೌಡ ನಿಂಗನಗೌಡ್ರ, ರಾಮಚಂದ್ರಪ್ಪ ಬೋಡ್ಕೆ, ಗುಡ್ಡಪ್ಪ ಗಂಗಣ್ಣನವರ, ಬಸಯ್ಯ ಹಿರೇಮಠ, ಮಳ್ಳಪ್ಪ ಕೊಪ್ಪದ ಇನ್ನೂ ಮುಂತಾದವರು ಇವರೊಂದಿಗೆ ಭಾಗವಹಿಸಿದವರು. ಮುಖ್ಯವಾಗಿ ಟಿ.ಆರ್. ನೆಶ್ವಿ ಮತ್ತು ಮಲ್ಲೇಶಪ್ಪ ಬಣಕಾರ ನೇತೃತ್ವದಲ್ಲಿ ೧೯೪೦-೪೧ರಿಂದ ಚಳುವಳಿಗಳಲ್ಲಿ ಭಾಗವಹಿಸಿರುತ್ತಾರೆ.

**೧೯೪೨ರ ಚಲೇಜಾವ್ ಚಳುವಳಿಯಲ್ಲಿ ಭಾಗಿಯಾಗಿ ಮಾಡಿದ ಕಾರ್ಯಗಳು**

* ಬ್ಯಾಡಗಿ-ಹಿರೇಕೆರೂರು ಟಪಾಲು ಲೂಟಿ ಪ್ರಕರಣದಲ್ಲಿ ಭಾಗಿ- ಬಿದರಕಟ್ಟಿ ಗ್ರಾಮದ ಹತ್ತಿರ ಟಪಾಲು ಲೂಟಿ ಮಾಡಬೇಕೆಂದು ಸಂಗೂರ ಕರಿಯಪ್ಪ ಸೂಡಂಬಿ ಗ್ರಾಮದವರ ಸಹಾಯದಿಂದ ಕಾರ್ಯಕ್ಕೆ ನಿರ್ಧರಿಸಿದರು. ಅದರಂತೆ ಸಂಗೂರು ಕರಿಯಪ್ಪನ ನಾಯಕತ್ವದಲ್ಲಿ ಆ ಕಾರ್ಯಕ್ಕೆ ಚಾಲನೆ ಸಿಕ್ಕಿತು. ಕರಿಯಪ್ಪ ಹಿರೇಅಣಜಿಗೆ ಬಂದು ಊರ ಜನರನ್ನು ಸೇರಿಸಿ ರಾತ್ರಿ ಸಭೆ ನಡೆದು ಸುಮಾರು ೨೫ ಜನ ತರುಣರು ಅವರೊಂದಿಗೆ ರಾತ್ರಿ ಹೊರಡಲು ನಿರ್ಧರಿಸಿದರು. ಇಷ್ಟು ಜನರ ಅವಶ್ಯಕತೆ ಈಗ ಇಲ್ಲವೆಂದು ೧೨ ಜನರನ್ನು ಕರೆದುಕೊಂಡು ಹೊರಟರು. ಆ ಯುವಕರಲ್ಲಿ ಇವರು ಒಬ್ಬರು. ರಾತ್ರಿ ಜಿಟಿಜಿಟಿ ಮಳೆಯಲ್ಲಿ ಹೊರಟರು. ಶಿಡೇನೂರು ಹತ್ತಿರ ಸ್ವಲ್ಪ ವಿಶ್ರಾಂತಿ ಪಡೆದು ಬೆಳಗಿನ ಐದು ಗಂಟೆಗೆ ಗುಡ್ಡವನ್ನು ಸೇರಿದರು. ಎಲ್ಲರಿಗೂ ಅವರವರ ಕಾರ್ಯಗಳನ್ನು ಹಂಚಿ ಕೊಡಲಾಯಿತು. ಇವರಿಗೆ ಬಿದರಕಟ್ಟಿಯ ಗುಡ್ಡದ ಮೇಲೆ ನಿಂತು ಬಸ್ಸು ಬರುವುದನ್ನು ನೋಡಿ ತಿಳಿಸುವ ಕಾರ್ಯವಾಗಿತ್ತು. ಆ ಕಾರ್ಯ ಮಾಡುವ ಮೊದಲು ಬಸ್ಸು ನಿಲ್ಲಿಸಲು ರಸ್ತೆಯ ಮಧ್ಯಕ್ಕೆ ಮರಗಳನ್ನು ಕಡಿದು ಹಾಕಿ

ಬಸ್ಸು ಮುಂದಕ್ಕೆ ಚಲಿಸದ ಹಾಗೆ ಮಾಡಿದರು. ಇವರು ಅಂದುಕೊಂಡಂತೆ ಬಸ್ಸಿನ ಟಪಾಲು ಲೂಟಿ ಮಾಡುವಲ್ಲಿ ವಿಜಯಿಗಳಾದರು. ಆ ಕಾರ್ಯ ಮುಗಿದ ಮೇಲೆ ಎಲ್ಲರೂ ಬೇರೆ ಬೇರೆಯಾಗಿ ತಮ್ಮ ತಮ್ಮ ಊರುಗಳಿಗೆ ತೆರಳಿದರು.

* ಬಿದರಕಟ್ಟಿ ಟಪಾಲು ಲೂಟಿ ಪ್ರಕರಣ ಹೇಗೊ ಪೊಲೀಸರಿಗೆ ಗೊತ್ತಾಗಿ ಇವರ ಮೇಲೆ ಕೇಸಾಗಿ ಹಿರೇಕೆರೂರು ನ್ಯಾಯಾಲಯದಲ್ಲಿ (ಕೇಸ್ ನಂಬರ್ ೨೨\೪೨)ಕೇಸ್ ನಮೂದಾಗಿದೆ. ಬಿದರಿಕಟ್ಟೆ ಟಪಾಲು ಲೂಟಿ ಪ್ರಕರಣದಿಂದ ಇವರಿಗೆ ೧ ವರ್ಷ ೬ ತಿಂಗಳು ಜೈಲು ಶಿಕ್ಷೆಯಾಗಿ ಧಾರವಾಡ ಮತ್ತು ವಿಸಾಪೂರ ಜೈಲುವಾಸ ಅನುಭವಿಸಿದರು.

ಪೊಲೀಸರಿಗೆ ಸಿಗುವ ಪೂರ್ವದಲ್ಲಿ ಇವರು ಕಾಡು, ಹೊಲ ಮತ್ತು ಗದ್ದೆಗಳಲ್ಲಿ ಅಲೆಯುತ್ತಿದ್ದಾಗ ಇವರಿಗೆ ಕೃಷಿಕಾರ್ಯಕ್ಕೆ ಬರುತ್ತಿದ್ದ ಹೆಣ್ಣುಮಕ್ಕಳು ಊಟ ಕೊಡುತ್ತಿದ್ದುದನ್ನು ಅಂದು ಮಹಿಳೆಯರು ಸಹ ರಾಷ್ಟ್ರೀಯ ಹೋರಾಟಕ್ಕೆ ಈ ರೀತಿಯ ಬೆಂಬಲ ನೀಡಿರುವುದನ್ನು ನೆನಪಿಸಿಕೊಳ್ಳುತ್ತಾರೆ. ಹಾಗೆಯೇ ಇವರು ಜೈಲಿನಲ್ಲಿರುವಾಗ ಸಹ ಕೈದಿಗಳು ಇವರೊಟ್ಟಿಗೆ ಚಳುವಳಿಗಳ ಬಗ್ಗೆ ಚರ್ಚೆ ಮಾಡುತ್ತಿರುವ ವಿವರವನ್ನು ಹಂಚಿಕೊಳ್ಳುತ್ತಾರೆ.

**೭. ಮಳ್ಳಪ್ಪ ಶಿದ್ದಪ್ಪ ಕೊಪ್ಪದ:** ಸಾ॥ ಹಿರೇಅಣಜಿ, ತಾ॥ ಬ್ಯಾಡಗಿ, ವಯಸ್ಸು: ೯೫

ಇವರು ಕೃಷಿಚಟುವಟಿಕೆಗಳನ್ನು ಮಾಡುತ್ತಲೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರು. ಸದ್ಯ ತಮ್ಮ ಹುಟ್ಟೂರಾದ ಹಿರೇಅಣಜಿಯಲ್ಲಿಯೇ ಜೀವನವನ್ನು ಸಾಗಿಸುತ್ತಿದ್ದಾರೆ. ಹೋರಾಟದ ಸಂದರ್ಭದಲ್ಲಿ ತಮ್ಮ ಹೋರಾಟದ ವಿವರಗಳನ್ನು ಯಾರಿಗೂ ಹೇಳದಿದ್ದರೂ ನಂತರದಲ್ಲಿ ತಮ್ಮ ಚಳುವಳಿಗಳ ಅನುಭವಗಳನ್ನು ಸ್ನೇಹಿತರೊಂದಿಗೆ, ಕುಟುಂಬದವರೊಂದಿಗೆ ಹಂಚಿ ಕೊಂಡಿದ್ದಾರೆ.

ಸಂಗೂರು ಕರಿಯಪ್ಪ, ಮಲ್ಲೇಶಪ್ಪ ಬಣಕಾರ ಮತ್ತು ಶಿವಣ್ಣ ನೆಶ್ವಿ ಮುಂತಾದವರೇ ಸ್ವಾತಂತ್ರ್ಯ ಹೋರಾಟಕ್ಕೆ ಬರಲು ಪ್ರೇರಣೆ ಎನ್ನುವ ಇವರು ತಮ್ಮೊಂದಿಗೆ ಪುಟ್ಟಪ್ಪ ಹರಭಿಮನಿ, ಮಲ್ಲಪ್ಪ ಲಿಂಗನಗೌಡ್ರ, ಮೂಕಪ್ಪ ನಿಂಗನಗೌಡ್ರ, ಗುಡ್ಡಪ್ಪ ವಾಲೀಕಾರ, ಚನ್ನಬಸಪ್ಪ ಮುತ್ತಳ್ಳಿ, ಮೂಕಪ್ಪ ಹರಭಿಮನಿ, ತುಮರಿಕೊಪ್ಪದ ಬಸಯ್ಯ, ರಾಮಚಂದ್ರ ಚಿಂಪಿಗೇರ, ಕರಬಸಪ್ಪ ಅಡಿವೇರ, ಬಸಪ್ಪ ಚೊಗಚಿಕೊಪ್ಪ, ಗುಡ್ಡಪ್ಪ ತಳವಾರ, ಮಲ್ಲಪ್ಪ ಗೂಳಪ್ಪಗೌಡ್ರ, ಗುರುಬಸಪ್ಪ ಅಡಿವೇರ ಮುಂತಾದವರೊಂದಿಗೆ ಚಳುವಳಿಗೆ ಧುಮುಕಿದ ಬಗ್ಗೆ ಹೇಳುತ್ತಾರೆ.

**ಇವರು ಮಾಡಿದ ಪ್ರಮುಖ ಕಾರ್ಯಗಳು:** ಕ್ರಿ.ಶ.೧೯೪೨ರಲ್ಲಿ ಸಂಗೂರ ಕರಿಯಪ್ಪ, ಮಲ್ಲೇಶಪ್ಪ ಬಣಕಾರ ಮತ್ತು ಶಿವಣ್ಣ ನೆಶ್ವಿ ಇವರ ನಾಯಕತ್ವದಲ್ಲಿ ಬ್ಯಾಡಗಿ–ಹಿರೇಕೆರೂರು ಟಪಾಲು ಬಸ್ಸಿನ ಲೂಟಿ, ಅದಕ್ಕಾಗಿ ಬಿದರಕಟ್ಟಿ ಗುಡ್ಡದಲ್ಲಿ ೨೧ ಜನ ಚಳುವಳಿಗಾರರು ಬೆಳಗಿನ ೫ ಗಂಟೆಗೆ ಶಿಡೇನೂರು ಗುಡ್ಡದ ಹತ್ತಿರ ಬಂದು ಬಸ್ಸುಬಂದ ಮೇಲೆ ಹೇಗೆ ಲೂಟಿ ಮಾಡುವುದು ಯಾರು? ಯಾರು? ಏನೇನು? ಕಾರ್ಯಗಳನ್ನು ಮಾಡಬೇಕೆಂಬುದನ್ನು ನಿರ್ಧರಿಸಲಾಯಿತು. ಮತ್ತು ಈಚಲ ಮರಗಳನ್ನು ಕಡಿದು ರಸ್ತೆಗೆ ಅಡ್ಡಲಾಗಿ ಹಾಕಿದರು.

* ಬಸ್ಸು ಬಂದು ನಿಂತ ತಕ್ಷಣ ಬಸ್ಸಿನ ಗಾಲಿಗಳ ಗಾಳಿ ತೆಗೆಯುವ ಕಾರ್ಯವನ್ನು ಇವರಿಗೆ ವಹಿಸಲಾಯಿತು. ಬಸ್ಸು ವೇಳೆಗೆ ಸರಿಯಾಗಿಯೇ ಬಂತು, ಇವರಿಗೆ ತಮ್ಮ ಕೆಲಸದಲ್ಲಿ ಗಡಿಬಿಡಿ ಎನಿಸತೊಡಗಿತ್ತು, ಬಸ್ಸು ಬಂದು ನಿಂತಾಗ ಇವರಿಗೆ ಗಾಲಿಗಳ ಗಾಳಿ ತೆಗೆಯುವುದು ಹೇಗೆ ಎಂಬುದು ತೋಚಲಿಲ್ಲ, ಅವರ ಕಾರ್ಯದಲ್ಲಿದ್ದ ಇನ್ನುಳಿದ ಸದಸ್ಯರನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಹಾಗಾಗಿ ತಮ್ಮ ಕೊಡಲಿಯಿಂದ ಗಾಲಿಗಳ ಗಾಳಿ ತೆಗೆಯುತ್ತಿದ್ದರು. ಆದರೆ ಸ್ನೇಹಿತರು ಬೇಡ ಪ್ರಯಾಣಿಕರಿಗೆ ತೊಂದರೆಯಾಗುತ್ತೆ ಎಂದು ಗಾಲಿಗಳನ್ನು ಕಡಿಯುವ ಕೆಲಸವನ್ನು ಬಿಡಿಸಿದರು.

ಮೇಲಿನ ಘಟನೆ ಮುಗಿದ ಮೇಲೆ ಎಲ್ಲ ಸ್ನೇಹಿತರು ಇವರು ಗಾಳಿ ತೆಗೆಯುವ ರೀತಿ ನೋಡಿ ನಗುವಾಗ, ಇವರು ಮಾತ್ರ ಆಗಲೂ ಸ್ನೇಹಿತರಿಂದ ಗಾಳಿ ತೆಗೆಯುವುದನ್ನು ಕೇಳಿ ತಿಳಿದ ಮೇಲೆ ತಮ್ಮಷ್ಟಕ್ಕೇ ತಾವೆ ನಗಲಾರಂಭಿಸಿದರು. ಹೀಗೆ ಗಂಭೀರ ಘಟನೆಯಲ್ಲಿಯೂ ಈ ರೀತಿಯ ಒಂದು ಹಾಸ್ಯದ ಘಟನೆ ಇವರಿಂದ ನಡೆಯಿತು.

* ತಮ್ಮ ಈ ವರ್ತನೆಗೆ ಡ್ರೈವರ್ ತುಂಬಾ ಗಾಬರಿಯಾಗಿ ಓಡತೊಡಗಿದ. ನಾವು ಚಳುವಳಿಗಾರರು ನಿನಗಾಗಲಿ ಮತ್ತು ಬಸ್ಸಿನಲ್ಲಿಯ ಜನರಿಗಾಗಲಿ ಯಾವ ತೊಂದರೆ ಕೊಡುವುದಿಲ್ಲ ಎಂದು ಧೈರ್ಯ ಹೇಳಿದಾಗ ಕೆಲವರಿಗೆ ನಂಬಿಕೆ ಮತ್ತೆ ಕೆಲವರಿಗೆ ಖುಷಿಯಾಯಿತು. ಕೊನೆಗೆ ಎಲ್ಲರೂ ೨-೩ ಜನರಂತೆ ತಮ್ಮ ತಮ್ಮ ಊರುಗಳಿಗೆ ಹೋದರು.

* ಇದೇ ತಂಡ ನಮ್ಮ ಊರ ಹತ್ತಿರ ಇರುವ ಎಲ್ಲ ಈಚಲ ಮರಗಳನ್ನು ಕಡಿದುಹಾಕಿದರು.

**ಪೊಲೀಸರಿಗೆ ಸಿಕ್ಕಿದ್ದು** : ಬಿದರಕಟ್ಟಿ ಟಪಾಲು ಲೂಟಿ ಪ್ರಕರಣದಲ್ಲಿ ತಮ್ಮ ಮೇಲೆ ಆರಂಭದಲ್ಲಿ ಪೊಲೀಸರಿಗೆ ಸಂಶಯವಿರಲಿಲ್ಲ. ಸೂಡಂಬಿ ಊರಿನವರ ಮೇಲೆ ಸ್ವಲ್ಪ ಅನುಮಾನ ಪಟ್ಟಿರುವಾಗಲೇ ಒಂದು ಘಟನೆ ನಡೆಯಿತು, ಇವರ ಊರಿಗೂ ಪೊಲೀಸರು ಬರುತ್ತಿರುವುದರಿಂದ ಇವರು ಊರು ಬಿಟ್ಟು ಹೊಲ, ಗದ್ದೆ ಮತ್ತು ಕಾಡಿನಲ್ಲಿ ಅಲೆಯುತ್ತಿದ್ದರು. ಇದರಿಂದ ಪೊಲೀಸರಿಗೆ ಇನ್ನೂ ಅನುಮಾನ ಹೆಚ್ಚಾಗಿ ಇವರ ಶೋಧಕ್ಕೆ ನಿಂತರು. ಇವರ ಗುಂಪಿನ ಗುಡ್ಡಪ್ಪ ತಳವಾರ ಪೊಲೀಸರಿಗೆ ಸಿಕ್ಕು ಅವರ ಹೊಡೆತ ತಾಳಲಾರದೆ ಎಲ್ಲರ ಹೆಸರುಗಳನ್ನು ಹೇಳಿದ್ದರಿಂದ ಪೊಲೀಸರು ಇವರನ್ನು ಇವರ ಊರಿನಲ್ಲಿಯೇ ಬಂಧಿಸಿ, ಹಂಸಬಾವಿಗೆ ಅಲ್ಲಿಂದ ಹಿರೇಕೆರೂರು ತಹಶೀಲ್ದಾರ ಕಡೆ ಜವಾಬ್ ಕೊಡಿಸಿದರು. ಅಲ್ಲಿಂದ ಧಾರವಾಡಕ್ಕೆ ಕರೆದೊಯ್ದರು. ಮಲ್ಲೇಶಪ್ಪ ಬಣಕಾರ, ಕರಿಯಪ್ಪ ಸಂಗೂರಗೆ ೩ ವರ್ಷ ಶಿಕ್ಷೆಯಾದರೆ, ಉಳಿದವರೆಲ್ಲರಿಗೂ ೧ ವರ್ಷ ೬ ತಿಂಗಳು ಜೈಲು ಶಿಕ್ಷೆಯಾಯಿತು. ಇವರನ್ನು ವಿಸಾಪೂರ ಜೈಲಿಗೆ ಹಾಕಿದರು.

ಸ್ವಾತಂತ್ರ್ಯ ನಂತರದ ಭಾರತದಲ್ಲಿ ಹಣ ನೀಡಿದರೆ ಎಲ್ಲ ಸರಿಯಾಗುತ್ತೆ ಎಂಬ ಕಲ್ಪನೆಯಿದೆ. ಅದು ಒಂದು ದೇಶದ ಅಭಿವೃದ್ಧಿಗೆ ಒಳ್ಳೆಯದಲ್ಲ. ಏಕೆಂದರೆ ಇಂಗ್ಲಿಷರಿಗೂ ನಮಗೂ ವ್ಯತ್ಯಾಸವಿರುವುದಿಲ್ಲ. ನಾವು ಸ್ವಾತಂತ್ರ್ಯಗಳಿಸಿದ್ದಕ್ಕೂ ಉಪಯೋಗವಾಗುವುದಿಲ್ಲ. ಈಗಿನ

ರಾಜಕಾರಣ ಮತ್ತು ಆಡಳಿತದ ಬಗ್ಗೆ ಬೇಸರಪಡುವ ಇವರು ಹೀಗೆ ಮುಂದುವರೆದರೆ, ಮುಂದಿನ ಪೀಳಿಗೆಯ ಗತಿ ಹೇಗೆ? ಎಂಬ ಪ್ರಶ್ನೆಯನ್ನು ಎತ್ತುತ್ತಾರೆ. ಮೊದಲು ರಾಜಕಾರಣ ಸರಿಯಾದರೆ ಎಲ್ಲಾ ಸರಿಯಾಗುತ್ತದೆ. ಅದಕ್ಕಾಗಿ ಸರಕಾರ ಈ ವ್ಯವಸ್ಥೆಯನ್ನು ಬದಲಾಯಿಸಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

**೮. ಗುಡ್ಡನಗೌಡ ನೀಲನಗೌಡ ಹರಿಜನ :**

ವಯಸ್ಸು : ೯೭, ಸಾ॥ ಅಕ್ಕಿಆಲೂರು, ತಾ॥ ಹಾನಗಲ್ಲು

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧೀಜಿ ಹೇಳುವಂತೆ ಅಸ್ಪೃಶ್ಯತೆ ತೊಲಗುವವರೆಗೂ ಬ್ರಿಟಿಷರಿಂದ ಸ್ವಾತಂತ್ರ್ಯ ಕೇಳಲು ನಮಗೆ ಅರ್ಹತೆ ಇಲ್ಲ. ಹಾಗಾಗಿ ಚಳುವಳಿಗಾರರು ಮೊದಲು ಮಾಡಬೇಕಾದ ಕಾರ್ಯವೆಂದರೆ ಅಸ್ಪೃಶ್ಯತಾ ನಿವಾರಣಾ ಆಂದೋಲನ ಎಂದು ಕರೆ ನೀಡಿದಾಗ ಹಳೆಯ ಜಾತೀಯತೆಯನ್ನು ನಂಬಿಕೊಂಡವರು ಬಹುಶಃ ಸುಮ್ಮನಾಗಿರಬಹುದೇನೋ! ಆದರೆ ಗಾಂಧೀಜಿಯ ಕಟ್ಟಾ ಅಭಿಮಾನಿಗಳು ಅವರ ಆದೇಶ ಪಾಲಿಸಲು ಸಂಪೂರ್ಣ ತೊಡಗಿಸಿಕೊಂಡವರು ಹಲವರು.

ಗಾಂಧೀಜಿಯ ಹರಿಜನೋದ್ಧಾರ ಕಾರ್ಯಕ್ರಮವನ್ನು ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ಗಮನಿಸಿದರೆ, ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದ ವೀರನಗೌಡ ಪಾಟೀಲ್ ಮತ್ತು ಅವರ ಪತ್ನಿ ಶ್ರೀಮತಿ ನಾಗಮ್ಮ ಪಾಟೀಲ್ ದಂಪತಿಗಳು. ಅವರ ಬೆಂಬಲಕ್ಕೆ ನಿಂತವರು ಕೆ.ಎಫ್. ಪಾಟೀಲ್, ಟಿ.ಆರ್. ನೆಶ್ವಿ, ಹಳ್ಳಿಕೇರಿ ಗುದ್ಲೆಪ್ಪ, ಸಂಗೂರು ಕರಿಯಪ್ಪ, ಮೆಣಸಿನಾಳ ತಿಮ್ಮನಗೌಡ್ರು ಮತ್ತು ಈ ದಂಪತಿಗಳ ಸತತ ಪ್ರಯತ್ನದ ಫಲವಾಗಿ ಹರಿಜನೋದ್ಧಾರ ಕಾರ್ಯ ಭರದಿಂದ ಸಾಗಿತ್ತೆನ್ನಬಹುದು.

ಸಮಾಜದಲ್ಲಿ ಹರಿಜನ ಅಭಿವೃದ್ಧಿಯ ಕ್ರಾಂತಿ ಉನ್ನತ ವರ್ಗದವರಿಂದ ಪ್ರಾರಂಭವಾದರೆ, ಅವರನ್ನು ಕೈ ಹಿಡಿದು ತಮಗಾಗುವ ಸಮಸ್ಯೆಗಳನ್ನು, ನೋವುಗಳನ್ನು, ಅವಮಾನಗಳನ್ನು ಹೇಳುವ ಧೈರ್ಯ ಸಾಮಾನ್ಯ ಹರಿಜನರಿಗೆ ಕಷ್ಟವಾದಂತಿದೆ. ಕಾರಣ ಬಡತನ, ಶಿಕ್ಷಣ, ಸಾಮಾಜಿಕ ಸ್ಥಾನಮಾನ ಕಳೆದುಕೊಂಡಿದ್ದ ಅವರು ಅನುಭವಿಸುವ ನೋವುಗಳನ್ನು ಹೇಳಿ ಕೊಳ್ಳುವಂತಿದ್ದರೆ ಆ ಕಾರ್ಯಕ್ಕೆ ವೇಗದ ಚಾಲನೆ ದೊರಕುತ್ತಿತ್ತು.

ಗಾಂಧೀಜಿಯ ಹರಿಜನೋದ್ಧಾರ ಕಾರ್ಯದಲ್ಲಿ ಜಿಲ್ಲೆಯ ಮೇಲ್ವರ್ಗದವರ ಸಹಕಾರದಿಂದ ತಮ್ಮ ಸಮುದಾಯದ ಜನರ ಸಮಸ್ಯೆಗಳನ್ನು ಸರಿಪಡಿಸಿಕೊಳ್ಳುವಂಥವರು ಆ ಸಮುದಾಯದಲ್ಲಿ ಯಾರಾದರೂ ಇದ್ದಿರಬಹುದೆ ಎಂದು ಗಮನಿಸಿದರೆ, ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ಅಕ್ಕಿಆಲೂರಿನ ಗುಡ್ಡನಗೌಡ ನೀಲನಗೌಡ ಪಾಟೀಲ್ (ಹರಿಜನ) ಆ ಸಾಲಿನಲ್ಲಿ ನಿಲ್ಲುವಂಥ ಹೋರಾಟಗಾರರು. ಸ್ವಾತಂತ್ರ್ಯ ಹೋರಾಟದೊಂದಿಗೆ ತಮ್ಮ ಸಮುದಾಯದವರ ಏಳಿಗೆಗಾಗಿ ಸತತವಾಗಿ ವೀರಯೋಧನಂತೆ ಹೋರಾಡಿದವರು, ಈಗಲೂ ತಮ್ಮ ೯೭ರ ಹರೆಯದಲ್ಲಿ ಹರಿಜನರ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ.

**ಹೋರಾಟದ ಹಿನ್ನೆಲೆ**

ಹಾವೇರಿ ಜಿಲ್ಲೆ ಹಾನಗಲ್ಲು ತಾಲೂಕು ವಾಸನ(ಹಾಲಿ ವಸತಿ ಅಕ್ಕಿಆಲೂರು)ದಲ್ಲಿ ಸಾಮಾನ್ಯ ಹರಿಜನ ಬಡ ಕುಟುಂಬದಲ್ಲಿ ಹುಟ್ಟಿದ ಗುಡ್ಡನಗೌಡ ಕುರಿ, ದನ ಕಾಯುತ್ತಲೇ ೩ನೇ ತರಗತಿಯವರೆಗೆ ಓದಿದರು. ಬಡತನದಿಂದಾಗಿ ಶಿಕ್ಷಣ ಬಿಟ್ಟು ಕೃಷಿ ಕಾರ್ಯ ಮಾಡುತ್ತಿದ್ದರು. ಯುವಕ ಧೈರ್ಯವಂತ, ಸದೃಢ ದೇಹ, ಹೊಂದಿದ್ದು ಚೆನ್ನಾಗಿ ಮಾತನಾಡುತ್ತಿದ್ದರಿಂದ ಇವರ ಸ್ನೇಹಿತ ಕೊಟ್ರೇಶ ಶಾಸ್ತ್ರಿ ಹಿರೇಮಠ ಸಿಂಧೂರು ಸಿದ್ದಪ್ಪನನ್ನು ಭೇಟಿ ಮಾಡಿಸಿದ. ಆ ಭೇಟಿ ಅಷ್ಟಕ್ಕೆ ನಿಲ್ಲಲಿಲ್ಲ. ಮತ್ತೊಮ್ಮೆ ಸಿಂಧೂರು ಸಿದ್ದಪ್ಪ ವಾಸನಕ್ಕೆ ಬಂದು 'ನೀನು ಮಾತುಗಾರ, ಬುದ್ಧಿವಂತ ಯಾಕೆ ನಮ್ಮೊಂದಿಗೆ ಚಳುವಳಿಗೆ ಬರಬಾರದು? ಎಂದು ಹೇಳಿದ್ದರಿಂದ ತಾನು ಚಳುವಳಿಗೆ ಧುಮುಕಲು ಇದು ಕಾರಣವಾಯಿತು ಎನ್ನುತ್ತಾರೆ. ಆಗ ಇದ್ದ ಪ್ರಮುಖ ಚಳುವಳಿಗಾರರೆಂದರೆ–ಕರಿಯಪ್ಪ ಸಂಗೂರು, ಅಕ್ಕಿ ಮಲ್ಲಪ್ಪ, ಕೊಟ್ರೇಶ ಶಾಸ್ತ್ರಿ ಹಿರೇಮಠ, ಕಾಡಪ್ಪನವರ ಫಕ್ಕೀರಪ್ಪ, ಬಸವಣ್ಣೆಪ್ಪ ಚಕ್ರಸಾಲಿ, ಸಂಗಯ್ಯ ಹಿರೇಮಠ, ಸಿಂಧೂರು ಸಿದ್ದಪ್ಪ, ಸುಬ್ಬಣ್ಣಾಚಾರ್ಯ ಅಕ್ಕಿವಳಿ ಮುಂತಾದವರು.

**ಸ್ವಾತಂತ್ರ್ಯ ಚಳುವಳಿಯಲ್ಲಿ ಮಾಡಿದ ಪ್ರಮುಖ ಕಾರ್ಯಗಳು** : ಗುಡ್ಡನಗೌಡ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ ಮೇಲೆ ಮಾಡಿದ ಪ್ರಮುಖ ಕಾರ್ಯಗಳೆಂದರೆ– * ಕುಮ್ಮೂರು ಚಾವಡಿ ಸುಟ್ಟದ್ದು. * ಹೊಂಕಣದ ನದಿಯನ್ನು ರಾತ್ರಿಯಲ್ಲಿ ಈಜಿ ಹೊಂಕಣದ ಬಂಗ್ಲೆಗೆ ಬೆಂಕಿ ಹಚ್ಚಿದ್ದು. * ಹಾವೇರಿಯಲ್ಲಿ ಶ್ಯಾನಭೋಗರು ಇಟ್ಟು ಹೋಗಿದ್ದ ದಾಖಲೆಗಳನ್ನು ಲೂಟಿ ಮಾಡಿದ್ದು. * ಸುಣಕಲ್ಲ ಬಿದರಿಯ ಕುಸುಗೂರು ಬಸಮ್ಮರ ಹೊಲದಲ್ಲಿ ಬಾಂಬ್ ತಯಾರಿಸಿ ಅವು ಒಣಗಿದ ಮೇಲೆ ಚೀಲದಲ್ಲಿ ತುಂಬುವಾಗ ಬಾಂಬ್ ಸ್ಫೋಟಗೊಂಡು ಸಂಗೂರ ಕರಿಯಪ್ಪನ ಕೈ ಗಾಯವಾಗಿ ಕೈಯನ್ನು ಕಳೆದುಕೊಂಡ ಘಟನೆಗೆ ಸಾಕ್ಷಿಯಾದವರು.

* ಮೈಲಾರ ಮಹದೇವಪ್ಪ ತಿರುಕಪ್ಪ ಮಡಿವಾಳರ ಮತ್ತು ವೀರಯ್ಯ ಹಿರೇಮಠ ಹೊಸರಿತ್ತಿ ಹಫ್ತಾ ಲೂಟಿ ಪ್ರಕರಣದಲ್ಲಿ ಪೊಲೀಸರ ಗುಂಡಿಗೆ ಬಲಿಯಾದಾಗ ಹಾವೇರಿಗೆ ಹೋಗಿ ಅವರನ್ನು ನೋಡಿದ ಘಟನೆಯನ್ನು ಕಂಡು ಸಂಕಟಪಟ್ಟವರು. ಇಷ್ಟೆಲ್ಲ ಘಟನೆಗಳಿಗೆ ಸಾಕ್ಷಿಯಾದ ಇವರು ಆ ಸಮಯದಲ್ಲಿ ತಮ್ಮ ಸಹಾಯವನ್ನು ನೆನಪಿಸಿಕೊಳ್ಳುತ್ತಾರೆ.

**ಅಕ್ಕಿಆಲೂರಿಗೆ ಗಾಂಧೀಜಿ** : ಸಿಂಧೂರ ಸಿದ್ದಪ್ಪ ಗಾಂಧೀಜಿಯನ್ನು ಅಕ್ಕಿಆಲೂರಿಗೆ ಕರೆಸಲು ನಿರ್ಧರಿಸಿದಾಗ, ಎಲ್ಲರೂ ಸಹಕಾರ ಕೊಡದ ಕಾರಣ, ಬೊಮ್ಮನಹಳ್ಳಿ ಬಸನಗೌಡರು ಬೊಮ್ಮನಹಳ್ಳಿಯಿಂದ ಜನರನ್ನು ಕರೆಯಿಸಿ ಅಕ್ಕಿಆಲೂರಿನ ಕನ್ನಡ ಶಾಲೆಯಲ್ಲಿಯ ಮೈದಾನದಲ್ಲಿ ಅವರಿಂದ ಚಪ್ಪರ ಹಾಕಿಸಿದರು. ಗಾಂಧೀಜಿ ಅಕ್ಕಿಆಲೂರಿಗೆ ಬಂದ ತಕ್ಷಣ ಹರಿಜನರ ಕೇರಿಯನ್ನು ಕೇಳಿ ಕಸ ಗುಡಿಸಲು ಆರಂಭಿಸಿದಾಗ ಇವರು ಬೇಡವೆಂದು ಕೇಳಿಕೊಂಡರು. ನಂತರ ಊರ ಪ್ರಮುಖರನ್ನು ಸೇರಿಸಿ ಅಕ್ಕಿಆಲೂರಿನ ಕ್ವಾಟಿ ಹೊಂಡದಲ್ಲಿ ಹರಿಜನರಿಂದ

ನೀರು ತುಂಬಿಸಲು ಹೇಳಿದ್ದನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಗಾಂಧೀಜಿಯ ಕಾರ್ಯದಿಂದ ತಮಗೆ ಮತ್ತಷ್ಟು ಬಲ ಬಂದ ಹಾಗಾಯಿತೆಂದು ಅಂದಿನ ಕ್ಷಣವನ್ನು ಸ್ಮರಿಸುತ್ತಾರೆ.

**ಹೋರಾಟದ ಸಂದರ್ಭದಲ್ಲಿ ಸಹಾಯ ಮಾಡಿದವರು** : ಕಾಕೋಳದ ಹನುಮನ ಮಟ್ಟಿಯಲ್ಲಿ ಕೆ.ಎಫ್. ಪಾಟೀಲ್ ಸಹೋದರ ತಿರುಕಪ್ಪ ಪಾಟೀಲ್ ಏಷ್ಟೋಸಾರಿ ತಮ್ಮ ಹೊಲದ ತೋಟದಲ್ಲಿ ಊಟದ ವ್ಯವಸ್ಥೆ ಮಾಡಿದ್ದರು. ಇವರು ಅಲ್ಲಿಗೆ ಪದೇ ಪದೇ ಹೋಗಲು ಕಾರಣ ಅಲ್ಲಿ ಬಾವಿ ಇರುವುದರಿಂದ ಸ್ನಾನಕ್ಕೆ ಅನುಕೂಲ ಮತ್ತು ಊಟ ಸಿಕ್ಕೇಸಿಗುತ್ತೆ ಅನ್ನೂ ನಂಬಿಕೆಯಿಂದ ಎಂದು ಹೆಮ್ಮೆಯಿಂದ ಹೇಳುತ್ತಾರೆ.

* ಮುತ್ತಳ್ಳಿಯಲ್ಲಿ ಈರಪ್ಪ ಪೂಜಾರ ಮನೆಯಲ್ಲಿ ಎಷ್ಟೇ ರಾತ್ರಿ, ಎಷ್ಟು ಜನ ಚಳುವಳಿಗಾರರು ಹೋದರೂ ಊಟದ ವ್ಯವಸ್ಥೆ ಆಗುತ್ತಿದ್ದ ಬಗ್ಗೆ, ಬ್ಯಾತನಾಳದ ಸಿಗಡಿ ಬಸಪ್ಪ ಚಳುವಳಿಗಾರರು ಇದ್ದಲ್ಲಿಗೆ ಬಂದು ಊಟ ಕೊಟ್ಟು ಹೋಗುತ್ತಿದ್ದವರನ್ನು ಸ್ಮರಿಸುತ್ತಾರೆ. ಸುಣಕಲ್ಲ ಬಿದರಿಯಲ್ಲಿ ಕುಸುಗೂರು ಬಸಮ್ಮ ಇವರ ತಂಡಕ್ಕಾಗಿ ಜೋಳದ ಹೊಲಕ್ಕೆ ಬುತ್ತಿ-ರೊಟ್ಟಿ ಕೊಟ್ಟು ಕಳುಹಿಸುತ್ತಿದ್ದರು. ಹೀಗೆ ಚಳುವಳಿಯ ಕಾಲಕ್ಕೆ ವಿವಿಧ ರೀತಿಯಲ್ಲಿ ಸಹಾಯ ಮಾಡಿದ ಅನೇಕ ಜನರನ್ನು ಗುಡ್ಡನಗೌಡ ಹರಿಜನ ನೆನಪಿಸಿಕೊಳ್ಳುತ್ತಾರೆ.

**ಜೈಲು ಸೇರಿದ್ದು**

ವಿವಿಧ ಕಡೆಗಳಲ್ಲಿಯ ಹೋರಾಟದ ವಿಷಯ ಪೋಲೀಸರಿಗೆ ತಿಳಿದು ಇವರನ್ನು ೧೯೪೨ರ ಆರಂಭದಲ್ಲಿಯೇ ಹಾವೇರಿಯ ಫೈ ಇನ್ಸಪೆಕ್ಟರ್ ಬಂಧಿಸಿದರು. ತಮ್ಮ ನಾಯಕರನ್ನು ಹಿಡಿಯಲು ಎಷ್ಟೇ ಕೇಳಿದರೂ ಇವರು ಹೇಳಲಿಲ್ಲ. ಇವರು ಹಾವೇರಿ, ಧಾರವಾಡ ಸಬ್‌ಜೈಲಿನಲ್ಲಿ ನಾಲ್ಕುವರೆ ತಿಂಗಳು, ಯರವಡಾ ಜೈಲಿನಲ್ಲಿ ೨ ತಿಂಗಳು ಶಿಕ್ಷೆ ಅನುಭವಿಸಿದರು.

**ಹರಿಜನೋದ್ಧಾರದ ಕಾರ್ಯ**

ಗುಡ್ಡನಗೌಡ ತಾನೂ ತನ್ನ ಸಮುದಾಯದವರು ಅನುಭವಿಸಿದ ಸಂಕಷ್ಟಗಳನ್ನು, ಸಾಮಾಜಿಕ ಅವಮಾನಗಳನ್ನು ತಪ್ಪಿಸಿ ಅವರು ಸಾಮಾನ್ಯರಂತೆ ಬದುಕಲು ಅವಕಾಶ ಮಾಡಿಕೊಡಲು ಸಿದ್ಧರಾದರು. ದೇವಾಲಯಗಳಿಗೆ ಪ್ರವೇಶವಿಲ್ಲ ಮತ್ತು ಹೊಂಡ, ಸೇದುವ ಬಾವಿಗಳಲಿನ್ನ ನೀರು ಮುಟ್ಟುವಂತಿರಲಿಲ್ಲ. ಸಭೆ-ಸಮಾರಂಭಗಳಲ್ಲಿ ಸಹಭೋಜನ ಮಾಡುವಂತಿರಲಿಲ್ಲ, ಇವಲ್ಲದೆ ತನ್ನ ಸಮುದಾಯದವರು ಏನೂ ತಪ್ಪು ಮಾಡದಿದ್ದರೂ ಸುಮ್ಮನೆ ಬೈಸಿಕೊಳ್ಳುವುದರಿಂದ ಇವರ ಮನಸ್ಸಿಗೆ ತುಂಬಾ ನೋವೆನಿಸುತ್ತಿತ್ತು. ಇವೆಲ್ಲವುಗಳಿಗೆ ಪರಿಹಾರವೆಂಬಂತೆ ಗುಡ್ಡನಗೌಡರು ತನ್ನ ಸಮುದಾಯದವರಿಗೆ ಗೌರವಯುತ ಜೀವನ ಕೊಡಿಸಲೇಬೇಕೆಂದು ನಿರ್ಧರಿಸಿ, ಆ ಕಾರ್ಯಕ್ಕೆ ಮುಂದಾಗಿದ್ದು ಇತಿಹಾಸ.

**ಹರಿಜನರಿಗಾಗಿ ಹೋರಾಟ** : ದೇವರಗುಡ್ಡ ಬಸಾಪೂರ_ಆಡೂರು ಇಲ್ಲಿ ಊರ ದೇವಾಲಯಗಳ ಸಮಾರಂಭದಲ್ಲಿ ದಲಿತರಿಗೆ ಬಹಳ ಹೊತ್ತಾದರೂ ಊಟ ಕೊಡಲಿಲ್ಲ.

ಗುಡ್ಡನಗೌಡ ಹರಿಜನ ಊರ ಗೌಡರಿಗೆ ದಲಿತರಿಗೆ ಊಟ ಕೊಡಲು ಪದೇ ಪದೇ ಹೇಳಿದರೂ ಅದಕ್ಕೆ ಅವರು ಸ್ಪಂದಿಸಲಿಲ್ಲ. ಇವರು ಸಿಟ್ಟಿನಿಂದ ಜೈ ಭೋಲೋ ಭಾರತ್ ಮಾತಾಕಿ ಎನ್ನುತ್ತಾ ಅನ್ನದ ಬುಟ್ಟಿಗೆ ಕೈ ಹಾಕಿದರು. ಆಗ ಹಲವು ಸವರ್ಣಿಯರು ಇವರನ್ನು ಹೊಡೆದರೆ ಇನ್ನೂ ಕೆಲವರು ಕೆಟ್ಟ ಕೆಟ್ಟ ಬೈಗುಳದಿಂದ ನಿಂದಿಸಿದರು. ಈ ಸುದ್ದಿ ಪೊಲೀಸ್ ಅಧಿಕಾರಿಗಳಿಗೆ ತಿಳಿದು ಊರಿಗೆ ಬಂದು ಸವರ್ಣೀಯರನ್ನು ಬಂಧಿಸಲಾರಂಭಿಸಿದರು. ಊರ ಗೌಡರಾದ ಬಸಾಪೂರದ ಫಕ್ಕೀರಗೌಡ ಇವರ ಹತ್ತಿರ ಬಂದು ಇನ್ನೊಮ್ಮೆ ಈ ರೀತಿಯಾಗದಂತೆ ನೋಡಿಕೊಳ್ಳುತ್ತೇನೆ ಪೊಲೀಸರು ಮತ್ತು ಅಧಿಕಾರಿಗಳಿಂದ ಊರವರನ್ನು ಕಾಪಾಡುವಂತೆ ಕೇಳಿಕೊಂಡಿದ್ದರಿಂದ ಊರಲ್ಲಿ ಎಲ್ಲರೂ ಸೇರಿ ಬಾಳಬೇಕೆಂಬ ಉದ್ದೇಶದಿಂದ ಅಧಿಕಾರಗಳನ್ನು ಮತ್ತು ಪೊಲೀಸರನ್ನು ಊರಿಂದ ಕಳುಹಿಸಿಕೊಟ್ಟದ್ದು ಅವರ ಊರ ಜನರ ನೆಮ್ಮದಿಗೆ ಕೊಟ್ಟ ಆದ್ಯತೆಗೆ ಸಾಕ್ಷಿಯಾಗಿದೆ.

**ದೇವಾಲಯ ಪ್ರವೇಶ ಮತ್ತು ಪೂಜೆ ಮಾಡಿದ್ದು**

ದಲಿತರಿಗಾಗಿ ಇಷ್ಟೆಲ್ಲ ಹೋರಾಡುತಿದ್ದ ಇವರಿಗೆ ನಾನೂ ಏಕೆ ದೇವಾಲಯಕ್ಕೆ ಪ್ರವೇಶಿಸಬಾರದು? ಮತ್ತು ಪೂಜೆ ಮಾಡಬಾರದು? ಎಂಬ ಪ್ರಶ್ನೆ ಕಾಡುತ್ತಿತು. ಹಾಗಾಗಿ ದೇವರಗುಡ್ಡ ಬಸಾಪೂರ, ಆಡೂರು ಮತ್ತು ಅಕ್ಕಿಆಲೂರಗಳ ದೇವಾಲಯ ಪ್ರವೇಶಿಸಿದ್ದಲ್ಲದೆ ದೇವರಿಗೆ ಸ್ವತಃ ಪೂಜೆ ಮಾಡಿ ದಲಿತರಿಗೆ ಮಾದರಿ ಹಾಕಿಕೊಟ್ಟರು. ಹಲವು ಕಡೆ ದಲಿತರಿಗೆ ನಿಷೇಧವಿರುವ ಕಡೆ ಬಾವಿ, ಹೊಂಡಗಳಲ್ಲಿ ನೀರನ್ನು ತಾವೇ ತುಂಬಿ ಇತರರಿಂದಲೂ ನೀರು ತುಂಬಿಸಿಕೊಟ್ಟಿರುವುದನ್ನು ಹೆಮ್ಮೆಯಿಂದ ವಿವರಿಸುತ್ತಾರೆ.

ಸ್ವಾತಂತ್ರ್ಯನಂತರ ರಾಚಯ್ಯನವರು ಸಮಾಜ ಕಲ್ಯಾಣ ಖಾತೆ ಸಚಿವರಿದ್ದಾಗ ರಾಜ್ಯಮಟ್ಟದ ಎಸ್‌ಸಿ ಮತ್ತು ಎಸ್ಟಿ ಸಮಿತಿಗೆ ಗುಡ್ಡಪ್ಪನನ್ನು ಉಪಾಧ್ಯಕ್ಷರಾಗಿ ನೇಮಕವಾದದ್ದು, ಮತ್ತು ತಿಂಗಳಿಗೊಮ್ಮೆ ಸಭೆ ಸೇರಿ ಶೋಷಿತ ವರ್ಗದವರ ಅಭಿವೃದ್ಧಿಗಾಗಿ ಯೋಜನೆಗಳನ್ನು ರೂಪಿಸಿದ ಬಗ್ಗೆ ಮಾಹಿತಿ ನೀಡುತ್ತಾರೆ. ಕೆಂಗಲ್ಲ ಹನುಮಂತರಾಯರ ಆಡಳಿತ ಅವಧಿಯಲ್ಲಿ ಧಾರವಾಡ ಜಿಲ್ಲಾ ಹರಿಜನ ಸಮಿತಿಯ ಅಧ್ಯಕ್ಷರಾಗಿದ್ದು, ಆ ಅವಧಿಯಲ್ಲಿ ಹರಿಜನ ಅಭಿವೃದ್ಧಿ ಕಾರ್ಯಗಳ ವಿಚಾರಗಳನ್ನು ನೆನಪಿಸಿಕೊಳ್ಳುತ್ತಾರೆ. ನಂತರದಲ್ಲಿ ಯಾವ ಸರಕಾರ ಬಂದರೂ ಗುಡ್ಡಪ್ಪನವರು ಹರಿಜನರಿಗೆ ಪ್ಲಾಟು, ಮನೆ ಇನ್ನಿತರ ಸೌಕರ್ಯಗಳನ್ನು ಮುಟ್ಟಿಸುವಲ್ಲಿ ಹೋರಾಡಿದ್ದಾರೆ ಮತ್ತು ಈಗಲೂ ಹೋರಾಡುತ್ತಿದ್ದಾರೆ.

* ೧೯೬೧ರಿಂದ ಸತತ ೧೨ ವರ್ಷ ವಾಸನದ ಪಂಚಾಯಿತಿ ಮೆಂಬರಾಗಿ ಸೇವೆ ಸಲ್ಲಿಸಿದ್ದಾರೆ. * ಅಕ್ಕಿಆಲೂರಿನ ರೈತರ ಹುಟ್ಟುವಳಿ ಸೊಸೈಟಿಯ ಸದಸ್ಯರಾಗಿ ಕಾರ್ಯನಿರ್ವಹಣೆ. ಸ್ಥಾನಿಕ ಸಂಘ_ಸಂಸ್ಥೆ ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. * ೮.೩.೧೯೬೧ ರಲ್ಲಿ ದೀನ ದಲಿತರಿಗೆ ಸರಕಾರಿ ಸಂಘ ನೋಂದಾವಣೆ ಮಾಡಿಸಿ, ಅದರ ಛೇರ್‌ಮನ್ ಆಗಿ ೧೭೦ ಎಕರೆ ಜಮೀನನ್ನು ನೋಂದಣಿ ಮಾಡಿಸಿ, ಆ ಜಮಿನನ್ನು ತಮ್ಮ ಸಂಘದಿಂದ ದೀನದಲಿತರಿಗೆ

ಹಂಚಿದರು. * ಹಾನಗಲ್ಲು ತಾಲೂಕಿನ ಹರಿಜನ ಸೇವಾ ಸಂಘದ ಛೇರ್‌ಮನ್ ಆಗಿದ್ದರು. ದಿನಕ್ಕೆ ೭ರಿಂದ ೮ ಹಳ್ಳಿಗಳಿಗೆ ಭೇಟಿ ನೀಡಿ ಮನೆ, ಜಾಗ ಮತ್ತು ಹೊಲ ಇಲ್ಲದವರನ್ನು ಗುರುತಿಸಿ, ಕೊಡಿಸುವ ಕಾರ್ಯ ಮಾಡಿದ್ದರು. ಆ ಕಾರ್ಯಕ್ಕೆ ಸಂಘದಿಂದ ದಿನಕ್ಕೆ ೩೦ ರೂ.ಗಳ ಪ್ರವಾಸ ಭತ್ಯೆ ಪಡೆಯುತ್ತಿದ್ದರು. * ಹಳ್ಳಿ ಹಳ್ಳಿಗಳಲ್ಲಿ ತಮ್ಮ ಸಮುದಾಯದವರು ತಮಗೆ ಅಸ್ಪೃಶ್ಯತೆ ಬಗ್ಗೆ ದೂರು ನೀಡಿದರೆ ತಕ್ಷಣ ಪೊಲೀಸ್ ಅಧಿಕಾರಿಗಳಿಗೆ ಸುದ್ದಿ ತಿಳಿಸಿ ಆ ತೊಂದರೆಯನ್ನು ಸರಿಪಡಿಸುತ್ತಿದ್ದರು.* ಅಕ್ಕಿಆಲೂರಿನ ಕೆಳಗಿನ ಒಡ್ಡರ ಓಣಿಯಲ್ಲಿನ ಪೂರ್ಣ ಜಾಗವನ್ನು ಸ್ವತಃ ತಾವೇ ನಿಂತು ಎ.ಸಿ. ಮತ್ತು ಡಿ.ಸಿ. ಅಧಿಕಾರಿಗಳನ್ನು ಕರೆಯಿಸಿ ಅವರ ಸಮ್ಮುಖದಲ್ಲಿಯೇ ದಲಿತರಿಗೆ ಹಾಗೂ ಹಿಂದುಳಿದವರಿಗೆ ಕೊಡಿಸಿದ್ದಾರೆ. ಅಲ್ಲಿ ಅವರು ಮನೆ ಕಟ್ಟಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದು ನಿಜಕ್ಕೂ ಸಾಮಾಜಿಕ ನ್ಯಾಯಕ್ಕೆ ನೀಡಿದ ಅನನ್ಯ ಕೊಡುಗೆ ಎನ್ನಬಹುದಾಗಿದೆ.

ಇಷ್ಟೆಲ್ಲ ಹರಿಜನರ ಅಭಿವೃದ್ಧಿಗೆ ಹೋರಾಡಿದ ಗುಡ್ಡನಗೌಡ ಹರಿಜನ ತಮಗೆ ಹೇಳಿಕೊಳ್ಳುವಂತಹ ಮನೆ, ಭೂಮಿಯನ್ನು ಮಾಡಿಕೊಳ್ಳದೆ ಇರುವುದು ಅವರು ಅಪ್ಪಟ ಗಾಂಧಿವಾದಿಯಾಗಿರುವುದು ಮತ್ತು ಸ್ವಾರ್ಥ ಮನೋಭಾವ ಇಲ್ಲದಿರುವುದಕ್ಕೆ ಸಾಕ್ಷಿ. ಯಾವಾಗಲೂ ಹಸನ್ಮುಖಿಯಾಗಿರುವ ಗುಡ್ಡನಗೌಡರು ಸದ್ಯದ ರಾಜಕೀಯ, ರಾಜಕಾರಣ ಮತ್ತು ಯುವಜನತೆಯ ಹಣದ ಆಸೆ ಕಂಡು ಕೋಪಿಸಿಕೊಳ್ಳುತ್ತಾರೆ. ದಲಿತರ ಅಂದಿನ ಸಾಮಾಜಿಕ ಸಮಸ್ಯೆಗಳು ಕಡಿಮೆಯಾಗಿವೆ. ಆದರೆ ದೇಶದಲ್ಲಿನ ಭ್ರಷ್ಟಾಚಾರವನ್ನು ಕಂಡು ಮರುಗುತ್ತಾರೆ. ಈ ಭ್ರಷ್ಟಾಚಾರ ತೊಲಗಿಸಲು ಇನ್ನೊಂದು ಹೋರಾಟವಾಗಬೇಕಾಗಬಹುದು ಹೇಳುತ್ತಾರೆ.

**೯. ರಾಮಚಂದ್ರಪ್ಪ ಗುರುರಾಯಪ್ಪ ಅರ್ಕಾಚಾರಿ:** ವಯಸ್ಸು; ೯೬. ಹಳೆಪೇಟೆ ಓಣಿ, ಸಾ॥ ಶಿಗ್ಗಾವಿ. ಚಳುವಳಿ ಕಾಲಕ್ಕೆ ಇವರು ಇದ್ದದ್ದು ಹಿರೇಕೆರೂರು ತಾಲೂಕಿನಲ್ಲಿ. ಚಿಕ್ಕೇರೂರಲ್ಲಿಯೂ ಇರುತ್ತಿದ್ದರು. ಇವರು ಮೂಲತಃ ಬಯಲಾಟ, ವೇಷಭೂಷಣ, ನಾಟಕ ಕಲಾವಿದರು. ಈಗ ಶಂಕರ ಅರ್ಕಚಾರಿಯವರ ಜೊತೆ ವಾಸಿಸುತ್ತಿದ್ದಾರೆ. ಆರೋಗ್ಯ ಚಿಂತಾಜನಕ ಸ್ಥಿತಿಯಲ್ಲಿದ್ದು, ಹೆಚ್ಚು ಮಾತನಾಡುವಂತಿಲ್ಲ. ಸುಧಾರಿಸಿಕೊಂಡು ಮಾತನಾಡಿದರು. ಅನಾರೋಗ್ಯದಿಂದ ತೊಂದರೆಯಾಗುವಂತಿದ್ದರೂ ಅವರು ತಮ್ಮ ಹೋರಾಟದ ಬದುಕಿನ ವಿಚಾರಗಳನ್ನು ಹೇಳುವಾಗ ಅವರಲ್ಲಿ ಆವೇಶ, ಉತ್ಸಾಹ, ಸಿಟ್ಟು ವ್ಯಕ್ತಪಡಿಸುತ್ತಾರೆ.

ಇವರು ಚಳುವಳಿಯಲ್ಲಿ ಭಾಗವಹಿಸಲು ಟಿ.ಆರ್.ನೆಶ್ವಿ, ಕರಿಯಪ್ಪ ಸಂಗೂರು, ಹಳ್ಳಿಕೇರಿ ಗುದ್ಲೆಪ್ಪ ಮತ್ತು ಕೆ.ಎಫ್. ಪಾಟೀಲ್ ಕಾರಣವಾದರೆ, ಇವರು ಚಳುವಳಿ ಸಂದರ್ಭದಲ್ಲಿ ಚಿಕ್ಕೇರೂರು(ಹಿರೇಕೆರೂರು ತಾ॥) ಭಾಗದಲ್ಲಿ ಇದ್ದುದರಿಂದ ಘಟನೆಗಳು ಆ ಭಾಗಕ್ಕೆ ಹೆಚ್ಚು ಸೀಮಿತವಾಗಿವೆ.

ಚಳುವಳಿ ಕಾಲಕ್ಕೆ ಇವರೊಂದಿಗೆ ಬಸವಣ್ಣೆಪ್ಪ ಸುರಗಿಹಳ್ಳಿ, ರಾಮಚಂದ್ರ ನಾಡಗೇರ, ಸಿದ್ದಯ್ಯ ಪಂಚವಣ್ಣಿಗಿ ಮಠ, ಯಲ್ಲೋಜ ಸಾಕರೆ, ಚನ್ನಬಸಪ್ಪ ಹಿರೇಮಠ, ವೀರಭದ್ರಪ್ಪ

ಬಡಿಗೇರ, ಪುಂಡಲೀಕ ಒಂಟಕರ, ಶಿವಪ್ಪ ಬಣಕಾರ, ಚಂದ್ರಪ್ಪ ವೀ ಹಿರೇಮಠ, ಗುಡ್ಡಪ್ಪ ಅಂಜನಪ್ಪ ರಟ್ಟಿಹಳ್ಳಿ, ವಿರುಪಾಕ್ಷಪ್ಪ ಶಿವಪ್ಪ ಹುಲ್ಮನಿ, ನಾಗಪ್ಪ ಮಹದೇವಪ್ಪ ಹಾರೋಗೇರಿ, ನಿಂಗಪ್ಪ ಗಂಗಪ್ಪ ಘನಾತೆ ಹೀಗೆ ಚಿಕ್ಕೇರೂರು ಭಾಗದ ೨೨ ಜನ ಚಳುವಳಿಗಾರರ ತಂಡದೊಂದಿಗೆ ಕಾರ್ಯಮಾಡಿದರು. ೧೯೪೨ರ ಚಲೇಜಾವ್ ಚಳುವಳಿಯಿಂದಲೇ ಇವರ ಹೋರಾಟ ಆರಂಭವಾಯಿತು.

**ನಾಟಕದಿಂದ ಸಂಘಟನೆ** : ಹಿರೇಕೆರೂರು ತಾಲೂಕಿನ ಚಿಕ್ಕೇರೂರಲ್ಲಿ ದೊಡ್ಡಾಟ ಆಡುವ ಯುವಕರ ತಂಡದಲ್ಲಿ ಪಾತ್ರದಾರರಾಗಿ ಮತ್ತು ಸಂಘನೆಯ ಕಾರ್ಯವನ್ನು ಮಾಡುತ್ತಿದ್ದರು. ನಾಟಕ ನಡೆಯುವ ಪೂರ್ವದಲ್ಲಿ ಎರಡು ತಿಂಗಳ ಕಾಲ ಊರಿನ ವೀರಭದ್ರೇಶ್ವರ ದೇವಸ್ಥಾನದ ಹತ್ತಿರ ಮನೆಯೊಂದರಲ್ಲಿ ನಾಟಕದ ತಾಲೀಮು ನಡೆಸುತ್ತಿದ್ದರು. ಅಲ್ಲಿಗೆ ಟಿ.ಆರ್. ನೆಶ್ವಿ ಮತ್ತು ವೀರಭದ್ರಪ್ಪ ನ್ಯಾಮತಿ ಬಂದು ನಾಟಕದ ತಂಡದ ಯುವಕರನ್ನು ಭೇಟಿಯಾಗಿ ಚಳುವಳಿಯ ಬಗ್ಗೆ, ಗಾಂಧೀಜಿ ವಿಚಾರಧಾರೆಗಳ ಬಗ್ಗೆ ತಿಳಿಸಿದ್ದರಿಂದ, ಯುವಕರು ತಮ್ಮಿಂದ ರಾಷ್ಟ್ರೀಯ ಹೋರಾಟಕ್ಕೆ ಏನಾದರೂ ಕಾರ್ಯವಾಗಬೇಕೆಂದು ನಿರ್ಧರಿಸಿದರು. ನಂತರದಲ್ಲಿ ಅವರನ್ನು ಮತ್ತೆ ಭೇಟಿಯಾದವರು ತಿ.ರು.ನೆಶ್ವಿ, ವೀರನಗೌಡ ಪಾಟೀಲ್, ಮೆಣಸಿನಾಳದ ತಿಮ್ಮನಗೌಡ ಇವರು ರಾತ್ರಿ ೧೨ ಘಂಟೆಗೆ ಬಂದು ಇವರ ತಂಡಕ್ಕೆ ಸಲಹೆ-ಸೂಚನೆಗಳನ್ನು ನೀಡಿ ಮುಂದಿನ ಕಾರ್ಯಗಳ ನಿರ್ದೇಶನ ಮಾಡುತ್ತಿದ್ದರು. ಈ ಕಾರ್ಯದಲ್ಲಿ ಪೊಲೀಸರಿಗೂ 'ನಾಟಕದ ತಾಲೀಮಿನ ಹುಡುಗರು' ಎಂದು ಇವರ ಮೇಲೆ ಸಂಶಯವಿರಲಿಲ್ಲ.

**ಕಾರ್ಯಗಳು**

* ಕರಿಯಪ್ಪ ಸಂಗೂರು ಇವರ ನಾಯಕತ್ವದಲ್ಲಿ ಚಿಕ್ಕೇರೂರು-ಹಿರೇಕೆರೂರು ಮಧ್ಯದ(ಕಾರೀಕಟ್ಟಿ) ಸೇತುವೆಯನ್ನು ಧ್ವಂಸ ಮಾಡಲಾಯಿತು.

* ನಾಟಕದ ಯುವಕರು ನಾಲ್ಕು ತಂಡಗಳಲ್ಲಿ ಚಿಕ್ಕೇರೂರಿನ ಸುತ್ತಮುತ್ತಲಿನ ಗ್ರಾಮಗಳಿಗೆ ಹೋಗಿ ಅಂಚೆ ಪೆಟ್ಟಿಗೆಗಳನ್ನು ರಾತ್ರಿಯಲ್ಲಿ ತೆಗೆದುಕೊಂಡು ಚಿಕ್ಕೇರೂರು ಸಮೀಪ ತಂದು ಸುಡಲಾಯಿತು. ಈ ಕಾರ್ಯದಲ್ಲಿ ಆಯಾ ಗ್ರಾಮಗಳ ಜನತೆಯ ಬೆಂಬಲ ಪಡೆಯಲಾಗಿತ್ತು.

* ಚಿಕ್ಕೇರೂರಿನಲ್ಲಿ ಸರಾಯಿ ಅಂಗಡಿಯ ಮುಂದೆ ಪಿಕೆಟಿಂಗ್ ನಡೆಸಲಾಯಿತು.

ಈ ಪ್ರಕರಣಗಳಿಗಾಗಿ ಪೊಲೀಸರಿಗೆ ಇವರ ತಂಡದ ಮೇಲೆ ಸಂಶಯ ಬಂದು, ವಿಚಾರಿಸಿದಾಗ, ಪೊಲೀಸರ ಏಟಿಗೆ ಇವರೇ ಒಪ್ಪಿದ್ದರಿಂದ ಎಲ್ಲ ೨೨ ಜನ ಚಳುವಳಿ(ಯುವಕರ ತಂಡ)ಕಾರರಿಗೆ ಒಂದು ವರ್ಷ ಜೈಲು ಶಿಕ್ಷೆಯಾಯಿತು.

ಬಿಡುಗಡೆಯ ನಂತರ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತ್ತು. ಆದರೆ ನಾವು ಯಾವ ಸಾರಾಯಿ ಅಂಗಡಿಗಳ ಮುಂದೆ ಆರೋಗ್ಯ ಹಾಳಾಗುತ್ತೆ ಎಂದು ಜನರಿಗೆ ತಿಳಿಸಿ ಪಿಕೆಟಿಂಗ್ ನಡೆಸಿದೆವೊ, ಇಂದು ನಮ್ಮ ಸರಕಾರಗಳು ಅದೇ ಸಾರಾಯಿ ಮಾರಲು ಪರವಾನಗಿ ನೀಡಿ

ಜನರ ಆರೋಗ್ಯ ಹಾಳು ಮಾಡುತ್ತಿರುವುದು ನೋವಿನ ಸಂಗತಿ. ಇಂಥ ವಿಷಯದಲ್ಲಿ ಸ್ವತಂತ್ರ ಭಾರತದ ರಾಜಕಾರಣದ ಮೇಲೆ ಕೋಪವಿದೆ ಎಂದು ನೋವಿನಿಂದ ಹೇಳುತ್ತಾರೆ.

**೧೦. ಗಂಗವ್ವ ಯಮುನಪ್ಪ ಮಡಿವಾಳರ** : ವಯಸ್ಸು: ೯೨, ಸಾ॥ ಅಗಡಿ, ತಾ॥ ಹಾವೇರಿ

ಸಾಮಾನ್ಯ ಹಳ್ಳಿಯಲ್ಲಿ ಶಿಕ್ಷಣವಿಲ್ಲದೆ ಕಡುಬಡತನವಿದ್ದರೂ ಚಳುವಳಿಯಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸಿದವರು ಗಂಗವ್ವ ಯಮುನಪ್ಪ ಮಡಿವಾಳರ. ಸ್ವಾತಂತ್ರ್ಯದ ಚಳುವಳಿಯಲ್ಲಿ ತಾವು ಭಾಗವಹಿಸುವುದಕ್ಕೆ ಮೈಲಾರ ಮಹದೇವಪ್ಪನೇ ಕಾರಣ ಎನ್ನುವ ಇವರು, ಮಹದೇವಪ್ಪ ನಮ್ಮಲ್ಲಿಯ ಮಹಿಳೆಯರಿಗೆ ಚಳುವಳಿಯಲ್ಲಿ ನೀವು ಸೇರಿದರೆ, ಬರೀ ಸ್ವಾತಂತ್ರ್ಯದ ಉದ್ದೇಶವಲ್ಲ ನಮ್ಮ ಸಾಮಾಜಿಕ ಸಮಸ್ಯೆಗಳನ್ನು ಸರಿಪಡಿಸಿಕೊಳ್ಳಲೂ ಅನೂಕೂಲವಾಗುತ್ತದೆ. ನಮ್ಮ ಮುಂದಿನ ಪೀಳಿಗೆಗೆ ಸಾಮಾಜಿಕ ಸ್ಥಾನಮಾನ, ಶಿಕ್ಷಣ ದೊರೆಯಬೇಕು. ಅದಕ್ಕಾಗಿ ಮಹಿಳೆಯರು ನಮ್ಮೊಂದಿಗೆ ಕೈಜೋಡಿಸಿದರೆ ಚಳುವಳಿಗೆ ಮತ್ತಷ್ಟು ವೇಗ ಸಿಗುವುದರಲ್ಲಿ ಯಾವ ಸಂಶಯವಿಲ್ಲ ಎಂದು ನಮ್ಮೂರಿಗೆ(ಹಾಲಗಿ, ತವರೂರು)ಬಂದು ಹೇಳಿದಾಗ ನಮ್ಮಲ್ಲಿ ಮಹಿಳೆಯರು ಮಹದೇವಪ್ಪನ ಬೆಂಬಲಿಗರಾದೆವು ಎಂದು ತಾವು ಚಳುವಳಿಗೆ ಧುಮುಕಲು ಪ್ರೇರಣೆಯಾದ ಕಾರಣವನ್ನು ಹೇಳುತ್ತಾರೆ.

**ಇವರೊಂದಿಗೆ ಭಾಗವಹಿಸಿದವರು:** ಅಂಬವ್ವ ಗೌಡರ, ಭಾಗವ್ವ ಕಾಕಡೆ, ಭೀಮವ್ವ ಓಲೇಕಾರ, ಪುಟ್ಟವ್ವ ಅಂಗಡಿ, ನಾಗವ್ವ ಉಂಡೇರ ಹೀಗೆ ಈ ಊರಿನಿಂದಲೇ ೧೨ ಜನ ಮಹಿಳೆಯರು ಮಹದೇವಪ್ಪನ ತಂಡದಲ್ಲಿ ಇದ್ದರು. ತಮ್ಮ ನಾಯಕ ಮಹದೇವಪ್ಪ ತಮಗೆ ವಹಿಸಿದ ಕಾರ್ಯಗಳನ್ನು ಮಾಡುತ್ತಿದ್ದ ಬಗ್ಗೆ ಹೇಳುವ ಇವರು, ಯಾವ ವರ್ಷದಲ್ಲಿ ಚಳುವಳಿಯಲ್ಲಿ ಭಾಗವಹಿಸಿದೆವು ಎಂಬ ಬಗ್ಗೆ ಸ್ಪಷ್ಟ ಮಾಹಿತಿ ನೀಡಲು 'ತಾವು ಅನಕ್ಷರಸ್ತರು' ಎಂದು ಹೇಳುತ್ತಾರೆ. ಆದರೆ ತಮ್ಮ ನಾಯಕರು ಹೇಳಿದ ಕಾರ್ಯಗಳನ್ನು ಧೈರ್ಯದಿಂದ ಮಾಡಿದ ಬಗ್ಗೆ ಹೆಮ್ಮೆಯಿದೆ ಎನ್ನುತ್ತಾರೆ.

**ಇವರು ಮಾಡಿದ ಪ್ರಮುಖ ಕಾರ್ಯಗಳು:** * ಗುತ್ತಲದ ಜಾತ್ರೆಯಲ್ಲಿ ಪ್ರಭಾತ್ ಫೇರಿ ಮಾಡಿದ್ದು, * ದೇವರಗುಡ್ಡದ ಜಾತ್ರೆಯಲ್ಲಿ ಪ್ರಭಾತ್ ಫೇರಿ ಮಾಡಿ, ಜಾತ್ರೆಯಲ್ಲಿ ಜನತೆಗೆ ಸ್ವಚ್ಛತೆ ಮತ್ತು ಚಳುವಳಿಗೆ ಪ್ರೇರೇಪಣೆ ನೀಡಿದ್ದು. * ಹಾವೇರಿಯ ವೀರಭದ್ರೇಶ್ವರ ದೇವಸ್ಥಾನದಿಂದ ತಾಲೂಕು ಕಛೇರಿಯವರೆಗೆ ಮೆರವಣಿಗೆ ಮತ್ತು ಪ್ರಭಾತ ಫೇರಿಯಲ್ಲಿ 'ಭಾರತ್ ಮಾತಾಕೀ ಜೈ' ಘೋಷ ಕೂಗಿದ್ದು. * ಹಾವೇರಿ ನ್ಯಾಯಾಲಯದಲ್ಲಿ ಬ್ರಿಟಿಷರ ವಿರುದ್ಧದ ನ್ಯಾಯಾಂಗ ಪ್ರಕರಣದಲ್ಲಿ ಭಾಗಿಯಾಗಿದ್ದು. ಹೀಗೆ ಸ್ನೇಹಿತೆಯರೊಂದಿಗೆ ಕಾರ್ಯ ಮಾಡಿದ್ದಕ್ಕೆ, ಪೊಲೀಸರು ಇವರನ್ನು ಬಂಧಿಸಿದ್ದು, ನ್ಯಾಯಾಲಯದಲ್ಲಿ ಎರಡು ತಿಂಗಳ ಶಿಕ್ಷೆಯಾಗಿ ಧಾರವಾಡ-ಪೂನಾದಲ್ಲಿ ಜೈಲುವಾಸ ಅನುಭವಿಸಿದರು.

ಇವರ ನಾಯಕರ ಸಹಾಯ-ಸಹಕಾರ-ನಿರ್ದೇಶನ ಒಂದೆಡೆಯಾದರೆ, ಅಂದಿನ ಚಳುವಳಿಗಾರರಿಗೆ ತಮ್ಮ ಸುತ್ತಮುತ್ತಲಿನ ಗ್ರಾಮಗಳ ಜನತೆ ಊಟ, ನೀರು ನೀಡಿ ಸಲಹಿರುವುದನ್ನು

ನೆನಪಿಸಿಕೊಳ್ಳುತ್ತಾ, ಮಹದೇವಪ್ಪ, ವೀರಯ್ಯ ಮತ್ತು ತಿರುಕಪ್ಪ ಇವರ ಸಾವು ತಮಗೆ ತುಂಬಾ ನೋವು ಕೊಟ್ಟಿತ್ತು ಎಂಬುದನ್ನು ದುಃಖದಿಂದ ವಿವರಿಸುತ್ತಾರೆ.

ಇಂದಿನ ಆಡಳಿತ ಮತ್ತು ರಾಜಕಾರಣದ ಬಗ್ಗೆ ಅಭಿಪ್ರಾಯ ಕೇಳಿದರೆ, ನಮಗೆ ರಾಜಕೀಯ, ಆಡಳಿತ ಏನು ಗೊತ್ತಾಗುವುದಿಲ್ಲ. ಆದರೆ ತಮ್ಮ ನಾಯಕರ ಆತ್ಮಕ್ಕೆ ಶಾಂತಿ ಸಿಗಬೇಕಾದರೆ, ನಮ್ಮ ಜನಕ್ಕೆ ಒಳ್ಳೆಯದನ್ನು ಮಾಡಬೇಕು. ನಮ್ಮ ನಾಯಕರು ಅದಕ್ಕಾಗಿಯೇ ಹುತಾತ್ಮರಾಗಿದ್ದಾರೆ. ಅವರ ಆಸೆ ಈಡೇರುವಂಥ ಆಡಳಿತ ನೀಡಬೇಕು ಎಂದು ಆಶಿಸುತ್ತಾರೆ.

೧೧. **ಹೊಳೆಯಪ್ಪ ವಿರುಪಾಕ್ಷಪ್ಪ. ಬ್ಯಾಳಿ** : ವಯಸ್ಸು; ೯೪. ಸಾ॥ ಮಾಳನಾಯಕನಹಳ್ಳಿ ತಾ॥, ರಾಣೆಬೆನ್ನೂರು, ಹಾಲಿವಸ್ತಿ–ದಾವಣಗೆರೆ

ಟೈಲರಿಂಗ್ ಮಾಡಿಯೇ ಜೀವನ ನಡೆಸುವ ಬಡ ಕುಟುಂಬದ ಪರಿಸ್ಥಿತಿಯಲ್ಲಿ ಚಳುವಳಿಗೆ ಧುಮುಕಿದ ಇವರ ಹೋರಾಟಕ್ಕೆ ಪ್ರೇರಣೆಯೆಂದರೆ ಪ್ರಾಥಮಿಕ ಶಾಲೆಯಲ್ಲಿ ಭಾರತ ಸೇವಾದಳ ಸೇರಿದ್ದು ಮತ್ತು ಕೆ.ಎಫ್. ಪಾಟೀಲ್, ಟಿ.ಆರ್. ನೆಶ್ವಿ, ಹಳ್ಳಿಕೇರಿ ಗುದ್ಲೆಪ್ಪ ಇವರ ಭಾಷಣಗಳು.

ಇವರೊಂದಿಗೆ ಚಳುವಳಿಯಲ್ಲಿ ಭಾಗವಹಿಸಿದವರು ಜಿ.ಪಿ.ಮಹಾನುಬಾವಿಮಠ, ಸಂಜೀವಪ್ಪ ತೊಗಟವೀರ, ಮೆಣಸಿನಾಳದ ಪುಟ್ಟರೆಡ್ಡಿ ಬಲ್ಲೂರು, ರುದ್ರಗೌಡ ಪಾಟೀಲ್, ಮೀನಪ್ಪ ಹಳ್ಳಿ, ಶಿವಣ್ಣ ನೆಶ್ವಿ, ಬಲ್ಲೂರು ವೀರಣ್ಣ, ಭೀಮಣ್ಣ ಓಲೇಕಾರ ಮೊದಲಾದವರು.

ಇವರು ಮೆಣಸಿನಾಳದ ತಿಮ್ಮನಗೌಡರೊಂದಿಗೆ ಗುರುತಿಸಿಕೊಂಡಿದ್ದು ೧೯೪೨ರ ಚಳುವಳಿಯಿಂದ. ಅಲ್ಲಿಂದ ಪೂರ್ಣಪ್ರಮಾಣದ ಚಳುವಳಿಗಾರರಾಗಿ ಕಾರ್ಯಚಟುವಟಿಕೆಗಳಲ್ಲಿ ಭಾಗಿಗಳಾಗಿದ್ದಾರೆ. ಈ ಹಿಂದೆ ತಿಮ್ಮನಗೌಡರ ನಾಯಕತ್ವದಲ್ಲಿ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ, ತಿಮ್ಮನಗೌಡರ ಬಂಧನವಾದ ಮೇಲೆ ಇವರ ಮೇಲೆ ಪೊಲೀಸ್ ವಾರೆಂಟ್ ಇತ್ತು. ಹಾಗಾಗಿ ಮನೆಯವರು ಪೊಲೀಸರಿಂದ ತಪ್ಪಿಸಿಕೊಳ್ಳಲು ಬೇರೆ ಊರಿಗೆ ಹೋಗುವಂತೆ ಒತ್ತಾಯಪಡಿಸಿದರು. ಅದಕ್ಕೆ ಕಾರಣ ಒಪ್ಪತ್ತಿನ ಊಟಕ್ಕೂ ತೊಂದರೆ ಇರುವ ಮನೆಯಲ್ಲಿ ಪೊಲೀಸು–ಕೇಸು ಎಂದು ಹೆದರಿ ಇವರನ್ನು ದಾವಣಗೆರೆಗೆ ಕಳುಹಿಸಿದರು.

**ಭೂಗತರಾಗಿ** : ಮನೆ ಬಿಟ್ಟು ದಾವಣಗೆರೆಗೆ ಹೋಗುವಾಗ ತಮ್ಮೊಂದಿಗೆ ಬಲ್ಲೂರು ವೀರಪ್ಪ, ಭೀಮಣ್ಣ ಓಲೇಕಾರ, ಯಂಕಣ್ಣ ಓಲೇಕಾರ ಇವರೊಂದಿಗೆ ಭೂಗತರಾಗಿ ದಾವಣಗೆರೆ ಸೇರಿದರು. ದಾವಣಗೆರೆಯ ಬೊಂದಾಡೆ ಕಂಡೆಪ್ಪನ ಮನೆಯಲ್ಲಿ ಬಾಡಿಗೆ ರೂಮು. ಪಡೆದು ಉಪ–ಜೀವನಕ್ಕೆ ತಮ್ಮ ಮೂಲ ವೃತ್ತಿಯಾದ ಟೈಲರಿಂಗ್ ಮಾಡುತ್ತಿದ್ದರು.

೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಖಾದಿ ಸಿದ್ದಪ್ಪನ ನೇತೃತ್ವದಲ್ಲಿ ರೈಲ್ವೆ ತಡೆಕಾರ್ಯ, ಪೋಸ್ಟ್ ಲೂಟಿ ಕಾರ್ಯ ಮಾಡಿದರು. ತಿಮ್ಮನಗೌಡರು ಜೈಲಿನಿಂದ ಬಂದ ನಂತರ ಪುನಃ ಚಳುವಳಿ ಮಾಡುತ್ತಿದ್ದ ವಿಷಯ ಕೇಳಿ ಮತ್ತೆ ತುಮ್ಮಿನಕಟ್ಟಿಗೆ ಬಂದರು.

**ಕುಪ್ಪೆಲೂರು ಹಫ್ತಾ ಲೂಟಿ ಪ್ರಕರಣ :** ಮೆಣಸಿನಾಳದ ತಿಮ್ಮನಗೌಡರನ್ನು ಆಹುತಿ ತೆಗೆದುಕೊಂಡ ಘಟನೆಯಿದು. ಕುಪ್ಪೆಲೂರಲ್ಲಿ ಸುತ್ತಮುತ್ತಲಿನ ಗ್ರಾಮಗಳಿಂದ ಸಂಗ್ರಹಿಸಿದ ಹಫ್ತಾವನ್ನು ಪೋಲೀಸರ ರಕ್ಷಣೆಯಲ್ಲಿ ಈ ಊರಿನ ಚಾವಡಿಯಲ್ಲಿಡಲಾಗಿತ್ತು. ಆ ಹಫ್ತಾ ಲೂಟಿ ಕಾರ್ಯಕ್ಕಾಗಿ ದಾವಣಗೆರೆಯಿಂದ ಬಂದಿದ್ದ ಹೊಳೆಯಪ್ಪ ತಿಮ್ಮನಗೌಡರನ್ನು ಸೇರಿಕೊಂಡು ರಾತ್ರಿ ಹತ್ತು ಗಂಟೆಯ ವೇಳೆಗೆ ಹಫ್ತಾ ಲೂಟಿ ಮಾಡುವ ಸಮಯದಲ್ಲಿ ಪೋಲೀಸರೊಂದಿಗಿನ ತಳ್ಳಾಟದಲ್ಲಿ ತಿಮ್ಮನಗೌಡರ ಬಗಲ ಚೀಲದಲ್ಲಿದ್ದ ಬಾಂಬ್ ಸ್ಫೋಟಗೊಂಡು ತಿಮ್ಮನಗೌಡರಿಗೆ ಅತೀವ ಗಾಯವಾಗಿ ಕೊನೆಗೂ ಅವರು ಹುತಾತ್ಮರಾದರು. ಆ ಘಟನೆ ಇವರಿಗೆ ತುಂಬಾ ದಿನಗಳವರೆಗೆ ಕಾಡಿದ ಬಗ್ಗೆ ನೋವಿನಿಂದ ಹೇಳುತ್ತಾರೆ.

**ದಾವಣಗೆರೆಯಲ್ಲಿ ಮತ್ತೆ ಭೂಗತ ಕಾರ್ಯ :** * ತಮ್ಮ ನಾಯಕನ ಸಾವಿನ ಸ್ವಲ್ಪ ದಿನಗಳ ನಂತರ ದಾವಣಗೆರೆಯಲ್ಲಿ ಇಟಗಿಯ ವೇದಮೂರ್ತಿ ನೇತೃತ್ವದಲ್ಲಿ ಈಡಿಗರ ರಾಮಯ್ಯ ಎಂಬುವವನು ಹೆಂಡದ ಕಾಂಟ್ರೆಕ್ಟ್ ನಡೆಸುತ್ತಿದ್ದನು. ಚಳುವಳಿಯ ನಾಯಕರು ಎಷ್ಟೋ ಸಾರಿ ಅವನ ಕಾರ್ಯ ಚಟುವಟಿಕೆಗಳನ್ನು ನಿಲ್ಲಿಸುವಂತೆ ಕೇಳಿಕೊಂಡರು. ಈಡಿಗರ ರಾಮಯ್ಯ ಕೇಳದಿದ್ದಕ್ಕೆ ರಸ್ತೆಯಲ್ಲಿ ಕಾರನ್ನು ನಿಲ್ಲಿಸಿ ತನ್ನ ಕಾರ್ಯಕ್ಕಾಗಿ ಅವನು ಹೋದಾಗ ಅವನ ಕಾರನ್ನು ಐದು ಜನರ ಇವರ ತಂಡ ಬೆಂಕಿಹಚ್ಚಿ ಬಂದರು.

* ದಾವಣಗೆರೆಯ ಪೋಲೀಸರಿಗೆ ಚಳುವಳಿಗಾರರನ್ನು ಹಿಡಿಯಲಾಗದ್ದಕ್ಕೆ ಮಿಲಿಟರಿಯವರನ್ನು ಕರೆಸಲಾಗಿತ್ತು. ಆಗ ಇವರ ತಂಡ ಮಿಲಿಟರಿಯವರ ವಾಹನಗಳು ಬಾರದ ಹಾಗೆ ರಸ್ತೆ ಬದಿಯ ಗಿಡ-ಮರಗಳನ್ನು ಕಡಿದು ರಸ್ತೆಗೆ ಅಡ್ಡ ಹಾಕಿ ತಮ್ಮ ಕಾರ್ಯಮಾಡಿದರು. ಆದರೂ ಪೋಲೀಸರು ಮತ್ತು ಮಿಲಿಟರಿಯವರು ಗುಂಡು ಹಾರಿಸುತ್ತ ಈಗಿನ ಅರುಣಾ ಟಾಕೀಸ್ ಹತ್ತಿರ ಓಡಿ ಹೋಗುವಾಗ ಇವರನ್ನು ಬಂಧಿಸಲಾಯಿತು. ದಾವಣಗೆರೆ ತಾಲೂಕು ಕಛೇರಿಗೆ ಕರೆದೊಯ್ದು ಡಟಿನ್ಯೂ ಖೈದಿಯನ್ನಾಗಿ ೪ ತಿಂಗಳ ಶಿಕ್ಷೆ ವಿಧಿಸಿದರು.

* ಬಿಡುಗಡೆಯ ನಂತರ ಮೈಸೂರು ಚಲೋ ಚಳುವಳಿಗೆ ಹೊರಡುವಾಗ ತುಮಕೂರಲ್ಲಿ ಬಂಧಿಸಿ ಅಲ್ಲಿಯೂ ಒಂದು ತಿಂಗಳ ಜೈಲು ಶಿಕ್ಷೆ ಅನುಭವಿಸಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಊಟ, ವಸತಿ ನೀಡಿ ಪ್ರೋತ್ಸಾಹಿಸಿದವರನ್ನು ಹಾಗೂ ಇವರು ಭೂಗತರಾಗಿದ್ದಾಗ ದಾವಣಗೆರೆಯಲ್ಲಿ ಬಸಪ್ಪ ಅಜ್ಜಂಪುರ, ಯಂಕಣ್ಣ ಓಲೇಕಾರ ಇವರು ಮಾಡಿದ ಸಹಾಯ-ಸಹಕಾರವನ್ನು ನೆನಪಿಸಿಕೊಳ್ಳುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿಯ ಇಂಗ್ಲೀಷರ ಆಡಳಿತ, ಸ್ವಾತಂತ್ರ್ಯ ನಂತರದಲ್ಲಿಯ ಚಳುವಳಿಗಾರರೇ ನಡೆಸಿದ ಆಡಳಿತ ಮತ್ತು ಈಗಿನ ಆಡಳಿತ ಮತ್ತು ಈಗಿನ ರಾಜಕಾರಣ ಇವುಗಳನ್ನು ನೋಡಿದರೆ ಕಷ್ಟವೆನಿಸುತ್ತದೆ. ಯಾವುದಕ್ಕಾಗಿ ಹೋರಾಟ ಮಾಡಿ ಸ್ವಾತಂತ್ರ್ಯ ಪಡೆಯಲಾಯಿತೋ ಇಂದು ಅದರ ಸತ್ವವನ್ನು ಕಾಣಲು ಸಾಧ್ಯವಿಲ್ಲ ಎಂಬ ಬೇಸರವನ್ನು ವ್ಯಕ್ತಪಡಿಸುತ್ತಾರೆ.

**೧೨. ಶಿವಪ್ಪ ಹಾಲಪ್ಪ ಅಸುಂಡಿ:** ರೋಟರಿ ಶಾಲೆ ರಸ್ತೆ, ರಾಣೆಬೆನ್ನೂರು, ವಯಸ್ಸು; ೯೩

ರಾಣೆಬೆನ್ನೂರು ಭಾಗದಲ್ಲಿಯ ಸ್ನೇಹಿತರೊಂದಿಗೆ ಇವರು ಸೇವಾದಳ ಸೇರಿದವರು. ಆ ಸಂಘಟನೆಯಲ್ಲಿ ಇದ್ದುದಲ್ಲದೆ ಬಸವಣ್ಣೆಪ್ಪ ಮಾಡ್ಯಾಳರ ಹಾಗೂ ಕೆ.ಎಫ್.ಪಾಟೀಲರ ಭಾಷಣಗಳು ಚಳುವಳಿಯಲ್ಲಿ ಭಾಗವಹಿಸಲು ಕಾರಣವೆಂದು ಅಭಿಮಾನದಿಂದ ಹೇಳುತ್ತಾರೆ. ತಮ್ಮೊಂದಿಗೆ ಶಂಕ್ರಪ್ಪ ದೇವಗಿರಿ, ಗುರುಶಾಂತಯ್ಯ ಮಹಾನುಭವಿಮಠ, ಕೊಟ್ಟೂರ ಬಸಪ್ಪ ಯರೆಶೀಮಿ ಸಹ ತಮ್ಮಂತೆ ಸೇವಾದಳದಲ್ಲಿದ್ದುಕೊಂಡೇ ಚಳುವಳಿಗೆ ಧುಮುಕಿದವರು.

ರಾಣೆಬೆನ್ನೂರು ಭಾಗದಲ್ಲಿ ಸೇವಾದಳವನ್ನು ಸಂಘಟಿಸುತ್ತ, ಭಾಷಣ ಮಾಡುವ ಮೂಲಕ ಯುವಜನತೆಯನ್ನು ಚಳುವಳಿಗೆ ಪ್ರೇರೇಪಿಸುವ ಕಾರ್ಯ ಮಾಡುತ್ತಿದ್ದರು. ಕವಾಯತು ಮಾಡುವುದು, ಹರಿಜನ ಕೇರಿಗೆ ಹೋಗಿ ಸ್ವಚ್ಛತಾ ಕಾರ್ಯ ಮಾಡುವುದು ಇವರ ದಿನನಿತ್ಯದ ಕಾರ್ಯಗಳಾಗಿದ್ದವು.

ಮೋಟೆಬೆನ್ನೂರಿನಲ್ಲಿ ಗಾಂಧೀಜಿಯನ್ನು ಭೇಟಿಯಾದ ಮೇಲೆ ತಮ್ಮ ಚಳುವಳಿ ಜೀವನ ಮತ್ತಷ್ಟು ಬಲಗೊಂಡು ಮೈಸೂರು ಚಲೋ ಚಳುವಳಿಯಲ್ಲಿ ಭಾಗವಹಿಸಿದ್ದಕ್ಕೆ ಪೊಲೀಸರಿಂದ ಬಂಧಿಸಲ್ಪಟ್ಟು, ಗಡಿಪಾರು ಶಿಕ್ಷೆಗೆ ಒಳಗಾದರು. ಚಳುವಳಿ ಸಮಯದಲ್ಲಿ ಜೈಲು ಶಿಕ್ಷೆ ಅನುಭವಿಸಿದ್ದಕ್ಕಿಂತ ಗಡಿಪಾರಾದ ಪ್ರಕರಣಗಳೇ ಹೆಚ್ಚು. ಇವರನ್ನು ಪೊಲೀಸರು ಎಲ್ಲಿಗೆ ಗಡಿಪಾರು ಮಾಡಿದರೂ, ಅಲ್ಲಿಂದ ಕಾಲ್ನಡಿಗೆಯಲ್ಲಿಯೇ ಪುನಃ ರಾಣೆಬೆನ್ನೂರಿಗೆ ಬರುತ್ತಿದ್ದರು. ಆದರೂ ಮೈಸೂರು ಚಲೋ ಚಳುವಳಿಯಲ್ಲಿ ತುಮಕೂರಿನಲ್ಲಿ ಬಂಧಿಸಲ್ಪಟ್ಟು, ಅಲ್ಲಿಯ ಸಬ್‌ಜೈಲಿನಲ್ಲಿ ಮೂರು ತಿಂಗಳ ಸೆರೆವಾಸ ಅನುಭವಿಸಿದರು. ಗಾಂಧೀಜಿ ಮತ್ತು ನೆಹರೂ ಅವರನ್ನು ಹತ್ತಿರದಿಂದ ಕಂಡು, ಮಾತನಾಡಿದ ಆ ಕ್ಷಣದ ಬಗ್ಗೆ ಹೆಮ್ಮೆಯಿಂದ ಹೇಳುತ್ತಾರೆ. 'ಸದ್ಯದ ರಾಜಕಾರಣ, ರಾಜಕೀಯ ಮತ್ತು ಆಡಳಿತದ ಬಗ್ಗೆ ಮಾತನಾಡಲೂ ಏನೂ ಉಳಿದಿಲ್ಲ. ಬರೀ ವ್ಯಥೆ ಅಷ್ಟೇ' ಎಂದು ಮಾತು ಮುಗಿಸುತ್ತಾರೆ.

**೧೩. ಶಂಕರಪ್ಪ ಅಪ್ಪಣ್ಣ ದೇವಗಿರಿ:**

ವಯಸ್ಸು: ೯೬, ಉಮಾಶಂಕರ ನಗರ, ರಾಣೆಬೆನ್ನೂರು

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಲು ಯಾರ ಪ್ರೇರಣೆಯೂ ಬೇಕಾಗಿರಲಿಲ್ಲ. ಕಾರಣ ತಾವು ಸೇವಾದಳದಲ್ಲಿದ್ದು, ರಾಷ್ಟ್ರೀಯತೆ, ಅದಕ್ಕಾಗಿ ಹೋರಾಟ ಮಾಡುವವರ ಬಗ್ಗೆ ತಿಳಿದುಕೊಂಡಿದ್ದರಿಂದ ಸಹಜವಾಗಿ ಚಳುವಳಿಯಲ್ಲಿ ಭಾಗವಹಿಸಿದೆ ಎಂಬುದು ಇವರ ಸ್ಪಷ್ಟನೆ.

ಜಿ.ಪಿ. ಮಹಾನಬಾವಿಮಠ, ಕೊಟ್ಟೂರು ಬಸಪ್ಪ ಯರೆಶೀಮಿ, ಶಿವಪ್ಪ ಹಾಲಪ್ಪ ಅಸುಂಡಿ, ಮಿನ್ನಪ್ಪ ಹಳ್ಳಿ ಇವರೊಂದಿಗೆ ಚಳುವಳಿಯಲ್ಲಿ ಭಾಗವಹಿಸಿದ್ದು ಮತ್ತು ಹಲವು ಕಾರ್ಯಗಳನ್ನು ಮಾಡಿದ ಬಗ್ಗೆ ವಿವರ ನೀಡುತ್ತಾರೆ. ಮೊದಮೊದಲು ಸೇವಾದಳದಲ್ಲಿ ಪ್ರಭಾತ್ ಫೇರಿ, ಧ್ವಜವಂದನ ಕಾರ್ಯವನ್ನು ಮಾಡುತ್ತಿದ್ದು, ಉಗ್ರ ಸ್ವರೂಪದಲ್ಲಿ ಚಳುವಳಿಗೆ ಧುಮುಕಲು ಗಾಂಧೀಜಿ ಭಾಷಣದಿಂದ ಸಾಧ್ಯವಾಯಿತು ಎನ್ನುತ್ತಾರೆ.

ಭಾಷಣ ಮಾಡುವುದರಲ್ಲಿ ಉದಗಟ್ಟ ಮಹಾರುದ್ರಪ್ಪ ರಾಣೇಬೆನ್ನೂರು ಭಾಗದಲ್ಲಿ ಹೆಸರು ಮಾಡಿದ್ದರು. ಅವರ ಭಾಷಣ ಕೇಳಲು ಹೋದಾಗ ಪೊಲೀಸರು ಶಂಕರಪ್ಪನನ್ನು ಬಂಧಿಸಿ ಜೈಲು ಶಿಕ್ಷೆ ನೀಡಿದರು. ಬಿಡುಗಡೆಯ ನಂತರ ನಾಯಕರುಗಳ ಆದೇಶದಂತೆ ರಾಣೇಬೆನ್ನೂರು ಭಾಗದ ಹಳ್ಳಿಗಳಿಗೆ ಹೋಗಿ ಸ್ವಾತಂತ್ರ್ಯದ ಪ್ರಚಾರ, ಗಾಂಧೀಜಿ ವಿಚಾರಧಾರೆಗಳನ್ನು ಜನತೆಗೆ ತಿಳಿಸುವ ಕಾರ್ಯ ಮಾಡುತ್ತಿದ್ದರು. ಏನೇ ಕಾರ್ಯ ಮಾಡಿದರೂ ಸೇವಾದಳದ ಕಾರ್ಯಾಲಯದಲ್ಲಿ ಚರ್ಚಿಸಿ ಮುಂದುವರಿಯುತ್ತಿದ್ದರು.

ತಮ್ಮ ತಂಡ ಪ್ರಚಾರ ಕಾರ್ಯಕ್ಕೆ ಮತ್ತು ಟಪಾಲು ಲೂಟಿ ಕಾರ್ಯಕ್ಕೆ ಹೋದಾಗ ಹಳ್ಳಿಯ ಜನತೆ ತಮಗೆ ನೀಡುತ್ತಿದ್ದ ಸಹಕಾರ, ಊಟ, ವಸತಿ ಇವುಗಳ ವಿಚಾರದಲ್ಲಿ ನಮ್ಮ ನಗರಗಳಿಗಿಂತ ಹಳ್ಳಿಯ ಜನ ಶ್ರೀಮಂತರು ಎನ್ನುವುದನ್ನು ಹೆಮ್ಮೆಯಿಂದ ಹೇಳುತ್ತಾರೆ.

**ಸಿರಿಗೇರಿ ಮಠದ ಹಿರಿಯ ಶ್ರೀಗಳ ಸಹಾಯ** : ಮಹಾನುಬಾವಿಮಠ, ಕೊಟ್ಟೂರು ಬಸಪ್ಪ ಯರೆಶೀಮಿ, ಶಿವಪ್ಪ ಹಾಲಪ್ಪ ಅಸುಂಡಿ, ಮಿನ್ನಪ್ಪ ಹಳ್ಳಿ ಇವರೊಂದಿಗೆ ಸೇವಾದಳದ ಸಂಘಟನೆಗಾಗಿ ನಾಯಕರಾದ ಹೇಮಣ್ಣ ಅಂಗಡಿ ಆದೇಶದ ಮೇರೆಗೆ ಚಿತ್ರದುರ್ಗದ ಒಂದು ಸಭೆ ಮುಗಿಸಿಗೊಂಡು, ಅಲ್ಲಿಯ ಪೊಲೀಸರ ಕಣ್ಣು ತಪ್ಪಿಸಿಕೊಳ್ಳುವುದಕ್ಕಾಗಿ ಮಾರ್ಗ ಬದಲಾಯಿಸಿಕೊಂಡು ಹೊರಟರು. ಮುಂದೆ ದಾರಿ ತಪ್ಪಿ ಸಿರಿಗೇರಿ ಮಠಕ್ಕೆ ಬಂದರು. ಆಗ ರಾತ್ರಿ ೧೨ ಗಂಟೆ, ಇವರಿಗೆ ವಿಪರೀತ ಹಸಿವಾಗಿತ್ತು. ಅಂದಿನ ಹಿರಿಯ ಶ್ರೀಗಳಾದ ಲಿಂಗೈಕ್ಯ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳಿಗೆ ತಮ್ಮ ಪರಿಚಯ, ತಾವು ಬಂದ ಕಾರ್ಯ ಮತ್ತು ದಾರಿ ತಪ್ಪಿಸಿಕೊಂಡ ವಿವರ ನೀಡಿದರು. ಶ್ರೀಗಳು ಆ ವೇಳೆಯಲ್ಲಿ ಇವರ ತಂಡಕ್ಕೆ ಪ್ರಸಾದದ ವ್ಯವಸ್ಥೆ ಮಾಡಿಸಿದ್ದು ವಿಶೇಷವಾಗಿತ್ತು. ಪ್ರಸಾದವಾದ ಮೇಲೆ 'ನೀವು ಈಗ ಯಾರೂ ಊರಿಗೆ ಹೋಗಬೇಡಿ ಇಲ್ಲಿಯೇ ವಸತಿ ಮಾಡಿ ಬೆಳಗ್ಗೆ ಹೋಗಿರಿ' ಎಂದು ಶ್ರೀಗಳು ಅಪ್ಪಣೆ ಕೊಟ್ಟಿದ್ದು ಇವರಿಗೆ ಖುಷಿಯಾಯಿತು.

ಸಿರಿಗೇರಿ ಮಠದಿಂದ ಬೆಳಗ್ಗೆ ದಾವಣಗೆರೆಗೆ ಬಂದಾಗ ಚಳುವಳಿ ನಾಯಕರಾದ ಹೇಮಣ್ಣ ಅಂಗಡಿ ಸಿಕ್ಕು 'ನೀವು ಯಾರು ಊರಿಗೆ ಹೋಗಬೇಡಿ, ನಾವೆಲ್ಲ ಬೆಂಗಳೂರಿಗೆ ಹೋಗೋಣ' ಎಂದು ರೈಲ್ವೆ ಗಾಡಿ ಹತ್ತಿಸಿದರು. ಮುಂದೆ ಗುಬ್ಬಿಯ ಹತ್ತಿರ ಇವರೆಲ್ಲರನ್ನು ಪೊಲೀಸರು ಬಂಧಿಸಿದರು. ಕಾರಣ ಅಲ್ಲಿಯ ಒಬ್ಬ ಸರಕಾರಿ ಅಧಿಕಾರಿಯ ಕೊಲೆಯಾಗಿದ್ದು, ಅದನ್ನು ಚಳುವಳಿಗಾರರೇ ಮಾಡಿರಬಹುದೆಂಬ ಸಂಶಯ. ಇವರ ತಂಡ ಸ್ಟೇಷನ್ನಿನಲ್ಲಿ ಗಾಡಿ ಹೊರಡುವುದು ಸ್ವಲ್ಪ ತಡವಾದ್ದರಿಂದ ನೀರು ಕುಡಿಯಲು ಬಂದ ಇವರನ್ನು ಸಂಶಯದ ಮೇಲೆ ಬಂಧಿಸಿ ಕರೆದೊಯ್ದು, ಸಂಬಂಧ ಇರದ ಕೇಸಿನಲ್ಲಿ ಇವರೆಲ್ಲರಿಗೂ ಮೂರು ತಿಂಗಳ ಶಿಕ್ಷೆಯಾಗಿ ತುಮಕೂರಿನಲ್ಲಿ ಶಿಕ್ಷೆ ಅನುಭವಿಸಿದರು. ಈ ಘಟನೆ ಇಂಗ್ಲೀಷರ ದಬ್ಬಾಳಿಕೆಗೆ ಸ್ಪಷ್ಟ ನಿದರ್ಶನವೆಂದು ಕೋಪದಿಂದಲೇ ಶಂಕ್ರಪ್ಪನವರು ವಿವರಿಸುತ್ತಾರೆ.

ಸದ್ಯದ ಆಡಳಿತ, ರಾಜಕಾರಣದ ಬಗ್ಗೆ ಇವರನ್ನು ಕೇಳಿದರೆ, ಇಂಗ್ಲೀಷರಷ್ಟು ದಬ್ಬಾಳಿಕೆಯಿಲ್ಲ. ಆದರೆ ಸಮಾಧಾನ ನೀಡುವಷ್ಟು ಆಡಳಿತ ಕೊಡುತ್ತಿಲ್ಲ, ಆದರೂ ನಮ್ಮ ದೇಶ, ನಮ್ಮವರೇ ಆಡಳಿತ ನಡೆಸುತ್ತಾರೆ ಎಂಬ ಹೆಮ್ಮೆಯಿಂದ ಇರಬೇಕು. ಇವರಿಂದ ಹೆಚ್ಚಿನದನ್ನು ನಿರೀಕ್ಷಿಸಿದರೆ ಅದು ನಮ್ಮ ತಪ್ಪು. ಕಾರಣ ಎಲ್ಲ ಪಕ್ಷದವರು ಒಂದೇ. ಅಧಿಕಾರ ಇದ್ದಾಗ ಸಾಮಾಜಿಕ ಕಾರ್ಯ ಮಾಡದವರು, ಅಧಿಕಾರ ಕಳೆದುಕೊಂಡ ನಂತರ ಪುನಃ ಅದನ್ನೇ ಮಾತನಾಡಿ ನಮ್ಮನ್ನು ಮುರ್ಖರನ್ನಾಗಿಸುತ್ತಾರೆ. ಇದು ಸಧ್ಯ ಸರಿಯಾಗುವ ಲಕ್ಷಣ ಕಾಣಿಸುತ್ತಿಲ್ಲ ಎಂದು ನೋವಿನಿಂದಲೇ ಆರೋಪಿಸುತ್ತಾರೆ.

**೧೪. ಸುಬ್ಬಣ್ಣಾಚಾರ್ಯ ಲಕ್ಷ್ಮಣಚಾರ್ಯ ಅಕ್ಕಿವಳಿ** : ವಯಸ್ಸು ೯೮. ದೇಶಪಾಂಡೆ ಆಸ್ಪತ್ರೆ ಹತ್ತಿರ ಹಾನಗಲ್ಲು. ೯೮ರ ವಯೋಮಾನದಲ್ಲಿಯೂ ಅಂದಿನ ತಮ್ಮ ಚಳುವಳಿಗಳ ಬಗ್ಗೆ ಮತ್ತು ಇಂದಿನ ರಾಜಕೀಯದ ಸ್ಥಿತಿಗತಿಯ ಬಗ್ಗೆ ದಣಿವಿಲ್ಲದೆ ಎಲ್ಲ ವಿವರವನ್ನು ನೀಡಿರುತ್ತಾರೆ.

**ಪ್ರೇರಣೆ** : ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಕಾರಣವಾದ ಘಟನೆಯೊಂದನ್ನು ವಿವರಿಸುತ್ತಾರೆ. ತಮ್ಮ ಸ್ನೇಹಿತ ನಾಗೇಶ್ವರರಾವ್ ವೆಂಕಟರಾವ್ ದೇಸಾಯಿ. ಇವರ ಮನೆಗೆ ಮಳೆಯಲ್ಲಿ ನೆನೆದುಕೊಂಡೆ ಹೋದಾಗ ಅವರ ತಾಯಿ ಒಂದು ಖಾದಿ ಶರ್ಟನ್ನು ಹಾಕಿಕೊಳ್ಳಲು ಕೊಟ್ಟು ಖಾದಿಯ ಮಹತ್ವವನ್ನು, ಅದಕ್ಕಾಗಿ ದೇಶದಲ್ಲಿ ನಡೆಯುವ ಹೋರಾಟವನ್ನು ಹೇಳಿದರು. ಇನ್ನು 'ನೀನು ಯಾವಾಗಲೂ ಈ ರೀತಿಯ ಖಾದಿ ಬಟ್ಟೆಯನ್ನು ಹಾಕಬೇಕು' ಎಂದು 'ಆ ತಾಯಿ ಹೇಳಿದಾಗಿನಿಂದ ಇಂದಿನವರೆಗೆ ಈ ೯೮ರ ವಯಸ್ಸಿನಲ್ಲಿ ಖಾದಿ ಬಟ್ಟೆಯನ್ನೆ ಹಾಕಿಕೊಂಡಿದ್ದೇನೆ' ಎಂದು ಅಭಿಮಾನದಿಂದಲೇ ಹೇಳುತ್ತಾರೆ.

**ಇವರೊಂದಿಗೆ ಭಾಗವಹಿಸಿದವರು** : ಹನುಮಂತರಾವ್ ದೇಶಪಾಂಡೆ, ಕೃಷ್ಣಾಚಾರ್ಯ ಜವಳಿ, ಶಿವಾನಂದ ದೀಕ್ಷಿತ, ಸಿಂಧೂರು ಸಿದ್ದಪ್ಪ, ಗುಡ್ಡಪ್ಪ ನೀಲಪ್ಪ ಹರಿಜನ ಮುಂತಾದವರು.

**ಚಳುವಳಿಯಲ್ಲಿ ಮಾಡಿದ ಪ್ರಮುಖ ಕಾರ್ಯಗಳು:** * ಯಾರಿಗೂ ತಿಳಿಯದ ಹಾಗೆ ಮೊದಲು ಧ್ವಜ ಹಾರಿಸುವುದು, ಸಾಯಂಕಾಲ ಆ ಧ್ವಜವನ್ನು ಇಳಿಸುವುದು. * ಊರಲ್ಲಿ ಮೆರವಣಿಗೆ ಹಾಗೂ ಪ್ರಭಾತ್ ಫೇರಿ ಮಾಡುವುದು ದಿನನಿತ್ಯದ ಕಾರ್ಯವಾಗಿತ್ತು. * ದಿನಾಲೂ ಬೆಳಗ್ಗೆ ಪೊಲೀಸರು ಇವರನ್ನು ಹಿಡಿದುಕೊಂಡು ಹೋಗುವುದು, ಸಾಯಂಕಾಲ ಬಿಡುವುದು ಸಾಮಾನ್ಯವಾಗಿತ್ತು. * ಚಳುವಳಿ ಬಗ್ಗೆ, ಚಳುವಳಿಗಾರರ ಬಗ್ಗೆ ಲಾವಣಿ ಹಾಡುತ್ತಿದ್ದ ಫಕ್ಕೀರಪ್ಪನೊಂದಿಗೆ ಸೇರಿ ಲಾವಣಿ ಹಾಡುತ್ತ ಯುವಕರು ಚಳುವಳಿಗೆ ಧುಮುಕಲು ಉತ್ಸಾಹ ತುಂಬುವ ಕಾರ್ಯ ಮಾಡಿದ್ದ ಬಗ್ಗೆ ವಿವರಿಸುತ್ತಾರೆ.

**ಬಂಧನ:** ಈ ರೀತಿಯ ಕಾರ್ಯಗಳನ್ನು ಮಾಡುತ್ತಿದ್ದರಿಂದ ಇವರನ್ನು ಬಂಧಿಸಲು ನಾಲ್ಕು ಬಾರಿ ಪೊಲೀಸ್ ಸ್ಟೇಷನ್‌ನಲ್ಲಿ ಹೆಸರು ದಾಖಲಾಗಿದ್ದರೂ ಇವರನ್ನು ಬಂಧಿಸಲಿಲ್ಲ. ಕಾರಣ ಹಾನಗಲ್ಲು ಪೊಲೀಸ್ ಸ್ಟೇಷನ್ನಿನಲ್ಲಿ ಇರುವ ಹವಲ್ದಾರರ ಮನೆ ಇವರ ಮನೆಯ ಪಕ್ಕದಲ್ಲಿದ್ದರಿಂದ. ಹಾಗೂ ತಮ್ಮ ತಂದೆಯವರೊಂದಿಗೆ ಅವರು ಒಳ್ಳೆಯ ಸ್ನೇಹ

ಇಟ್ಟುಕೊಂಡಿದ್ದರಿಂದ ಇವರ ಹೆಸರನ್ನು ಅವರು ತೆಗೆದು ಹಾಕುತ್ತಿದ್ದರು. ಆದರೆ, ಚಳುವಳಿಯಲ್ಲಿ ಇವರು ಭಾಗವಹಿಸುತ್ತಿದ್ದದ್ದು ಮೇಲಾಧಿಕಾರಿಗಳಿಗೆ ತಿಳಿದು ಇವರನ್ನು ಬಂಧಿಸಲು ಸ್ಥಳೀಯ ಪೊಲೀಸರಿಗೆ ಆದೇಶ ನೀಡಿದ್ದರಿಂದ ಇವರ ಬಂಧನವಾಯಿತು. ಹಾನಗಲ್ಲು ನ್ಯಾಯಾಲಯದಲ್ಲಿ ಒಂಬತ್ತುವರೆ ತಿಂಗಳು ಶಿಕ್ಷೆಯಾಗಿ ಹಿಂಡಲಗಾದಲ್ಲಿ ಜೈಲುವಾಸ ಅನುಭವಿಸಿದರು.

**ಸಹಾಯ-ಸಹಕಾರ** : ಇವರು ಚಳುವಳಿ ಕಾಲದಲ್ಲಿ ಊರೂರು ಸುತ್ತುತ್ತ ಜಾಗೃತಿ ಕಾರ್ಯ ಮಾಡುವಾಗ ಹಳ್ಳಿಗಳ ಜನತೆ ಊಟ, ವಸತಿ ವಿಷಯದಲ್ಲಿ ಮಾಡಿದ ಸಹಾಯ-ಸಹಕಾರವನ್ನು ಸ್ಮರಿಸುತ್ತಾರೆ.

ಇಷ್ಟೆಲ್ಲಾ ತೊಂದರೆ ಜೈಲು ಶಿಕ್ಷೆ ಅನುಭವಿಸಿದ ಇವರು ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಾಗ ಸಂತೋಷಪಟ್ಟರು. ಆದರೆ ಇತ್ತೀಚಿನ ರಾಜಕಾರಣ, ಆಡಳಿತ ಕಂಡು ತುಂಬಾ ವ್ಯಥೆಪಡುತ್ತಾರೆ. ಭ್ರಷ್ಟಾಚಾರ ಎಲ್ಲ ಕ್ಷೇತ್ರಗಳಲ್ಲಿ ಆವರಿಸಿರುವುದಕ್ಕೆ ಕೋಪಿಸಿಕೊಳ್ಳುವ ಇವರು ಭ್ರಷ್ಟಾಚಾರ ಅಳಿಯಲು ಮುಂದಿನ ಪೀಳಿಗೆಯೂ ನಮ್ಮಂತೆ ಹೋರಾಟಕ್ಕೆ ಧುಮುಕಿದರೂ ಆಶ್ಚರ್ಯವಿಲ್ಲ ಎಂಬ ನೋವನ್ನು ವ್ಯಕ್ತಪಡಿಸುತ್ತಾರೆ.

೧೫. **ನಾರಾಯಣ ರಾಮಚಂದ್ರ ಕರ್ಪೂರ:** ವಯಸ್ಸು ೯೫, ವಿದ್ಯಾನಗರ, ಬಿ. ಬ್ಲಾಕ್, ಹಾವೇರಿ.

ಇವರು ನಿವೃತ್ತ ಪೋಸ್ಟ್ ಮಾಸ್ತರು. ಚಳುವಳಿ ಸಂದರ್ಭದಲ್ಲಿ ತಾವು ಮಾಡುತ್ತಿರುವ ಚಳುವಳಿಯ ಬಗ್ಗೆ ಮನೆಯವರಿಗೆ ಹೇಳಿರಲಿಲ್ಲ. ಹುಚ್ಚಣ್ಣ ಕರಿಯಣ್ಣನವರು ಮತ್ತು ಬಾಬುರಾವ್ ಹೇಜೀಬ್ ಭಾಷಣಗಳೇ ತಾವು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಲು ಕಾರಣವೆಂದು ಹೇಳುತ್ತಾರೆ.

ಇವರೊಂದಿಗೆ ಚಳುವಳಿಯಲ್ಲಿ ಭಾಗವಹಿಸಿದವರೆಂದರೆ, ಇವರ ಅಣ್ಣ ನರಸಿಂಹ ಕರ್ಪೂರ ಮತ್ತು ವೆಂಕಣ್ಣ ಹಾವನೂರು, ರಂಗಣ್ಣ ಮಾಗಣಗೇರಿ, ತುಳಸಪ್ಪ ಹಾವೇರಿ ಇವರೆಲ್ಲ ಹಾವೇರಿಯಲ್ಲಿ ೧೯೪೨ರ ಚಳುವಳಿಯಿಂದ ಭಾಗವಹಿಸಿದವರು.

ಇವರು ಚಳುವಳಿಯ ಆರಂಭದಲ್ಲಿ ಕರಪತ್ರಗಳನ್ನು ಹಂಚುವುದು, ಪ್ರಭಾತ್ ಫೇರಿ ಮಾಡುವುದು, ಸರಾಯಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುತ್ತಿದ್ದರು. ಆರಂಭದಲ್ಲಿ ವಿಧ್ವಂಸಕ ಕಾರ್ಯಗಳನ್ನು ಮಾಡಲು ಇವರನ್ನು ನಾಯಕರುಗಳು ಚಿಕ್ಕವರೆಂದು ಕರೆದುಕೊಂಡು ಹೋಗುತ್ತಿರಲಿಲ್ಲ. ಆದರೆ ತಲೆಮರೆಸಿಕೊಂಡು ಭೂಗತರಾಗಿ ಕಾರ್ಯಗಳನ್ನು ಮಾಡುತ್ತಿದ್ದ ಹಿರಿಯ ಚಳುವಳಿಗಾರರಿಗೆ ಊಟೋಪಚಾರದ ವ್ಯವಸ್ಥೆ ಮಾಡುತ್ತಿದ್ದರು. ಅದರಲ್ಲಿಯೂ ಪರಮಣ್ಣ ಹೊಸಮನಿಗೆ ಹೆಚ್ಚಿನ ಸಹಕಾರ ನೀಡಿದ್ದಾರೆ.

ಹಾವೇರಿಯ ಡಿ.ಎಂ. ಕುಲಕರ್ಣಿಯ ಮನೆಯಲ್ಲಿ ಇವರು ಗುಪ್ತವಾಗಿ ಸಭೆ ಸೇರಿ ತಾವು ಮುಂದೆ ಮಾಡುವ ಕಾರ್ಯಗಳನ್ನು ನಿರ್ಧರಿಸುತ್ತಿದ್ದರು. ಈ ರೀತಿಯಲ್ಲಿ ಚಳುವಳಿಯ ಕಾರ್ಯ ಮಾಡುತ್ತಿದ್ದರಿಂದ ಇವರು ಶಾಲೆಗೆ ಹೋಗಲಿಲ್ಲ. ಇತ್ತ ಮನೆಯಲ್ಲಿಯೂ ತಮ್ಮ ಕೆಲಸದ ಬಗ್ಗೆ ಹೇಳಿರಲಿಲ್ಲ. ಆದರೆ ವರಗಿರಿ ಎಂಬ ಶಾಲಾ ಶಿಕ್ಷಕರಿಗೆ ಇವರು ಮಾಡುತ್ತಿದ್ದ

ಚಳುವಳಿಯ ಕಾರ್ಯದ ಬಗ್ಗೆ ತಿಳಿದಿದ್ದು, ಅವರು ಮಾತ್ರ ಇವರಿಗೆ ತೊಂದರೆಯಾಗದಂತೆ ಹಾಜರಾತಿ ನೀಡಿ ಪರೀಕ್ಷೆ ಬರೆಯಲು ಅವಕಾಶ ಮಾಡಿಕೊಟ್ಟಿದ್ದು, ಅಂದು ಶಿಕ್ಷಕರು ಸಹ ಚಳುವಳಿಯಲ್ಲಿ ಅಪರೋಕ್ಷವಾಗಿ ಸಹಕರಿಸಿದ್ದನ್ನು ಇವರು ನೆನಪಿಸಿಕೊಳ್ಳುತ್ತಾರೆ.

**ಬಂಧನ :** ಇವರು ಮಾಡುವ ಕಾರ್ಯಗಳು ಪೊಲೀಸರಿಗೆ ತಿಳಿಯಲು ಬಹುದಿನಗಳು ಬೇಕಾಗಲಿಲ್ಲ. ಅವರನ್ನು ಬಂಧಿಸಿದರು, ಹಾವೇರಿಯ ನ್ಯಾಯಾಲಯದಲ್ಲಿ ಆರು ತಿಂಗಳ ಶಿಕ್ಷೆಯಾಗಿ ಹಿಂಡಲಗಾ ಜೈಲಿನಲ್ಲಿ ಶಿಕ್ಷೆ ಅನುಭವಿಸಿದರು.

**ಸ್ವಾತಂತ್ರ್ಯ ನಂತರ :** ಜೈಲು ಶಿಕ್ಷೆ ಮುಗಿಸಿಕೊಂಡು ಬಂದನಂತರ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತ್ತು. ಆದರೆ ಚಳುವಳಿಯ ಸಂದರ್ಭದಲ್ಲಿ ಇವರೊಂದಿಗೆ ನಡೆದುಕೊಳ್ಳುತ್ತಿದ್ದ ನಾಯಕರುಗಳು ತಮ್ಮನ್ನು ಹಿಂಬಾಲಿಸುವವರನ್ನು ಮಾತ್ರ ನೋಡಿಕೊಂಡರು. ಇವರಿಗೆ ನಾಯಕರ ಹಿಂದೆ ಸುತ್ತಲು ಮನಸ್ಸು ಒಪ್ಪದಿದ್ದ ಕಾರಣ, ಧಾರವಾಡದ ಅಂದಿನ ಜಿಲ್ಲಾಧಿಕಾರಿ ಡೆಹಲಿಯಾ ಅವರನ್ನು ಭೇಟಿಯಾಗಿ ತಮ್ಮ ಕುಟುಂಬದ ಆರ್ಥಿಕ ಸಂಕಷ್ಟದ ಬಗ್ಗೆ ತಿಳಿಸಿ, ತಮಗೆ ಒಂದು ಚಿಕ್ಕದಾದ ಯಾವುದಾದರೂ ಒಂದು ಉದ್ಯೋಗ ನೀಡಿದರೆ ತಮ್ಮ ತೊಂದರೆ ನಿವಾರಣೆಯಾಗುತ್ತದೆ ಎಂದು ಕೇಳಿಕೊಂಡು ಹದಿನೈದು ದಿನ ಕಾಯ್ದು ಒಂದು ಕೆಲಸ ಪಡೆದುಕೊಂಡರು.

**ಚಳುವಳಿಗಾರರ ತೊಂದರೆ ಬಗ್ಗೆ :** ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಮನೆಯವರಿಂದಲೂ, ಇತ್ತ ಸರಕಾರದಿಂದಲೂ ಯಾವ ರೀತಿಯಿಂದಲೂ ಸಹಾಯ ದೊರೆಯದೆ ಬೀದಿಯಲ್ಲಿ ಸತ್ತವರನ್ನು ನೋಡಿದ್ದೇನೆ ಎಂದು ವ್ಯವಸ್ಥೆಯ ಬಗ್ಗೆ ಅಸಮದಾನ ವ್ಯಕ್ತಪಡಿಸುತ್ತಾರೆ. ತಮಗೆ ಸಿಕ್ಕಂಥ ವರಗಿರಿಯಂಥ ಶಿಕ್ಷಕರು ಇಂದಿನ ವಿದ್ಯಾರ್ಥಿಗಳಿಗೆ ಸಿಗಲಿಕ್ಕಿಲ್ಲ. ಪರಮಣ್ಣ ಹೊಸಮನಿಯಂಥ ನಾಯಕರು ಸಿಗಲಿಕ್ಕಿಲ್ಲ. ಅಂಥವರೆ ಹೇಗೇಗೋ ಬದುಕಿದರು. ಇನ್ನೂ ನಮ್ಮಂಥವರ ಪಾಡೇನು? ಎಂದು ತಾವು ಅನುಭವಿಸಿದ, ಅನುಭವಿಸಿದವರನ್ನು ನೋಡಿದ ವಿವರಗಳನ್ನು ನೀಡುತ್ತ ಸ್ವಾತಂತ್ರ್ಯ ನಂತರದ ವ್ಯವಸ್ಥೆ ಈ ರೀತಿಯಾದರೆ ನಮಗೆ ಸ್ವಾತಂತ್ರ್ಯದ ಅವಶ್ಯಕತೆ ಇತ್ತಾ? ಎಂದು ಪ್ರಶ್ನಿಸುತ್ತಾರೆ.

ಬ್ರಿಟಿಷರ ಆಡಳಿತದಲ್ಲಿ ತಾವು ಚಳುವಳಿಯ ಸಂದರ್ಭವೊಂದರಲ್ಲಿ ನಡೆದ ಘಟನೆ ಸ್ಮರಿಸುತ್ತಾರೆ. ಇವರು ಕೊರಳಲ್ಲಿ ಗಾಂಧೀಜಿ ಫೋಟೋ ಹಾಕಿಕೊಂಡು ಜೈಘೋಷ ಹಾಕುತ್ತಾ ಹೊರಟಾಗ ಪೊಲೀಸ್‌ನೊಬ್ಬ ಇವರಲ್ಲಿದ್ದ ಗಾಂಧೀಜಿ ಪೊಟೋ ಕಸಿದುಕೊಂಡ, ಇವರು ಆ ಪೊಲೀಸನಿಗೆ ಹೊಡೆಯಲು ಉಳಿದ ಪೊಲೀಸರು ಇವರನ್ನು ಹೊಡೆಯುತ್ತಿರಲು ಆ ವೇಳೆಗೆ ಫೌಜದಾರ ಮಜೀದ್ ಬಂದು ಪೊಲೀಸರನ್ನು ಬಿಡಿಸಿ, 'ಚಿಕ್ಕ ಹುಡುಗನಿಗೆ ಯಾಕೆ ಹೊಡಿತೀರಿ ಬಿಡಿ' ಎಂದು ಬಿಡಿಸಿದ. ಅಂದಿನ ಬ್ರಿಟಿಷ್ ಸರಕಾರ ಅಧಿಕಾರಿಗಳೆಲ್ಲಿ! ಸ್ವತಂತ್ರ ಭಾರತದ ನಮ್ಮ ಮೇಲೆ ದೌರ್ಜನ್ಯ ಮಾಡುವ ನಮ್ಮ ಅಧಿಕಾರಿಗಳು ಎಲ್ಲಿ? ಎಂದು ಅಸಮಾಧಾನ ವ್ಯಕ್ತಪಡಿಸುತ್ತಾರೆ. ಕಷ್ಟ, ನಷ್ಟ ಅನುಭವಿಸಿ, ಹಲವರನ್ನು ಬಲಿ ಕೊಟ್ಟು ಗಳಿಸಿದ ಈ ಸ್ವಾತಂತ್ರ್ಯ ಸಾರ್ಥಕವಾಗಬೇಕಾದರೆ, ಎಲ್ಲರಿಗೂ ಶಿಕ್ಷಣ ಸಿಗಬೇಕು, ಎಲ್ಲರಿಗೂ ನ್ಯಾಯ ಒಂದೇಯಾಗಿರಬೇಕು

ಎಂದು ಪುನಃ ತಮ್ಮ ಕಾಳಜಿಯನ್ನು ವ್ಯಕ್ತಪಡಿಸುತ್ತ ತಮ್ಮ ಸಾಮಾಜಿಕ ಮತ್ತು ರಾಜಕೀಯ ಸಮಾನತೆಯ ಅಭಿಮಾನವನ್ನು ವ್ಯಕ್ತಪಡಿಸುತ್ತಾರೆ.

**೧೬. ಸಿದ್ದಪ್ಪ ಬಸವಣ್ಣೆಪ್ಪ ನವಾತಿ** : ವಯಸ್ಸು ೯೮ ಸಾ॥ ತುಮ್ಮಿನಕಟ್ಟಿ ತಾ॥ ರಾಣೆಬೆನ್ನೂರು

ಮೆಣಸಿನಾಳದ ತಿಮ್ಮನಗೌಡರ ಆತ್ಮೀಯ ಮತ್ತು ಅವರ ತಂಡದ ಪ್ರಮುಖ ಸದಸ್ಯ. ಇವರು ಬಡತನದಲ್ಲಿಯೂ ಚಳುವಳಿಗೆ ಧುಮುಕಲು ಕಾರಣವೆಂದರೆ, ಇವರ ಸ್ನೇಹಿತ ವೆಂಕಪ್ಪ ಮೊರೆ, ರಂಗಪ್ಪ ತಳವಾರ, ಬಸಪ್ಪ ಬುಡಮ್ಮನವರ, ತಿರುಕಪ್ಪ ಹಾದಿಮನಿ ಇವರು ದೇಶದ ಬಗ್ಗೆ, ದೇಶದಲ್ಲಿ ನಡೆದ ಚಳುವಳಿ, ಗಾಂಧೀಜಿಯ ಪಾತ್ರದ ಬಗ್ಗೆ ಪತ್ರಿಕೆಗಳಲ್ಲಿ ಓದಿ ಹೇಳುತ್ತಿದ್ದರು. ಇದೆಲ್ಲಕ್ಕಿಂತ ಮುಖ್ಯವಾಗಿ ತಿಮ್ಮನಗೌಡರು ಓದಿದ ಶಾಲೆಯಲ್ಲಿ ಓದಿದವರು.

**ಪ್ರಮುಖ ಘಟನೆಗಳು** : * ತಿಮ್ಮನಗೌಡರೊಂದಿಗಿನ ವಿಧ್ವಂಸಕ ಕಾರ್ಯಗಳಲ್ಲಿ ಭಾಗಿಯಾಗಿ ಮಾಸೂರು, ಹೊನ್ನಾಳಿ, ಮೇದೂರು, ಕಾಗಿನೆಲ್ಲಿ ಇಲ್ಲಿಯ ಚಾವಡಿಗಳ ಸುಡುವಲ್ಲಿ ಇವರದು ಮಹತ್ವದ ಪಾತ್ರವಿದೆ. ಚಾವಡಿಯನ್ನು ಸುಡಲು ಮತ್ತು ರಟ್ಟಿಹಳ್ಳಿಯ ಬಂಗ್ಲೆ(ಪ್ರವಾಸಿ ಮಂದಿರ) ಸುಡಲು ಉಪಯೋಗಿಸುತ್ತಿದ್ದ ಸೀಮೆ ಎಣ್ಣೆಯನ್ನು ತೆಗೆದುಕೊಂಡು ಹೋಗುತ್ತಿದ್ದವರೇ ಸಿದ್ದಪ್ಪ ನವಾತಿಯವರು.

* ತಿಮ್ಮನಗೌಡರ ನೇತೃತ್ವದಲ್ಲಿ ಅರಿಕಟ್ಟಿಯ ಜಂಗಲ್ ನಾಶ ಪ್ರಕರಣದಲ್ಲಿ ಭಾಗವಹಿಸಿ ಹಿರೇಕೆರೂರು ನ್ಯಾಯಾಲಯದಲ್ಲಿ ಶಿಕ್ಷೆಯಾಗಿ ಹಿಂಡಲಗಾ ಜೈಲಿನಲ್ಲಿ ಆರು ತಿಂಗಳ ಶಿಕ್ಷೆ ಮುಗಿಸಿ ತುಮ್ಮಿನಕಟ್ಟಿಗೆ ಬಂದಾಗ ಜನತೆ ನೀಡಿದ ಸ್ವಾಗತ ಇವರಿಗೆ ಚಳುವಳಿಗೆ ಧುಮುಕಲು ಮತ್ತಷ್ಟು ಪ್ರೇರಣೆಯಾಯಿತು.

* ತಿಮ್ಮನಗೌಡರೊಂದಿಗೆ ಹಾವೇರಿ ಭಾಗದ ಪ್ರಮುಖ ಚಳುವಳಿಗಾರರ ನಾಯಕರಾದ ಹಳ್ಳಿಕೇರಿ ಗುದ್ಲೆಪ್ಪನನ್ನು ವೆಂಕಪ್ಪ ಮೊರೆ, ರಂಗಪ್ಪ ತಳವಾರ, ಸೇರಿ ಹಂಸಬಾವಿಯ ಹತ್ತಿರ ಸೂಡಂಬಿಯ ಹೊಲವೊಂದರಲ್ಲಿ ರಾತ್ರಿ ಭೇಟಿಯಾದರು. ಕಾರಣ ಹಳ್ಳಿಕೇರಿ ಗುದ್ಲೆಪ್ಪ ಮೇಲೆ ಪೊಲೀಸ್ ವಾರಂಟ್ ಇದ್ದ ಕಾರಣ ಗುಪ್ತವಾಗಿ ಭೇಟಿಯಾಗಿ ರಾತ್ರಿಯೇ ಪುನಃ ತುಮ್ಮಿನಕಟ್ಟಿಗೆ ಬಂದರು.

* ತಿಮ್ಮನಗೌಡರ ವಿಧ್ವಂಸಕ ಕೃತ್ಯಗಳಿಗಾಗಿ ಅವರ ಮೇಲೆ ಕಂಡಲ್ಲಿ ಗುಂಡಿಕ್ಕುವ ಆಜ್ಞೆಯಿತ್ತು. ಅವರ ಸಿಗದಿದ್ದಕ್ಕೆ ಇವರನ್ನು ಪೊಲೀಸರು ಬಂಧಿಸಿದಾಗ ಮನೆಯವರು ಭಯಪಟ್ಟು ಪೊಲೀಸ್ ಸಬ್‌ಇನ್ಸಪೆಕ್ಟರ್‌ಗೆ ಹಣ ಕೊಟ್ಟು ಇವರ ತಂದೆ ಬಿಡಿಸಿಕೊಂಡರು. ಆದರೂ ಇವರನ್ನು ಪೊಲೀಸರು ಡೆಟಿನ್ಯೂ ಖೈದಿ ಎಂದು ಪರಿಗಣಿಸಿ ಬೆಳಗಾವಿ ಜೈಲಿಗೆ ಕಳುಹಿಸಿದರು.

* ತುಮ್ಮಿನಕಟ್ಟಿಯಲ್ಲಿ ಹವಲ್ದಾರನೊಬ್ಬ ಬಹಳ ದರ್ಪದಿಂದ ಮೆರೆಯುತ್ತಿದ್ದನು. ಆ ಭಾಗದಲ್ಲಿಯ ಚಳುವಳಿಗಾರರನ್ನು ಕೀಳಾಗಿ ಕಾಣುತ್ತಿದ್ದನು. ಚಳುವಳಿಗಾರರಿಗೆ ವಿವಿಧ ರೀತಿಯಲ್ಲಿ ತೊಂದರೆ ಕೊಡುತ್ತಾನೆ ಎಂದು ಸಿದ್ದಪ್ಪನವರು ತಿಮ್ಮನಗೌಡರಿಗೆ ದೂರು ನೀಡಿದಾಗ, ತಿಮ್ಮನಗೌಡರು

ಎಲ್ಲ ತಮ್ಮ ಸದಸ್ಯರನ್ನು ಕರೆದುಕೊಂಡು ಹಗಲು ೧೧ ಗಂಟೆಗೆ ಪೋಲೀಸ್ ಸ್ಟೇಷನ್ನಿನ ಪಕ್ಕದಲ್ಲಿ ಹವಲ್ದಾರನ ಎದುರಿಗೆ ನಿಂತರು. ತಿಮ್ಮನಗೌಡರ ಅಳಿಯ ಮರಿಗೌಡನ ಹತ್ತಿರವಿದ್ದ ಧ್ವಜವನ್ನು ಹವಲ್ದಾರ ಕಸಿದು ಕಾಲಲ್ಲಿ ಹೊಸಕುತ್ತಿದ್ದಂತೆ, ಮರಿಗೌಡ ಚಿಕ್ಕವನಾಗಿದ್ದರಿಂದ ಹವಲ್ದಾರ ಎತ್ತರಕ್ಕೆ ಹಾರಿ ಅವರ ಟೋಪಿ(ರೂಮಾಲು)ಯನ್ನು ಕಸಿದು ತನ್ನ ಕಾಲಲ್ಲಿ ಹೊಸಕಿ ತಿಮ್ಮನಗೌಡರಿಗೆ ಕೊಟ್ಟನು. ತಿಮ್ಮನಗೌಡರು ಆಗ ಇವರ ಕಡೆ ತಿರುಗಿದರು. ಇವರು ಆಗಲೇ ಬೆಂಕಿ ಗೀರಿದರು. ಹೀಗೆ ಪೊಲೀಸ್ ಸ್ಟೇಷನ್ ಎದುರು ಅಹಂಕಾರಿ ಹವಲ್ದಾರನ ಸೊಕ್ಕನ್ನು ಅಡಗಿಸಿದರು. ತಿಮ್ಮನಗೌಡರು ಇವರ ಧೈರ್ಯದ ಬಗ್ಗೆ ಹೆಮ್ಮೆ ಪಡುತ್ತಾರೆ ಮತ್ತು ಅಂದಿನ ಘಟನೆ ವಿಶೇಷ ಮಹತ್ವ ಪಡೆದಿತ್ತು ಎನ್ನುತ್ತಾರೆ.

ತಿಮ್ಮನಗೌಡರ ನೇತೃತ್ವದ ತಂಡದಲ್ಲಿ ದೇಶ ಸೇವೆ ಮಾಡುವ ಭಾಗ್ಯ ಸಿಕ್ಕಿದ್ದು ತಮ್ಮ ಸುದೈವವೆಂದು ಸ್ಮರಿಸುತ್ತಾರೆ. ತಿಮ್ಮನಗೌಡರ ನಾಯಕತ್ವದ ಕುಪ್ಪೆಲೂರು ಘಟನೆ ತಮ್ಮ ಚಳುವಳಿಯಲ್ಲಿ ಮರೆಯಲಾರದ ನೋವಿನ ಘಟನೆಯೆಂಬುದನ್ನು ವಿಷಾದದಿಂದ ಸ್ಮರಿಸುತ್ತಾರೆ. ಈ ಘಟನೆಯಲ್ಲಿ ಅವರ ಬಗಲ ಚೀಲದಲ್ಲಿದ್ದ ಬಾಂಬ್ ಸ್ಫೋಟಗೊಂಡಿದ್ದು, ಕೊನೆಗೆ ಅವರ ಸಾವಿಗೆ ಕಾರಣಯಿತು. ಇದು ಎಲ್ಲ ಸದಸ್ಯರಿಗೆ ಅರಗಿಸಿಕೊಳ್ಳಲಾಗದ ಘಟನೆಯಾಯಿತು. ನಂತರದಲ್ಲಿ ತಮಗೆ ನಾಯಕರಿಲ್ಲದ ಸಮಯದಲ್ಲಿ ಕೆ.ಎಫ್. ಪಾಟೀಲ್ ಹಾಗೂ ಹಲಗೇರಿಯ ಹೇಮಣ್ಣ ಅಂಗಡಿ ಸಲಹೆ ಸೂಚನೆಗಳನ್ನು ನೀಡಿದ್ದನ್ನು ಸ್ಮರಿಸುತ್ತಾರೆ.

ಸ್ವಾತಂತ್ರ್ಯ ಸಿಕ್ಕಾಗ ತುಂಬಾ ಸಂತೋಷವಾಯಿತು. ಆರಂಭದಲ್ಲಿ ನಾವು ಅಂದುಕೊಂಡಂತೆ ಆಡಳಿತ ನಡೆಯುತ್ತಿತ್ತು. ಆದರೆ ಇತ್ತೀಚಿನ ರಾಜಕಾರಣ ಹಾಗೂ ಆಡಳಿತ ವ್ಯವಸ್ಥೆಯನ್ನು ಕಂಡರೆ ನೋವೆನಿಸುತ್ತದೆ. ಆದರ್ಶ ರಾಜಕಾರಣ, ಆಡಳಿತ ಕಾಣುತ್ತಿಲ್ಲವೆಂಬ ವಿಷಾದ ವ್ಯಕ್ತಪಡಿಸುತ್ತಾರೆ.

**೧೭. ಷಡಕ್ಷರಪ್ಪ ಮಹಾರಾಜಪೇಟೆ:** ವಯಸ್ಸು ೯೭, ಬೆಣ್ಣಿರ ಓಣಿ ಸಾ॥ ತಾ॥ ಬ್ಯಾಡಗಿ

ಇವರು ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಸಂಘದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದವರು. ೧೯೨೦ರಲ್ಲಿ ಬ್ಯಾಡಗಿಯ ರುದ್ರಪ್ಪ-ವೀರಬಸಮ್ಮ ಪುತ್ರನಾಗಿ ಜನಿಸಿದರು. ಬ್ಯಾಡಗಿಯಲ್ಲಿಯೇ ಪ್ರಾಥಮಿಕ ಶಿಕ್ಷಣ ಮುಗಿಸಿ ತಮ್ಮ ಸಹೋದರರು ದಿನಪತ್ರಿಕೆ ವಿತರಿಸುವ ಕಾಯಕ ಮಾಡುತ್ತಿದ್ದದರಿಂದ ಇವರೂ ಆ ಕೆಲಸಕ್ಕೆ ಕೈ ಜೋಡಿಸಿದರು.

ದಿನಾಲೂ ಬ್ಯಾಡಗಿಯಿಂದ ಮೂರು ಕಿ.ಮೀ ದೂರದಲ್ಲಿರುವ ರೇಲ್ವೆ ಸ್ಟೇಷನ್‌ಗೆ ನಡೆದುಕೊಂಡೇ ಹೋಗಿ ರೈಲಿನಲ್ಲಿ ಬರುವ ಪೇಪರ್ ಬಂಡಲುಗಳನ್ನು ಹೊತ್ತು ಮನೆಗೆ ತಂದು ಅವುಗಳನ್ನು ವಿಂಗಡಿಸಿ ಊರಲ್ಲಿ ವಿತರಿಸುವುದು ಇವರ ದಿನನಿತ್ಯದ ಕಾಯಕವಾಯಿತು. ಆ ದಿನಗಳಲ್ಲಿ ದೇಶದೆಲ್ಲೆಡೆಯ ಸುದ್ದಿಗಳ ತಿಳಿವಳಿಕೆ ಅವಶ್ಯವಾಗಿತ್ತು. ಎಲ್ಲ ಪತ್ರಿಕೆಗಳಿಂದ ಸ್ವಾತಂತ್ರ್ಯ ಹೋರಾಟದ ತೀವ್ರತೆ, ಅದಕ್ಕೆ ಬ್ರಿಟಿಷರ ಪ್ರತಿಕ್ರಿಯೆಯನ್ನು ಎಲ್ಲರೂ ತೀವ್ರಾಸಕ್ತಿಯಿಂದ

ಗಮನಿಸುತ್ತಿದ್ದರು. ದಿನನಿತ್ಯ ಷಡಕ್ಷರಪ್ಪ ಪತ್ರಿಕೆಗಳನ್ನು ಗಮನಿಸುತ್ತಿದ್ದ ಇಪ್ಪತ್ತರ ಹರಯದ ಇವರ ಮನಸ್ಸು ದಿನ ನಿತ್ಯ ಆಂಗ್ಲರ ದಬ್ಬಾಳಿಕೆಯನ್ನು ಓದಿ ಮನಸ್ಸು ಕುದಿಯುತ್ತಿತ್ತು. ಆಗ ಬ್ಯಾಡಗಿ ಭಾಗದಲ್ಲಿ ಸಿದ್ದಪ್ಪ ಹುಂಬಿ, ಪಂಚಪ್ಪ ಸೂಳಿಕೇರಿಮಠ, ಲಿಂಗರಾಜ ಮುದ್ದಣ್ಣನವರ ಇವರೊಂದಿಗೆ ಷಡಕ್ಷರಪ್ಪ ಚಳುವಳಿಗೆ ಧುಮುಕಿದರು.

೧೯೪೨ರಲ್ಲಿ ಚಲೇಜಾವ್ ಚಳುವಳಿ ಘೋಷಿತವಾದಾಗ ಇವರ ಗುಂಪು ನಾನಾ ರೀತಿಯ ಗುಪ್ತ ಚಟುವಟಿಕೆಗಳಿಗೆ ಸಿದ್ಧವಾಯ್ತು. ಹಾವೇರಿಯ ತಹಶೀಲ್ದಾರ ಕಛೇರಿಗೆ ಮುತ್ತಿಗೆ ಹಾಕಿ ಪಿಕೆಟಿಂಗ್ ನಡೆಸಿದರು. ಅಂಚೆ ಕಛೇರಿಗೆ ಬೆಂಕಿ ಇಟ್ಟರು, ಟಪಾಲು ಪೆಟ್ಟಿಗೆ ಹೊತ್ತುಕೊಂಡು ಪರಾರಿಯಾಗುವ ಸಮಯದಲ್ಲಿ ಇವರು ಪೊಲೀಸರ ಹದ್ದಿನ ಕಣ್ಣಿಗೆ ಬಿದ್ದರು. ಇವರನ್ನು ಬಂಧಿಸಿ ಧಾರವಾಡದ ಸೆರೆಮನೆಗೆ ನಂತರ ಬೆಳಗಾವಿಯ ಹಿಂಡಲಗಾ ಜೈಲಿಗೆ ಕಳುಹಿಸಲಾಯಿತು. ಆರು ತಿಂಗಳ ಜೈಲುವಾಸ ಅನುಭವಿಸಿ ಹೊರಬಂದರು.

ಸ್ವಾತಂತ್ರ್ಯ ಹೋರಾಟದ ಕೊಂಡಿಯೊಂದು ಉಸಿರಾಟದ ತೊಂದರೆಯಿಂದ ೧೦.೯.೨೦೧೩ ರಂದು ಕಳಚಿತು. ನಮ್ಮ ಜಿಲ್ಲೆಯ ಹೋರಾಟದ ಕಿಡಿಯೊಂದು ಸಿಡಿದು ಸದ್ದಿಲ್ಲದೆ ಸರಿದು ಹೋಯ್ತು. ಜಿಲ್ಲಾಡಳಿತ ಸಕಲ ಗೌರವಗಳೊಂದಿಗೆ ಅವರಿಗೆ ಅಂತಿಮ ನಮನ ಸಲ್ಲಿಸಿತು.

**೧೮. ದೇವೇಂದ್ರಪ್ಪ ವಿಭೂತಿ** : ಸಾ॥ ನೆಗಳೂರು, ತಾ॥ ಹಾವೇರಿ

೯೬ ವರ್ಷದ ದೇವೇಂದ್ರಪ್ಪ ವಿಭೂತಿ ಮೈಲಾರ ಮಹದೇವಪ್ಪನ ತಂಡದ ಸದಸ್ಯರಾಗಿ ಸೇವೆ ಮಾಡಿದವರು. ಮಹದೇವಪ್ಪನ ಭೂಗತ ಕಾರ್ಯದಲ್ಲಿ 'ಇವರನ್ನು ಬ್ಯಾಡಗಿ ಬಾಂಬ್' ಎಂದೇ ಕರೆಯಲಾಗುತ್ತಿತ್ತು. ಕಾರಣ ಟಪಾಲು ಲೂಟಿ ಪ್ರಕರಣದಲ್ಲಿ ಬಸ್ಸಿನ, ಪೋಸ್ಟ್ ರನ್ನರ್, ಅಧಿಕಾರಿಗಳ ಕಣ್ಣಿಗೆ ಖಾರದ ಪುಡಿ ಎರಚಿ, ಅವರಿಂದ ಬ್ಯಾಗಗಳನ್ನೂ ಲೂಟಿ ಮಾಡಲು ಅನೂಕೂಲವಾಗುವಂತೆ ಮಾಡುವಲ್ಲಿ ಇವರ ಪಾತ್ರ ಮಹತ್ವದ್ದಾಗಿತ್ತು ಎಂಬುದು ಅಂದಿನ ಮಹದೇವಪ್ಪನ ತಂಡದ ಸದಸ್ಯರಲ್ಲೊಬ್ಬರಾದ ಪರಮಣ್ಣ ಹರಕಂಗಿ ಅವರ ಅಭಿಪ್ರಾಯ. ಇವರು ಮಹದೇವಪ್ಪನ ೧೯೪೨ರ ಎಲ್ಲ ಭೂಗತ ಕಾರ್ಯಗಳಲ್ಲಿ ಭಾಗವಹಿಸಿದವರು ದೇವೇಂದ್ರಪ್ಪ ವಿಭೂತಿ. ಇವರು ಮಹದೇವಪ್ಪ ಮೈಲಾರರ ತಂಡದಲ್ಲಿ ೧೯೪೨ರ ಚಲೇಜಾವ್ ಚಳುವಳಿಯಲ್ಲಿ ಮಾಡಿದ ಪ್ರಮುಖ ಕಾರ್ಯಗಳೆಂದರೆ–

* ಫಕ್ಕೀರಪ್ಪ ತಾವರೆ ಮತ್ತು ಲಿಂಬಣ್ಣ ಇವರೊಂದಿಗೆ ಸೇರಿ ೨೦.೧೦.೧೯೪೨ರಂದು ಕರ್ಜಗಿ ರೇಲ್ವೆ ಸ್ಟೇಷನ್ನಿನಿಂದ ಬರುವ ಟಪಾಲ್ ಲೂಟಿ ಮಾಡಲು ನಿರ್ಧರಿಸಿದರು. ಕರ್ಜಗಿಯಿಂದ ಸ್ಟೇಷನ್‌ವರೆಗೆ ಪೋಸ್ಟನ್ನು ರನ್ನರ್‌ನು ಟಾಂಗಾ ಗಾಡಿಯಲ್ಲಿ ತರುತ್ತಿದ್ದರಿಂದ, ಆ ಅವಕಾಶವನ್ನು ಉಪಯೋಗಿಸಿಕೊಳ್ಳಲು ನಿರ್ಧರಿಸಿ ತಮಗೆ ಅನುಕೂಲವಾಗುವ ಸ್ಥಳ ಆಯ್ಕೆ ಮಾಡಿಕೊಂಡು ಎರಡು ಜನರನ್ನು ಅಲ್ಲಿಯೇ ನಿಲ್ಲಿಸಿದರು. ತಾವು ಸ್ಟೇಷನ್‌ಗೆ ಹೋದರು. ಪೋಸ್ಟ್ ರನ್ನರ್‌ನು ಟಪಾಲುಗಳನ್ನು ತೆಗೆದುಕೊಂಡು ಟಾಂಗಾ ಗಾಡಿಗೆ ತುಂಬುವಾಗ ಇವರು 'ನಾನು ಕರ್ಜಗಿಗೆ

ಬರಬೇಕು ಗಾಡಿಯಲ್ಲಿ ಬರಲಾ? ಎಂದು ಕೇಳಿದಾಗ ಪೋಸ್ಟ್ ರನ್ನರ್‌ನು ಕರೆದುಕೊಂಡನು. ಗಾಡಿ ಸ್ನೇಹಿತರಿರುವ ಸ್ಥಳಕ್ಕೆ ಬರುತ್ತಿದ್ದಂತೆ ಅವರು ರಸ್ತೆಗೆ ಅಡ್ಡಲಾಗಿ ನಿಂತರ, ಟಾಂಗಾದಲ್ಲಿಯ ರನ್ನರ್‌ನು ದೇವೇಂದ್ರಪ್ಪನನ್ನು ನೋಡುತ್ತಿದ್ದಂತೆಯೇ ರನ್ನರನ ಕಣ್ಣಿಗೆ ಖಾರದ ಪುಡಿ ಎರಚಿ, ಪೋಸ್ಟ್ ಚೀಲ ತೆಗೆದುಕೊಂಡು ಜೋಳದ ಹೊಲದಲ್ಲಿ ಮಾಯವಾದರು.

* ದಿನಾಂಕ ೧೯.೧೦.೧೯೪೨ರಂದು ಗದಗ ಹಾವೇರಿ ಟಪಾಲು ಬಸ್ಸನ್ನು ಕಲ್ಲಮುಳಗುಂದದ ಹತ್ತಿರ ರಸ್ತೆಗೆ ಕಲ್ಲು, ಕಟ್ಟಿಗೆ ಬಡ್ಡೆಹಾಕಿ ನಿಲ್ಲಿಸಿ ಟಪಾಲು ದೋಚಿ ಜೋಳದ ಹೊಲದಲ್ಲಿ ಓಡಿದರು. ಇಲ್ಲಿಯು ದೇವೇಂದ್ರಪ್ಪ ಡ್ರೈವರ್‌ಗೆ ಖಾರದ ಪುಡಿ ಎರಚಿ ಬಸ್ಸು ನಿಲ್ಲಿಸಿದ್ದರು, ಈ ಕಾರ್ಯದಲ್ಲಿ ಬಸ್ಸು ನಿಲ್ಲುವ ಸ್ಥಳದಲ್ಲಿ ವೆಂಕಣ್ಣ ವಾಯಿ, ಯಲ್ಲಪ್ಪ ಕನವಳ್ಳಿ ದೇವೇಂದ್ರಪ್ಪನೊಂದಿಗೆ ಇದ್ದು ಕಾರ್ಯ ಯಶಸ್ವಿಯಾಗಲು ಕಾರಣರಾದರು.

* ದಿನನಿತ್ಯ ಗುಡಗೇರಿ ಗ್ರಾಮದ ಟಪಾಲು ರೈಲ್ವೆ ಗಾಡಿಗೆ ಬರುತ್ತಿತ್ತು. ದಿನಾಂಕ ೨೦.೧೦.೧೯೪೨ ರಂದು ಸಂಜೆ ೫ ಗಂಟೆಯ ಸುಮಾರಿಗೆ ದೇವೇಂದ್ರಪ್ಪ ವಿಭೂತಿ, ವೆಂಕಣ್ಣವಾಯಿ, ನಾಯಕತ್ವದಲ್ಲಿ ಸ್ಟೇಶನ್ ಹತ್ತಿರ ಜೋಳದ ಹೊಲದಲ್ಲಿದ್ದು, ಪೋಸ್ಟಮನ್‌ನು ಗಾಡಿಯಿಂದ ಚೀಲ ತೆಗೆದುಕೊಂಡು ಬರುವಾಗ ಅವನ ಕಣ್ಣಿಗೆ ಖಾರದ ಪುಡಿ ಎರಚಿ ಪೋಸ್ಟ್ ಚೀಲವನ್ನು ಕಸಿದುಕೊಂಡು ಮಾಯವಾದರು.

* ದಿನಾಂಕ ೨೩.೧೦.೧೯೪೨ ರಂದು ಶಿಗ್ಗಿ ಗ್ರಾಮದಿಂದ ಯಲವಿಗಿ ಸ್ಟೇಶನ್ನಿಗೆ ಬೆಳಗ್ಗೆ ೬ ಗಂಟೆಗೆ ಪೋಸ್ಟಮನ್ ಟಪಾಲು ಒಯ್ಯುತ್ತಿರಲು ದೇವೇಂದ್ರಪ್ಪ ವಿಭೂತಿ, ವೆಂಕಣ್ಣ ವಾಯಿ, ಗೋಣೆಪ್ಪ ಕೊಗನೂರು ಸೇರಿ ಮಹದೇವಪ್ಪನ ನಿರ್ದೇಶನದಂತೆ ಇಲ್ಲಿಯೂ ಪೋಸ್ಟಮನ್‌ನ ಕಣ್ಣಿಗೆ ಖಾರದ ಪುಡಿ ಎರಚಿ ಟಪಾಲು ದೋಚಲಾಯಿತು.

* ದಿನಾಂಕ ೨೩.೧೦.೧೯೪೨ ರಲ್ಲಿ ಮಹದೇವಪ್ಪನ ಗುಂಪು ೧೪ ರಿಂದ ೧೫ ಜನರ ತಂಡವಾಗಿತ್ತು. ಸಂಗೂರ ಕರಿಯಪ್ಪ, ಮೆಣಸಿನಾಳದ ತಿಮ್ಮನಗೌಡರೊಂದಿಗೆ ತುಮ್ಮಿನಕಟ್ಟಿ, ಕುಡಪಲಿ, ಕುಪ್ಪೇಲೂರು, ಸೂಡಂಬಿ, ಹಿರೇಅಣಜಿ ಭಾಗದ ಯುವಕರ ಪಡೆಯಿದ್ದು ಒಟ್ಟಾರೆ ೨೨ ಜನರಾದರು. ಇವರೆಲ್ಲರ ತಂಡ ಬಳ್ಳಾರಿ ಜಿಲ್ಲೆಯ ಭಾಗದಲ್ಲಿ ಪೋಸ್ಟ್ ಲೂಟಿ ಮಾಡಬೇಕೆಂದು ನಿರ್ಧರಿಸಿದರು.

೨೪.೧೦.೧೯೪೨ರಂದು ಮಹದೇವಪ್ಪ ತನ್ನ ತಂಡದ ಸದಸ್ಯರಾದ ದೇವೇಂದ್ರಪ್ಪ ವಿಭೂತಿ, ವೆಂಕಣ್ಣ ವಾಯಿ, ಫಕ್ಕೀರಪ್ಪ ಗೋಣೆಪ್ಪ ಈ ಮೂರು ಜನ ಹರಿಹರಕ್ಕೆ ಹೋಗಿ ಬಸ್ಸಿನಲ್ಲಿ ತಮ್ಮ ತಂಡ ನಿಶ್ಚಿಯಿಸಿದ ನೀಲಗುಂದ (ಹರಪನಹಳ್ಳಿ ರೋಡ) ಗ್ರಾಮದ ಸಮೀಪದ ಸ್ಥಳಕ್ಕೆ ಬಸ್ಸು ಬಂದಾಗ ನಿಲ್ಲಿಸುವ ಕಾರ್ಯವನ್ನು ಇವರಿಗೆ ವಹಿಸಿದರು.

೨೫.೧೦.೧೯೪೨ರಂದು ಹರಿಹರದಲ್ಲಿ ಬೆಳಗ್ಗೆ ೮ ಗಂಟೆಯ ಬಸ್ಸಿನಲ್ಲಿ ಟಪಾಲು ಇಡುವ ಹತ್ತಿರವೇ ಮೂರು ಜನ ಕುಳಿತರು. ನಿಗದಿಪಡಿಸಿದ ಸ್ಥಳಕ್ಕೆ ಬಸ್ಸು ಬಂದಾಗ ಆಗಲೇ ಅವರು

ರಸ್ತೆಗೆ ಕಟ್ಟಿಗೆ ಬಡ್ಡೆಗಳನ್ನು ಹಾಕಿದ್ದರು. ಟಪಾಲು ಹತ್ತಿರ ಕುಳಿತಿದ್ದ ದೇವೇಂದ್ರಪ್ಪ ಪಕ್ಕದಲ್ಲಿಯ ಡ್ರೈವರನ ಕಣ್ಣಿಗೆ ಖಾರದ ಪುಡಿ ಎರಚಿದರು. ಗೋಣೆಪ್ಪ ಕೂಗನೂರು ಟಪಾಲು ಚೀಲ ತೆಗೆದುಕೊಂಡು ಬಸ್ಸಿನಿಂದಲೇ ಹಾರಿದ್ದರಿಂದ ಮೂರ್ಛೆ ಹೋದರು, ತಕ್ಷಣ ಮಹದೇವಪ್ಪ ಗೋಣೆಪ್ಪನನ್ನು ಹೊತ್ತುಕೊಂಡು ಜೋಳದ ಹೊಲದಲ್ಲಿ ಓಡಿದರು.

ಈ ತಂಡ ಅಂದುಕೊಂಡಂತೆ ಪೊಲೀಸರು ಹರಿಹರದಿಂದ ಬಂದಾಗ, ಮಹದೇವಪ್ಪ 'ಇಲ್ಲಿಯೇ ಇದ್ದರೆ ಎಲ್ಲರೂ ಸಿಗುತ್ತೇವೆ. ಆದ್ದರಿಂದ ಯಾರಿಗೆ ಹೆಚ್ಚು ಓಡಲಾಗುತ್ತದೆಯೋ ಅವರು ಇಲ್ಲಿಂದ ಪೊಲೀಸರಿಗೆ ಸಿಗದಹಾಗೆ ಮತ್ತು ಅವರಿಗೆ ಕಾಣುವಂತೆ ಓಡಿರಿ' ಎಂದಾಗ ದೇವೇಂದ್ರಪ್ಪ ಪೊಲೀಸರಿಗೆ ಕಾಣುವಂತೆ ಓಡಲಾರಂಭಿಸಿದರು. ದೇವೇಂದ್ರಪ್ಪನೊಂದಿಗೆ ಓಡಿದವನೆಂದರೆ ಮಹದೇವಪ್ಪನ ತಮ್ಮ ಲಿಂಗಣ್ಣ. ಆದರೆ ಅದು ಪರಿಚಯವಿಲ್ಲದ ಭಾಗವಾಗಿದ್ದರಿಂದ ಯಾವ ಕಡೆ ಓಡಿದರೆ ಯಾವ ಊರು ಬರುತ್ತದೆ ಎಂಬ ಜ್ಞಾನವಿಲ್ಲದೆ ಎಷ್ಟೋ ದೂರ ಓಡಿ ನಿಂತರು. ವಿಪರೀತ ಹಸಿವು ಇವರನ್ನು ನಿಲ್ಲುವಂತೆ ಮಾಡಿತ್ತು. ಆದರೂ ಹೊಳೆ ದಾಟಿ ನಮ್ಮೂರಿಗೆ ಹೋಗಿರಿ ಎಂದು ಮಹದೇವಪ್ಪ ಹೇಳಿದ್ದು ನೆನಪಿಗೆ ಬಂದು ಹೊಳೆಯ ಹತ್ತಿರ ಇರುವ ಗ್ರಾಮವೊಂದರಲ್ಲಿಯ ಅಂಗಡಿಯಲ್ಲಿ ಕೊಬ್ರಿ ಬೆಲ್ಲ ಮಂಡಕ್ಕಿ ತೆಗೆದುಕೊಂಡು ತಿನ್ನುತ್ತ ಐರಣಿ(ರಾಣೆಬೆನ್ನೂರು ತಾ॥) ಹತ್ತಿರ ಹೊಳೆ ದಾಟಲು ಹರಗೋಲು ಹತ್ತಿರ ಹೋದರು. ಅಲ್ಲಿಯೇ ಇದ್ದು ಕಡತಿಗೌಡ ಇವರನ್ನು ಆತ್ಮೀಯವಾಗಿ ಮಾತನಾಡಿಸಿ ತಮ್ಮ ಮನೆಗೆ ಬಂದು ಊಟ ಮಾಡಿಕೊಂಡು ಹೋಗುವಂತೆ ಒತ್ತಾಯಿಸಿ, ಮನೆಗೆ ಕರೆದುಕೊಂಡು ಹೋಗಿ ಊಟ ನೀಡಿ ರಾತ್ರಿ ಅಲ್ಲಿಯೆ ಉಳಿಸಿಕೊಂಡರು. ಬೆಳಗ್ಗೆ ದೇವೇಂದ್ರಪ್ಪ ವಿಭೂತಿ ಮತ್ತು ಮೈಲಾರ ಲಿಂಗಣ್ಣನನ್ನು ಪೊಲೀಸರಿಗೆ ಹಿಡಿಸಿಕೊಟ್ಟರು. ದಿನಾಂಕ ೦೧.೧೧.೧೯೪೨ರಂದು ಹರಪನಹಳ್ಳಿ ನ್ಯಾಯಾಧೀಶರು ಬಳ್ಳಾರಿ ಕೋರ್ಟಿಗೆ ಕೇಸ್ ವರ್ಗಾಯಿಸಿದ್ದರಿಂದ ಅಲ್ಲಿ ಇವರಿಬ್ಬರಿಗೆ ೧ ತಿಂಗಳು ೩ ದಿವಸ ಜೈಲು ಶಿಕ್ಷೆಯಾಯಿತು.

ಹೀಗೆ ದೇವೇಂದ್ರಪ್ಪ ವಿಭೂತಿ ೧೯೪೨ರ ಚಲೇಜಾವ್ ಚಳುವಳಿಯಲ್ಲಿ ಮಹದೇವಪ್ಪನ ತಂಡದಲ್ಲಿ ಮಹತ್ವವಾದ ಕಾರ್ಯಗಳನ್ನು ಮಾಡಿದ ಕೀರ್ತಿಗೆ ಭಾಜನರಾಗಿದ್ದಾರೆ.

### ೫.೪. ಇತರ ಹೋರಾಟಗಾರರು

ಜಿಲ್ಲೆಯ ಚಳುವಳಿ ನಾಯಕರೊಂದಿಗೆ ಹೆಜ್ಜೆಯಿಟ್ಟು, ಅವರ ಸಲಹೆ–ಸೂಚನೆಗಳನ್ನು ತಪ್ಪದೆ ಪಾಲಿಸಿದವರು ಅನೇಕರು. ಚಳುವಳಿಗಾಗಿ ತಂದೆ–ತಾಯಿ, ಊರು ಮತ್ತು ವಿವಾಹ ವಾಗುವುದನ್ನೇ ಬಿಟ್ಟವರಿದ್ದಾರೆ. ಹೋರಾಟಕ್ಕಾಗಿ ಶಿಕ್ಷಣಕ್ಕೆ ವಿದಾಯ ಹೇಳಿದವರಿದ್ದಾರೆ. ಹೀಗೆ ಹಲವು ರೀತಿಯಲ್ಲಿ ತ್ಯಾಗಿಗಳಾಗಿ ತಮ್ಮ ಜೀವನವನ್ನೇ ಚಳುವಳಿಗಾಗಿ ಮೀಸಲಿಟ್ಟು ಹತ್ತು–ಹಲವು ಸಂಕಷ್ಟಗಳನ್ನು ಜೈಲು ಶಿಕ್ಷೆಯನ್ನು ಅನುಭವಿಸಿದವರು, ಚಳುವಳಿಯೊಂದಿಗೆ ಸಾಮಾಜಿಕ ಕಾರ್ಯಗಳನ್ನು ಮಾಡಿ ಜನರ ಪ್ರೀತಿ ವಿಶ್ವಾಸ ಗಳಿಸಿದವರನ್ನು ಗಮನಿಸಬಹುದು.

೧. **ನ್ಯಾಮತಿ ವೀರಭದ್ರಪ್ಪ** : ತಂದೆ ಚನ್ನಬಸಪ್ಪ, ಸಾ॥ ಮಾಸೂರು., ತಾ॥ ಹಿರೇಕೆರೂರು

ಸ್ವಾತಂತ್ರ್ಯ ಹೋರಾಟವನ್ನೇ ತಮ್ಮ ಕಾಯಕ ಮಾಡಿಕೊಂಡು, ಸ್ವಾತಂತ್ರ್ಯಕ್ಕಾಗಿ ವಿವಾಹವಾಗುವುದನ್ನೇ ಬಿಟ್ಟು ಚಳುವಳಿಗಳು ಮತ್ತು ಸಾಮಾಜಿಕ ಸೇವೆಯಿಂದ ಇಡೀ ಜಿಲ್ಲೆಯ ಚಳುವಳಿ ನಾಯಕರಿಂದ ಗೌರವಿಸಲ್ಪಟ್ಟವರು ಮಾಸೂರಿನ ನ್ಯಾಮತಿ ವೀರಭದ್ರಪ್ಪ.

**ಪ್ರೇರಣೆ** : "೧೯೩೦ರ ಜನವರಿ ತಿಂಗಳಲ್ಲಿ ಹಿರೇಕೆರೂರಿನ ಮುಖ್ಯ ಬೀದಿಗಳಲ್ಲಿ ಖಾದಿಧಾರಿಗಳಾದ ನಾಲ್ಕಾರು ಹುಡುಗರು ರಾಷ್ಟ್ರಾಭಿಮಾನದ ಘೋಷಣೆಗಳನ್ನು ಕೂಗುತ್ತ ಹೊರಟ್ಟಿದ್ದರು. ತಂದೆಯೊಂದಿಗೆ ಕಿರಾಣಿ ಅಂಗಡಿಯಲ್ಲಿದ್ದ ಇವರು ಆ ಹುಡುಗರನ್ನು ಹಿಂಬಾಲಿಸಿಕೊಂಡು ಪೋಲೀಸ್ ಮೈದಾನಕ್ಕೆ ಹೋದರು. ಅಲ್ಲಿ ಎನ್.ಎಸ್. ಹರ್ಡೇಕರ್ ಮತ್ತು ಮುದವೀಡು ಕೃಷ್ಣರಾಯರು ಭಾಷಣ ಮಾಡುತ್ತಿದ್ದರು. ಆ ಭಾಷಣ ಮುಗಿಯುತ್ತಿದ್ದಂತೆ ಎನ್.ಎಸ್.ಹರ್ಡೇಕರ ಎದುರಿಗೆ ನಿಂತ ವೀರಭದ್ರಪ್ಪ 'ಈ ದೇಹ ಇಂದಿನಿಂದ ದೇಶಕ್ಕಾಗಿತೊಂದರೆ ಯಾಗುವಂತಿದ್ದರೂ ಅವರು ತಮ್ಮ ಹೋರಾಟದ ಬದುಕಿನ ವಿಚಾರಗಳನ್ನು; ನಾನು ನಿಮ್ಮೊಂದಿಗೆ ಬರುತ್ತೇನೆ. ಮನೆಗೆ ಹೋಗಿ ಕೇಳಿಕೊಂಡು ಬರುವುದಿಲ್ಲ ಕಾರಣ ಮನೆಗೆ ಹೋದರೆ ನನ್ನ ಬಿಡುವುದಿಲ್ಲ' ಎಂದು ಹೇಳಿದಾಗ, ಎನ್.ಎಸ್. ಹರ್ಡೇಕರ್ ಇವರನ್ನು ಬ್ಯಾಡಗಿಯ ಹತ್ತಿರದ ತಡಸದ ಆಶ್ರಮಕ್ಕೆ ಕರೆದುಕೊಂಡು ಹೋದರು.

**ತಡಸದ ಆಶ್ರಮ** : ಬ್ಯಾಡಗಿಯ ಬೆಟಗೇರಿ ರಾಮಣ್ಣ ಚಳುವಳಿಗಾರರಿಗೆ ನೀಡಿದ ಜಮೀನಿನಲ್ಲಿ ಆಶ್ರಮವೊಂದನ್ನು ಕಟ್ಟಲಾಗಿತ್ತು. ಅಲ್ಲಿಗೆ ವೀರಭದ್ರಪ್ಪ ನ್ಯಾಮತಿಯನ್ನು ಎನ್.ಎಸ್. ಹರ್ಡೇಕರ್ ಕರೆದುಕೊಂಡು ಬಂದರು. ಮಾರನೆ ದಿನ ಬೆಳಗ್ಗೆ 'ಭಾರತ ದೇಶ ಸ್ವಾತಂತ್ರ್ಯಗೊಳ್ಳುವವರೆಗೂ ಬ್ರಿಟಿಷರ ವಿರುದ್ಧ ಹೋರಾಡುತ್ತೇನೆ. ನೂಲುವುದು, ನೇಯುವುದು, ದೀನದಲಿತರ ಸೇವೆಗೆ ತನ್ನ ತನು, ಮನ, ಧನ ಪ್ರಾಣ ಸರ್ವಸ್ವವನ್ನು ಬಲಿಕೊಟ್ಟು ದೇಶದ ಹಿತಕ್ಕಾಗಿ ಹೋರಾಡುತ್ತೇನೆ"[೫೫] ಎಂದು. ಹರ್ಡೇಕರ್ ಎದುರು ವೀರಭದ್ರಪ್ಪ ಪ್ರತಿಜ್ಞೆ ಮಾಡಿದರು.

**ಕಾರ್ಯಗಳು** : ಆಶ್ರಮದಲ್ಲಿ ಇದ್ದುಕೊಂಡು ಸುತ್ತಮುತ್ತಲಿನ ಗ್ರಾಮಗಳಲ್ಲಿ ಜನಜಾಗೃತಿ ಕಾರ್ಯ ಮಾಡುತ್ತಿದ್ದರು. ಗ್ರಾಮೀಣ ಭಾಗದಲ್ಲಿ ವೀರಭದ್ರಪ್ಪ ರಾಷ್ಟ್ರೀಯ ವಿಚಾರಗಳನ್ನು ತಿಳಿಸುವ ಮೂಲಕ ಜನತೆಯ ಪ್ರೀತಿ ವಿಶ್ವಾಸ ಗಳಿಸಿಕೊಂಡಿದ್ದರು. ಅಲ್ಲದೆ ಚಳುವಳಿಗೆ ಯುವಕರನ್ನು ಬರಮಾಡಿಕೊಳ್ಳುತ್ತಿದ್ದರು. ಗ್ರಾಮಗಳ ಸ್ವಚ್ಛತೆಯ ಬಗ್ಗೆ, ಮೂಢನಂಬಿಕೆಗಳ ಬಗ್ಗೆ ಜನಸಾಮಾನ್ಯರಿಗೆ ತಿಳಿಸುವಲ್ಲಿ ಯಶಸ್ವಿಯಾದರು.

**ಗ್ರಾಮಸ್ಥರ ಸಹಾಯ** : ಹಳ್ಳಿಗರ ಪ್ರೀತಿ-ವಿಶ್ವಾಸ ಗಳಿಸಿಕೊಂಡ ಮೇಲೆ ಹಳ್ಳಿಗರೇ ಭತ್ತ, ರಾಗಿ, ಜೋಳ, ಮೆಣಸಿನಕಾಯಿ, ಬೆಲ್ಲ, ತರಕಾರಿ, ಹಣ್ಣು, ಹಾಲು, ಮೊಸರು, ಮಜ್ಜಿಗೆ ಹೀಗೆ ದಿನನಿತ್ಯದ ಆಹಾರ ಪದಾರ್ಥಗಳನ್ನು ಆಶ್ರಮಕ್ಕೆ ತಂದು ಕೊಡುತ್ತಿದ್ದ ವಿಷಯಗಳನ್ನು ಅದೇ ಭಾಗದ ಹಿರೇಅಣಜಿ ಚಳುವಳಿಗಾರ ಪುಟ್ಟಪ್ಪ ಹರಭಿ ಹೇಳಿಕೆಯಿಂದ ತಿಳಿಯುತ್ತದೆ.

**ಕಾಂಗ್ರೆಸ್ಸಿಗೆ** : "೧೯೩೦ರಲ್ಲಿ ವೀರಭದ್ರಪ್ಪ ಹಿರೇಕೆರೂರಿನಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ತಾಲೂಕು ಕಾಂಗ್ರೆಸ್ಸಿನ ಉದಯಕ್ಕೆ ಕಾರಣರಾಗಿದ್ದರಿಂದ ಕಾರ್ಯಕರ್ತರು ಇವರನ್ನೇ (ಪ್ರಥಮ)ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದರು.

**ಗಾಂಧೀಜಿಯವರ ದರ್ಶನ** : ಎನ್.ಎಸ್.ಹರ್ಡೇಕರರೊಂದಿಗೆ ಇವರು ಪುಣೆ, ಮುಂಬೈ ಮತ್ತು ಸಾಬರಮತಿಗಳಲ್ಲಿ ಗಾಂಧೀಜಿ ದರ್ಶನ ಮಾಡಿದ್ದರು. ಎನ್.ಎಸ್. ಹರ್ಡೇಕರರು ನ್ಯಾಮತಿ ವೀರಭದ್ರಪ್ಪ ಸೇವೆ ಕುರಿತು ಗಾಂಧೀಜಿಗೆ ತಿಳಿಸಿದಾಗ ಅವರು 'ಅಚ್ಚಾ ಅಚ್ಚಾ ವಹ ಅಪನೆ ಕಾಮಮೆ ಸಫಲ ಹೊ ಜಾಯೇಗಾ' ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು."[೫೬] ಹೀಗೆ ಹಲವು ರಾಷ್ಟ್ರನಾಯಕರ ಸಂಪರ್ಕವನ್ನು ವೀರಭದ್ರಪ್ಪ ಸಾಧಿಸಿದರು.

**ಬೆಂಕಿ ವೀರಭದ್ರಪ್ಪನಾಗಿದ್ದು** : (ಹೆಚ್ಚು ಚಾವಡಿಗಳಿಗೆ ಬೆಂಕಿ ಹಚ್ಚಿರುವುದರಿಂದ ಈ ಹೆಸರು) "ಅಸಹಕಾರ, ಕಾನೂನು ಭಂಗ ಚಳುವಳಿಯಲ್ಲಿ ಬ್ರಿಟಿಷ್ ಆಡಳಿತಾಧಿಕಾರಿಗಳಿಗೆ ಅಂಜಿಕೆಯನ್ನುಂಟು ಮಾಡುವುದು ಇವರ ಮುಖ್ಯ ಉದ್ದೇಶವಾಗಿತ್ತು. ಮೆಣಸಿನಾಳ ತಿಮ್ಮನಗೌಡರನ್ನು ಮತ್ತು ಇವರನ್ನು ಹಿಡಿಯುವುದು ಪೊಲೀಸರಿಗೆ ಹಾಗೂ ಅಧಿಕಾರಿಗಳಿಗೆ ಮರೀಚಿಕೆಯಾಗಿತ್ತು. ನಾನಾ ವೇಷಧಾರಿಗಳಾಗಿ ತಮ್ಮ ಕಾರ್ಯ ಸಾಧಿಸಿ ತಾವೇ ಇಂಥ ಕೆಲಸ ಮಾಡಿದವರು ಎಂದು ಚೀಟಿಯಲ್ಲಿ ಬರೆದಿಟ್ಟು ಹೋಗುತ್ತಿದ್ದರು."[೫೭] ಈ ರೀತಿಯಲ್ಲಿ ತಾವೇ ಈ ಕಾರ್ಯ ಮಾಡಿರುವುದು ಎಂದು ಅಧಿಕಾರಿಗಳಿಗೆ ತಿಳಿಸುವ ಕಾರ್ಯವನ್ನು ಜಿಲ್ಲೆಯಲ್ಲಿ ತಿಮ್ಮನಗೌಡರ ನೇತೃತ್ವದಲ್ಲಿ ಮಾಡುತ್ತಿರುವುದನ್ನು ಗುರುತಿಸಲಾಗಿದೆ. ಈ ರೀತಿಯಲ್ಲಿ ತಾವು ಮಾಡಿದ ಕಾರ್ಯಗಳನ್ನು ಅಧಿಕಾರಿಗಳಿಗೆ ತಿಳಿಸಿ ಹೋದ ಘಟನೆಗಳು ಜಿಲ್ಲೆಯಲ್ಲಿ ಕಂಡುಬರುವುದಿಲ್ಲ.

**ಮಾಸೂರು ಚಾವಡಿ** : "ಎಂಟರಿಂದ ಹತ್ತು ಜನರ ಗುಂಪು ಸೇರಿ ಜೋಳದ ಸಿವುಡುಗಳೊಂದಿಗೆ ಚಾವಡಿಗೆ ಬಂದು 'ನಾವು ಜಾದೂಗಾರರು ಆಟ ತೋರಿಸುತ್ತೇವೆಂದು' ಚಾವಡಿಯ ಕಂಬಗಳಿಗೆ ಜೋಳದ ಸಿವುಡುಗಳನ್ನು ಕಟ್ಟಿ ಚಿಮಣಿ ಎಣ್ಣಿ ಹಾಕಿ ಅಗ್ನಿಸ್ಪರ್ಶ ಮಾಡಿ, ಅಲ್ಲಿರುವ ಎಲ್ಲ ಕಾಗದ ಪತ್ರಗಳನ್ನು ಸುಟ್ಟು ವರಾಹದ (ಹಿರೇಕೆರೂರು ಸಮೀಪ) ಅಡವಿ ಸೇರಿದರು.

**ಕಾಮದಹನ** : ಕಾಮದಹನಕ್ಕೆ ಹೆಸರಾದ ಮೇದೂರಿನಲ್ಲಿ 'ನಾವು ಲಂಕಾದಹನ ಆಟ ಆಡುತ್ತೇವೆ' ಎಂದು, ಚಾವಡಿಯ ಕಂಬಗಳಿಗೆ ಜೋಳದ ಸಿವುಡುಗಳನ್ನು ಕಟ್ಟಿ ಕ್ಷಣಮಾತ್ರದಲ್ಲಿ ಚಿಮಣಿ ಎಣ್ಣಿ ಎರಚಿದರು. ಇಲ್ಲಿ ಶಾನಭೋಗರು ಇಟ್ಟಿದ್ದ ಎಲ್ಲ ದಪ್ತರಗಳನ್ನು ಸುಟ್ಟು ಕತ್ತಲೆಯಲ್ಲಿ ಕಾಣೆಯಾದರು.

**ಕಾಗಿನೆಲೆಯ ಶಾನಭೋಗರ ಮನೆಯಲ್ಲಿ** : ರಾತ್ರಿ ಒಂಬತ್ತು ಗಂಟೆಗೆ ದಾಸಪ್ಪನ ವೇಷ ಧರಿಸಿ ಶಾನಭೋಗರ ಮನೆಯ ಮುಂದೆ ಊಟ ಕೇಳುವ ನೆಪದಲ್ಲಿ ನಾಲ್ಕು ಜನರ ತಂಡ ಅವರ ಮನೆ ಪ್ರವೇಶಿಸಿದರು. ಮನೆಯಲ್ಲಿಯ ಎಲ್ಲ ಕಾಗದ ಪತ್ರಗಳನ್ನು ಹೊರಗೆ ತಂದು ಚಿಮಣಿ ಎಣ್ಣೆ ಸುರಿದು ಬೆಂಕಿ ಹಚ್ಚಿ ಪರಾರಿಯಾದರು.

**ಬಳೆಗಾರನಾಗಿ :** ಬಳೆ ಮಲಾರ ಹಾಕಿಕೊಂಡು ಬ್ಯಾಡಗಿ ರೇಲ್ವೆ ಸ್ಟೇಷನ್ ಪ್ರವೇಶ ಮಾಡಿ ಮಹಿಳೆಯರಿಗೆ ಬಳೆ ತೊಡಿಸುವ ಕಾರ್ಯವನ್ನು ವೀರಭದ್ರಪ್ಪ ಮಾಡುತ್ತಿದ್ದರು. ಅವರ ತಂಡದ ಎಂಟರಿಂದ ಹತ್ತು ಜನ ಸದಸ್ಯರು ಚಿಮಣಿ ಎಣ್ಣೆಯಲ್ಲಿ ಅದ್ದಿದ ಕಟ್ಟಿಗೆಯ ಚಿಕ್ಕ ಚಿಕ್ಕ ಕಟ್ಟುಗಳನ್ನು ಆಯಕಟ್ಟಿನ ಸ್ಥಳದಲ್ಲಿ ಇಟ್ಟರು. ಅವರ ಕಾರ್ಯ ಮುಗಿದ ನಂತರ ವೀರಭದ್ರಪ್ಪನ ಆದೇಶದಂತೆ ಬೆಂಕಿ ಹಚ್ಚಲಾಯಿತು. ಅಲ್ಲಿರುವ ಪೆಟ್ರೋಲ್, ಡೀಸೆಲ್ ಮತ್ತು ಚಿಮಣಿ ಎಣ್ಣೆಯ ಉಗ್ರಾಣಗಳು ಬೆಂಕಿಗೆ ಆಹುತಿಯಾಗಿ ಇಡೀ ಸ್ಟೇಷನ್ ದಹಿಸುವಂತೆ ಮಾಡಿದರು.

**ಕಣ್ಣಪ್ಪನಾಗಿ :** ಮೆಣಸಿನಾಳದ ತಿಮ್ಮನಗೌಡರು ಮತ್ತು ಇವರ ನಾಯಕತ್ವದಲ್ಲಿ ಕುಪ್ಪೇಲೂರು ಹಫ್ತಾ ಲೂಟಿ ಪ್ರಕರಣದಲ್ಲಿ ಪೊಲೀಸರೊಂದಿಗಿನ ತಳ್ಳಾಟದಲ್ಲಿ ತಿಮ್ಮನಗೌಡರ ಬಗಲ ಚೀಲದಲ್ಲಿದ್ದ ಬಾಂಬ್ ಸ್ಫೋಟಗೊಂಡು ತಿಮ್ಮನಗೌಡರಿಗೆ ಮರಣಾಂತಿಕ ಗಾಯವಾಯಿತು. ಅವರ ಪಕ್ಕದಲ್ಲಿದ್ದ ವೀರಭದ್ರಪ್ಪನ ಕಣ್ಣಿಗೆ ಬಾಂಬ್‌ನ ಕಿಡಿಯೊಂದು ಸಿಡಿದು ಕಣ್ಣಿನ ನೋವು ವಿಪರೀತವಾಯಿತು. ನಾಲ್ಕಾರು ದಿನಗಳವರೆಗೂ ಗುಣವಾಗದೇ ಹೋದಾಗ ಕೆ.ಎಫ್. ಪಾಟೀಲ್ ಬೇರೆ ಹೆಸರಿನ ಮೇಲೆ ಇವರನ್ನು ಪುಣೆಯ ಆಸ್ಪತ್ರೆಗೆ ದಾಖಲಿಸಿ ಚಿಕಿತ್ಸೆ ಕೊಡಿಸಿದರು. ಆದರೂ ಒಂದು ಕಣ್ಣು ಕಾಣದಾಗಿ ಕೊನೆಯವರೆಗೂ ಕಣ್ಣಪ್ಪನಾಗಿಯೇ ಉಳಿದ ಬಗ್ಗೆ ಚಳುವಳಿಗಾರ ಶೀವನಗೌಡ ಮರಿಗೌಡ್ರ ನೆನಪಿಸಿಕೊಳ್ಳುತ್ತಾರೆ.

**ತುರಂಗ ವಾಸದ ಕುರಿತು ವಿವರ :** "ವಿಜಾಪುರ ಜಿಲ್ಲೆ ಬಾದಾಮಿ ತಾಲೂಕು ಕಟಗೇರಿ ರೈಲ್ವೇ ಸ್ಟೇಷನ್ ಹತ್ತಿರದ ಊರಲ್ಲಿ ಸೇಂದಿ ಅಂಗಡಿ ಮುಂದೆ ಪಿಕೆಟಿಂಗ್ ಮಾಡಿದ್ದಕ್ಕೆ ೪ ತಿಂಗಳ ಜೈಲು ಶಿಕ್ಷೆ. * ಸೂಡಂಬಿ, ಮಡ್ಲೂರು, ಅತ್ತಿಕಟ್ಟೆ ಈ ಊರುಗಳಲ್ಲಿ ಈಚಲ ಗಿಡಗಳನ್ನು ಕಡಿದಿದ್ದಕ್ಕಾಗಿ ೧೯೩೨ರಲ್ಲಿ ಒಂದು ವರ್ಷ ಹಿಂಡಲಗಾ ಜೈಲಿನಲ್ಲಿ ಶಿಕ್ಷೆ. * ಪ್ರಚೋದನಕಾರಿ ಭಾಷಣ ಮಾಡಿದ್ದಕ್ಕೆ, ಕರಪತ್ರಗಳನ್ನು ಹಂಚಿದ್ದಕ್ಕೆ ಒಂದು ವರ್ಷ ಜೈಲು ಶಿಕ್ಷೆ. *೧೯೪೧ರಲ್ಲಿ ಬ್ರಿಟಿಷರ ಎರಡನೇ ಮಹಾಯುದ್ಧ ವಿರೋಧಿಸಿ ವೈಯಕ್ತಿಕ ಸತ್ಯಾಗ್ರಹ ಮಾಡಿ ಆರು ತಿಂಗಳ ಜೈಲುವಾಸ ಅನುಭವಿಸಿದರು. ಇವರಿಗೆ ಹಲವು ರೀತಿಯಲ್ಲಿ ಸಹಾಯ ಮಾಡಿದ್ದಕ್ಕಾಗಿ ಬಿ.ಡಿ.ಪಾಟೀಲಗೆ ಐವತ್ತು ರೂ.ಗಳ ದಂಡ ವಿಧಿಸಲಾಗಿತ್ತು. ಹೀಗೆ ಒಟ್ಟು ಐದು ವರ್ಷ ಎರಡು ತಿಂಗಳು ಹತ್ತು ದಿನಗಳ ಶಿಕ್ಷೆಯನ್ನು ಅನುಭವಿಸಿದರು. ಹಲವು ವಿಧ್ವಂಸಕ ಕಾರ್ಯಗಳನ್ನು ಗಂಭೀರವಾಗಿ ಮಾಡಿದ್ದಕ್ಕಾಗಿ ಇವರನ್ನು ಹಿಡಿದುಕೊಟ್ಟವರಿಗೆ ಸರಕಾರ ಎರಡು ಸಾವಿರ ರೂ.ಗಳ ಬಹುಮಾನವನ್ನು ಘೋಷಿಸಿತ್ತು. ಅಲ್ಲದೆ ಪೊಲೀಸರಿಗೆ ಇವರನ್ನು ಕಂಡಲ್ಲಿ ಗುಂಡಿಕ್ಕುವ ಆದೇಶ ಹೊರಡಿಸಿತ್ತು."[೫೮] ಇವೆಲ್ಲ ನ್ಯಾಮತಿ ವೀರಭದ್ರಪ್ಪನವರ ಭೂಗತಕಾರ್ಯಕ್ಕೆ ಸ್ಪಷ್ಟನೆಯಂತಿದೆ.

ಇವರ ಬಗ್ಗೆ ಟಿ.ಆರ್. ನೆಶ್ವಿ ಹೇಳಿರುವಂತೆ ಹಿರೇಕೆರೂರು ತಾಲೂಕಿನ ನ್ಯಾಮತಿ ವೀರಭದ್ರಪ್ಪನ ಹೆಸರನ್ನು ನಾವೆಲ್ಲ ಹೇಳಬೇಕು. ಅಂಥ ಅಮೋಘ ಸೇವೆ ಅವರಿಂದ ಈ ದೇಶಕ್ಕೆ ಸಲ್ಲಿಸಲ್ಪಟ್ಟಿದೆ. ಈ ಮಾತುಗಳು ವೀರಭದ್ರಪ್ಪನ ತ್ಯಾಗದ ಮೇಲೆ ಬೆಳಕು ಚೆಲ್ಲಿವೆ.

೨. **ರಮಾನಂದ ಮನ್ನಂಗಿ :** ಹಾವೇರಿ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಪ್ರಮುಖರು. ಗಾಂಧೀಜಿ ಆಶ್ರಮದಲ್ಲಿ ತರಬೇತಿ, ಅನುಭವ ಪಡೆದುಕೊಂಡು ಹೊಸರಿತ್ತಿ ಮತ್ತು ಕೊರಡೂರು ಆಶ್ರಮಗಳಲ್ಲಿ ಪ್ರಯೋಗಿಸಿದವರು. ಮಹದೇವಪ್ಪನ ನಾಯಕತ್ವದಲ್ಲಿಯ ಭೂಗತ ಕಾರ್ಯಗಳಲ್ಲಿ ಪ್ರಮುಖ ಕಾರ್ಯ ಮಾಡಿದವರು ರಮಾನಂದ ಮನ್ನಂಗಿ. ಇವರು ಹಾವೇರಿ ತಾಲೂಕಿನ ಜಂಗಮ್ಮನಕೊಪ್ಪದ ಫಕ್ಕೀರಪ್ಪ-ಸಂಗಮ್ಮ ದಂಪತಿಗಳ ಪುತ್ರನಾಗಿ ೧೯೧೫ರಲ್ಲಿ ಜನಿಸಿದರು. ಇವರ ಮೂಲ ಹೆಸರು ರೇವಣಪ್ಪ(ರೇವಣಸಿದ್ದಪ್ಪ) ಇವರು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗಲೇ ಗಾಂಧೀಜಿಯ ವಿಚಾರಧಾರೆಗಳನ್ನು ಕೇಳಿ ಪ್ರಭಾವಿತರಾದರು.

"ಬ್ರಿಟಿಷ್ ಸರಕಾರದ ಆಡಳಿತ ಸುಗಮವಾಗಿ ನಡೆಯದಂತೆ ಶಾಂತಿಯುತವಾಗಿ ಪ್ರತಿಭಟನೆ ಮಾಡುವ, ವಿದೇಶಿ ಬಟ್ಟೆ ಬಹಿಷ್ಕಾರದ, ಖಾದಿ ಗ್ರಾಮೋದ್ಯೋಗ ಪ್ರಚಾರದ ಚಟುವಟಿಕೆಗಳು ದೇಶಾದ್ಯಂತ ಜರುಗಿದವು. ಹೊಸರಿತ್ತಿಯಲ್ಲಿಯೂ ಕೆಲವೊಂದು ಗಿಡಗಳನ್ನು ಕಡಿಯುವ ಕಾರ್ಯ ಮಾಡಿ ರೇವಣಪ್ಪ ಸೆರೆಮನೆ ಸೇರಿದರು."[೫೯] ನಂತರದಲ್ಲಿ ಗಾಂಧೀ-ಇರ್ವಿನ್ ಒಪ್ಪಂದದಂತೆ ಎಲ್ಲ ಚಳುವಳಿಗಾರರನ್ನು ಬಿಡುಗಡೆ ಮಾಡಿದಂತೆ ರೇವಣಪ್ಪನನ್ನು ಬಿಡುಗಡೆ ಮಾಡಲಾಯಿತು.

**ಹೊಸರಿತ್ತಿ-ಕೊರಡೂರು ಆಶ್ರಮಗಳು :** ಮಹದೇವಪ್ಪ ಮೈಲಾರ ಮತ್ತು ಹಳ್ಳಿಕೇರಿ ಗುದ್ಲೆಪ್ಪ ನೇತೃತ್ವದಲ್ಲಿ ಹೊಸಮನಿ ಸಿದ್ದಪ್ಪ, ವೆಂಕಟೇಶ ಮಾಗಡಿ, ವೆಂಕಣ್ಣ ವಾಯಿ ಮುಂತಾದವರು ಸೇರಿಕೊಂಡು ನಡೆಸುತ್ತಿರುವ ಆಶ್ರಮಗಳಲ್ಲಿ ಸೇವೆ ಮಾಡಿದ ಇವರು "ಅಹಿಂಸಾತ್ಮಕವಾಗಿ ಬ್ರಿಟಿಷ್ ಸರಕಾರದ ಆಡಳಿತಕ್ಕೆ ತೊಂದರೆ ಕೊಡತೊಡಗಿದರು. ಹಫ್ತಾ ವಸೂಲಿ ಹಣವನ್ನು ಲೂಟಿ ಮಾಡುವುದು, ಪೋಸ್ಟ್ ಆಫೀಸ್‌ನ ಪತ್ರಗಳನ್ನು ಸುಡುವುದು, ಚಾವಡಿಗಳಿಗೆ ಬೆಂಕಿ ಹಚ್ಚುವುದು, ಪೊಲೀಸರ ಬಂದೂಕುಗಳನ್ನು ಕಸಿಯುವುದು, ರೇಲ್ವೆ ಸ್ಟೇಷನ್ ಸುಡುವುದು, ಕೋರ್ಟ್-ಕಛೇರಿಗಳಲ್ಲಿ ಸ್ವಾತಂತ್ರ್ಯದ ಘೋಷಣೆ ಕೂಗುವುದು. ಮಾಮಲೇದಾರರ ಜೀಪ್ ಸುಡುವುದು ಹೀಗೆ ಚಟುವಟಿಕೆಗಳನ್ನು ಮಾಡತೊಡಗಿದರು."[೬೦]

**ಗಾಂಧೀಜಿ ಆಶ್ರಮಕ್ಕೆ :** "೧೯೩೬ರಲ್ಲಿ ರೇವಣಪ್ಪ ವಾರ್ಧಾ ಜಿಲ್ಲೆಯ ಸೇವಾಶ್ರಮ ಶೇಗಾಂವಕ್ಕೆ ಪತ್ನಿಯೊಂದಿಗೆ ಹೋದರು. ಅಲ್ಲಿ ಅನೇಕ ಗಣ್ಯವ್ಯಕ್ತಿಗಳ ಸಂಪರ್ಕ ಇವರಿಗೆ ಲಭಿಸಿತು. ಗಾಂಧೀಜಿಯ ತೀವ್ರ ಒಡನಾಟ ಲಭಿಸಿ, ಜೊತೆಗೆ ಕಸ್ತೂರಬಾ, ಮೀರಾಬೆನ್, ಕಿಶೋರಲಾಲ ಮಶ್ರೂವಾಲ, ಮಹದೇವ ಬಾಯಿ ಪ್ಯಾರೇಲಾಲ, ವಿನೋಭಾ ಭಾವೆ ಮೊದಲಾದವರ ದರ್ಶನವಾಯಿತು. ಅಲ್ಲಿ ರೇವಣಪ್ಪ ಮಾಡುವ ಕಾರ್ಯಗಳನ್ನು ಮೆಚ್ಚಿಕೊಂಡ ಗಾಂಧೀಜಿ ಇವರ ನಯ, ವಿನಯ ಸೌಜನ್ಯಗಳನ್ನು ಕಂಡು ಇವರಿಗೆ 'ರಮಾನಂದ' ಎಂದು ನಾಮಕರಣ ಮಾಡಿದರು. ಅಂದಿನಿಂದ ಇವರು ರಮಾನಂದರಾದರು.

**ಆಶ್ರಮದ ವಿಧಾಯಕ ಚಟುವಟಿಕೆಗಳು :** ಭಾರತೀಯ ಬಟ್ಟೆ ಉದ್ಯಮ ಸಂಕಷ್ಟಕ್ಕೀಡಾಗಿದ್ದನ್ನು ಗಮನಿಸಿದ ಗಾಂಧೀಜಿ ತಮ್ಮ ತಮ್ಮ ಬಟ್ಟೆಗಳ ದಾರವನ್ನು ತಾವೇ ನೂಲಬೇಕು. ಮನೆ ಮನೆಗಳಲ್ಲಿ ನೇಯುವ ಕಾರ್ಯವಾಗಬೇಕು ಎಂದು ಹೇಳಿದರು. ಗಾಂಧೀಜಿಯ ಈ ವಿಚಾರವನ್ನು

ರಮಾನಂದ ತಾವು ಕೊನೆಯುಸಿರುವವರೆಗೂ ಚಾಚೂ ತಪ್ಪದೇ ಪಾಲಿಸಿಕೊಂಡು ಬಂದರು. ಈ ವಿಚಾರವನ್ನು ಸ್ವಾತಂತ್ರ್ಯ ಯೋಧ ಪರಮಣ್ಣ ಹರಕಂಗಿ ಮತ್ತು ರಮಾನಂದರ ಮಗ ಅರುಣಕುಮಾರ ಮನ್ನಂಗಿ ರಮಾನಂದರ ಕುರಿತು ಸಂದರ್ಶನದಲ್ಲಿ ಅಭಿಪ್ರಾಯವನ್ನು ಹಂಚಿಕೊಂಡಿದ್ದಾರೆ.

**ಗಾಂಧೀಜಿಯಿಂದ ಪಡೆದ ಸಂದೇಶ** : ಗಾಂಧೀಜಿಯೊಂದಿಗೆ ನಿಕಟ ಸಂಪರ್ಕವಿದ್ದ ರಮಾನಂದರು ಆತ್ಮೀಯವಾಗಿ ತಮ್ಮ ಬೇಡಿಕೆಯೊಂದನ್ನು ಸಲ್ಲಿಸಿದರು-'ನಮ್ಮ ಭಾಗದಲ್ಲಿಯ ಹೊಸರಿತ್ತಿ ಆಶ್ರಮವಾಸಿಗಳಿಗಾಗಿ ಸಂದೇಶವೊಂದನ್ನು ತಾವು ಕರುಣಿಸಬೇಕೆಂದು' ಕೇಳಿಕೊಂಡರು. ಗಾಂಧೀಜಿ ತಮ್ಮ ಪಕ್ಕದಲ್ಲಿಯೇ ಕುಳಿತ್ತಿದ್ದ ಅಮೃತಕೌರರಿಗೆ ಹೌದು ಇವನಿಗೊಂದು ಪ್ರತ್ಯೇಕ ಸಂದೇಶ ಕೊಡೋಣ ಬರಿ ಎಂದು ಹೇಳಿದರು. 'ಜಿತನಿ ಪ್ರಗತಿ ಆಪಲೋಗ್ ಸತ್ಯ ಔರ್ ಅಹಿಂಸಾ ಮೇ ಕರೋಗೆ ಉತನೀಹೀ ಸಚ್ಚೀ ಪ್ರಗತೀ ಹೋಗಿ' ಎಂದು ಬರೆಸಿದರು. ಆ ಸಂದೇಶವನ್ನು ರಮಾನಂದ ತಾರು ಮೂಲಕ ತಮ್ಮ ಕೊರಡೂರು ಆಶ್ರಮಕ್ಕೆ ಕಳುಹಿಸಿದರು. ಆ ಸಂದೇಶ ಕೊರಡೂರ ಆಶ್ರಮವಾಸಿಗಳಿಗೆ ಮಾರ್ಗದರ್ಶನವಾಯಿತು. ನಂತರ ಸತೀಶಚಂದ್ರ ದಾಸಗುಪ್ತರವರ ಆಶ್ರಮವಿರುವ ಕಲ್ಕತ್ತಾದ ಸೌದೇಪುರಕ್ಕೆ ತೆರಳಿ ಹನ್ನೊಂದು ತಿಂಗಳು ಎಲ್ಲ ಚಟುವಟಿಕೆಗಳನ್ನು ನೋಡಿ, ತರಬೇತಿ ಪಡೆದುಕೊಂಡು ೧೯೪೧ಕ್ಕೆ ಕೊರಡೂರು ಆಶ್ರಮವಿರುವ ಬಂದು ತಾವು ಪಡೆದುಕೊಂಡು ಬಂದಿದ್ದ ತರಬೇತಿಯ ವಿವರಗಳನ್ನು ಇಲ್ಲಿನ ಎಲ್ಲ ಸತ್ಯಾಗ್ರಹಿಗಳಿಗೆ ನೀಡಿದರು. ಮತ್ತು ಚರ್ಮಗಾರದ ಅನುಭವ ಹೊಂದಿದ್ದರಿಂದ ಹರಿಜನ ಅಭಿವೃದ್ಧಿಗೂ ಶ್ರಮಸಿದ ವಿವರವನ್ನು ಹಾಲಗಿಯ ಚಳುವಳಿಗಾರ ಹಾಲಯ್ಯ ಫಕ್ಕೀರಯ್ಯ ಕುಲಕರ್ಣಿ ವಿವರಿಸುತ್ತಾರೆ.

**ಭೂಗತರಾಗಿ ಹೋರಾಟ** : "೧೯೪೨ರ ಆಗಸ್ಟ್ ೯ರಂದು 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಎಂದು ಗಾಂಧೀಜಿಯಿಂದ ಘೋಷಣೆಯಾದಾಗ, ಕೊರಡೂರು ಆಶ್ರಮದಲ್ಲಿದ್ದವರೆಲ್ಲರೂ ಮೈಲಾರ ಮಹದೇವಪ್ಪನ ನಾಯಕತ್ವದಲ್ಲಿ ಭೂಗತರಾಗಿ ಕಾರ್ಯ ಮಾಡಬೇಕಾಯಿತು. ೩೦ ಜನರ ಇವರ ತಂಡವನ್ನು ಪೊಲೀಸರು ಹಗಲು-ರಾತ್ರಿ ಹುಡುಕುತ್ತಿದ್ದರು. ಆದರೆ ಇವರೆಲ್ಲರೂ ಸಿಗುತ್ತಿರಲಿಲ್ಲ. ಕಾರಣ ಅಡವಿ ಸೇರಿದ್ದರು. ಅಡವಿಯಲ್ಲಿ ಕುಡಿಯಲು ನೀರಿಲ್ಲದ್ದು, ಮಲ-ಮೂತ್ರ ವಿಸರ್ಜನೆಗೂ ನೀರಿನ ತೊಂದರೆ ಅನುಭವಿಸಿದ್ದು, ಸ್ನಾನವಿಲ್ಲದೆ ಬಟ್ಟೆಗಳಲ್ಲಿ ಕೂರಿಗಳಾಗಿದ್ದು, ಆ ಬಟ್ಟೆಗಳನ್ನು ಕುದಿಯುವ ನೀರಿನಲ್ಲಿ ಅದ್ದಿ ಬಟ್ಟೆ ಹಾಕಿಕೊಂಡಿದ್ದರೆ ಸರಿಯಾಗುತ್ತಿತ್ತು. ಆದರೆ ನೀರು ಇಲ್ಲದ ಕಾರಣ ಕೂರಿಯಿರುವ ಬಟ್ಟೆಗಳನ್ನು ಹಾಕಿಕೊಂಡಿರುವ ನೋವಿನ ಘಟನೆಗಳನ್ನು ಪರಮಣ್ಣ ಹರಕಂಗಿಯವರಿಂದ ತಿಳಿಯುತ್ತದೆ.

**ಬಂಧನ** : ಭೂಗತರಾಗಿದ್ದ ಆಶ್ರಮದ ತಂಡದ ಸದಸ್ಯರು ವಿವಿಧ ಕಡೆ ಕಣ್ಮರೆಯಾಗಿ ಚಿಕ್ಕ ಚಿಕ್ಕ ತಂಡವಾಗಿ ಬೇರೆ ಬೇರೆ ಕಡೆಗಳಲ್ಲಿ ಹೋಗುತ್ತಿದ್ದು, ತಮಗೆ ಅನುಕೂಲವಾದ ಕಡೆಗಳಲ್ಲಿ ಭೂಗತ ಕಾರ್ಯಗಳನ್ನು ಮಾಡುತ್ತಿದ್ದರು. ರಮಾನಂದ ಬೆಂಗಳೂರು ಭಾಗದಲ್ಲಿ ಇದ್ದಾಗ ೧೯೪೩ರ ಫೆಬ್ರುವರಿ ೨ರಂದು ಪೊಲೀಸರ ಕೈಗೆ ಸಿಕ್ಕರು. ಅಲ್ಲಿಂದ ಅವರನ್ನು

ಹಾವೇರಿಗೆ ಕಳುಹಿಸಲಾಯಿತು. ರಮಾನಂದರ ವಿಚಾರಣೆಯನ್ನು ಕೈಗೊಂಡ ಸರಕಾರ ಭೂಗತರಾಗಿ ಕಾರ್ಯ ಘನ ಘೋರವಾದುದೆಂದು ತೀರ್ಮಾನಿಸಿ ಎರಡೂವರೆ ವರ್ಷದ ಜೈಲು ಶಿಕ್ಷೆ ನೀಡಿತು. ಇವರು ಅನುಭವಿಸಿದ ಶಿಕ್ಷೆಗಳಲ್ಲಿ ಎರಡೆರಡು ಬಾರಿ ಛಟಿಗಿ ಶಿಕ್ಷೆಯಾದ ಬಗ್ಗೆ ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿಯಿಂದ ತಿಳಿಯಲಾಗಿದೆ.

**ಚಳುವಳಿಗಾರರಿಗೆ ಶ್ರೀಗಳ ಬೆಂಬಲ** : ಸ್ವಾತಂತ್ರ್ಯ ಸೇನಾನಿಗಳು ಭೂಗತರಾಗಿ ಹೋರಾಟ ಮಾಡುವ ಸಮಯದಲ್ಲಿ ಪೂಜ್ಯ ಶ್ರೀ ಗುದ್ದಲೀಶ ಮಹಾಸ್ವಾಮಿಗಳು ಮಾಡಿದ ಸಹಾಯ-ಸಹಕಾರವನ್ನು ಸ್ಮರಿಸಿದ್ದಾರೆ. ಶ್ರೀಗಳು ಮಠದ ನೆಲಮಾಳಿಗೆಯಲ್ಲಿ ಎಲ್ಲ ಹೋರಾಟಗಾರರಿಗೆ ಆಶ್ರಯ ಆಶ್ರಯ ನೀಡಿದ್ದು ಅಂದಿನ ಚಳುವಳಿಗಾರರಿಗೆ ಅನುಕೂಲವಾಗಿತ್ತು. ರಮಾನಂದರು ಎಷ್ಟೋ ಸಾರಿ ಮಹದೇವಪ್ಪನೊಂದಿಗೆ ಇದೇ ಮಠದಲ್ಲಿ ಆಶ್ರಯ ಪಡೆದರು. ಮಠದಲ್ಲಿ ಖಾದಿ ಬಟ್ಟೆ ನೇಯುವುದು, ಶ್ರೀಗಳ ಬಟ್ಟೆಗೆ ಕಾವಿ ಹಾಕುವುದು ರಮಾನಂದರ ಕಾರ್ಯವಾಗಿತ್ತು. ಪೂಜ್ಯರು ನಿಮ್ಮ ಹೋರಾಟ ಶುಭವಾಗಲಿ ಎಂದು ಆಶೀರ್ವದಿಸುತ್ತಿದ್ದರು."[೧೦] ಚಳುವಳಿ ಕಾಲಕ್ಕೆ ಅಂದು ಮಠಗಳು ವಹಿಸಿದ ಪಾತ್ರವನ್ನು ಗಮನಿಸಲಾಗಿದೆ.

**೩. ಹೇಮಪ್ಪ ವೀರಭದ್ರಪ್ಪ ಅಂಗಡಿ**

ಜನನ : ೧೯೧೩, ಸಾ॥ ಹಲಗೇರಿ, ತಾ॥ ರಾಣೆಬೆನ್ನೂರು

ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರವಹಿಸಿದವರಲ್ಲಿ ಹೇಮಪ್ಪ ಅಂಗಡಿ ಒಬ್ಬರು. ಇವರು ೧೯೨೯ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸನ್ನು ಸೇರಿ ಹುಬ್ಬಳ್ಳಿಯ ಸೇವಾದಳದಲ್ಲಿ ತರಬೇತಿ ಪಡೆದರು. ಬಿಜಾಪುರದ ಶಿಬಿರದಲ್ಲಿರುವಾಗ ಅಲಿಭಾಗ, ನಾಗಠಾಣ ಎಂಬ ಹಳ್ಳಿಗಳಲ್ಲಿ ಸೇಂದಿ ಗಿಡ ಕಡಿಯುವ ಸತ್ಯಾಗ್ರದಲ್ಲಿ ಭಾಗವಹಿಸಿದವರು.

**ಮಾಡಿದ ಸತ್ಯಾಗ್ರಹಗಳು** : "ಕಾರವಾರ ಜಿಲ್ಲಾ ಶಿರಸಿ ಕ್ಯಾಂಪಿನಲ್ಲಿ ಸಂಘಟನಾ ಕೆಲಸ ಮಾಡಿ ಅಂಕೋಲೆಯಿಂದ ಉಪ್ಪು ತೆಗೆದುಕೊಂಡು ಬಂದು ರಾಣೆಬೆನ್ನೂರ ತಾಲೂಕಿನ ಬಿಲ್ಲಳ್ಳಿ, ಇಟಗಿ ಗ್ರಾಮಗಳಲ್ಲಿ ಉಪ್ಪಿನ ಸತ್ಯಾಗ್ರಹ ಮಾಡಿದರು. ಹುಲಿಹಳ್ಳಿ ಗ್ರಾಮದಲ್ಲಿ ಸಿದ್ಧಲಿಂಗಯ್ಯ ಕಜ್ಜರಿಸ್ವಾಮಿ ಹಿರೇಮಠ ಇವರೊಡನೆ ಸೇಂದಿ ಗಿಡ ಕಡಿಯುವ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ರಾಣೆಬೆನ್ನೂರಿನ ಪರದೇಶಿ ಅರಿವೆ(ಬಟ್ಟೆ) ಅಂಗಡಿ ಪಿಕೆಟಿಂಗ್ ಕ್ಯಾಂಪಿನಲ್ಲಿ ಗುದ್ಲೆಪ್ಪ ಹಳ್ಳಿಕೇರಿ ಹಾಗೂ ಲಿಂಗರಾಜ ಮುದ್ದಣವರರೊಂದಿಗೆ ಮೂರು ತಿಂಗಳ ಕೆಲಸ ಮಾಡಿದರು. ೧೯೩೦ರಲ್ಲಿ ಬ್ಯಾಡಗಿ ತಾಲೂಕಿನ ಬುಡಪನಹಳ್ಳಿ ಜಂಗಲ್ ಸತ್ಯಾಗ್ರಹದಲ್ಲಿ ಬ್ಯಾಡಗಿ ಮತ್ತು ಮೋಟೆಬೆನ್ನೂರಿನ ಒಟ್ಟು ೫೦ ಚಳುವಳಿಗಾರರ ಗುಂಪಿನಲ್ಲಿ ಪ್ರಮುಖ ಪಾತ್ರವಹಿಸಿದರು. ಆ ಕಾರ್ಯಕ್ಕಾಗಿ ಒಂಬತ್ತು ತಿಂಗಳ ಶಿಕ್ಷೆಯನ್ನು ಹಿಂಡಲಗಾ ಜೈಲಿನಲ್ಲಿ ಅನುಭವಿಸಿ ಬಂದ ನಂತರ ಕಾಂಗ್ರೆಸ್ ಸಂಘಟನೆಗಾಗಿ ಸೇವೆ ಸಲ್ಲಿಸಿದರು."[೨]

**ಆರಿಕಟ್ಟಿ ಜಂಗಲ್ ಸತ್ಯಾಗ್ರಹ** : ೧೯೩೨ರಲ್ಲಿ ಹಿರೇಕೆರೂರು ತಾಲೂಕಿನ ನಾಗವಂದದ ಹತ್ತಿರದ ಆರಿಕಟ್ಟಿಯಲ್ಲಿ ಜಂಗಲ್ ಸತ್ಯಾಗ್ರಹ ಮಾಡಿದರು. ಈ ಸತ್ಯಾಗ್ರಹದಲ್ಲಿದ್ದ ಮೆಣಸಿನಾಳ

ತಿಮ್ಮನಗೌಡ, ಸಿದ್ದಪ್ಪ ಹಿರೇಮಾರ, ಭರಮಪ್ಪ ಪೂಜಾರ ಮೊದಲಾದವರು ಮೂರು ವರ್ಷದ ಶಿಕ್ಷೆಯನ್ನು ಯರವಾಡ ಜೈಲಿನಲ್ಲಿ ಅನುಭವಿಸಿದರು. ೧೯೩೪ರಲ್ಲಿ ಬಿಡುಗಡೆಯಾಗಿ ಹೊಸರಿತ್ತಿ ಗಾಂಧಿ ಆಶ್ರಮಕ್ಕೆ ಸೇರಿ ಔಷಧೋಪಚಾರ ಕಾರ್ಯ ಮಾಡುತ್ತಿದ್ದ ಬಗ್ಗೆ ಚಳುವಳಿಗಾರರಿಂದ ತಿಳಿದುಬರುತ್ತದೆ.

**ಸುಣಕಲ್ ಬಿದರಿಯಲ್ಲಿ :** "೧೯೩೪ರಿಂದ ೧೯೩೬ರವರೆಗೆ ರಾಣೆಬೆನ್ನೂರು ತಾಲೂಕ ಸುಣಕಲ್ ಬಿದರಿ ಗ್ರಾಮದಲ್ಲಿ ಮಾತ್ರೋಶ್ರೀ ಬಸಮ್ಮನ ಆಶ್ರಮ ಸೇರಿದರು. ಆಶ್ರಮದಲ್ಲಿ ನೂಲುವುದು, ನೇಯುವುದು, ಹಿಂದಿ ಕ್ಲಾಸ್, ಲಾಠಿ ಕ್ಲಾಸ್, ವೈದ್ಯಕೀಯ ವ್ಯವಸಾಯ ಮೊದಲಾದವುಗಳನ್ನು ನಡೆಸುತ್ತ ರಾಷ್ಟ್ರೀಯ ಸೇವಾ ಕಾರ್ಯವನ್ನು ಮಾಡುತ್ತಿದ್ದರು.

**ಶಿಕ್ಷಕರಾಗಿ:** ೧೯೩೯ರಲ್ಲಿ ಬ್ಯಾಡಗಿ ಮುನಿಸಿಪಲ್ ಹೈಸ್ಕೂಲ್‌ನಲ್ಲಿ ಹಿಂದಿ ಶಿಕ್ಷಕರಾಗಿ, ಹಿಂದಿ ಪ್ರಚಾರ ಕಾರ್ಯವನ್ನು ೧೯೪೨ರವರೆಗೂ ಮಾಡಿದರು. ೧೯೪೨ರ ಚಳುವಳಿಯಲ್ಲಿ ಬ್ಯಾಡಗಿ ಸ್ಟೇಷನ್ ಲೂಟಿ ಪ್ರಕರಣದ ಬಗ್ಗೆ ಸಂಶಯದ ಮೇಲೆ ಇವರನ್ನು ಆರೆಸ್ಟ್ ಮಾಡಿ ಡಿಫೆನ್ಸ್ ಆಫ್ ಇಂಡಿಯಾ ರೂಲ್ಸ್ ಪ್ರಕಾರ ಒಂದು ವರ್ಷ ಮೂರು ತಿಂಗಳು ಡೆಟಿನ್ಯೂ ಎಂದು ಹಿಂಡಲಗಾ ಹಾಗೂ ವಿಸಾಪುರ ಜೈಲಿಗೆ ಕಳುಹಿಸಲಾಯಿತು. ಆಗ ಹೈಸ್ಕೂಲ್ ನೌಕರಿ ಕಳೆದುಕೊಂಡರು."[೬೩] ಇವರು ಒಟ್ಟು-ಐದು ವರ್ಷಗಳ ಜೈಲುವಾಸ ಅನುಭವಿಸಿದ್ದಾರೆ.

**೪. ಡಾ॥ ಶಿವಣ್ಣ ನೆಶ್ವಿ : ಸಾ॥ ದೀವಿಗಿಹಳ್ಳಿ, ತಾ॥ ಹಿರೇಕೆರೂರು**

ಟಿ.ಆರ್.ನೆಶ್ವಿ ಅವರ ಸಹೋದರರಾದ ಇವರು ಹಂಸಬಾವಿಯ ವಿದ್ಯಾರ್ಥಿಗಳು ಮಾಡುತ್ತಿದ್ದ ಚಳುವಳಿಗಳಲ್ಲಿ ಭಾಗವಹಿಸಿದ್ದರು. ೧೯೪೨ರ ಚಲೇಜಾವ್ ಚಳುವಳಿಯಲ್ಲಿ ಮಾಡಿದ ಕಾರ್ಯಗಳು

* "ಸಂಗೂರು ಕರಿಯಪ್ಪನ ನೇತೃತ್ವದಲ್ಲಿ ಹೊಂಕಣ ಬಂಗ್ಲೆಯನ್ನು ಸುಡುವಲ್ಲಿ ಭಾಗಿಯಾಗಿದ್ದರು. * ಬ್ಯಾಡಗಿ ಸ್ಟೇಶನ್ ಹತ್ತಿರ ತಂತಿಯನ್ನು ಸ್ನೇಹಿತರೊಂದಿಗೆ ಸೇರಿ ನಾಶ ಮಾಡಿದರು. * ೯.೧೦.೧೯೪೨ ರಂದು ತಿಮ್ಮನಗೌಡ ಮೆಣಸಿನಾಳ, ಸಂಗೂರು ಕರಿಯಪ್ಪ ಇವರ ನಾಯಕತ್ವದಲ್ಲಿ ಹಿರೇಅಣಜಿಯ ಜನರನ್ನು ಕರೆದುಕೊಂಡು ಬ್ಯಾಡಗಿ-ಹಿರೇಕೆರೂರು ಟಪಾಲು ಲೂಟಿ ಮಾಡಿದ್ದರು. * ೧೮.೯.೧೯೪೨ ರಂದು ಬ್ಯಾಡಗಿ ರೇಲ್ವೆ ಸುಡುವ ಕಾರ್ಯದಲ್ಲಿ ಸುತ್ತಕೋಟಿ, ದೀವಿಗಿಹಳ್ಳಿ, ಚಿಕ್ಕಯಡಚಿ, ಕಾಕೋಳ ಗ್ರಾಮದ ಸ್ನೇಹಿತರ ಸಹಾಯದಿಂದ ಯಶಸ್ವಿಗೊಳಿಸಿದರು. * ಇವರ ನಾಯಕತ್ವದಲ್ಲಿ ತಡಸ, ಮತ್ತೂರು, ಕಾಗಿನೆಲೆ, ಹೊಂಬರಡಿ ಗ್ರಾಮಗಳ ದಪ್ತರ ದೋಚಿ ಸುಟ್ಟರು. * ದೀವಿಗಿಹಳ್ಳಿ-ಶ್ರೀರಾಮನಕೊಪ್ಪ ಮಧ್ಯದ ಸೇತುವೆ ಮತ್ತು ಚಿಕ್ಕೇರೂರು ಹತ್ತಿರದ ಕಾರಿಕಟ್ಟಿ ಸೇತುವೆ ನಾಶ ಮಾಡಿದರು. * ತಿಮ್ಮನಗೌಡರೊಂದಿಗೆ ಸೇರಿಕೊಂಡು ರಟ್ಟಿಹಳ್ಳಿಯ ಪೋಲೀಸ್ ಸ್ಟೇಷನ್ ನುಗ್ಗಿ ಬಂದೂಕುಗಳನ್ನು ಪೊಲೀಸರಿಂದ ಕಸಿದುಕೊಂಡು ಬಂದರು. * ಮೆಡ್ಲೇರಿ ಹತ್ತಿರ ಟಪಾಲು ಚೀಲ ಅಪಹರಿಸಿ, ಅಲ್ಲಿಂದ ನ್ಯಾಮತಿ ಹಾಗೂ ಬೆಳಗುತ್ತಿ ಟಪಾಲು ಚೀಲಗಳನ್ನು ಅಪಹರಿಸಿಕೊಂಡು ಬಂದರು. * ಕಡೂರು, ಕುಡಪಲಿ ಚಾವಡಿ ಮತ್ತು ರಟ್ಟಿಹಳ್ಳಿಯ ಪ್ರವಾಸಿ ಬಂಗ್ಲೆಗಳನ್ನು ಸುಟ್ಟರು.

* ೧೯೪೩ ಜನವರಿ ೧೨,೧೩ ಮತ್ತು ೧೪ ಈ ಮೂರು ದಿವಸ ಮೈಲಾರ ಮಹದೇವಪ್ಪನನ್ನು ಕೂಡಿಕೊಂಡು ಕೋಡಬಾಳ, ನೆಗಳೂರು, ಬಾಲೆಹೊಸೂರು, ಹತ್ತಿಮತ್ತೂರು, ಕರ್ಜಗಿ ಇಲ್ಲಿಯ ಚಾವಡಿಗಳನ್ನು ಸುಟ್ಟರು. ಬಾಲೆಹೊಸೂರು ಪೊಲೀಸ್ ಠಾಣಾದಿಂದ(ಔಟ್ ಪೋಸ್ಟ್) ಒಂದು ಬಂದೂಕನ್ನು ಕಸಿಯಲಾಯಿತು.

* ೧೯೪೩ ಫೆಬ್ರುವರಿ ೧೮ ರಂದು ಕುಪ್ಪೇಲೂರ ಚಾವಡಿಯಲ್ಲಿ ಆ ಭಾಗದ ಸುತ್ತಮುತ್ತಲಿನ ೨೪ ಜನ ಚಳುವಳಿಗಾರರೊಂದಿಗೆ ತಿಮ್ಮನಗೌಡ್ರ ನಾಯಕತ್ವದಲ್ಲಿ ಪ್ರವೇಶಿಸಿದರು. ಹಣವಿರುವ (ಕಂದಾಯವಿರುವ) ಕೋಣೆಯ ಕೀ ಒಡೆಯುವ ಸಂದರ್ಭಕ್ಕೆ ಪೊಲೀಸನೊಬ್ಬ ಜೋರಾಗಿ ತಳ್ಳಾಟ ಮಾಡತೊಡಗಿದಾಗ ತಿಮ್ಮನಗೌಡರ ಬಗಲಿನ ಚೀಲದಲ್ಲಿದ್ದ ಬಾಂಬ್ ಘರ್ಷಣೆಯಿಂದಾಗಿ ಸ್ಫೋಟಗೊಂಡಿತು. ಅವರ ಎಡಗೈಗೆ ಗಂಭೀರ ಗಾಯವಾಯಿತು."[೪] ದವಾಖಾನೆಗೆ ಹೋಗಲು ತಿಮ್ಮನಗೌಡರು ನಿರಾಕರಿಸಿದ್ದರಿಂದ ಅವರಿಗೆ ಗೌಟಿ ಔಷಧಿಯ ವ್ಯವಸ್ಥೆ ಮಾಡಿ ಎಲ್ಲರೂ ತಮ್ಮ ತಮ್ಮ ಊರುಗಳಿಗೆ ಹೊರಟು ಹೋದರು.

"ಎರಡು ದಿನಗಳ ನಂತರ ಹಾವೇರಿಯ ಪೈ ಇನ್ಸ್‌ಪೆಕ್ಟರ್ ಕೆಲ ಮಿಲಿಟರಿ ಪಡೆಯೊಂದಿಗೆ ಕುಪ್ಪೇಲೂರು ಮೆಣಸಿನಾಳ ಮತ್ತು ತುಮ್ಮಿನಕಟ್ಟಿಗೆ ಬಂದು ಸಿಕ್ಕ ಸಿಕ್ಕವರನ್ನು ಬಡಿಯಲಾರಂಭಿಸಿದರು. ಬಹಳ ಜನರನ್ನು ಬಂಧಿಸಲಾಯಿತು. ಆಗ ಶಿವಣ್ಣ ನೆಶ್ವಿ ಶಿರ್ಸಿ, ಸಾಗರದ ಕಡೆ ಹೊರಟು ಹೋಗಿದ್ದರು. ನಂತರದಲ್ಲಿ ಮಲೆನಾಡಿನಿಂದ ಬಳ್ಳಾರಿಗೆ ಅಲ್ಲಿ ಯಜಮಾನ್ ಶಾಂತರುದ್ರಪ್ಪನವರ ಬೆಂಬಲಿಗರಾಗಿ ಕಾರ್ಯನಿರ್ವಹಿಸಿದ ಬಗ್ಗೆ ತುಮ್ಮಿನಕಟ್ಟಿಯ ಚಳುವಳಿಗಾರ ಶಿವನಗೌಡ ಮರಿಗೌಡ್ರ ನೆನಪಿಸಿಕೊಳ್ಳುತ್ತಾರೆ.

**೫. ಡಾ.ವಸಂತ ಶಂಕರ ನಾಯ್ಕ ತಟ್ಟಿ :** ಸಾ॥ ಅಕ್ಕಿಆಲೂರು, ತಾ॥ ಹಾನಗಲ್ಲು

ಇವರು ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ತಮ್ಮ ಸಹೋದರ ಮಾವ, ವೈದ್ಯರಾದ ರಾಮಚಂದ್ರ ಜಂತಲಿ ಅವರ ಪ್ರಭಾವದಿಂದ ಖಾದಿಧಾರಿಗಳಾದರು. ೧೯೪೨ರ ಆಗಸ್ಟ್‌ನಲ್ಲಿ ಅಕ್ಕಿಆಲೂರಿನಲ್ಲಿ ತಂತಿ ಕತ್ತರಿಸುವ ಮತ್ತು ದಪ್ತರ ಸುಡುವ ಕಾರ್ಯದಲ್ಲಿ ಭಾಗಿಯಾಗಿ ಬಂಧನಕ್ಕೊಳಗಾದರು. ಇವರಿಗೆ ೧ ವರ್ಷ ಜೈಲು ಶಿಕ್ಷೆ, ೨೦೦ ರೂ. ದಂಡ ವಿಧಿಸಿ ಹಿಂಡಲಗಾ ಜೈಲಿಗೆ ಕಳುಹಿಸಿಲಾಯಿತು. ಹಾಗೂ ತಮ್ಮೂರಿನ ತರುಣರನ್ನು ಕಟ್ಟಿಕೊಂಡು ರಾಷ್ಟ್ರೀಯ ಹೋರಾಟಕ್ಕೆ ಪ್ರೇರೇಪಿಸುತ್ತಿದ್ದ ವಿವರ ಅಕ್ಕಿಆಲೂರಿನ ಗುಡ್ಡಪ್ಪ ಹರಿಜನರಿಂದ ತಿಳಿಯುತ್ತದೆ.

**೬. ಭೀಮಪ್ಪ ಮಲ್ಲಪ್ಪ ಕರ್ಜಗಿ :** ಸಾ॥ ಹೊಸರಿತ್ತಿ, ತಾ॥ ಹಾವೇರಿ

"ಇವರು ಚಳುವಳಿಗೆ ಸೇರಲು ಹೊಸರಿತ್ತಿಯಿಂದ ಧಾರವಾಡಕ್ಕೆ ಹೋಗಿದ್ದರು. ಅಲ್ಲಿ ಗಂಗಾಧರರಾವ್ ದೇಶಪಾಂಡೆ ನೇತೃತ್ವದಲ್ಲಿ ಚಳುವಳಿ ಮಾಡಿದರು. ಆಗ ಪೊಲೀಸರಿಂದ ಲಾಟಿ ಏಟು ತಿಂದರು. ಸರಕಾರ ಬೆಳಗಾವಿನಲ್ಲಿಯ ಹುದಲಿ ಆಶ್ರಮ ವಶಪಡಿಸಿಕೊಂಡು ಕೀಲಿ ಜಡಿದಿತ್ತು. ಆ ಕೀಲಿಯನ್ನು ಮುರಿದು ಪ್ರವೇಶ ಮಾಡಿದ್ದಕ್ಕೆ ಪೊಲೀಸರಿಂದ

ಬಂಧನಕ್ಕೊಳಗಾಗಿ ೧೩ ತಿಂಗಳ ಶಿಕ್ಷೆ ಮತ್ತು ೭೦೦ ರೂ. ದಂಡ, ದಂಡ ಕೊಡದಿದ್ದರೆ ೪ ತಿಂಗಳ ಜೈಲು ಶಿಕ್ಷೆಯನ್ನು ನ್ಯಾಯಾಲಯ ವಿಧಿಸಿತ್ತು. ದಂಡ ಕೊಡದಿದ್ದಕ್ಕೆ ೧೭ ತಿಂಗಳ ಶಿಕ್ಷೆ ಅನುಭವಿಸಿದರು."[೬೫] ಈ ಉಲ್ಲೇಖಕ್ಕೆ ಸ್ನೇಹಿತ ಪರಮಣ್ಣ ಹರಕ್ಕಂಗಿ ಹಾಗೂ ದೇವೇಂದ್ರಪ್ಪ ವಿಭೂತಿ ಇವರು ಸಾಕ್ಷಿಭೂತರಾಗಿದ್ದಾರೆ.

**೭. ಗುರುಸಿದ್ದಯ್ಯ ಚನ್ನಬಸಯ್ಯ ಮಠದ :** ಸಾ॥ ಚನ್ನೂರು, ತಾ॥ ಹಾವೇರಿ

"೧೯೩೧ರಲ್ಲಿ ಇವರು ಮೂರನೇ ತರಗತಿಯಲ್ಲಿರುವಾಗ ಹೊಸರಿತ್ತಿಯಲ್ಲಿ ಸೊಲ್ಲಾಪುರದ ಮಲ್ಲಪ್ಪ ಧನಶೆಟ್ಟಿಗೆ ಗಲ್ಲು ಶಿಕ್ಷೆ ಮಾಡಿದ್ದಕ್ಕೆ ಮಹದೇವಪ್ಪ ಮೈಲಾರ ಕರಿ ನಿಶಾನಿ ಹಿಡಿದು ಮೆರವಣಿಗೆ ಹೊರಟಿದ್ದನ್ನು ನೋಡಿ ಶಾಲೆ ಬಿಟ್ಟು ಅವರೊಂದಿಗೆ ಹೊರಟು ಮಹದೇವಪ್ಪನ ಗುಂಪಿನಲ್ಲಿ ಸೇರಿಕೊಂಡರು.

ಈಚಲಮರ ಕಡಿಯುವುದು ಮತ್ತು ಮಹದೇವಪ್ಪನ ಎಲ್ಲ ವಿಧಾಯಕ ಕಾರ್ಯದಲ್ಲಿ ಭಾಗಿಯಾದರು. ಮಹದೇವಪ್ಪ, ವೀರಯ್ಯ ಮತ್ತು ತಿರುಕಪ್ಪ ಹುತಾತ್ಮರಾದ ಘಟನೆಯನ್ನು ಕಂಡವರು. ಆ ಘಟನೆಯಾದ ರಾತ್ರಿ ಮಹದೇವಪ್ಪನ ಸಂಗಡಿಗರು ಶಿರಹಟ್ಟಿ ತಾಲೂಕು ಗುಂಜಾಳ ಗ್ರಾಮದ ಗಾಣಿಗರ ಮನೆಯಲ್ಲಿ ವಸತಿ ಮಾಡಿದರು. ನಂತರದಲ್ಲಿ ವಿವಿಧ ಕಡೆ ಒಬ್ಬಿಬ್ಬರಂತೆ ಬೇರೆ ಬೇರೆ ತಂಡಗಳಲ್ಲಿ ತಾಲೂಕು, ಜಿಲ್ಲೆ ಮತ್ತು ಪ್ರಾಂತವನ್ನೇ ಬಿಟ್ಟು ಹೊರಟು ಹೋದರು. ಗಾಂಧೀಜಿ ಭೂಗತ ಕಾರ್ಯ ಮಾಡುವವರು ಬಹಿರಂಗಕ್ಕೆ ಬರಬೇಕೆಂದು ಕರೆ ನೀಡಿದಾಗ ಊರಿಗೆ ಬಂದಾಗ ಪೊಲೀಸರಿಂದ ಬಂಧನಕ್ಕೊಳಗಾದರು. ಇವರನ್ನು ವಿಸಾಪುರದ ಜೈಲಿಗೆ ಕಳುಹಿಸಲಾಯಿತು."[೬೬]

**೮. ನಾಗನಗೌಡ ವೀರನಗೌಡ ತಿಪ್ಪನಗೌಡ : ಸಾ॥** ಮಲ್ಲೂರು, ತಾ॥ ಬ್ಯಾಡಗಿ

೧೯೩೦ರ ಉಪ್ಪಿನ ಸತ್ಯಾಗ್ರಹ ಸಮಯದಲ್ಲಿ ಬ್ಯಾಡಗಿಯಲ್ಲಿ ಹಾವೇರಿಯ ಚಳುವಳಿಗಾರರು ಬೃಹತ್ ಪ್ರಭಾತ್ ಫೇರಿಯನ್ನು ನಡೆಸಿ ಘೋಷಣೆಗಳನ್ನು ಕೂಗುತ್ತ, ಪದ್ಯಗಳನ್ನು ಹಾಡುತ್ತ ರಸ್ತೆಯಲ್ಲಿ ಹೋಗುವಾಗ ಇವರು ಹೈಸ್ಕೂಲ್ ವಿದ್ಯಾರ್ಥಿ. ಈ ಘಟನೆಯಿಂದ ಸ್ಫೂರ್ತಿ ಪಡೆದು ತಮ್ಮ ಊರಿನಲ್ಲಿ ಚಳುವಳಿ ಮಾಡಲು ನಿರ್ಧರಿಸಿದರು. ತಮ್ಮ ಊರಲ್ಲಿ ಹುಡುಗರ ಗುಂಪು ಕಟ್ಟಿಕೊಂಡು ಊರಿನ ಸಮೀಪದ ನಾಗಲಾಪುರದ ಹಳ್ಳದಿಂದ ಸೌಳು ತಂದು ಕುದಿಸಿ ಉಪ್ಪು ಮಾಡಿ ಕಾಯ್ದೆ ಭಂಗ ಮಾಡಿದರು. ಇದಾಗಿ ೫-೬ ದಿನಗಳ ನಂತರ ಶಾಲೆಯಿಂದ ಇವರನ್ನು ಪೊಲೀಸರು ಕರೆಸಿಕೊಂಡು ಮೈ ರಕ್ತ ಬರುವಂತೆ ಬಡಿದರು.

೧೯೩೮ರಲ್ಲಿ ಕಾಂಗ್ರೆಸ್ ಸೇರಿದರು. ಹಳ್ಳಿ ಹಳ್ಳಿಗಳಲ್ಲಿ ಕಾಂಗ್ರೆಸ್ ವ್ಯಾಪಿಸುವಂತೆ ಸಂಘಟನೆ ಮಾಡತೊಡಗಿದರು. ಒಂದು ತಂಡ ಕಟ್ಟಿಕೊಂಡು ಮಾಸಣಗಿಯಲ್ಲಿ ಪೋಸ್ಟ್ ಟಪಾಲು ಡಬ್ಬಿ ಸುಡಲು ರಾತ್ರಿ ಊರ ಚಾವಡಿಗೆ ಹೋದರು. ಅಲ್ಲಿ ಜನತೆ ಮಲಗಿದ್ದನ್ನು ಕಂಡು ಆ ಡಬ್ಬಿಯನ್ನು ಬಿಚ್ಚಿಕೊಂಡು ಜಜ್ಜಿ ಊರ ಹೊಂಡದಲ್ಲಿ ಎಸೆದು ಬಂದರು.

ಇವರ ಗೆಳೆಯರಾದ ಸಂಗಪ್ಪ ಬುಡಪನಹಳ್ಳಿ, ಚನ್ನಬಸಪ್ಪ ಬುಡಪನಹಳ್ಳಿ ಸೇರಿ ಬ್ಯಾಡಗಿಯಿಂದ ಮಲ್ಲೂರಿಗೆ ಟಪಾಲು ತರುತಿದ್ದ ರನ್ನರನ ಕಣ್ಣಿಗೆ ಖಾರದ ಪುಡಿ ಎರಚಿ ಟಪಾಲು ಬ್ಯಾಗ್ ತೆಗೆದುಕೊಂಡು ಜೋಳದ ಹೊಲಕ್ಕೆ ಓಡಿಹೋದರು. ಆದರೆ ನಮ್ಮ ಭಾಗದಲ್ಲಿ ಇವರನ್ನು ಬಿಟ್ಟು ಯಾರಿಂದಲೂ ಈ ಕಾರ್ಯ ಸಾಧ್ಯವಿಲ್ಲವೆಂದು ಪೈ ಇನ್ಸಪೆಕ್ಟರ್ ಇವರನ್ನೇ ಬಂಧಿಸಿದರು. ಧಾರವಾಡದಲ್ಲಿ ಆರುವರೆ ತಿಂಗಳ ಶಿಕ್ಷೆ ಅನುಭವಿಸಿದರು. ಜಿಲ್ಲೆಯಲ್ಲಿ ಪೊಲೀಸರಿಂದ ಹೆಚ್ಚು ತೊಂದರೆಗೊಳಗಾದವರಲ್ಲಿ ಒಬ್ಬರು ಎಂಬುದನ್ನು ಬ್ಯಾಡಗಿಯ ಚಳುವಳಿಗಾರ ಷಡಕ್ಷರಪ್ಪ ಮಹಾರಾಜಪೇಟೆ ವಿವರಿಸುತ್ತಾರೆ. ನಾಗನಗೌಡರ ಸ್ವಾತಂತ್ರ್ಯ ಹೋರಾಟದ ಅನುಭವಗಳನ್ನು ಕುರಿತು 'ಹೊರಳುದಾರಿಯಲ್ಲಿ' ಎಂಬ ಕಾದಂಬರಿ ರಚಿಸಿ ಪ್ರಕಟವಾಗುವ ಮುನ್ನವೇ ದೈವಾಧೀನ ರಾದದ್ದು ವಿಷಾದನೀಯ. ಆದರೆ ಅವರ ಪುತ್ರರು ಆ ಕಾರ್ಯಕ್ಕೆ ಚಾಲನೆ ನೀಡುತ್ತಿರುವ ಬಗ್ಗೆ ಜಿಲ್ಲೆಯ ಸಂಶೋಧಕರಾದ ಲಿಂಗರಾಜ ಕಮ್ಮಾರ ತಿಳಿಸುತ್ತಾರೆ.

೯. **ಗ.ಮ. ಹಾಲಪ್ಪ** : ಗವಳಿವಾಡೆ, ಮಹಾವೀರ ಬೀದಿ, ರಾಣೆಬೆನ್ನೂರು.

ಫಾರ್ವರ್ಡ್ ಬ್ಲಾಕ್ ಸದಸ್ಯರಾದ ಕೆ.ಎಫ್. ಪಾಟೀಲ್ "೧೯೩೯ರಲ್ಲಿ ಸುಭಾಸಚಂದ್ರ ಬೋಸರನ್ನು ಹಾವೇರಿ ಮತ್ತು ಬ್ಯಾಡಗಿಗೆ ಕರೆತರುತ್ತಾರೆಂದು ಸುದ್ದಿ ತಿಳಿದು ಸೈಕಲ್ ಮೇಲೆ ಬ್ಯಾಡಗಿಗೆ ಹೋಗಿ ಸುಭಾಸ್‌ರ ಮಿಂಚಿನ ಮಾತುಗಳನ್ನು ಕೇಳಿ ಪ್ರೇರಿತರಾದವರು. ಊರಿಗೆ ಬಂದು 'ಆಜಾದ್ ಹಿಂದ್ ಫೌಜ್' ಶಾಖೆ ಪ್ರಾರಂಭಿಸಿ ಸೈನಿಕರಾಗಿ ಸೇವೆ ಪ್ರಾರಂಭಿಸಿದರು.

ನಂತರದಲ್ಲಿ ಮೆಣಸಿನಾಳದ ತಿಮ್ಮನಗೌಡರ ನಾಯಕತ್ವದಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭೂಗತ ಕಾರ್ಯ ಮಾಡುತ್ತಿದ್ದರು. ತಿಮ್ಮನಗೌಡರು ಇವರ ಭಾಷಣವನ್ನು ಕೇಳಿ ಕೆ.ಎಫ್. ಪಾಟೀಲ್‌ಗೆ ಪರಿಚಯಿಸಿದರು. ಮತ್ತು ಕೆ.ಎಫ್. ಪಾಟೀಲರೊಂದಿಗೆ ಭೂಗತ ಕಾರ್ಯಕ್ಕೆ ನಿಂತವರು.

ಕೆ.ಎಫ್. ಪಾಟೀಲ್ ದಾವಣಗೆರೆ-ಚನ್ನಗಿರಿ ರಸ್ತೆಯ ಹೊಲದಲ್ಲಿ ಕರಪತ್ರ ಮುದ್ರಿಸುತ್ತಿದ್ದರು. ಆ ಮುದ್ರಿತ ಕಾಗದ ಪತ್ರಗಳನ್ನು ಹಂಚುವ ಕಾರ್ಯ ಇವರದ್ದಾಗಿತ್ತು. ಇವರ ಕಾರ್ಯದಲ್ಲಿ ಉದಗಟ್ಟಿ ಮಹಾರುದ್ರಪ್ಪನ ಸಹಾಯಕ್ಕೆ ಬಂದರು. ಇವರು ತುಮ್ಮಿನಕಟ್ಟಿ, ಹೊಸರಿತ್ತಿ, ಬ್ಯಾಡಗಿ, ಹಾವೇರಿ, ಹಿರೇಕೆರೂರು, ಅರೇಮಲ್ಲಾಪುರ, ಮೇಡ್ಲೇರಿ, ಹಾದರಗೇರಿ, ಮೋಟೆಬೆನ್ನೂರು, ರಾಣೆಬೆನ್ನೂರು, ಶಿರಾಳಕೊಪ್ಪ, ಸಾಗರ ಹೀಗೆ ಮುಂತಾದ ಊರುಗಳಿಗೆ ಸೈಕಲ್ ಮೇಲೆ ಕರಪತ್ರ ಹಂಚುವುದು ಮತ್ತು ಗುಪ್ತ ಸಂದೇಶಗಳನ್ನು ಮುಟ್ಟಿಸುವುದು ಇವರ ಕಾರ್ಯವಾಗಿತ್ತು. ಹಾಗೂ ಇವರ ಕಾರ್ಯ ಪೊಲೀಸರಿಗೆ ತಿಳಿದು. 'ನಿನ್ನ ಮಗ ಚಳುವಳಿಗೆ ಹೋಗುತ್ತಾನೆ, ಅವನಿಗೆ ಬುದ್ಧಿ ಹೇಳು' ಎಂದು ಪೊಲೀಸ್ ಅಧಿಕಾರಿ ಇವರ ತಂದೆಗೆ ತಿಳಿಸಿದಾಗ, ಆ ಪೊಲೀಸ್ ಅಧಿಕಾರಿಯ ಮನೆಗೆ ಹಾಲು ಹಾಕುವುದನ್ನು ಬಿಟ್ಟರೇ ಹೊರತು ಮಗನಿಗೆ ಚಳುವಳಿ ಬಿಡು ಎಂದು ಹೇಳಲಿಲ್ಲ ಎಂಬ ವಿವರವನ್ನು ಹಾಗೂ ೧೯೪೫ರಲ್ಲಿ ಸುಭಾಸ್‌ಚಂದ್ರ ಬೋಸ್ ದಾವಣಗೆರಿಗೆ ಬಂದಾಗ 'ಆಜಾದ್ ಹಿಂದ್ ಸೈನಿಕ' ಪಡೆಯ ಸಭೆ ಯಶಸ್ವಿಯಾಗಲು

ಅವರ ಶ್ರಮಿಸಿದರುವುದನ್ನು ರಾಣೆಬೆನ್ನೂರಿನ ಚಳುವಳಿಗಾರರಿಂದ ಪಡೆದ ಮಾಹಿತಿಯು ಸಾಕ್ಷಿಭೂತವಾಗಿದೆ.

೧೦. **ಹನುಮಂತಗೌಡ ಬಸನಗೌಡ ಪಾಟೀಲ** : ಸಾ॥ ಬಡಮಲ್ಲಿ, ತಾ॥ ಬ್ಯಾಡಗಿ

ಇವರು "೧೯೪೨ರ ಚಲೇಜಾವ್ ಚಳುವಳಿಯಲ್ಲಿ ಕಂದಾಯ ವಸೂಲಿ ಕಛೇರಿಗಳ ದಫ್ತರಗಳನ್ನು ಸುಡುವ ಮತ್ತು ತಾರು ತಂತಿ ಕಡಿಯುವುದು ಇವರ ಮುಖ್ಯ ಕಾರ್ಯವಾಗಿತ್ತು. ಈ ಕಾರ್ಯಗಳಿಂದ ಎರಡು ವರ್ಷ ಜೈಲುವಾಸ ಅನುಭವಿಸಿದರು. ಇವರಿಗೆ ಇಪ್ಪತ್ತು ರೂ.ಗಳ ದಂಡ ವಿಧಿಸಲಾಗಿತ್ತು. ಇವರು ಹಂಸಬಾವಿಯ ಮೃತ್ಯುಂಜಯ ವಿದ್ಯಾಪೀಠದ ವಿದ್ಯಾರ್ಥಿಗಳಾಗಿದ್ದು ಇತರ ವಿದ್ಯಾರ್ಥಿಗಳನ್ನು ಚಳುವಳಿಯಲ್ಲಿ ಭಾಗವಹಿಸಲು ಪ್ರೇರೇಪಿಸುತ್ತಿದ್ದರು. ಇದಕ್ಕೆ ಇವರನ್ನು ಕಂಪನಿ ಸರಕಾರ ಮ್ಯಾಟ್ರಿಕ್ ಪರೀಕ್ಷೆ ಕೂಡಲು ಅವಕಾಶ ಮಾಡಿಕೊಡಲಿಲ್ಲ."[೬೬] ಹೀಗಾಗಿ ಶಿಕ್ಷಣ ಬಿಟ್ಟು ಟಿ.ಆರ್. ನೆಶ್ವಿ ಮತ್ತು ಕೆ.ಎಫ್. ಪಾಟೀಲರ ಪ್ರೇರಣೆಯಿಂದ ಚಳುವಳಿಗೆ ಧುಮುಕಿದ ಇವರು ಮಹದೇವಪ್ಪ ಮೈಲಾರ ಗುಂಪಿನಲ್ಲಿ ಗುರುತಿಸಿಕೊಂಡು ಹಲವು ಭೂಗತ ಕಾರ್ಯಗಳನ್ನು ಮಾಡಿರುವುದನ್ನು ಗಮನಿಸಲಾಗಿದೆ.

೧೧. **ಮಾನಪ್ಪ ತಿರುಕಪ್ಪ ಬಡಗೇರ** : ಸಾ॥ ಹೊಸರಿತ್ತಿ, ತಾ॥ ಹಾವೇರಿ

ಇವರು ಮೈಲಾರ ಮಹದೇವಪ್ಪ ನಡೆಸುತ್ತಿದ್ದ ಆಶ್ರಮದಲ್ಲಿ ಖಾದಿ ತಯಾರಿಕೆಗೆ ನೆರವಾಗುವ ಉದ್ಯೋಗದಲ್ಲಿದ್ದವರು. ತಮ್ಮ ಮನೆಯನ್ನೇ ಕಾಂಗ್ರೆಸ್ ಆಫೀಸಿಗೆ ಬಿಟ್ಟುಕೊಟ್ಟರು. ನಂತರದಲ್ಲಿ ಸರಕಾರ ಆ ಮನೆಯನ್ನು ವಶಪಡಿಸಿಕೊಂಡಿತ್ತು. "೧೯೩೧–೩೨ರಲ್ಲಿ ಕರಬಂದ ಚಳುವಳಿಯಲ್ಲಿ ಮಹದೇವಪ್ಪ ಪ್ರತಿ ದಿನ ನಾಲ್ಕು ನಾಲ್ಕು ಜನರ ತಂಡ ಮಾಡಿ ವಿಧಾಯಕ ಕಾರ್ಯಗಳಿಗೆ ಕಳುಹಿಸುತ್ತಿದ್ದಾಗ ತಮಗೂ ಚಳುವಳಿಗೆ ಕಳುಹಿಸುವಂತೆ ಕೇಳಿಕೊಂಡರು. ಇವರ ಬೇಡಿಕೆಯಂತೆ ೧೯೩೨ರ ಜನವರಿ ೩೦ರಂದು ಮಹದೇವಪ್ಪನೊಂದಿಗೆ ಹೊಸರಿತ್ತಿ ಜಾತ್ರೆಯಲ್ಲಿ ಕರಬಂಧದ ಘೋಷಣೆಗಳನ್ನು ಕೂಗಿದ್ದರಿಂದ ಪೋಲೀಸರಿಂದ ಬಂಧನಕ್ಕೊಳಗಾಗಿ ಆರು ತಿಂಗಳ ಶಿಕ್ಷೆ ಅನುಭವಿಸಿದ ಬಗ್ಗೆ ಹಾಗೂ ಮಹದೇವಪ್ಪನೊಂದಿಗೆ ಜೈಲುವಾಸ ಅನುಭವಿಸಿ ಬಂದ ಮೇಲೆ ಅವರ ತಂಡದ ಸದಸ್ಯರಾಗಿ ಭೂಗತ ಚಟುವಟಿಕೆಗಳಲ್ಲಿ ಭಾಗಿಯಾದ ಬಗ್ಗೆ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಹೇಳಿಕೆಯಿಂದ ತಿಳಿಯುತ್ತದೆ.

೧೨. **ಚನ್ನಬಸಯ್ಯ ವೀ ಸೂಳಿಕೇರಿಮಠ** : ಜನನ; ೧೯೧೬, ಸಾ॥ ಬ್ಯಾಡಗಿ

ಹಂಸಬಾವಿಯ ಹೈಸ್ಕೂಲಿನಲ್ಲಿರುವಾಗ "೧೯೩೦ರಲ್ಲಿ ರಾಷ್ಟ್ರೀಯ ಭಾವನೆಯಿಂದ ಪ್ರೇರಿತರಾಗಿ, ಹಂಸಬಾವಿಯ ಶಾಲಾ ಮಿತ್ರರೊಂದಿಗೆ ಹುಬ್ಬಳ್ಳಿಗೆ ಕಾಲ್ನಡಿಗೆಯ ಪ್ರವಾಸ ಮಾಡಿ ಜವಾಹರಲಾಲ್ ನೆಹರೂರವರ ಭಾಷಣದಿಂದ ಸ್ಫೂರ್ತಿಗೊಂಡು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಲು ಸಂಕಲ್ಪಿಸಿದರು.

**ಕಾರ್ಯ ಪ್ರವೃತ್ತರಾದದ್ದು** : '೧೯೩೨ರಲ್ಲಿ ಹಂಸಬಾವಿ ಹೈಸ್ಕೂಲು ವಿದ್ಯಾರ್ಥಿಗಳು ನಡೆಸುತ್ತಿದ್ದ ಕಾಯ್ದೆ ಭಂಗ ಆಂದೋಲನದಲ್ಲಿ ಧುಮುಕಿ ಪ್ರಭಾತ ಫೇರಿ, ಸೆರೆ ಸೇಂದಿ ಅಂಗಡಿಗಳ

ಪಿಕೆಟಿಂಗ್, ವಿದೇಶಿ ವಸ್ತ್ರಗಳ ದಹನ, ಸೇಂದಿ ಗಿಡಗಳನ್ನು ಕಡಿಯುವುದು ಹೀಗೆ ಮೊದಲಾದ ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಅಂದಿನ ಕಾಂಗ್ರೆಸ್ ಮುಖಂಡರಾದ ವೀರನಗೌಡ ಪಾಟೀಲ್, ಜಿ.ವಿ. ಹಳ್ಳಿಕೇರಿ, ಕೆ.ಎಫ್. ಪಾಟೀಲ್, ಟಿ.ಆರ್. ನೆಶ್ವಿ, ವಿ.ಟಿ. ಮಾಗಡಿ, ಲಿಂಗರಾಜ ಮುದ್ದಣವರ ಇವರ ನೇತೃತ್ವದಲ್ಲಿ ಕಾರ್ಯಪ್ರವೃತ್ತರಾದರು."[೬] ೧೯೩೨ರಲ್ಲಿ ಅರಣ್ಯ ಸತ್ಯಾಗ್ರಹದಲ್ಲಿ ತೊಡಗಿ ಸೇಂದಿ ಗಿಡಗಳನ್ನು ಕಡಿದಿದ್ದರ ಪರಿಣಾಮವಾಗಿ ೧೯೩೨ರ ಡಿಸೆಂಬರ್ ತಿಂಗಳಲ್ಲಿ ಹಂಸಬಾವಿಯ ಹೈಸ್ಕೂಲ್ ವಿದ್ಯಾರ್ಥಿಗಳೊಂದಿಗೆ ಇವರನ್ನೂ ದಸ್ತಗಿರಿ ಮಾಡಿದರು. ಹಿರೇಕೆರೂರು ತಾಲೂಕು ಸಬ್‌ಜೈಲಿನಲ್ಲಿ ಎರಡು ತಿಂಗಳು 'ಅಂಡರ್ ಟ್ರೈಲ್ ಕೈದಿ'ಯನ್ನಾಗಿ ಇಡಲಾಯಿತು' ವಿಚಾರಣೆಯಾಗಿ ಹದಿನೈದು ಘಟಗಿ ಶಿಕ್ಷೆ ವಿಧಿಸಿದ ಬಗ್ಗೆ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ಹೇಳಿಕೆಯಿಂದ ತಿಳಿಯುತ್ತದೆ.

**ಭೂಗತ ಕಾರ್ಯದಲ್ಲಿ ಜೊತೆಗಾರರು** : "೧೯೪೨ರಲ್ಲಿ ಹಿರೇಕೆರೂರು, ರಾಣೆಬೆನ್ನೂರು, ಬ್ಯಾಡಗಿ, ಹಾವೇರಿ ತಾಲೂಕುಗಳನ್ನೊಳಗೊಂಡ ಕಾರ್ಯಕ್ಷೇತ್ರವನ್ನು ನಿರ್ಮಿಸಿಕೊಂಡು ಅಹೋರಾತ್ರಿ ಚಳುವಳಿಯಲ್ಲಿ ದುಡಿದರು. ಇವರನ್ನು ಹಿಡಿದುಕೊಟ್ಟವರಿಗೆ ೫೦೦ ರೂ. ಬಹುಮಾನವನ್ನು ಸರಕಾರ ಸಾರಿದ್ದುಂಟು. ಆಗ ಇವರ ಸಹೋದ್ಯೋಗಿ ಹೋರಾಟಗಾರರಾಗಿ ಹುತಾತ್ಮ ಮೆಣಸಿನಾಳ ತಿಮ್ಮನಗೌಡರು, ಅನ್ನದಾನಿ ಮಲ್ಲೇಶ್ವರ ತೊಗರ್ಶಿ, ಸಂಗೂರ ಕರಿಯಪ್ಪ, ಉಜನೆಪ್ಪ ನಾಗಪ್ಪ ದೀವಿಗಿಹಳ್ಳಿ, ಶಿವನಗೌಡ ಪಾಟೀಲ ಸುತ್ತಕೋಟಿ, ವೀರಭದ್ರಪ್ಪ ನ್ಯಾಮತಿ ಮಾಸೂರು, ಚನ್ನಪ್ಪ ದೇವರಳ್ಳಿ ನ್ಯಾಮತಿ, ಅಡಿವೆಪ್ಪ ಅಂತರವಳ್ಳಿ, ಸಿದ್ಧಲಿಂಗಯ್ಯ ಕಜ್ಜರಿ, ಮಹಾರುದ್ರಪ್ಪ ಉದಗಟ್ಟಿ ರಾಣೆಬೆನ್ನೂರು ಮೊದಲಾದವರು ಇದ್ದರು. ಇವರೊಂದಿಗೆ ಭೂಗತ ಕಾರ್ಯದಲ್ಲಿ ಭಾಗಿಯಾದ ವಿವರವನ್ನು ಪುಟ್ಟಪ್ಪ ಹರಬಿ ವಿವರಿಸುತ್ತಾರೆ.

"೧೯೪೨ನೇ ಡಿಸೆಂಬರ್, ೧೯೪೩ರ ಜನವರಿ ಮಧ್ಯದಲ್ಲಿ ಇವರನ್ನು ದಸ್ತಗಿರಿಯಾಗಿ ಮಾಡಲ್ಪಟ್ಟು ಮೂರು ದಿನಗಳ ಲಾಕೌಟಿನ ನಂತರ ಡಿಸ್ಟ್ರಿಕ್ಟ್ ಜೈಲಿನಲ್ಲಿ ಎರಡು ತಿಂಗಳು ಡೆಟಿನ್ಯೂ ಆಗಿ ಇಡಲ್ಪಟ್ಟರು. ನಂತರ ಬೆಳಗಾವಿಗೆ ಕರೆದೊಯ್ದರು. ೪ ತಿಂಗಳ ಡೆಟಿನ್ಯೂ ಅಂತ ಇಟ್ಟರು. ನಂತರ ವಿಚಾರಣೆಯಾಗಿ ರಾಣೆಬೆನ್ನೂರು ಮೇಲ್ ಬ್ಯಾಗ್, ಪೊಲೀಸ್ ಬಂದೂಕು, ಹಾಗು ಮೆಡ್ಲೇರಿ ರನ್ನರನಿಂದ ಪೋಸ್ಟ್‌ಬ್ಯಾಗ್, ಅಪಹರಿಸಿದ ಆಪಾದನೆಗೆ ಸಂಬಂಧಿಸಿದಂತೆ ರಾಣೆಬೆನ್ನೂರಿಗೆ ಕರೆತಂದು, ಅಲ್ಲಿಯ ಸಬ್‌ಜೈಲಿನಲ್ಲಿ ಸುಮಾರು ೫ ತಿಂಗಳ ಅಂಡರ್ ಟ್ರೈಲ್ ಕೈದಿಯಾಗಿದ್ದು, ಮುಂದೆ ಇವರಿಗೆ ೬ ತಿಂಗಳು ಶಿಕ್ಷೆ ೨೦ ರೂ. ದಂಡ ಅಥವಾ ೧೫ ದಿನಗಳ ಶಿಕ್ಷೆ ವಿಧಿಸಿ ವಿಸಾಪುರ ಜೈಲಿಗೆ ಕಳುಹಿಸಿದರು. ದಿನಾಂಕ ೧೫.೪.೧೯೪೪ ರಂದು ಬಿಡುಗಡೆ ಮಾಡಿದರು."[೭] ಈ ವಿಷಯಕ್ಕೆ ಸಹಮತ ವ್ಯಕ್ತಪಡಿಸುವವರು ಬ್ಯಾಡಗಿಯ ಚಳುವಳಿಗಾರ ಷಡಕ್ಷರಪ್ಪ ಮಹಾರಾಜಪೇಟೆ.

೧೩. **ಲಿಂಗರಾಜ ಮುದ್ದಣವರ** : ಜನನ: ೧೯೦೫, ಸಾ॥ ಕದರಮುಂಡಲಗಿ, ತಾ॥ ಬ್ಯಾಡಗಿ

**ಪ್ರೇರಣೆ:** 'ರಾಣೆಬೆನ್ನೂರಿನ ಕಛೇರಿಯಲ್ಲಿ ಬಾಂಡ್ ರೈಟರ್‌ರಾಗಿದ್ದ ಭೀಮಾಚಾರ್ಯ ಕದರಮುಂಡಲಗಿ ಎಂಬುವರು ವಾರಕ್ಕೊಮ್ಮೆ ಕದರಮುಂಡಲಗಿ ಮಾರುತಿ ದೇವರ ದರ್ಶನಕ್ಕೆ

ಹೋಗುತ್ತಿದ್ದರು. ದೇವಸ್ಥಾನದ ಹತ್ತಿರದಲ್ಲಿಯೇ ಹೆಂಡದ ಅಂಗಡಿಯಿದ್ದು, ಊರಿನವರು, ಸುತ್ತಮುತ್ತಲಿನ ಗ್ರಾಮದವರು ನಿತ್ಯ ಕುಡಿಯಲು ಬರುತ್ತಿದ್ದರು. ಅವರೆಲ್ಲರಿಗೆ ಕುಡಿಯುವುದು ಬೇಡವೆಂದು ಹೇಳುವುದೇ ಇವರ ಚಳುವಳಿಯಾಗಿತ್ತು."[೭೦] ಕನ್ನಡ ಶಾಲೆಯಲ್ಲಿದ್ದ ಲಿಂಗರಾಜ ಮುದ್ದಣವರಿಗೆ ಅದು ಗೊಂದಲ ಹಾಕುವ ಆಟದಂತೆ ಭಾಸವಾಗುತ್ತಿತ್ತು. ನಂತರದಲ್ಲಿ ಆ ಘಟನೆಯಲ್ಲಿ ಲಿಂಗರಾಜ ಮುದ್ದಣವರ ಮತ್ತು ಅವರ ಸಹಪಾಠಿಗಳು ಸೇರತೊಡಗಿದರು, ಈ ಘಟನೆಯೇ ಇವರಿಗೆ ಚಳುವಳಿಗೆ ಧುಮುಕಲು ಪ್ರೇರಣೆಯಾಯಿತು.

**ಶಿಕ್ಷಣ:** "ಲಿಂಗರಾಜ ಮುದ್ದಣವರ ಶಿಕ್ಷಣಕ್ಕಾಗಿ ಬ್ಯಾಡಗಿಗೆ ಹೋದರು. ಅಲ್ಲಿ ದಾವಣಗೆರೆಯ ಪ್ರಾಣಿದಯಾ ಸಂಘದವರು ಪ್ರಚಾರಕ್ಕಾಗಿ ಬ್ಯಾಡಗಿಗೆ ಬರುತ್ತಿದ್ದರು. ಅವರ ಅಹಿಂಸಾ ನೀತಿ, ಖಾದಿ ಪ್ರಚಾರದಲ್ಲಿ ಭಾಗವಹಿಸಿದವರು. ಈಗಾಗಲೇ ಕದರಮಂಡಲಿಗೆ ಹೆಂಡದ ಅಂಗಡಿಯಲ್ಲಿ ಬಡಿಸಿಕೊಂಡವನಿಗೆ(೧೯೧೯) ಬ್ಯಾಡಗಿಯಲ್ಲಿಯ ಪ್ರಕರಣದಿಂದ ರಾಷ್ಟ್ರೀಯ ಭಾವನೆ ಬಲವಾಯಿತು. ಮುಂದೆ ೧೯೨೭ರಲ್ಲಿ ಧಾರವಾಡದಲ್ಲಿ ಹೈಸ್ಕೂಲ್‌ನಲ್ಲಿ ಇರುವಾಗ ಎನ್.ಬಿ. ಹಿರೇಮಠ, ಗುದ್ಲೆಪ್ಪ ಹಳ್ಳಿಕೇರಿ, ವಿ.ಟಿ. ಮಾಗಡಿ, ಸಿದ್ಧಲಿಂಗಯ್ಯ ಕಜ್ಜರಿಸ್ವಾಮಿ ಮುಂತಾದವರೊಂದಿಗೆ 'ಭಾರತೀಯ ತರುಣ ಸಂಘ' ಸ್ಥಾಪಿಸಿದವರಲ್ಲಿ ಇವರೂ ಒಬ್ಬರು.

**ಸೇಂದಿ, ಅರಣ್ಯ ಸತ್ಯಾಗ್ರಹ** : ೧೯೩೦ರಲ್ಲಿ ಕಾಯ್ದೆ ಭಂಗ ಚಳುವಳಿಯಲ್ಲಿ ಭಾಗವಹಿಸಿ ಡಾ. ಕಬ್ಬೂರ ಅವರ ನೇತೃತ್ವದಲ್ಲಿ ಧಾರವಾಡದ ವಿದ್ಯಾರ್ಥಿಗಳೊಂದಿಗೆ ನರೇಂದ್ರ, ಗರಗ ಮುಂತಾದ ಗ್ರಾಮಗಳಲ್ಲಿ ಸೇಂದಿಗಿಡ ಕಡಿಯುವ, ಗೊಬ್ಬಿ ಒಡೆಯುವ ಕೆಲಸ ಮಾಡಿದರು. ರಾಣೆಬೆನ್ನೂರು, ಹಿರೇಕೆರೂರು ತಾಲೂಕುಗಳಲ್ಲಿ ಸಂಚರಿಸಿ ಜಂಗಲ್ ಸತ್ಯಾಗ್ರಹಕ್ಕಾಗಿ ಯುವಕರನ್ನು ಸಂಘಟಿಸಿದರು. ಆಗ ಬಂಧಿಸಲ್ಪಟ್ಟು, ನಂತರದಲ್ಲಿ ಬಿಡುಗಡೆ ಹೊಂದಿದರು."[೭೧]

ದಾವಣಗೆರೆಯಿಂದ ಬುಲೆಟಿನ್ನುಗಳನ್ನು (ಕರಪತ್ರ) ಹೊರಡಿಸಿ, ಜನಜಾಗೃತಿ ಮಾಡುತ್ತಿದ್ದರು. ಈ ಕಾಲದಲ್ಲಿ ಸರಕಾರ ಇವರ ಮೇಲೆ ವಾರಂಟ್ ಹೊರಡಿಸಿ ಬಂಧಿಸಲು ನೆರವಾದವರಿಗೆ ೫೦೦ ರೂ.ಗಳ ಇನಾಮು ಸಾರಿತು. ಇವರ ಆಸ್ತಿಯನ್ನೆಲ್ಲ ಸರಕಾರ ವಶಪಡಿಸಿಕೊಂಡು, ಮನೆ ಸೀಲ್ ಮಾಡಿದರು. ಮನೆಯವರನ್ನೆಲ್ಲ ಹೊರಹಾಕಿ ನಿರ್ಗತಿಕರನ್ನಾಗಿ ಮಾಡಿತು. ಬಾಗಲಕೋಟೆ ರಾಜಕೀಯ ಪರಿಷತ್ತಿಗೆ ಹೋಗುತ್ತಿರುವಾಗ ಗದಗ ರೇಲ್ವೆ ಸ್ಟೇಷನ್‌ನಲ್ಲಿ ಪೋಲೀಸರು ಇವರನ್ನು ಬಂಧಿಸಿದರು. ರಾಣೆಬೆನ್ನೂರಿನ ಫಸ್ಟ್ ಕ್ಲಾಸ್ ಮ್ಯಾಜಿಸ್ಟ್ರೇಟರು ಬುಲೆಟಿನ ಪ್ರಕರಣಕ್ಕೆ ಹಾಗೂ ಬ್ರಿಟಿಷ್ ವಿರೋಧಿ ಉಗ್ರ ಭಾಷಣಗಳಿಗಾಗಿ ೧೮ ತಿಂಗಳ ಕಠಿಣ ಶಿಕ್ಷೆ, ೭೫ ರೂ ದಂಡ ವಿಧಿಸಿದರು. ಇವರು ಸ್ವಾತಂತ್ರ್ಯ ಲಭ್ಯವಾಗುವವರೆಗೂ ವಿವಾಹವಾಗಬಾರದೆಂದು ಪಣತೊಟ್ಟಿದ್ದರು.

**ಚಲೇಜಾವ್ ಚಳುವಳಿ ಮತ್ತು ಬಂಧನ** : ೧೯೪೨ರ ಚಲೇಜಾವ್ ಚಳುವಳಿಯಲ್ಲಿ ಆಗಸ್ಟ್ ೧೭ರಂದು ಬ್ಯಾಡಗಿಯಲ್ಲಿ ಪ್ರಥಮ ಮೆರವಣಿಗೆ ಹೊರಡಿಸಿ, ಬ್ರಿಟಿಷರ ವಿರುದ್ಧ ಭಾಷಣ ಮಾಡಿ, ಇವರ ಹಿಂದೆ ಬ್ಯಾಡಗಿಯಿಂದ ನೂರಾರು ತರುಣರು ಸತ್ಯಾಗ್ರಹದಲ್ಲಿ ಭಾಗವಹಿಸಿ

ಕಾರಗೃಹ ಸೇರಿದರು. ಇವರ ಬಂಧನವಾಗಿ ಧಾರವಾಡ ಸೆಕೆಂಡ್ ಡಿವಿಜನಲ್ ಮ್ಯಾಜಿಸ್ಟ್ರೇಟರು ಇವರಿಗೆ ೬ ತಿಂಗಳ ಕಠಿಣ ಶಿಕ್ಷೆ ವಿಧಿಸಿದರು. ಬೆಳಗಾವಿಯ ಕಿಲ್ಲಾ ಜೈಲಿಗೆ ಕಳುಹಿಸಿದರು. ಅಲ್ಲಿ ಎದ್ದ ದಂಗೆಗೆ ಇವರೆ ಕಾರಣರೆಂದು ಪೋಲೀಸರು ಇವರನ್ನು ಬಡಿದರು. ಕೈ ಕಾಲುಗಳಿಗೆ ಬೇಡಿ ಜಡಿದು, ಬೆಳಗಾವಿ ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. ಬಿಡುಗಡೆಯ ನಂತರ ಗುಪ್ತ ಚಟುವಟಿಕೆಗಳನ್ನು ನಡೆಸುತ್ತಿದ್ದಾರೆ ಎಂದು ಪುನಃ ೧೯೪೩ರಲ್ಲಿ ಕದರಮುಂಡಲಗಿಯಲ್ಲಿ ಬಂಧಿಸಿದರು."[೨] ಆದರೆ ಪುರಾವೆ ಇಲ್ಲವೆಂದು ಬಿಡುಗಡೆಯಾದರು. ಷಡಕ್ಷರಪ್ಪ ಮಹಾರಾಜಪೇಟೆಯವರ ಪ್ರಕಾರ ಇವರು ತಪ್ಪಿಲ್ಲದಿದ್ದರೂ ಪೋಲೀಸರಿಂದ ಹೆಚ್ಚು ಹಿಂಸೆಗೆ ಒಳಗಾದವರು.

**೧೪. ಚನ್ನಬಸಪ್ಪ ಶೇಖರಪ್ಪ ಯರೇಶೀಮಿ** : ಜನನ: ೧೯೧೪, ಸಾ॥ ಹಾವೇರಿ

"೧೯೨೮ರಿಂದಲೇ ಕಾಂಗ್ರೆಸ್‌ನ ಸ್ವಯಂಸೇವಕನಾಗಿ ಪ್ರಭಾತ ಫೇರಿ, ಸೇಂದಿ, ಸೆರೆ ಅಂಗಡಿಗಳ ಮುಂದೆ ಪಿಕೆಟಿಂಗ್, ಜಂಗಲ್ ಸತ್ಯಾಗ್ರಹಗಳಲ್ಲಿ ಭಾಗವಹಿಸಿದ್ದರು. ೧೯೩೧ರಲ್ಲಿ ಮಲ್ಲಪ್ಪ ಧನಶೆಟ್ಟಿ ಸೊಲ್ಲಾಪುರ, ಇವರ ಫಾಶಿಯ ದಿನ ಇಡೀ ಹಾವೇರಿ ನಗರದ ಜನತೆ ಹರತಾಳ ಆಚರಿಸಿದರು. ಆ ಕಾಲಕ್ಕೆ ಪ್ರಭಾತ ಫೇರಿ ಹೊರಡಿಸಿದರು. ಸಾಯಂಕಾಲ ಹುಚ್ಚರಾವ್ ವಕೀಲರು, ಪರಮಣ್ಣ ಹೊಸಮನಿ, ಚನ್ನಬಸಯ್ಯ ಹಾಲಯ್ಯನವರಮಠ, ಗೋವಿಂದಾಚಾರ್ಯ ಅಗ್ನಿಹೋತ್ರಿ ಇವರೆಲ್ಲರ ನಾಯಕತ್ವದಲ್ಲಿ ಸಭೆ ನಡೆಯಿತು. ಸುಮಾರು ೨೦ ಜನ ಚಳುವಳಿಗಾರರನ್ನು ಬ್ರಿಟಿಷ್ ಸರಕಾರ ಸೆರೆಹಿಡಿಯಿತು. ಮೆರವಣಿಗೆ ಚದುರಿಸಲು ಲಾಠೀ ಚಾರ್ಜ್ ಆಯಿತು. ಚನ್ನಬಸಪ್ಪ ಶೇಖರಪ್ಪ ಯರೇಶೀಮಿಯನ್ನು ಬಂಧಿಸಿದರು. ಆದರೆ ಬಾಲಕನೆಂದು ಎಂದು ಬಿಡುಗಡೆ ಮಾಡಿದರು.

೧೯೩೧ರಲ್ಲಿ ರಾಣೆಬೆನ್ನೂರನಲ್ಲಿ ಪ್ರಭಾತ ಫೇರಿ ಹಾಗೂ ಧ್ವಜವಂದನೆ ಮತ್ತು ಬುಲೆಟಿನ ಹಂಚುವಾಗ ಇವರನ್ನು ಮತ್ತೊಮ್ಮೆ ಬಂಧಿಸಿ ಚೆನ್ನಾಗಿ ಹೊಡೆದು ಮಾರನೇ ದಿನ ಬಿಟ್ಟರು. ನಂತರದಲ್ಲಿ ಮೈಲಾರ ಮಹದೇವಪ್ಪನ ಆದೇಶದಂತೆ ಹಿರೇಕೆರೂರಲ್ಲಿ ರೈತ ಪರಿಷತ್ ಸಂಘಟಿಸಲು ವಿಠಲ ನಾರಾಯಣ ನವಲೆರನ್ನು ಜೊತೆ ಮಾಡಿ ಕಳುಹಿಸಲಾಯಿತು.

ಹಿರೇಕೆರೂರು ಭಾಗದಲ್ಲಿ ರೈತ ಪರಿಷತ್ ಸೇರಿಸುವುದಕ್ಕಾಗಿ, ಕರ ನೀಡಬಾರದೆಂದು ಘೋಷಣೆ ಕೂಗಿದ್ದಕ್ಕಾಗಿ ಮತ್ತು ಧ್ವಜವಂದನೆ ಮಾಡಿದ್ದಕ್ಕೆ ೭.೧೨.೧೯೩೨ರಲ್ಲಿ ಇವರನ್ನು ಬಂಧಿಸಿ ಒಂದು ವರ್ಷ ಶಿಕ್ಷೆ ಹಾಗೂ ೧೦೦ ರೂ.ಗಳ ದಂಡ ವಿಧಿಸಿ ಹಿಂಡಲಗಾ ಜೈಲಿಗೆ ಕಳುಹಿಸಲಾಯಿತು."[೬] ಇವರು ಹಿರೇಕೆರೂರು ಭಾಗದಲ್ಲಿಯ ಕರ ನಿರಾಕರಣ ಚಳುವಳಿ ಸಮಯದಲ್ಲಿ ರೈತ ಸಂಘಟನೆಯಲ್ಲಿ ಪ್ರಮುಖ ಪಾತ್ರವಹಿಸಿರುವುದನ್ನು ಗುರುತಿಸಲಾಗಿದೆ.

೧.೪.೧೯೪೩ರಂದು ಮಹದೇವಪ್ಪ ಮೈಲಾರ, ವೀರಯ್ಯ ಹಿರೇಮಠ ಮತ್ತು ತಿರುಕಪ್ಪ ಮಡಿವಾಳರ ಹೊಸರಿತ್ತಿಯ ಹಫ್ತಾ ಲೂಟಿ ಪ್ರಕರಣದಲ್ಲಿ ಪೋಲೀಸರ ಗುಂಡಿಗೆ ಬಲಿಯಾದರು. ಆ ಹುತಾತ್ಮರನ್ನು ಹಾವೇರಿಯ ಆಸ್ಪತ್ರೆಗೆ ತಂದಾಗ ಅವರನ್ನು ಕಣ್ಣಾರೆ ಕಂಡವರು. ಅವರ

ಪಂಚನಾಮೆ ಸಮಯಕ್ಕೆ ಆ ಹುತಾತ್ಮರ ಫೋಟೋವನ್ನು ಇವರೇ ತೆಗೆದರು. ನಂತರ ಅವರನ್ನು ಒಂದೇ ಕುಣಿಯಲ್ಲಿ(ಗುಂಡಿಯಲ್ಲಿ) ಯಲ್ಲಾಪುರದ ಹಳ್ಳದಲ್ಲಿ ದಫನ ಮಾಡುವವರೆಗೂ ಇದ್ದು ಬಂದ ವಿವರವನ್ನು ದೇವೇಂದ್ರಪ್ಪ ವಿಭೂತಿ ತಿಳಿಸುತ್ತಾರೆ.

೧೫. ಬಸಪ್ಪಾ ಬ. ಇಂಗಳಗಿ : ಜನನ; ೧೯೧೬, ಸಾ॥ ಹಾವೇರಿ

"೧೯೩೦ರಲ್ಲಿ ಕಾಂಗ್ರೆಸ್ ದೀಕ್ಷೆ ಪಡೆದು ಶಾಲೆಗೆ ಗಾಂಧಿ ಫೋಟೋ ಹಾಕಿಕೊಂಡು ಹೋಗಿದ್ದಕ್ಕೆ ಹೆಡ್ ಮಾಸ್ತರರು ಇವರನ್ನು ಶಾಲೆಯಿಂದ ಹೊರಗೆ ಕಳುಹಿಸಿದರು. ಹಾವೇರಿಯ ವಿ.ಜಿ.ಅಂಗಡಿ ಮುಖಾಂತರ ಸೇವಾದಳವನ್ನು ಸೇರಿದರು. ಸೇವಾದಳದ ಆದೇಶದಂತೆ ಬೆಳಗ್ಗೆ ಪ್ರಭಾತ ಫೇರಿ, ಅಲ್ಲಲ್ಲಿ ಮೀಟಿಂಗ್ ನಡೆಸುವುದು, ಬುಲೆಟಿನ ಹಂಚುವುದು, ಈಚಲಗಿಡ ಕಡಿಯುವುದು, ಸೆರೆ, ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ಜಂಗಲ್ ಸತ್ಯಾಗ್ರಹ, ಉಪ್ಪಿನ ಸತ್ಯಾಗ್ರಹ ಹೀಗೆ ಮುಂತಾದ ಚಟುವಟಿಕೆಗಳಲ್ಲಿ ಭಾಗವಹಿಸಿದ್ದವರು.

ಇವರು ಚಿಕ್ಕ ಹುಡುಗರ ಗುಂಪು ಕಟ್ಟಿಕೊಂಡು ವಾನರ ಸೇನಾ ಸಂಘಟನೆ ಮಾಡಿದರು. ಅದರ ಮೂಲಕ ವಿಧಾಯಕ ಕಾರ್ಯಗಳನ್ನು ಮಾಡತೊಡಗಿದರು. ನಂತರದಲ್ಲಿ ಹೊಸರಿತ್ತಿಯ ಗಾಂಧಿ ಆಶ್ರಮ ಸೇರಿ ಆ ಭಾಗದ ಸುತ್ತಮುತ್ತಲಿನ ಗ್ರಾಮಗಳಲ್ಲಿ ನೂಲು ತೆಗೆಯುವುದು, ನೇಯುವುದು, ಖಾದಿ ತೊಡುವ ಕುರಿತು ಪ್ರಚಾರ ಮಾಡತೊಡಗಿದರು. ಶಿಗ್ಗಾವಿಯಲ್ಲಿ ರಾಜನಿಷ್ಠೆ ಸಭೆ ಬಹಿಷ್ಕಾರಕ್ಕಾಗಿ ಕರಿ ನಿಶಾನೆ ಹಿಡಿದು ಪ್ರದರ್ಶನ ನಡೆಸಿದ್ದಕ್ಕಾಗಿ ಶಿಗ್ಗಾವಿ ತಾಲೂಕು ಕಛೇರಿಯಲ್ಲಿ ಎರಡು ವಾರ ಬಂಧಿಸಿ ನಂತರ ಬಿಡುಗಡೆ ಮಾಡಿದರು"[೬೪] ಎಂಬುದನ್ನು ಸೂರ್ಯನಾಥ ಕಾಮತ್‌ರು ಉಲ್ಲೇಖಿಸಿದ್ದಾರೆ. ಹೀಗೆ ಶಿಗ್ಗಾವಿ ಭಾಗದಲ್ಲಿ ನಡೆದ ರಾಜನಿಷ್ಠೆ ಸಭೆಯನ್ನು ವಿಫಲಗೊಳಿಸುವಲ್ಲಿ ಇವರು ನಿರ್ವಹಿಸಿದ ಪಾತ್ರವನ್ನು ಅವರ ಸಂಘಟನೆ ಹಾಗೂ ಕಾರ್ಯಗಳಿಂದ ಗುರುತಿಸಲಾಗಿದೆ.

"ಸವಣೂರಿನಲ್ಲಿ ಜನಜಾಗೃತಿ ಮೂಡಿಸುವ ಸಲುವಾಗಿ ಗಾಂಧೀ ಟೊಪ್ಪಿಗೆ ಧರಿಸಿಕೊಂಡು ಹೋದಾಗ ತಡೆದ ಪೊಲೀಸರು ಗಾಂಧಿ ಟೊಪ್ಪಿಗೆ ತೆಗೆಯಲು ಹೇಳಿದರು ಇವರು ನಿರಾಕರಿಸಿದ್ದಕ್ಕೆ ಅಲ್ಲಿಯ ಪೊಲೀಸರು ಇವರನ್ನು ಒಂದು ವಾರ ಜೈಲಿಗೆ ಕಳುಸಿದರು. ಶಿಗ್ಗಾವಿಯಿಂದ ಬಿಡುಗಡೆಯಾದ ನಂತರ ಹಾವೇರಿಯಲ್ಲಿ ವ್ಯಾಯಾಮ ಶಾಲೆ ಪ್ರಾರಂಭಿಸಿದರು. ವ್ಯಾಯಾಮ ಶಾಲೆ ತೆರೆಯುವ ಉದ್ದೇಶ ತರುಣರನ್ನು ಬಲಪಡಿಸಿದರೆ ದೇಶ ಬಲವಾಗುತ್ತೆ ಎಂಬ ನಂಬಿಕೆ. ಈ ವ್ಯಾಯಾಮ ಶಾಲೆಯಲ್ಲಿ ಯುವಕರಿಗೆ ತರಬೇತಿ ಕೊಡಲಾಗುತ್ತಿತ್ತು. ಇದರೊಂದಿಗೆ 'ರೈತ ತರುಣ ಸಂಘ'ವನ್ನು ಸ್ಥಾಪಿಸಿ ರೈತರಲ್ಲಿ ದೇಶಾಭಿಮಾನದ ಜಾಗೃತಿ ಮೂಡಿಸಿದ ಇವರನ್ನು ೧೯೪೩ರ ಏಪ್ರಿಲ್‌ನಲ್ಲಿ ಬಂಧಿಸಲಾಯಿತು."[೬೫] ಇವರು ೨ ವರ್ಷ ಶಿಕ್ಷೆಯನ್ನು ಹಿಂಡಲಗಾ ಜೈಲಿನಲ್ಲಿ ಶಿಕ್ಷೆ ಅನುಭವಿಸಿದರು.

**೧೬. ಗುಡ್ಡೋ ಸುಬ್ಬಾಜಿ ಕುಲಕರ್ಣಿ** : ಸಾ॥ ಗುತ್ತಲ, ತಾ॥ ಹಾವೇರಿ

೧೯೩೦ರಲ್ಲಿ ಜಂಗಲ್ ಸತ್ಯಾಗ್ರಹದಲ್ಲಿ ಭಾಗವಹಿಸಿದ ಇವರು ಅಂಕೋಲದಲ್ಲಿ ಉಪ್ಪಿನ ಸತ್ಯಾಗ್ರಹ ಮಾಡಿದ್ದಕ್ಕಾಗಿ ಹೊನ್ನಾವರದಲ್ಲಿ ಒಂದು ತಿಂಗಳು ಜೈಲು ಶಿಕ್ಷೆ ಮತ್ತು ೨೫ ರೂ. ದಂಡದ ಶಿಕ್ಷೆ ಅನುಭವಿಸಿದರು.

“೧೯೩೧ರಲ್ಲಿ ಗುತ್ತಲದಲ್ಲಿ ಸೇವಾದಳ ಆರಂಭವಾದಾಗ ಅದರ ಸದಸ್ಯರಾದರು. ಹುಬ್ಬಳ್ಳಿಗೆ ನೆಹರೂ ಬಂದಾಗ, ಅಲ್ಲಿಯ ಪ್ರಶಸ್ತಿ ಸಮಾರಂಭದಲ್ಲಿ ಭಾಗಿಯಾಗಿ ಅವರಿಂದ ಪ್ರಶಸ್ತಿ ಪತ್ರ ಪಡೆದರು. ೧೯೩೨ರಲ್ಲಿ ಗುತ್ತಲದಲ್ಲಿ ‘ಗ್ರಾಮ ಸಂಘಟನಾ ಮಂಡಳಿ’ ಎಂಬ ಸಂಸ್ಥೆ ತೆರೆದು ಅದರ ಮೂಲಕ ಹಳ್ಳಿಗಳಲ್ಲಿ ವಿಧಾಯಕ ಕಾರ್ಯ ಆರಂಭಿಸಿದರು. ೧೯೪೨ರಲ್ಲಿ ಭೂಗತ ಚಟುವಟಿಕೆಯ ಆಪಾದನೆಯಲ್ಲಿ ಇವರಿಗೆ ಎರಡು ವರ್ಷ ಮೂರು ತಿಂಗಳು ಅಂಡರ್ ಟ್ರಾಯಲ್ ಎಂದು ಜೈಲಿನಲ್ಲಿಟ್ಟರು.”[೭೬] ನಂತರ ಪುರಾವೆ ಇಲ್ಲವೆಂದು ಇವರನ್ನು ಬಿಡುಗಡೆ ಮಾಡಲಾಯಿತು.

**೧೭. ಶಂಕರ ದೀಕ್ಷಿತ ಕರ್ಮಾಠ** : ಜನನ; ೧೯೦೩ ಸಾ॥ ಬಂಕಾಪುರ, ತಾ॥ ಶಿಗ್ಗಾವಿ

“ಶಿಕ್ಷಣಕ್ಕಾಗಿ ಬೆಳಗಾವಿದಲ್ಲಿರುವಾಗ ಬಾಲಗಂಗಾಧರ ತಿಲಕರ ಪ್ರಭಾವದಿಂದ ನಡೆಯುತ್ತಿದ್ದ ಶಿವಾಜಿ ಉತ್ಸವ ಮತ್ತು ಗಣೇಶ ಉತ್ಸವಗಳು, ಸ್ವದೇಶಿ ಚಳುವಳಿ ವ್ಯಾಖ್ಯಾನಗಳು ಮತ್ತು ಗಂಗಾಧರರಾವ್ ದೇಶಪಾಂಡೆ ಬ್ರಿಟಿಷರ ವಿರುದ್ಧ ನಡೆಸುತ್ತಿದ್ದ ಚಟುವಟಿಕೆಗಳು ಚಳುವಳಿಗೆ ಧುಮುಕಲು ಪ್ರೇರಣೆಯಾದವು.”[೭೭] ನಂತರದ ಶಿಕ್ಷಣವನ್ನು ಗದಗನಲ್ಲಿ ೬ನೇ ತರಗತಿಯಿಂದ ಆರಂಭಿಸಿದರು. ಅಲ್ಲಿಯ ಗುರುಗಳಾದ ಗೋಪಾಲರಾವ್ ಅಸುಂಡಿಯ ದೇಶಪ್ರೇಮದ ಮಾತುಗಳು, ರಾಷ್ಟ್ರನಾಯಕರ ಬಗ್ಗೆ ಅವರು ಹೇಳುವ ರೀತಿ ಇವರಲ್ಲಿ ದೇಶಪ್ರೇಮ ಮತ್ತಷ್ಟು ಗಟ್ಟಿಯಾಗುವಂತೆ ಮಾಡಿತು. ಗದಗದಲ್ಲಿರುವಾಗ ‘ರಾಜಹಂಸ’ ಪತ್ರಿಕೆಯಲ್ಲಿ ‘ಭಾರತದ ಸೂರ್ಯ ಅಸ್ತಂಗತನಾದನು!’ ಎಂಬ ಬರಹ ತಿಲಕರ ನಿಧನ ವಾರ್ತೆಯನ್ನು ತಿಳಿಸಿತು. ಗದಗದಲ್ಲಿಯ ‘ಪಂಚರ ಹೊಂಡ’ದ ಮೈದಾನದಲ್ಲಿ ಶ್ರೀನಿವಾಸ ಕೌಜಲಗಿ, ಗಂಗಾಧರರಾವ್ ದೇಶಪಾಂಡೆ, ಕಡಪಾ ರಾಘವೇಂದ್ರರಾಯರು ಇನ್ನೂ ಕೆಲ ನಾಯಕರ ಭಾಷಣ ಕೇಳಿ ಶಿಕ್ಷಣವನ್ನು ಬಿಟ್ಟು ತಮ್ಮ ಊರು ಬಂಕಾಪುರಕ್ಕೆ ಬಂದರು. ಮನೆಯಲ್ಲಿ ಶಾಲೆಗೆ ಹೋಗಲು ಒತ್ತಾಯಪಡಿಸಿದರು. ಹಾಗಾಗಿ ಮುದವೀಡು ಕೃಷ್ಣರಾಯರಿಗೆ ಪತ್ರ ಬರೆದು ಮನೆಗೆ ಕರೆಸಿಕೊಂಡು ಅವರಿಂದ ಮನೆಯವರಿಗೆ ಬುದ್ಧಿ ಹೇಳಿಸಿ ಶಾಲೆ ಬಿಟ್ಟು ಚಳುವಳಿಗೆ ಧುಮುಕಿದ ವಿವರವನ್ನು ಶಿಗ್ಗಾವಿ ಭಾಗದ ಚಳುವಳಿಗಾರರ ಹೇಳಿಕೆಯಿಂದ ಗುರುತಿಸಲಾಗಿದೆ.

“ಶಿಗ್ಗಾವಿಯ ನೀಲಕಂಠರಾವ್ ದಿಗಂಬರರಾವ್ ಹಳೆಪೇಟೆ ಇವರ ಮನೆಯಲ್ಲಿ ಶಾಲೆ ಬಿಟ್ಟು ಬಂದವರು ಹಾಗೂ ದೇಶಪ್ರೇಮಿಗಳ ಸಭೆ ನಡೆಯಿತು. ಅಂದು ತಾಲೂಕು ಕಾಂಗ್ರೆಸ್ ಕಮಿಟಿಯ ಸ್ಥಾಪನೆಯಾಯಿತು. ಇವರಿಗೆ ಹಳ್ಳಿ ಹಳ್ಳಿಗಳನ್ನು ಸುತ್ತಿ ಕಾಂಗ್ರೆಸ್ ಪ್ರಚಾರ, ಖಾದಿ ಪ್ರಚಾರ, ಚರಕಾ, ಸೆಟ್ಲ್‌ಮಗ್ಗ ಹಾಕಿಸುವುದು, ಚಹ, ಸೆರೆ ನಿಷೇಧ ಪ್ರಚಾರ ವಹಿಸಲಾಗಿ ಆ ಕಾರ್ಯವನ್ನು ಯಶಸ್ವಿಗೊಳಿಸಿದರು.

ಸೇವಾದಳದಲ್ಲಿ ತರಬೇತಿಯನ್ನು ಪಡೆದಿದ್ದ ಇವರು ೧೯೨೪ರ ಬೆಳಗಾವಿ ಕಾಂಗ್ರೆಸ್ ಅಧಿವೇಶನ ಯಶಸ್ವಿಯಾಗಲೆಂಬ ಉದ್ದೇಶದಿಂದ ನಾಲ್ಕು ದಿನ ಮುಂಚಿತವಾಗಿ ಹೋಗಿ ಸ್ವಯಂಸೇವಕರಾಗಿ ಕೆಲಸ ಮಾಡಿದವರು. ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹಕ್ಕಾಗಿ ಬುರ್ಲಿಯವರೊಂದಿಗೆ ೮೦ ಜನ ಚಳುವಳಿಗಾರರೊಂದಿಗೆ ಅಂಕೋಲಕ್ಕೆ ಹೊರಟಾಗ ಇವರನ್ನು ಬಂಧಿಸಿ ಶಿಗ್ಗಾವಿಯಲ್ಲಿ ಏಳು ದಿನಗಳ ಕಾಲ ಜೈಲಿಗೆ ಕಳುಹಿಸಿದರು."[೮೮]

**ಅರಣ್ಯ ಸತ್ಯಾಗ್ರಹ ಮತ್ತು ದರ್ಬಾರ್ ವಿಫಲಗೊಳಿಸಿದ್ದು:** ಈ ವಿಷಯಕ್ಕೆ ಸಂಬಂಧಿಸಿ ವಿವರವನ್ನು ಅಧ್ಯಾಯ ನಾಲ್ಕರ ಅರಣ್ಯ ಸತ್ಯಾಗ್ರಹದಲ್ಲಿ ವಿವರಿಸಲಾಗಿದೆ.

"ಶಂಕರ ದೀಕ್ಷಿತರನ್ನು ಅರಣ್ಯ ಸತ್ಯಾಗ್ರಹ ಮತ್ತು ಸರಕಾರ ಜನಮನ್ನಣೆ ಗಳಿಸಲು ಮಾಡಿದ ದರ್ಬಾರ್ ಕಾರ್ಯಕ್ರಮವನ್ನು ವಿಫಲಗೊಳಿಸಿದ ಆಪಾದನೆಯ ಮೇಲೆ ಇವರನ್ನು ಬಂಧಿಸಲಾಗಿ ನಾಲ್ಕು ತಿಂಗಳ ಜೈಲುಶಿಕ್ಷೆ ಮತ್ತು ೫೦ ರೂ. ದಂಡ ವಿಧಿಸಲಾಯಿತು.

ಜೈಲು ಶಿಕ್ಷೆ ಮುಗಿಸಿ ಊರಿಗೆ ಬಂದ ಮೇಲೆ ಇವರು ಊರಲ್ಲಿ ಸಭೆ ನಡೆಸುವುದು, ಪಿಕೆಟಿಂಗ್ ಮಾಡುವುದು, ಚರಕ ಹಂಚುವುದು, ಪಾನ ನಿರೋಧ ಕಾರ್ಯಕ್ರಮ ಹೀಗೆ ಮುಂತಾದ ಕಾರ್ಯಕ್ರಮಗಳನ್ನು ಮಾಡಿದರು.

ಕರ್ಮಠರಿಗೆ ಧಾರವಾಡದಲ್ಲಿ ನಡೆಯುತ್ತಿದ್ದ ಜಿಲ್ಲಾ ಮಟ್ಟದ ಪರಿಷತ್ತಿನಲ್ಲಿ ಭಾಷಣ ಮಾಡಲು ಕರೆಬಂತು. ವೇಷ ಬದಲಿಸಿಕೊಂಡು ಧಾರವಾಡಕ್ಕೆ ಹೋದರು. ಧಾರವಾಡದ ಮುನಿಸಿಪಾಲಿಟಿ ಚೌಕ ಹತ್ತಿರ ಒಮ್ಮೆಲೇ ರಸ್ತೆಗೆ ಬಂದು 'ಭಾರತ ಮಾತಾಕೀ ಜೈ' ಎಂದು ಕೂಗತೊಡಗಿದರು. ಜನತೆಯೂ ಸೇರಿತು. ಇವರು ತಮ್ಮ ಬ್ಯಾಗ್‌ನಲ್ಲಿರುವ ಕರಪತ್ರಗಳನ್ನು ಜನತೆಗೆ ಹಂಚಿದರು."[೮೯] ಜಿಲ್ಲಾ ಕಮೀಟಿ ಗೊತ್ತುಪಡಿಸಿದ ಸಂದೇಶವನ್ನು ಓದಲಾಯಿತು. ಪೊಲೀಸರು ಬಂದು ಇವರನ್ನು ಇವರ ಜೊತೆಗಾರರನ್ನು ಬಂಧಿಸಿದರು. ಇವರಿಗೆ ಎರಡು ವರ್ಷಗಳ ಶಿಕ್ಷೆಯಾಗಿ ಹಿಂಡಲಗಾ ನಂತರ ವಿಸಾಪುರದ ಜೈಲಿಗೆ ಕಳುಹಿಸಿದ ಬಗ್ಗೆ ಸುಬ್ಬಣ್ಣಾಚಾರ್ಯ ಅಕ್ಕಿವಳಿ ನೆನಪಿಸುತ್ತಾರೆ.

**೧೮. ಅನಂತಭಟ್ಟ ಕೇಶವಭಟ್ಟ ಹುರುಳಿಕುಪ್ಪಿ** : ಜನನ: ೧೯೦೪, ಸಾ॥ ಶಿಗ್ಗಾವಿ

ಶಿಗ್ಗಾವಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ನಂತರದ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಹೋದರು. ಅಲ್ಲಿ ಶಿಗ್ಗಾವಿಯ ತರುಣರ ಗುಂಪು ಸೇರಿಕೊಂಡು ರಾಷ್ಟ್ರೀಯತೆಯ ಕಾರ್ಯಕ್ರಮಗಳಿಗೆ ತಪ್ಪದೇ ಹೋಗುತ್ತಿದ್ದರು. "೧೯೨೦ರಲ್ಲಿ ಗಾಂಧೀಜಿ ಧಾರವಾಡಕ್ಕೆ ಬಂದಾಗ, ಶಿಗ್ಗಾವಿ ಭಾಗದ ಅನೇಕ ವಿದ್ಯಾರ್ಥಿಗಳು ಶಾಲೆಗೆ ಶರಣುಹೊಡೆದು ಚಳುವಳಿಗೆ ಸೇರಿದರು. ಆಗ ಇವರ ವಯಸ್ಸು ೧೬. ಇವರನ್ನು ಗುರುತಿಸಿದ ಕಡಪಾ ರಾಘವೇಂದ್ರರಾಯರು ಹಾಗೂ ಮುದವೀಡು ಕೃಷ್ಣರಾಯರು ೧೯೨೧ ಮತ್ತು ೧೯೨೩ರ ಕಾಂಗ್ರೆಸ್ ಅಧಿವೇಶನಗಳಿಗೆ(ನಾಗಪುರ-ಕಾಕಿನಾಡ) ತಮ್ಮೊಂದಿಗೆ ಕರೆದುಕೊಂಡು ಹೋಗಿದ್ದರು. ಈ ಚಟುವಟಿಕೆಗಳಿಂದ ಶಾಲೆ ಬಿಟ್ಟು ಶಿಗ್ಗಾವಿಗೆ ಬಂದರು."[೯೦] ಇವರು ಶಿಗ್ಗಾವಿಗೆ ಬಂದಾಗ ಬೆರಳೆಣಿಕೆಯಷ್ಟು(೬-೭)ಜನ ಮಾತ್ರ ಕಾಂಗ್ರೆಸ್

ಕಾರ್ಯಕರ್ತರಿದ್ದರು. ಶಿಗ್ಗಾವಿಯಲ್ಲಿ ನೀಲಕಂಠರಾವ್ ಹಳೆಪೇಟೆ, ಬಂಕಾಪುರ ಹುಂಡೇರಾವ್ ಜಂತಲಿ, ಕ್ಯಾಲಕೊಂಡದ ತಿಪ್ಪಣ್ಣರಾವ್ ಕುಲಕರ್ಣಿ, ಹೇಜೀಬ್ ಬಂಕಾಪುರ ಮುಂತಾದ ಕಾಂಗ್ರೆಸ್ ಸ್ವಯಂಸೇವಕರೊಂದಿಗೆ ಸೇರಿ ತಾಲೂಕಿನ ಪ್ರತಿ ಗ್ರಾಮಗಳಿಗೂ ಹೋಗಿ ಜನರಿಗೆ ವಿದೇಶಿ ವಸ್ತ್ರಗಳ ಬಹಿಷ್ಕಾರ, ತಾವೇ ಬಟ್ಟೆಗಳನ್ನು ತಯಾರಿಸಿಕೊಳ್ಳುವುದು, ಸೇಂದಿ, ಸೆರೆ ಬಿಡಿಸಲು ಪ್ರಚಾರ ಮಾಡುತ್ತಿದ್ದ ಬಗ್ಗೆ ಸುಬ್ಬಣ್ಣಾಚಾರ್ಯ ಅಕ್ಕಿವಳಿಯಿಂದ ತಿಳಿಯಲಾಗಿದೆ.

"೧೯೨೩ರಲ್ಲಿ ಎನ್.ಎಸ್. ಹರ್ಡೀಕರ್ ನೇತೃತ್ವದಲ್ಲಿ ನಾಗಪುರ ಧ್ವಜ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಲು ೨೫-೩೦ ಜನ ಸ್ವಯಂಸೇವಕರೊಂದಿಗೆ ಹೊರಡಲು ಶಿಗ್ಗಾವಿ ಭಾಗದಿಂದ ಇವರನ್ನು ಆಯ್ಕೆ ಮಾಡಲಾಯಿತು. ಆದರೆ ಹುಬ್ಬಳ್ಳಿಯಿಂದ ಹೊರಡುವಾಗ ಇವರನ್ನು ಬಂಧಿಸಿ ಶಿಗ್ಗಾವಿಗೆ ತಂದು ಏಳು ದಿನಗಳ ಕಾಲ ಕಾರಾಗೃಹದಲ್ಲಿಡಲಾಯಿತು.

೧೯೨೯ರಲ್ಲಿ ಲಾಹೋರ್ ಕಾಂಗ್ರೆಸ್ ಅಧಿವೇಶನಕ್ಕೆ ನೀಲಕಂಠರಾವ್ ಹಳೆಪೇಟೆಯೊಂದಿಗೆ ಹೋಗಿ 'ಸಂಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಗುರಿ' ಎಂಬ ಸಂದೇಶವನ್ನು ತಾಲೂಕಿನ ಎಲ್ಲ ಗ್ರಾಮಗಳಿಗೆ ಮುಟ್ಟಿಸುವ ಕೆಲಸ ಮಾಡಲಾರಂಭಿಸಿದರು."[೮೧]

**ಅರಣ್ಯ ಸತ್ಯಾಗ್ರಹ ಮತ್ತು ದರ್ಬಾರ್ ವಿಫಲಗೊಳಿಸಿದ್ದು:** ಈ ವಿಷಯಕ್ಕೆ ಮತ್ತು ಇವರಿಗೆ ಸಂಬಂಧಿಸಿದ ವಿವರವನ್ನು ಅಧ್ಯಾಯ ನಾಲ್ಕರ ಅರಣ್ಯ ಸತ್ಯಾಗ್ರಹದಲ್ಲಿ ವಿವರಿಸಲಾಗಿದೆ.

"೧೯೩೨ರ ಜನವರಿ ೧೨ರಂದು ಮಲ್ಲಪ್ಪಾ ಧನಶೆಟ್ಟಿ ಅವರ ದಿನವನ್ನು ಆಚರಿಸಲು ಹುಲಗೂರು, ತಡಸ, ಇಂಗಳಗಿ, ಬಂಕಾಪುರ, ಶಿಗ್ಗಾವಿಗಳಲ್ಲಿ ಸಾರ್ವಜನಿಕ ಕಾರ್ಯಕ್ರಮ ಮಾಡಿ ಜನಜಾಗೃತಿ ಮೂಡಿಸಿದ್ದಕ್ಕಾಗಿ ಇವರನ್ನು ಬಂಧಿಸಿ ೬ ತಿಂಗಳು ಶಿಕ್ಷೆ ಮತ್ತು ೫೦ ರೂ.ಗಳನ್ನು ದಂಡ ವಿಧಿಸಿದರು. ಹಿಂಡಲಗಾ ಮತ್ತು ಯರವಡಾ ಜೈಲಿನಲ್ಲಿ ಶಿಕ್ಷೆ ಅನುಭವಿಸಿದರು.

೧೯೪೨ರ ಚಳುವಳಿಯಲ್ಲಿ ಇವರನ್ನು ಬಂಧಿಸಲು ಆದೇಶವಿತ್ತು. ಆದರೆ ಇವರು ಭೂಗತರಾಗಿ ಕಾರ್ಯ ಮಾಡುತ್ತಿದ್ದುದರಿಂದ ಸಿಗಲಿಲ್ಲ. ಇವರ ಮಗ ಗಣೇಶನನ್ನು ಪೊಲೀಸರು ಬಂಧಿಸಿದರು. ಈ ವಿಷಯ ತಿಳಿದು ಇವರು ಪೊಲೀಸರಿಗೆ ಶರಣಾದರು. ಇವರಿಗೆ ೧ ವರ್ಷ ೬ ತಿಂಗಳು ಶಿಕ್ಷೆಯಾಗಿ ಹಿಂಡಲಗಾ ಜೈಲಿನಲ್ಲಿ ಅನುಭವಿಸಿದ ವಿವರವನ್ನು ಶಿಗ್ಗಾವಿಯ ರಾಮಚಂದ್ರ ಅರ್ಕಾಚಾರಿ ಹೇಳುತ್ತಾರೆ.

**೧೯. ರಾಯಪ್ಪ(ಶಾಂತೇಶರ) ನರಗುಂದ**

ಜನನ : ೧೯೦೩ಸಾ॥ ಹೂವಿನ ಶಿಗ್ಲಿ, ತಾ॥ ಸವಣೂರು

ರಾಯಪ್ಪ ನರಗುಂದ ಕೃಷಿ ಕುಟುಂದ ಬಸಪ್ಪ-ಪಾರವ್ವ ದಂಪತಿಗಳ ಪುತ್ರನಾಗಿ ೧೯೦೩ರಲ್ಲಿ ಜನಿಸಿದರು.

**ಕಾಂಗ್ರೆಸ್ ಪ್ರವೇಶ ೧೯೪೦** : ಯಲವಿಗಿಯ "ಶಿವಲಿಂಗಪ್ಪ ಫ.ಕರೂದಿ ಹೂವಿನ ಶಿಗ್ಲಿಯ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದ ಇವರು ಸರಕಾರಿ ನೌಕರಿಯಲ್ಲಿದ್ದರೂ ಸಾಮಾನ್ಯ ಜನತೆಯನ್ನು

ಚಳುವಳಿಗೆ ಪ್ರೇರೇಪಿಸುತ್ತಿದ್ದರು. ಸಂಗಪ್ಪ ಗಡ್ಡೆಪ್ಪನವರ ಎಂಬುವರಿಂದ ಹೂವಿನ ಶಿಗ್ಲಿಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಸದಸ್ಯರನ್ನು ಮಾಡುವ ಕಾರ್ಯಕ್ಕೆ ಚಾಲನೆ ನೀಡಿದರು. ಈ ಅವಧಿಯಲ್ಲಿಯೇ ರಾಯಪ್ಪ ನರಗುಂದ ಕಾಂಗ್ರೆಸ್ ಸದಸ್ಯತ್ವ ಪಡೆದರು. ರಾಯಪ್ಪನೊಂದಿಗೆ ಸುಂಕದ ಮಾಸ್ತರ, ಗುರುಪಾದಪ್ಪ ಬಡಪ್ಪನವರ, ಪರಮಪ್ಪ ರಿತ್ತಿ, ವೀರಭದ್ರಪ್ಪ ಮಾಳ, ವೀರಭದ್ರಪ್ಪ ಶಿಗ್ಲಿ, ಸಿದ್ದಪ್ಪ ಕಟಗಿ, ಸುಬ್ರಾಯಪ್ಪ ಮಂಜಲಾಪೂರ ಇನ್ನೂ ಮುಂತಾದವರು ಊರಲ್ಲಿ ಕಾಂಗ್ರೆಸಿನ ಸದಸ್ಯತ್ವ ಪಡೆದರು.

ರಾಯಪ್ಪ ಕಾಂಗ್ರೆಸ್ ಸೇರಲು ಚಿಕ್ಕ ಕಾರಣವೂ ಇತ್ತು. ಬ್ರಿಟಿಷ್ ಸರಕಾರದ ಸ್ಥಳೀಯ ಅಧಿಕಾರಿಯಾಗಿ ಕಾರ್ಯ ಮಾಡುತ್ತಿದ್ದ ಶಿವನಗೌಡ ಪಾಟೀಲ ಒಮ್ಮೆ ರಾಯಪ್ಪ ತನ್ನ ಪತ್ನಿಯನ್ನು ಕರೆದುಕೊಂಡು ಮಾವನ ಮನೆಗೆ ಹೊರಟಾಗ ಊರ ಚಾವಡಿಯ ಹತ್ತಿರ ಓಲೇಕಾರನಿಂದ ಇವರ ಚಕ್ಕಡಿಯನ್ನು ನಿಲ್ಲಿಸಿದರು. ಕಾರಣ ಕೇಳಿದಾಗ 'ನಿನ್ನ ಸ್ವಂತ ಜಮೀನಿಗೆ ಮಾತ್ರ ಕಂದಾಯ ನೀಡಿದ್ದೀ, ಅಗಾವು(ವರ್ಷಕ್ಕೆ ಇಂತಿಷ್ಟು ಹಣ ನೀಡಿ ಬೇರೆಯವರ ಹೊಲವನ್ನು ಉಳುಮೆ ಮಾಡಿಕೊಳ್ಳುವುದು)ಹಾಕಿಕೊಂಡ ಹೊಲಕ್ಕೆ ಕಂದಾಯ ನೀಡಿಲ್ಲ. ಆ ಹಣವನ್ನು ನೀಡಿಯೇ ನೀ ಚಕ್ಕಡಿ ಕಟ್ಟಿಕೊಂಡು ಹೋಗು' ಎಂದರು. ರಾಯಪ್ಪನಿಗೆ ಅವಮಾನವಾಯಿತು. ಸ್ಥಳೀಯ ಒಬ್ಬ ಪಟೇಲನೇ ಈ ರೀತಿ ವರ್ತಿಸಬೇಕಾದರೆ ಮೇಲಾಧಿಕಾರಿಗಳು ಮತ್ತು ಬ್ರಿಟಿಷರು ಇನ್ನೂ ಹೇಗೆ ದೌರ್ಜನ್ಯ ಮಾಡಲಿಕ್ಕಿಲ್ಲವೆಂದು ಯೋಚಿಸಿ ಕಾಂಗ್ರೆಸ್ಸಿಗೆ ಸೇರಿದ್ದರು."[೮೨] ಹೀಗೆ ಕಾಂಗ್ರೆಸ್ ಸದಸ್ಯತ್ವ ಪಡೆದವರು ಊರಿನ ಬೀರೇಶ್ವರ ದೇವಸ್ಥಾನದಲ್ಲಿ ಸೇರಿ ಚರ್ಚಿಸಿ ರಾಯಪ್ಪ ನರಗುಂದರನ್ನು ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನು ತಿಳಿಯಲು ಶಿಗ್ಗಾವಿಗೆ ಕಳುಹಿಸಿಕೊಡಲು ತೀರ್ಮಾನಿಸಿದರು. ೨೨ ಮೈಲಿ ದೂರ ಕಾಲ್ನಡಿಗೆಯಲ್ಲಿ ಶಿಗ್ಗಾವಿಗೆ ಹೋಗಿ ಅನಂತಭಟ್ಟರನ್ನು ಕಂಡು ಕಾಂಗ್ರೆಸ್ಸಿನ ಕಾರ್ಯ ಚಟುವಟಿಕೆಗಳ ಬಗ್ಗೆ ತಿಳಿದುಕೊಂಡು ಬಂದರು.

**ವೈಯಕ್ತಿಕ ಸತ್ಯಾಗ್ರಹ** : ರಾಯಪ್ಪ ನರಗುಂದ ವೈಯಕ್ತಿಕ ಸತ್ಯಾಗ್ರಹದ ವಿವರವನ್ನು ಅಧ್ಯಾಯ ನಾಲ್ಕರ ವೈಯಕ್ತಿಕ ಸತ್ಯಾಗ್ರಹ ಚಳುವಳಿಯಲ್ಲಿ ವಿವರಿಸಲಾಗಿದೆ.

**ಚಲೇಜಾವ್ ಚಳುವಳಿ** : ೧೯೪೨ರ ಆಗಸ್ಟ್ ೮ರಂದು ಮುಂಬೈನಲ್ಲಿ ಕಾಂಗ್ರೆಸ್ ಸಭೆಯಲ್ಲಿ ಗಾಂಧೀಜಿ **'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ'** ಎಂದು ಆಂಗ್ಲರಿಗೆ ಎಚ್ಚರಿಸಿದರೆ, ಭಾರತೀಯರಿಗೆ ಸ್ವಾತಂತ್ರ್ಯಕ್ಕಾಗಿ **'ಮಾಡು ಇಲ್ಲವೇ ಮಡಿ'** ಎಂಬ ಆದೇಶ ನೀಡಿದರು.

"ಆದೇಶವನ್ನು ಪಾಲಿಸಲು ತಾವು ಏನು ಮಾಡಬೇಕೆಂಬ ಚರ್ಚೆಯನ್ನು ಹೂವಿನಶಿಗ್ಲಿಯ ಸೂರಪ್ಪ ಕೆರಿ(ಬಸವಾನಂದ ಸ್ವಾಮಿಗಳ ಮನೆ) ಎಂಬುವವರ ಮನೆಯಲ್ಲಿ ಬಸವಕುಮಾರ ಮುಳಗುಂದಮಠ, ಆದಯ್ಯನವರ ಹಿರೇಮಠ, ಮಹದೇವಪ್ಪ ಮೈಲಾರ ತಂಬ್ರಳ್ಳಿ, ಗುರಪ್ಪ ಗೋದಿ, ವೀರಭದ್ರಪ್ಪ ಮಾಳಿ ಚರ್ಚಿಸಿದರು. ಆ ಸಭೆಯಲ್ಲಿ ತೆಗೆದುಕೊಂಡ ತಿರ್ಮಾನದಂತೆ,

ರಾಯಪ್ಪ ನರಗುಂದ ಹಾಗೂ ಗೋದಿ ಗುರಪ್ಪ ಸೇರಿ ಶಿಗ್ಗಿಯಿಂದ ಯಲವಿಗಿ ರೇಲ್ವೆ ಸ್ಟೇಷನ್ನಿಗೆ ರಾಮಣ್ಣ ಖೋಪರ್ಡೆ ಎಂಬ ರನ್ನರ್ ಟಪಾಲು ಬ್ಯಾಗ್ ಒಯ್ಯುವಾಗ ಶಿಗ್ಗಿ-ಹೂವಿನಶಿಗ್ಗಿ ಮಧ್ಯ ಟಪಾಲನ್ನು ಇವರು ಕಸಿದುಕೊಂಡು ಪರಾರಿಯಾದರು.

**ರೇಲ್ವೆ ಸ್ಟೇಷನ್ ಸುಡುವ ನಿರ್ಧಾರ:** ಮೈಲಾರ ಮಹದೇವಪ್ಪ ರಾತ್ರಿ ಇವರ ಮನೆಗೆ ಬಂದರು. ಆ ದಿನ ಮಹದೇವಪ್ಪ ಇವರ ಮನೆಯಲ್ಲಿಯೇ ಉಳಿದು ಆ ಭಾಗದ ಚಳುವಳಿಗಾರರನ್ನು ಸೇರಿಸಿ ಸಭೆ ನಡೆಸಿದರು. ಎಲ್ಲರೂ ಯಲವಿಗಿ ರೇಲ್ವೆ ಸ್ಟೇಷನ್ ಸುಡಲು ನಿರ್ಧರಿಸಿದರು.

ಮಹದೇವಪ್ಪ ಹಾವೇರಿ ಭಾಗದ ಕೂಗನೂರು, ಹೊಸರಿತ್ತಿ, ವಡವಿ, ಹೊಸೂರು, ನೆಗಳೂರು, ಶಿಗ್ಗಾವಿ ತಾಲೂಕಿನ ಯಲವಿಗಿ ಹೀಗೆ ಎಲ್ಲ ಸ್ನೇಹಿತರಿಗೆ ಬರಲು ಸುದ್ದಿ ಕಳುಹಿಸಿದರು. ದೂರದ ಗ್ರಾಮದ ಚಳುವಳಿಗಾರರು ಬರುವುದು ತಡವಾಗಿದ್ದರಿಂದ ಮತ್ತು ಕೆಲ ತೊಂದರೆಗಳನ್ನು ಗಮನಿಸಿದ ನಾಯಕರು ಯಲವಿಗಿ ಬದಲಾಗಿ ಸವಣೂರು ರೇಲ್ವೆ ಸ್ಟೇಷನ್ ಸುಡಲು ನಿರ್ಧರಿಸಿದರು. ಅದಕ್ಕಾಗಿ ಊರಲ್ಲಿ ಇರುವುದು ಬೇಡವೆಂದು ರಾಯಪ್ಪ ನರಗುಂದರ ಜೋಳದ ಹೊಲಕ್ಕೆ ಸೇರಿದ ಬಗ್ಗೆ ಆ ತಂಡದ ಸದಸ್ಯ ದೇವೇಂದ್ರಪ್ಪ ವಿಭೂತಿ ವಿವರಿಸುತ್ತಾರೆ.

ಜೋಳದ ಹೊಲದಲ್ಲಿ ಮಹದೇವಪ್ಪ ಮೈಲಾರ, ನಿಂಗಪ್ಪ ಕೂಗನೂರು, ಗೋಣೆಪ್ಪ ಕಮತರ, ಬಸವಕುಮಾರ ಮುಳಗುಂದಮಠ, ಫಕ್ಕೀರಪ್ಪ ತಾವರೆ, ವೆಂಕಣ್ಣಾಚಾರ್ಯ ವಾಯಿ, ಹನುಮಣ್ಣ ಜಂಗಳಿ, ನೀಲಪ್ಪ ಹಳ್ಳಿಕಾರ, ವೀರಣ್ಣ ಅಂಗಡಿ, ಆದಯ್ಯನವರ ಹಿರೇಮಠ, ಮಹದೇವಪ್ಪ ತಂಬ್ರಳ್ಳಿ, ಗುರಪ್ಪ ಗೋಧಿ ಇನ್ನೂ ಮುಂತಾದ ಚಳುವಳಿಗಾರರು ತಂಗಿದರು. "ಹೊಲದಲ್ಲಿ ಇರುವ ಎಲ್ಲ ಚಳುವಳಿಗಾರರಿಗೆ ರಾಯಪ್ಪ ನರಗುಂದ ಅವರ ಪತ್ನಿ ನಾಗಮ್ಮ ತನ್ನ ಸಹಾಯಕ್ಕೆ ಚನ್ನಬಸವ್ವ ಗೋನಾಳ ಮತ್ತು ಮುರಿಗೆಮ್ಮ ಹಿರೇಮಠ ಇವರನ್ನು ಕರೆದುಕೊಂಡು ೧೫ ದಿನಗಳ ಕಾಲ ೧೫ ಜನ ಚಳುವಳಿದಾರರಿಗೆ ಆಗುವಷ್ಟು ರೊಟ್ಟಿ, ಪಲ್ಯ, ಜೋಳದ ನುಚ್ಚಿನ ಅಂಬಲಿ, ಸಾರು, ಮೊಸರು, ಮಜ್ಜಿಗೆ ಮುಂತಾದ ಅಡುಗೆಯನ್ನು ಬೆಳಗಿನ ನಾಲ್ಕು ಗಂಟೆಗೆ ತಯಾರಿಸುತ್ತಿದ್ದರು. ಈ ಊಟವನ್ನು ಶಾಂತಯ್ಯನವರು ಬರಗುಡಿಮಠ ಹಾಗೂ ಬಸಪ್ಪ ಗೋನಾಳ ಚಳುವಳಿಗಾರರಿಗೆ ಮುಟ್ಟಿಸುತ್ತಿದ್ದರು. ಚಳುವಳಿಗಾರರಿಗೆ ವೆಂಕಣ್ಣಾಚಾರ್ಯ ವಾಯಿ ಧರಿಸಲು ಬೂಟುಗಳನ್ನು ತಂದರು. ಬಸವಕುಮಾರ ಮುಳಗುಂದಮಠ ಕರಿ ಅರಿವೆಯಿಂದ ಎಲ್ಲರಿಗೂ ಮುಖವಾಡಗಳನ್ನು ಹೊಲಿದುಕೊಟ್ಟರು."[೮೩] ಹೀಗೆ ಸವಣೂರು ರೇಲ್ವೆ ಸ್ಟೇಷನ್ ಸುಡುವ ಕಾರ್ಯಕ್ಕೆ ಸಿದ್ದತೆಮಾಡಿಕೊಂಡರು.

೧೯೪೨ರ ಅಕ್ಟೋಬರ್ ೨೧ರಂದು ರಾಯಪ್ಪನ ಹೊಲದಿಂದ ಸವಣೂರು ರೇಲ್ವೆ ಸ್ಟೇಷನ್ ಸುಡಲು ಎಲ್ಲ ರೀತಿಯ ತಯಾರಿ ಮಾಡಿಕೊಂಡು ಹೊರಟರು. ಸವಣೂರು ರೇಲ್ವೆ ಸ್ಟೇಷನ್ ಸುಡುವ ಮೊದಲು ಅಲ್ಲಿಗೆ ಬರುವ ಎಲ್ಲ ತಾರು ತಂತಿಗಳನ್ನು ಕತ್ತರಿಸಲಾಯಿತು.

ಮತ್ತೆ ಕೆಲವರು ಸ್ಟೇಷನ್ ಮಾಸ್ತರರ ಹತ್ತಿರವಿರುವ ಖಜಾನೆಯನ್ನು ಲೂಟಿ ಮಾಡಿದರು. ಇನ್ನುಳಿದ ನಾಲ್ಕಾರು ಜನ ಸ್ಟೇಷನ್‌ನ ಕೆಲಭಾಗಗಳಿಗೆ ಸೀಮೆಎಣ್ಣೆಯನ್ನು ಎರಚುತ್ತಿದ್ದರು. ಕ್ಷಣದಲ್ಲಿಯೆ ಸ್ಟೇಷನ್ನಿಗೆ ಬೆಂಕಿ ಹಚ್ಚಲಾಯಿತು. ಎಲ್ಲ ಚಳುವಳಿಗಾರರು 'ಭಾರತ ಮಾತಾಕೀ ಜೈ', ವಂದೇ ಮಾತರಂ' ಎಂದು ಘೋಷಣೆ ಕೂಗುತ್ತಾ ಅವರವರ ಊರುಗಳಿಗೆ ಹೋದ ವಿವರವನ್ನು ತಂಡದ ಸದಸ್ಯರಾದ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕ್ಕಂಗಿ ಹೇಳಿಕೆಗಳಿಂದ ತಿಳಿದುಬರುತ್ತದೆ.

**ಬಂಧನ** : "ಸವಣೂರು ರೇಲ್ವೆ ಸ್ಟೇಷನ್ ಸುಟ್ಟ ನಂತರ ಎಲ್ಲ ಚಳುವಳಿಗಾರರು ಭೂಗತರಾದರು. ಇತ್ತ ರಾಯಪ್ಪನು ತಮ್ಮ ಜೋಳದ ಹೊಲದಲ್ಲಿಯ ಕಣವನ್ನು ತಮ್ಮ ಮನೆ ಮಾಡಿಕೊಂಡು ಕೃಷಿ ಕಾರ್ಯ ಮಾಡುತ್ತಿದ್ದರು.

ಹಾವೇರಿ, ಶಿಗ್ಗಾವಿ, ಶಿರಹಟ್ಟಿ, ಸವಣೂರು, ಹೊಸರಿತ್ತಿ, ಮತ್ತು ಕರ್ಜಗಿ ಊರುಗಳಲ್ಲಿ ಪೊಲೀಸರು ಸವಣೂರು ಸ್ಟೇಷನ್ ಸುಟ್ಟ ಚಳುವಳಿಗಾರರಿಗೆ ಶೋಧಕಾರ್ಯ ಮಾಡುತ್ತಿದ್ದರು. ಹೀಗಿರುವಾಗ ಹಾವೇರಿಯ ಯಲ್ಲಪ್ಪ ಹಳ್ಳಿಕಾರ ಎಂಬುವವನು ತಾವು ಸವಣೂರು ರೇಲ್ವೆ ಸ್ಟೇಷನ್ ಸುಟ್ಟ ಬಗ್ಗೆ ಹೆಮ್ಮೆಯಿಂದ ಸ್ನೇಹಿತರೊಂದಿಗೆ ಹಂಚಿಕೊಂಡಿದ್ದ ವಿಷಯ ಪೊಲೀಸರಿಗೆ ತಿಳಿಯಿತು. ಆಗ ಹಾವೇರಿಯ ಪೈ ಫೌಜದಾರ ಯಲ್ಲಪ್ಪನನ್ನು ಬಂಧಿಸಿ, ಬಡಿದಾಗ ಸವಣೂರು ಘಟನೆಯನ್ನು ಮತ್ತು ಎಲ್ಲ ಚಳುವಳಿಗಾರರ ಹೆಸರನ್ನು ಹೇಳಿದ್ದನ್ನು ತಂಡದ ಸದಸ್ಯ ಪರಮಣ್ಣ ಹರಕಂಗಿ ವಿವರಿಸುತ್ತಾರೆ.

ಹೂವಿನ ಶಿಗ್ಲಿಯ ಹೊಲದ ಕಣದಲ್ಲಿದ್ದ ರಾಯಪ್ಪ ನರಗುಂದರವರನ್ನು ಶಿಗ್ಗಾವಿಯ ಸಬ್ ಇನ್ಸ್‌ಪೆಕ್ಟರ್ ದುರುಮುರಗಿಯವರು ಊರ ಗೌಡರಾದ ಶಿವನಗೌಡ ಪಾಟೀಲರೊಂದಿಗೆ ಬಂದು ಇವರನ್ನು ಬಂಧಿಸಿದರು. ರಾಯಪ್ಪನನ್ನು ಹಾವೇರಿಗೆ ತಂದರು. ಈ ವೇಳೆಗಾಗಲೇ ಬಹಳಷ್ಟು ಚಳುವಳಿಗಾರರು ಬಂಧಿಸಲ್ಪಟ್ಟಿದ್ದರು. ಮಹದೇವಪ್ಪ ಮೈಲಾರ ಮಾತ್ರ ಪೊಲೀಸರಿಗೆ ಸಿಕ್ಕಿರಲಿಲ್ಲ. ಬಂಧಿಸಿದವರನ್ನು ಧಾರವಾಡದ ನ್ಯಾಯಾಲಯಕ್ಕೆ ಹಾಜರುಪಡಿಸಿದರು.

ಧಾರವಾಡದ ಕೋರ್ಟಿನಲ್ಲಿ ಇವರ ಪರವಾಗಿ ವಾದ ಮಾಡಲು ಇವರು ವಕೀಲರನ್ನು ನೇಮಿಸಿರಲಿಲ್ಲ. ಆದರೆ ಡಿ.ಪಿ. ಕರಮರಕರ ಮತ್ತು ಬಿ.ಆರ್. ತಂಬಾಕದ ವಕೀಲರು ಚಳುವಳಿಗಾರರ ಪರವಾಗಿ ವಾದ ಮಾಡಿದರು. ಸವಣೂರು ಸ್ಟೇಷನ್ ಸುಟ್ಟ ವಿಷಯವನ್ನು ಇವರೇ ಒಪ್ಪಿಕೊಂಡಿದ್ದರಿಂದ ೨ ವರ್ಷ ೮ ತಿಂಗಳ ಶಿಕ್ಷೆ ವಿಧಿಸಿ ೨೬.೨.೧೯೪೩ರಂದು ಯರವಡಾ ಜೈಲಿಗೆ ಕಳುಹಿಸಿದರು. ಜೈಲಿನಲ್ಲಿ–ರಾಯಪ್ಪ ಅನಾರೋಗ್ಯಕ್ಕೆ ಒಳಗಾದರು. ಪರೀಕ್ಷಿಸಿದ ವೈದ್ಯರು ಇವರಿಗೆ ಫಾಯೋರಿಯಾ ಅಟ್ಯಾಕ್(ಟಿ.ಬಿ.) ಆಗುವ ಲಕ್ಷಣಗಳಿವೆ, ಹಾಗಾಗಿ ಇವರನ್ನು ಆಸ್ಪತ್ರೆಗೆ ಕರೆದೊಯ್ಯಲು ತಿಳಿಸಿದರು. ಆದರೆ ರಾಯಪ್ಪ ನಾನು ಕೈಗೆ ಬೇಡಿ ಹಾಕಿಕೊಂಡು ಆಸ್ಪತ್ರೆಗೆ ಹೋಗಲಾರೆ ಎಂದು ಹಟ ಹಿಡಿದರು. ಅದೇ ವೇಳೆಗೆ ಬಂದ ಜಿ.ಬಿ. ಖೇರ

ವಿಷಯ ತಿಳಿದು ತಾವೇ ಕರೆದುಕೊಂಡು ಹೋದರು. ೧೫ ದಿನಗಳಲ್ಲಿ ಗುಣಮುಖರಾಗಿ ಪುನಃ ಜೈಲಿಗೆ ಬಂದರು."[೮೪]

**ಮಹದೇವಪ್ಪ ಹಾಗೂ ತಂಡದ ಸದಸ್ಯರು ಹುತಾತ್ಮರಾದ ದಿನ :** "೧.೪.೧೯೪೩ರಂದು ಮೈಲಾರ ಮಹದೇವಪ್ಪ, ತಿರುಕಪ್ಪ ಮಡಿವಾಳರ ಮತ್ತು ವೀರಯ್ಯ ಹಿರೇಮಠ ಇವರು ಹೊಸರಿತ್ತಿ ಹಫ್ತಾ ಲೂಟಿ ವೇಳೆ ಪೊಲೀಸರ ಗುಂಡಿಗೆ ಬಲಿಯಾದ ಸುದ್ದಿ ಯರವಡಾ ಜೈಲಿಗೆ ಮುಟ್ಟಿತು. ಎಲ್ಲ ಚಳುವಳಿಗಾರರು ಒಂದೆಡೆ ಸೇರಿ ದುಃಖ ಸೂಚಕ ಸಭೆ ನಡೆಸಿದರು. ಹುತಾತ್ಮರ ಆತ್ಮಕ್ಕೆ ಶಾಂತಿ ಕೋರಿದರು.

**ಬಿಡುಗಡೆ :** ಮೂರನೆಯ ಮಹಾಯುದ್ಧದ ನಂತರ ಗಾಂಧೀಜಿ ಹಾಗೂ ವೈಸರಾಯರ ಮಧ್ಯೆ ಒಪ್ಪಂದವಾಗಿ ಕಾರಾಗೃಹದಲ್ಲಿರುವ ಎಲ್ಲ ಚಳುವಳಿಗಾರರನ್ನು ಬಿಡುಗಡೆಗೊಳಿಸಿತು. ಆಗ ರಾಯಪ್ಪ ನರಗುಂದ ಬಿಡುಗಡೆಯಾದರು.

**ಭವ್ಯ ಸ್ವಾಗತ :** ರಾಯಪ್ಪ ನರಗುಂದ ಬಿಡುಗಡೆಯಾಗಿ ಹುಬ್ಬಳ್ಳಿಯಿಂದ ಯಲವಿಗೆ ರೇಲ್ವೆ ಸ್ಟೇಷನ್ನಿಗೆ ಬಂದಾಗ ಸ್ವಾಗತಿಸಲಾಯಿತು. ಅಲ್ಲಿಂದ ಕಾಂಗ್ರೆಸ್ ಕಾರ್ಯಕರ್ತರು ಶೃಂಗರಿಸಿಕೊಂಡು ಬಂದಿದ್ದ ಚಕ್ಕಡಿಯಲ್ಲಿ ರಾಯಪ್ಪನನ್ನು ಕುಳ್ಳಿರಿಸಿಕೊಂಡು ಹೂವಿನಶಿಗ್ಲಿಗೆ ಬಂದರು."[೮೫] ಇಲ್ಲಿಯೂ ಸಹ ಊರ ರಸ್ತೆಗಳಲ್ಲಿ ಬಾಜಾ ಭಜಂತ್ರಿಯೊಂದಿಗೆ ಮೆರವಣಿಗೆ ಮೂಲಕ ಭವ್ಯ ಮಂಟಪದವರೆಗೆ ಕರೆತರುವ ಮೂಲಕ ರಾಯಪ್ಪನಿಗೆ ಗೌರವ ನೀಡಲಾಯಿತು.

### ೫.೫. ಪರೋಕ್ಷ ಹೋರಾಟಗಾರರು ಮತ್ತು ಘಟನೆಗಳು

ಸ್ವಾತಂತ್ರ್ಯ ಹೋರಾಟದಲ್ಲಿ ಪೊಲೀಸರಿಂದ ಲಾಠಿ ಏಟು ತಿಂದು ಜೈಲು ಶಿಕ್ಷೆ ಅನುಭವಿಸಿದ ಚಳುವಳಿಗಾರರು ಸಾವಿರಾರು. ನೇರವಾಗಿ ಚಳುವಳಿಗೆ ಭಾಗವಹಿಸದಿದ್ದರೂ ಚಳುವಳಿಗಾರರಿಗೆ ತಮ್ಮ ಜೀವದ ಹಂಗು ತೊರೆದು ಪೊಲೀಸರಿಗೂ ಅಂಜದೇ ಸಕಲ ರೀತಿಯಲ್ಲಿ ಸಹಾಯ-ಸಹಕಾರ ನೀಡಿದವರು ಹಲವರಿದ್ದು ಅವರ ಪಾತ್ರವನ್ನು ಗುರುತಿಸುವುದು ಅಗತ್ಯವಾಗಿದೆ. ಅಂಥವರಲ್ಲಿ ಅನೇಕರು ಕೃಷಿಕರು, ಕೂಲಿಗಳು, ಲಂಬಾಣಿಗಳು, ಮಹಿಳೆಯರು ಇವರೆಲ್ಲ ಚಳುವಳಿಗಾರರಿಗೆ ಹೊತ್ತು ಹೊತ್ತಿಗೆ ಅನ್ನವಿಟ್ಟು, ಬ್ರಿಟಿಷರ ಚಲನವಲನಗಳ ಸುದ್ದಿ-ಸಮಾಚಾರಗಳನ್ನು ನೀಡಿ ಚಳುವಳಿಗಾರರಿಗೆ ದಿಕ್ಸೂಚಿಗಳಾಗಿದ್ದು ನಿಜಕ್ಕೂ ಸ್ಮರಣಾರ್ಹವಾದ ಸಂಗತಿ. ಅಲ್ಲದೇ ರಾಷ್ಟ್ರೀಯ ಚಳುವಳಿಯಲ್ಲಿ ಚಳುವಳಿಗಾರರಿಗೆ ಬೆನ್ನಹಿಂದಿನ ನೆರಳಾಗಿ ನರಳಿದವರನ್ನು ಹೆಸರಿಸದಿದ್ದರೆ ಚಾರಿತ್ರ್ಯಕ್ಕೆ ಅಪಚಾರ ಮಾಡಿದಂತಾದೀತು. ಇಂದು ಅಂಥ ಎಷ್ಟೋ ಜನ ಮರೆಯಾಗಿದ್ದರೂ ಸ್ಮರಿಸುವುದು ಕೃತಜ್ಞತೆ ಸಂಕೇತ. ದೊಡ್ಡ ಕಲ್ಲಿಗೆ ಚೇಪು ಕಲ್ಲು ಹೇಗೆ ಸಹಾಯ ಸಲ್ಲಿಸುತ್ತೋ ಆ ರೀತಿ ಸಹಾಯ ಮಾಡಿದವರು ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಅವರಿಂದ ಸಹಾಯ ಪಡೆದ ವ್ಯಕ್ತಿಗಳು ಅವರನ್ನು ಗುರುತಿಸಬಲ್ಲರು. ಅಂಥವರ ಸಾಲಿನಲ್ಲಿ ಚಳುವಳಿಗಾರರನ್ನು ಬೆಂಬಲಿಸಿದವರು, ನೆರೆಯ ತಾಲೂಕುಗಳಿಂದ ಬಂದವರು ಹಾಗೂ ಸರಕಾರಿ ಅಧಿಕಾರಿಗಳನ್ನು

ಗುರುತಿಸುವುದು ಮತ್ತು ದೇಶಕ್ಕೆ ಸ್ವಾತಂತ್ರ್ಯ ಲಭಿಸಿದರೂ ಹಾವೇರಿ ಜಿಲ್ಲೆಯ ಸವಣೂರು ಸಂಸ್ಥಾನಕ್ಕೆ ಆಗ ಲಭಿಸಿದ ಸ್ವಾತಂತ್ರ್ಯ ನಂತರದಲ್ಲಿ ದೊರೆತ ಸ್ವಾತಂತ್ರ್ಯ ವಿವರವನ್ನು ಪರಿಚಯಿಸಲಾಗುತ್ತದೆ.

೧. ಜಿಲ್ಲೆಯ ಬೆಂಬಲಿಗ ಹೋರಾಟಗಾರರು

೨. ಜಿಲ್ಲೆಯ ನೆರೆಯ ತಾಲೂಕುಗಳಿಂದ ಬಂದ ಹೋರಾಟಗಾರರು

೩. ಹೋರಾಟವನ್ನು ಬೆಂಬಲಿಸಿದ ಸರಕಾರಿ ಅಧಿಕಾರಿಗಳು/ಅಧಿಕಾರೇತರರು

೪. ಸ್ವಾತಂತ್ರ್ಯ ನಂತರದ ಸವಣೂರು ಸಂಸ್ಥಾನ

**೧. ಜಿಲ್ಲೆಯ ಬೆಂಬಲಿಗ ಹೋರಾಟಗಾರರು**

ಹಾವೇರಿ ಜಿಲ್ಲೆಯ ಚಳುವಳಿಗಾರರಲ್ಲಿ ಬೆರಳೆಣಿಕೆಯಷ್ಟು ಜನ ಮಾತ್ರ ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದವರು. ಉಳಿದವರೆಲ್ಲರೂ ಆರ್ಥಿಕವಾಗಿ ಹಿಂದುಳಿದವರು. ಇನ್ನೂ ಕೆಲವು ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ. ಈ ರೀತಿಯ ಕೌಟುಂಬಿಕ ಹಿನ್ನೆಲೆಯುಳ್ಳ ಚಳುವಳಿಗಾರರಿಗೆ ಸಕಾಲಕ್ಕೆ ಊಟ-ವಸತಿ ನೀಡಿ ಸಲುಹಿದವರಿದ್ದಾರೆ. ತಮ್ಮ ಮನೆ, ತೋಟ, ಕೊಪ್ಪಲು-ಗದ್ದೆಗಳಲ್ಲಿ ಆಶ್ರಯ ನೀಡಿದವರಿದ್ದಾರೆ. ಹಗಲು-ರಾತ್ರಿಯೆನ್ನದೇ ಅವರಿಗಾಗಿ ಊಟವನ್ನು ಸಿದ್ಧಪಡಿಸಿ ಕಾದವರಿದ್ದಾರೆ. ಕಾಲಕಾಲಕ್ಕೆ ಆರ್ಥಿಕವಾಗಿ ಸಹಾಯ ನೀಡಿದವರಿದ್ದಾರೆ. ಚಳುವಳಿಕಾರರು ಒಂದೆಡೆ ಸೇರಿ ಚರ್ಚಿಸಲು ಅನುಕೂಲವಾಗಲೆಂಬ ಉದ್ದೇಶದಿಂದ ತಮ್ಮ ಳಳ ಎಕರೆ ಜಮಿನನ್ನೇ ಧಾರೆಯೆರೆದ ಕರುಣಾಮಯಿಗಳಿದ್ದಾರೆ. ತಮ್ಮ ಆರ್ಥಿಕ ಶ್ರೀಮಂತಿಕೆ ಯೊಂದಿಗೆ ಚಳುವಳಿಗಾರರನ್ನು ಗೌರವಾಧಿಗಳಿಂದ ಕಂಡು ಸಲುಹಿವುದವರಿದ್ದಾರೆ. ಹೀಗೆ ವಿವಿಧ ರೀತಿಯಲ್ಲಿ ಜಿಲ್ಲೆಯ ಮಣ್ಣಿನ ಗುಣವೇನೋ ಎಂಬಂತೆ ವಿವಿಧ ರೀತಿಯಲ್ಲಿ ಸಾಕಿ ಸಲುಹುದರೊಂದಿಗೆ ರಾಷ್ಟ್ರೀಯ ಹೋರಾಟದಲ್ಲಿ ತೆರೆಮರೆಯಲ್ಲಿ ನಿಂತು ಚಳುವಳಿಗಳು ಯಶಸ್ವಿಯಾಗಲು ಆಶ್ರಮಿಸಿದವರನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

**ಎಮ್ಮಿಗನೂರು** : ಹಿರೇಕೆರೂರು ತಾಲೂಕಿನ ಎಮ್ಮಿಗನೂರು ಸ್ವಾತಂತ್ರ್ಯ ಚಳುವಳಿಯಲ್ಲಿ ಚಳುವಳಿಗಾರರಿಗೆ ಆಶ್ರಯ ನೀಡಿದ ಗ್ರಾಮ. "೧೯೩೦ರಿಂದ ೧೯೪೭ರ ಅವಧಿಯಲ್ಲಿ ಆ ಊರಿನ ಸೂತ್ತಲೂ ದಟ್ಟವಾದ ಅರಣ್ಯವಿದ್ದು, ಸ್ವಾತಂತ್ರ್ಯ ಯೋಧರಿಗೆ ಭೂಗತ ಚಳುವಳಿ ಮಾಡಲು ಹೇಳಿ ಮಾಡಿಸಿದ ಸ್ಥಳವಾಗಿತ್ತು ಎಂಬುದನ್ನು ಅದೇ ಭಾಗದ ಚಳುವಳಿಗಾರ ಪುಟ್ಟಪ್ಪ ಹರಬಿ ಹಾಗೂ ಮಳ್ಳಪ್ಪ ಕೊಪ್ಪದ ಅವರ ಹೇಳಿಕೆ.

ಹೊಸದಾಗಿ ಸೇರ್ಪಡೆಯಾದ ಯೋಧರಿಗೆ ದೀಕ್ಷೆಯನ್ನು ಕೊಟ್ಟು ತರಬೇತಿ ನೀಡಿ ಅವರವರ ಪಾಲಿನ ಕೆಲಸವನ್ನು ವಹಿಸಿಕೊಡುವುದು ಈ ಗ್ರಾಮದಿಂದಲೇ ನಡೆಯುತ್ತಿತ್ತು. ಅನ್ನ ನೀರೊಂದಿಗೆ ಸಕಲ ಸೌಲಭ್ಯ ಸಹಕಾರ ನೀಡುತ್ತಿದ್ದರು. ನ್ಯಾಮತಿ ವೀರಭದ್ರಪ್ಪ ಎಮ್ಮಿಗನೂರಿನ ನೀಲಕಂಠಪ್ಪನವರ ಕಣ-ಕೊಪ್ಪಲು, ಗದ್ದೆ, ಕೊಟ್ಟಿಗೆ ಹಾಗೂ ಅವರ ಮನೆಗಳಲ್ಲಿ ಭೂಗತ

ರಾಗಿದ್ದುಕೊಂಡು ಚಳುವಳಿ ಮಾಡುತ್ತಿದ್ದರು. ಅವರ ಹೊಲದ ಮನೆಯಲ್ಲಿ ಕರಪತ್ರಗಳನ್ನು ಮುದ್ರಿಸುವುದು, ನಾಡ ಬಾಂಬ್‌ಗಳನ್ನು ಕಟ್ಟುವುದು ಹಾಗೂ ಅಲ್ಲಿಯ ಚಳುವಳಿಗಾರರಿಗೆ ಬಾಂಬ್ ಕಟ್ಟುವ ತರಬೇತಿಯನ್ನು ನೀಡಲಾಗುತ್ತಿತ್ತು."[೪೬] ಹೀಗೆ ನೀಲಕಂಠಪ್ಪ ನ್ಯಾಮತಿ ವೀರಭದ್ರಪ್ಪ, ಟಿ.ಆರ್. ನೆಶ್ವಿ, ಕೆ.ಎಫ್. ಪಾಟೀಲ್, ಹಳ್ಳಿಕೇರಿ ಗುದ್ಲೆಪ್ಪ ಮತ್ತು ಜಿಲ್ಲೆಯ ಇತರ ನಾಯಕರಿಗೆ ಹಲವು ರೀತಿಯಲ್ಲಿ ಸಹಾಯ-ಸಹಕಾರ ನೀಡಿದವರು.

**ಹುರಕಡ್ಲಿ ಸಂಗಪ್ಪ** : "ಹಿರೇಕೆರೂರು ತಾಲೂಕಿನ ಮಾಸೂರಿನವರಾದ ಇವರು ಸ್ವಾತಂತ್ರ್ಯ ಚಳುವಳಿಗಾರರಿಗೆ ಸಹಾಯ-ಸಹಕಾರ ನೀಡಿದ ಉದ್ಯಮಿ. ನ್ಯಾಮತಿ ವೀರಭದ್ರಪ್ಪ ಪೂರ್ಣಪ್ರಮಾಣದ ಚಳುವಳಿಗಾರರಾಗಿದ್ದು ಮನೆ, ಊರು ಬಿಟ್ಟು ಹೊರಟುಹೋಗಿದ್ದವರು. ಹಾಗಾಗಿ ಅವರ ಮನೆಯ ಸದಸ್ಯರಾಗಲೀ ಮತ್ತು ಬಂಧುಗಳಾಗಲೀ ವೀರಭದ್ರಪ್ಪನನ್ನು ನೋಡಿಕೊಳ್ಳದಿದ್ದಾಗ ಸಂಗಪ್ಪನವರೇ ತಮ್ಮ ಮನೆಯಲ್ಲಿ ಇಟ್ಟುಕೊಂಡು ಪೋಷಿಸಿ ಪೊರೆದವರು.

**ವೀರಭದ್ರಪ್ಪನವರಿಗೆ ಸಹಾಯ ಮಾಡಿದವರು** : ನ್ಯಾಮತಿ ವೀರಭದ್ರಪ್ಪ ಸ್ವಾತಂತ್ರ್ಯಕ್ಕಾಗಿ ವಿವಾಹವಾಗುವುದನ್ನೇ ಬಿಟ್ಟವರು. ಇಂಥವರನ್ನು ಸಂಬಂಧಿಗಳು ಗುರುತಿಸಲಿಲ್ಲ. ಇವರು ದೈಹಿಕವಾಗಿ ಗಟ್ಟಿಯಿದ್ದಾಗ ಕೆಲವರು ಇವರ ಹಣಕ್ಕಾಗಿ ನೊಡಿಕೊಳ್ಳುವ ನಾಟಕವಾಡಿದರು. ಇವರನ್ನು ಗುರುತಿಸಿದವರು ಎಮ್ಮಿಗನೂರಿನ ಮಳವಳ್ಳಿ ನೀಲಕಂಠಪ್ಪನವರು, ಕುಬಸದ ಸದಾಶಿವಪ್ಪನವರು, ಬೇಳಕೇರಿ ಈರಣ್ಣ, ಉದ್ರಿ ಗ್ರಾಮದ ದೇಸಾಯಿ ಪಾರ್ವತಮ್ಮ. ಟಿ.ಆರ್. ನೆಶ್ವಿ, ಲೀಲಾವತಿ ಮಾಗಡಿ ದಂಪತಿಗಳು. ಇವರಂತೆ ವೀರಭದ್ರಪ್ಪನನ್ನು ಕೊನೆಗಾಲದವರೆಗೂ ನೋಡಿಕೊಂಡವರೆಂದರೆ ಡಾ. ಬೇಗೂರರು; ಅದೇ ರೀತಿ ಮತ್ತೊಬ್ಬ ವೈದ್ಯಕೀಯ ಸೇವೆ ಮಾಡಿದವರೆಂದರೆ ಡಾ. ಬಿ.ಎನ್. ದತ್ತೋಬರಾವರು. ಇವರು ೧೯೪೦ರಿಂದ ೧೯೯೧ರ ಡಿಸೆಂಬರ್ ೧೬ರವರೆಗೆ ಉಪಚರಿಸಿದ ಆದರ್ಶ ವೈದ್ಯರು."[೪೭] ಇದೇ ರೀತಿ ನ್ಯಾಮತಿ ವೀರಭದ್ರಪ್ಪನಿಗೆ ಸಹಾಯ-ಸಹಕಾರ ನೀಡಿದವರಲ್ಲಿ ಬಿ.ಡಿ. ಪಾಟೀಲ್ ಒಬ್ಬರು. ಚಳುವಳಿಗಾರರಿಗೆ ಸಹಾಯ ಮಾಡಿದ್ದಕ್ಕಾಗಿ ೫೦ ರೂ.ಗಳ ದಂಡ ವಿಧಿಸಲಾಯಿತು. ಆದರೆ ಪಾಟೀಲ್ ನಂತರವೂ ಚಳುವಳಿಗಾರರಿಗೆ ತಮ್ಮ ಸಹಾಯ-ಸಹಕಾರವನ್ನು ನಿಲ್ಲಿಸದೇ ಮುಂದುವರಿಸಿದ ವಿವರವನ್ನು ಹಲವು ಚಳುವಳಿಗಾರರ ಹೇಳಿಕೆಗಳಿಂದ ಗುರುತಿಸಲಾಗಿದೆ.

**ಕುಸೂಗುರು ಬಸಮ್ಮ** : ಸುಣಕಲ್ಲ ಬಿದರಿ, ರಾಣೆಬೆನ್ನೂರು ತಾಲೂಕು.

ಹಾವೇರಿ ಜಿಲ್ಲೆಯಲ್ಲಿ ಚಳುವಳಿಗಾರರಿಗೆ ತಮಗೆ ಸಹಾಯ ಮಾಡಿದವರು ಯಾರು? ಎಂಬ ಪ್ರಶ್ನೆಗೆ ಅವರಿಗೆ ತಕ್ಷಣಕ್ಕೆ ನೆನಪಿಗೆ ಬರುವ ಮೊದಲ ಹೆಸರೇ ಸುಣಕಲ್ಲ ಬಿದರಿಯ ಕುಸೂಗುರು ಬಸಮ್ಮ. ಇವರು ಅಂದಿನ ಚಳುವಳಿಗಾರರಿಗೆ ಸಾಕ್ಷಾತ್ ಅನ್ನಪೂರ್ಣೇಶ್ವರಿ ಎನಿಸಿದ್ದರು. ಇವರು ಜೀವಿತದ ಕೊನೆಯವರೆಗೂ ಖಾದಿಧಾರಿಯಾಗಿಯೇ ಬಾಳಿದ ಬಗ್ಗೆ ರಾಣೆಬೆನ್ನೂರಿನ ಚಳುವಳಿಗಾರ ಮಿನ್ನಪ್ಪ ಹಳ್ಳಿ ಹಾಗೂ ಶಿವನಗೌಡ ಮರಿಗೌಡ್ರ ಹೇಳುತ್ತಾರೆ.

"ಸ್ವಾತಂತ್ರ್ಯ ಯೋಧರಿಗೆ ಸಕಾಲಕ್ಕೆ ಊಟ ಮುಟ್ಟಿಸುವ ವ್ರತ ಹಿಡಿದವರು. ಯೋಧರು ಗುಡ್ಡ, ಗವಿ, ಹೊಲ, ತೋಟ ಹೀಗೆ ಎಲ್ಲಿ ಅಡಗಿ ಕುಳಿತಿರುವರೋ, ಎಲ್ಲಿ ಬಸವಳಿದು ಬಿದ್ದಿರುವರೋ, ಅವರು ಉಂಡು ಎಷ್ಟು ದಿನಗಳಾಗಿದವೋ, ನೀರು ಯಾವಾಗ ಕುಡಿದಿದ್ದರೋ ಎಂಬ ಚಿಂತೆ ಬಸಮ್ಮರಿಗೆ ಸದಾ ಕಾಡುತ್ತಿತ್ತು. ತಮ್ಮ ಮನೆಯಲ್ಲಿ ನಿತ್ಯವೂ ಹೆಚ್ಚಿನ ಅಡುಗೆ ಮಾಡಿಟ್ಟುಕೊಂಡು ಸ್ವಾತಂತ್ರ್ಯ ಯೋಧರಿಂದ ಬರುವ ವರ್ತಮಾನಕ್ಕಾಗಿ ಕಾದಿರುತ್ತಿದ್ದಳು. ಒಬ್ಬೊಬ್ಬರಿಗೆ ಒಂದೊಂದು ಬುತ್ತಿ ಗಂಟನಂತೆ ಹತ್ತಿಪ್ಪತ್ತು ಗಂಟುಗಳನ್ನು ಸಿದ್ಧಪಡಿಸಿರುತ್ತಿದ್ದರು. ಸಂದೇಶ ಬಂದ ತಕ್ಷಣ ವಿಶ್ವಾಸಿಕರೊಂದಿಗೆ ಅವುಗಳನ್ನು ಕಳುಹಿಸಿ ಯೋಧರಿಗೆ ಮುಟ್ಟಿಸುವ ಕಾಯಕ ಮಾಡುತ್ತಿದ್ದರು. ಕೆಲ ಚಳುವಳಿಗಾರರಿಗೆ ವಾರಂಟ್ ಇದ್ದಾಗ ಸ್ವತಃ ತಾವೇ ಅವರಿದ್ದ ಜೋಳದ ಹೊಲಗಳಿಗೆ ಊಟ ಮುಟ್ಟಿಸುವ ಕಾಯಕ ಮಾಡಿದ ವೀರ ಮಹಿಳೆ ಸುಣಕಲ್ಲ ಬಿದರಿಯ ಕುಸೂಗುರು ಬಸಮ್ಮ."೮೮ ಇವರ ಈ ಕಾರ್ಯದ ಬಗ್ಗೆ ರಾಣೆಬೆನ್ನೂರು ಹಾಗೂ ಬ್ಯಾಡಗಿ ಭಾಗದ ಚಳುವಳಿಗಾರರು ಏಕ ಪ್ರಕಾರದ ಹೇಳಿಕೆಗಳನ್ನು ಗಮನಿಸಲಾಗಿದೆ.

**ಗಳಗನಾಥದ ದುರಗಪ್ಪ ಹರಿಜನ :** ಮೈಲಾರ ಮಹದೇವಪ್ಪ ತಂಡ ಹಾವನೂರು ಚಾವಡಿ ಸುಟ್ಟು ಗಳಗನಾಥ(ಹೆಬ್ಬಾಳದ ಹತ್ತಿರ) ಪಂಚಲಿಂಗೇಶ್ವರ ಗುಡ್ಡದ ಸೆಣಬಿನ ತೋಟಕ್ಕೆ ಹೋದರು. ಆ ಜಾಗವೆಲ್ಲ ಗಳಗನಾಥದ ಜಮೀನ್ದಾರದ್ದು ಮತ್ತು ಅವರು ಇಂಗ್ಲಿಷರಿಗೆ ಆತ್ಮೀಯರು ಹಾಗೂ ಚಳುವಳಿಗಾರರನ್ನು ಕಂಡರೆ ಅವರಿಗೆ ಆಗುವುದಿಲ್ಲ ಎಂಬ ಸತ್ಯವನ್ನು ವೆಂಕಣ್ಣ ವಾಯಿ ಮಹದೇವಪ್ಪನಿಗೆ ಮುಂಜಾನೆ ತಿಳಿಸಿದಾಗ ಸರಿ ರಾತ್ರಿಯೇ ಇಲ್ಲಿಂದ ಹೋಗೋಣವೆಂದು ನಿರ್ಧರಿಸಿದರು.

ಗಳಗನಾಥದ ಜಮಿನ್ದಾರ ತಮ್ಮ ಸಂಬಂಧಿಯೊಬ್ಬರಿಗೆ ತಮ್ಮ ಸೆಣಬಿನ ತೋಟವನ್ನು ತೋರಿಸಲು ಬೆಳಗ್ಗೆ ಕರೆದುಕೊಂಡು ಬಂದರು. ಒಂದು ದಿನ್ನಿಯ ಮೇಲೆ ನಿಂತ ಜಮೀನ್ದಾರರು ತಮ್ಮ ಸೇವಕ ಹರಿಜನ ದುರುಗಪ್ಪನಿಗೆ ತೋಟ ಸುತ್ತಿ ಸೆಣಬು ಎಲ್ಲಲ್ಲಿ ಹೇಗೇಗೆ ಇದೇ ಎಂಬುದನ್ನು ನೋಡಿಕೊಂಡು ಬಾ ಎನ್ನಲು ಹರಿಜನ ದುರುಗಪ್ಪ ತೋಟವನ್ನು ಸುತ್ತುತ್ತಾ ಮಹದೇವಪ್ಪ ಇರುವ ಜಾಗದ ಕಡೆ ಬರುತ್ತಿದ್ದಂತೆ ಮಹದೇವಪ್ಪ ಮೈಲಾರ ದುರುಗಪ್ಪನನ್ನು ಹತ್ತಿರಕ್ಕೆ ಕರೆದು ನಾವು ಇಲ್ಲಿರುವುದನ್ನು ನಿಮ್ಮ ದಣಿಗೆ ಮತ್ತು ಯಾರಿಗೂ ಹೇಳಬ್ಯಾಡ ಎಂದು ಕೇಳಿಕೊಳ್ಳುತ್ತಾರೆ. ತಾನು ಯಾರಿಗೂ ಹೇಳಲ್ಲ ಎಂದು ಮಾತು ಕೊಟ್ಟ ದುರುಗಪ್ಪ ಹರಿಜನ ಯಾರಿಗೂ ಯಾವತ್ತು ಹೇಳದಿರುವುದನ್ನು ಪರಮಣ್ಣ ಹರಕಂಗಿ ನೆನಪಿಸಿಕೊಳ್ಳುತ್ತಾರೆ.

**ಸ್ವಾತಂತ್ರ್ಯ ಯೋಧರಿಗೆ ಸಹಾಯ ಮಾಡಿದವರಲ್ಲಿ ಮತ್ತೊಬ್ಬ ವೀರಯೋಧ; ಕುರಬಗೊಂಡದ ಶಿವಬಸಪ್ಪ ಬಶೆಟ್ಟಿಯವರ :** ಹಾವೇರಿ ಜಿಲ್ಲೆಯ ಚಳುವಳಿಗಾರರಿಗೆ ಸಹಾಯ-ಸಹಕಾರ ನೀಡಿದವರಲ್ಲಿ ಹಾವೇರಿ ತಾಲೂಕಿನ ಕುರುಬಗೊಂಡದ ಸೋಮಣ್ಣ-ಹಿರಿಯಮ್ಮ ದಂಪತಿಗಳ ಪುತ್ರ ಶಿವಬಸಪ್ಪ ಬಶೆಟ್ಟಿಯವರು. ೧೯೪೨ರ ಚಲೇಜಾವ್ ಚಳುವಳಿಯ ಸಮಯಕ್ಕೆ ಸ್ವಾತಂತ್ರ್ಯ ಹೋರಾಟಗಾರರ

ಸಹಾಯಕ್ಕೆ ನಿಂತದ್ದು ವಿಶೇಷ. ಚಳುವಳಿ ಕಾಲಕ್ಕೆ ರಾಷ್ಟ್ರದ, ಪ್ರಾಂತದ ಮತ್ತು ಜಿಲ್ಲೆಯ ಚಳುವಳಿ ಮತ್ತು ಚಳುವಳಿಗಾರರ ಬಗ್ಗೆ ದಿನ ಪತ್ರಿಕೆಗಳನ್ನು ಓದಿ ತಿಳಿದುಕೊಂಡಿದ್ದರು. ಅದರಲ್ಲಿಯೂ ಮಹದೇವಪ್ಪ ಮೈಲಾರ ಬಗ್ಗೆ ಗೌರವ ಇಟ್ಟುಕೊಂಡಿದ್ದರು. ಮೈಲಾರ ಮಹದೇವಪ್ಪ ತನ್ನ ಭೂಗತ ಕಾರ್ಯಗಳಿಂದ ಜಿಲ್ಲೆಯ ಮತ್ತು ತಾಲೂಕಿನ ಪೊಲೀಸರಿಂದ ತಪ್ಪಿಸಿಕೊಳ್ಳಲು ಕುರುಬಗೊಂಡದ ಹತ್ತಿರವಿರುವ ಶಿವಪುರ ಗ್ರಾಮದ ಈಶ್ವರ ದೇವಾಲಯಕ್ಕೆ ಬಂದು ತನ್ನ ತಂಡದೊಂದಿಗೆ ವಾಸ್ತವ್ಯ ಹೂಡುತ್ತಿದ್ದರು. ಹೀಗೆ ಶಿವಪುರಕ್ಕೆ ಬರುತ್ತಿದ್ದ ಮಹದೇವಪ್ಪ ಶಿವಬಸಪ್ಪನವರ ಬಗ್ಗೆ ತಿಳಿದುಕೊಂಡಿದ್ದನು. ಹೀಗೆ ಒಬ್ಬರನ್ನೊಬ್ಬರು ನೋಡದಿದ್ದರೂ ಈರ್ವರೂ ವ್ಯಕ್ತಿತ್ವದ(ಸ್ವಭಾವದ) ಪರಿಚಯ ಮಾಡಿಕೊಂಡಿದ್ದ ಬಗ್ಗೆ ಮಹದೇವಪ್ಪನ ತಂಡದ ಸದಸ್ಯ ದೇವೇಂದ್ರಪ್ಪ ವಿಭೂತಿ ಹೇಳಿಕೆಯಿಂದ ತಿಳಿಯಲಾಗಿದೆ.

**ಊಟ-ಉಪಹಾರ ಮುಟ್ಟಿಸುವ ಕಾಯಕ :** "ಮಹದೇವಪ್ಪ ಮೈಲಾರ ತನ್ನ ಪರಿಚಯದವರಿಂದ ಶಿವಬಸಪ್ಪ ಬಶೆಟ್ಟಿಯನ್ನು ಸ್ನೇಹ ಮಾಡಿಕೊಂಡ ನಂತರದಲ್ಲಿ ಮಹದೇವಪ್ಪನ ತಂಡ ಹಾವೇರಿ ಹತ್ತಿರದ ಶಿವಪುರದಲ್ಲಿ ಬೀಡುಬಿಟ್ಟಾಗ ಊಟ-ಉಪಹಾರವನ್ನು ನಂಬಿಕೆಯವರಿಂದ ಶಿವಪುರಕ್ಕೆ ಊಟಕ್ಕೆ ಶೆಟ್ಟರು ಕಳುಹಿಸುತ್ತಿದ್ದರು."[೮] ಈ ವಿಚಾರ ಪೊಲೀಸರಿಗೆ ತಿಳಿದಿತ್ತು.

**ಮನೆಯ ಕಾರ್ಯಕ್ರಮಕ್ಕೆ ಮಹದೇವಪ್ಪ ಮತ್ತು ಪೊಲೀಸರು :** ಮಹದೇವಪ್ಪನೊಂದಿಗೆ ಒಳ್ಳೆಯ ಸ್ನೇಹ ಹೊಂದಿದ್ದ ಶೆಟ್ಟರು ತಮ್ಮ ಮನೆಯ ಕಾರ್ಯಕ್ರಮವೊಂದಕ್ಕೆ ಮಹದೇವಪ್ಪ ಮೈಲಾರ ದಂಪತಿಗಳನ್ನು ಆಮಂತ್ರಿಸಿದ್ದರಿಂದ ಮಹದೇವಪ್ಪ ಪತ್ನಿ ಸಿದ್ಧಮ್ಮ ಮನೆಗೆ ಬಂದರು. ಸ್ವಲ್ಪ ಹೊತ್ತಿಗೆ ಮಹದೇವಪ್ಪನನ್ನು ಹುಡುಕಿಕೊಂಡು ಪೊಲೀಸರು ಶೆಟ್ಟರ ಮನೆಗೆ ಬಂದರು. ಆಗ ಶೆಟ್ಟರ ಮನೆಯ ಹಿಂದೆ ದನದ ಕೊಟ್ಟಿಗೆಯಲ್ಲಿಯ ದನದ ಗ್ವಾದ್ನಿ(ದನಗಳಿಗೆ ಮೇವು ಹಾಕುವ ಜಾಗ) ಅದರಲ್ಲಿ ಮಹದೇವಪ್ಪನನ್ನು ಮಲಗಿಸಿ ಅವನ ಮೇಲೆ ಹುಲ್ಲನ್ನು ಹಾಕಿದರು. ಮನೆಪೂರ್ತಿ ಹುಡುಕಿದರು ಮಹದೇವಪ್ಪ ಸಿಗಲಿಲ್ಲ. ಇನ್ನು ಸಿದ್ಧಮ್ಮ ಮನೆಯ ಮಹಿಳೆಯರು ಅಡುಗೆ ಮಾಡುವವರ ಜೊತೆ ಅಡುಗೆ ತಯಾರಿ ಮಾಡುತ್ತಿದ್ದರಿಂದ ಪೊಲೀಸರಿಗೆ ಗೊತ್ತಾಗಲಿಲ್ಲ. ಮನೆಗೆ ಬಂದ ಪೊಲೀಸರಿಗೆ ಊಟ ಮಾಡಿಸಿ ಶೆಟ್ಟರು ಕಳುಹಿಸಿದರು. ನಂತರ ಮಹದೇವಪ್ಪ ದಂಪತಿಗಳಿಗೆ ಊಟ ಮಾಡಿಸಿ ಕಳುಹಿಸಿಕೊಟ್ಟರು. ಆದರೆ ಪೊಲೀಸರಿಗೆ ಮಹದೇವಪ್ಪನನ್ನು ಶೆಟ್ಟರು ರಹಸ್ಯ ಸ್ಥಳದಲ್ಲಿಟ್ಟಿದ್ದಾರೆ ಎಂಬ ಸಂಶಯ ಮೂಡಿತು. ಅದನ್ನು ಶೆಟ್ಟರಿಗೆ ಕೇಳುವ ಹಾಗಿರಲಿಲ್ಲ. ಕಾರಣ ಪ್ರತಿ ವರ್ಷ ಶಿವಬಸಪ್ಪ ಬಶೆಟ್ಟರು ಪೊಲೀಸರಿಗೆ ಖಂಡೆ ಪೂಜೆಗೆ ಮಾಮೂಲಿ(ಭಕ್ಷಿಸು) ಕೊಡುತ್ತಿದ್ದ ಬಗ್ಗೆ ಮತ್ತು ಮೈಲಾರ ಮಹದೇವಪ್ಪನ ಸಂಪರ್ಕದಿಂದಾಗಿ ಶೆಟ್ಟರು ಖಾದಿಧಾರಿಗಳಾದ ಅವರನ್ನು ಸಂದರ್ಶಿಸಿದ ಸಂಶೋಧಕ ಭೋಜರಾಜ ಪಾಟೀಲ ಹೇಳಿಕೆಗಳಿಂದ ಗುರುತಿಸಲಾಗಿದೆ.

**ಇನ್ನಿತರ ಚಳುವಳಿಕಾರರ ಸಂಪರ್ಕ :** ಮಹದೇವಪ್ಪನ ಸ್ನೇಹವಾದ ನಂತರ ಶಿವಬಸಪ್ಪ ಬಶೆಟ್ಟರಿಗೆ ಮಹದೇವಪ್ಪನಿಂದಲೇ ಸಂಗೂರು ಕರಿಯಪ್ಪ, ಹಳ್ಳಿಕೇರಿ ಗುದ್ಲೆಪ್ಪ, ಟಿ.ಆರ್.ನೆಶ್ವಿ

ಮೆಣಸಿನಾಳ ತಿಮ್ಮನಗೌಡರು, ಕೆ.ಎಫ್. ಪಾಟೀಲ್, ವೀರನಗೌಡ ಪಾಟೀಲ್, ರಮಾನಂದ ಮನ್ನಂಗಿ, ಪಂಚಾಕ್ಷರಿ ಒಳಸಂಗದ, ಫಕ್ಕೀರಪ್ಪ ತಾವರೆ, ಸಿಂದೂರ ಸಿದ್ದಪ್ಪ, ಅಂಗಡಿ ವೀರಣ್ಣ, ಹೇಮಣ್ಣ ಅಂಗಡಿ ಹೀಗೆ ಜಿಲ್ಲೆಯ ಚಳುವಳಿಗಾರರ ಸ್ನೇಹವಿದ್ದ ಬಗ್ಗೆ ಜಿಲ್ಲೆಯ ಹಲವು ಚಳುವಳಿಗಾರರಿಂದ ತಿಳಿಯುತ್ತದೆ.

**ಕಾಂಗ್ರೆಸ್ಸಿಗೆ ಶೆಟ್ಟರು** : "ಹಳ್ಳಿಕೇರಿ ಗುದ್ಲೆಪ್ಪ ಶಿವಬಸಪ್ಪ ಬಶೆಟ್ಟರನ್ನು ಕಾಂಗ್ರೆಸ್‌ನ ಸದಸ್ಯರನ್ನಾಗಿ ಮಾಡಿಕೊಂಡರು. ಜೀವನಪೂರ್ಣ ಕಾಂಗ್ರೆಸ್ಸಿಗರಾಗಿ, ಅದರ ಬಲವರ್ಧನೆಗಾಗಿ, ರಾಜಕೀಯ ವಿಜಯಕ್ಕಾಗಿ ಶ್ರಮಿಸಿದವರು ಶಿವಬಸಪ್ಪ ಬಶೆಟ್ಟರು. ಅಲ್ಲದೆ ಕಾಂಗ್ರೆಸ್ ಬೆಳೆದ ಹಾಗೆ ಶೆಟ್ಟರ ಜನಮನ್ನಣೆಯೂ ಬೆಳೆಯತೊಡಗಿತು. ಕುರಬಗೊಂಡದ ಸುತ್ತಮುತ್ತಲಿನ ಹತ್ತು ಹಲವು ಗ್ರಾಮಗಳಲ್ಲಿ ಶೆಟ್ಟರ ಆತ್ಮೀಯರ ತಂಡವೇ ಇರುವಂತಹ ಪರಿಸರ ನಿರ್ಮಾಣವಾಯಿತು."[೦]

**ಕರಿಯಪ್ಪ ಸಂಗೂರರರಿಗೆ ಸಹಾಯ** : "ಕಡುಬಡತನದಲ್ಲಿ ಹುಟ್ಟು ಬೆಳೆದು ದೇಶ ಸೇವೆಗಾಗಿ ಸಿದ್ಧರಾಗಿದ್ದ ಸಂಗೂರು ಕರಿಯಪ್ಪ ಶಿವಬಸಪ್ಪ ಬಶೆಟ್ಟರೊಂದಿಗೆ ಒಳ್ಳೆಯ ಸ್ನೇಹ ಇಟ್ಟುಕೊಂಡಿದ್ದರು. ಅವರ ಮಗನಿಗೆ ಎಂ.ಬಿ.ಬಿ.ಎಸ್. ಸೀಟು ಸಿಕ್ಕಿತು. ಆದರೆ ಮಗನಿಗೆ ವೈದ್ಯಕೀಯ ವಿದ್ಯಾಭ್ಯಾಸ ಮಾಡಿಸುವಷ್ಟು ಆರ್ಥಿಕ ಶಕ್ತಿ ಕರಿಯಪ್ಪನಿಗೆ ಇರಲಿಲ್ಲ. ಶೆಟ್ಟರನ್ನು ಕೇಳಲು ಅವರಿಗೆ ಮನಸ್ಸು ಬರಲಿಲ್ಲ. ಕಾರಣ ಶೆಟ್ಟರ ಋಣದ ಭಾರ ಹೆಚ್ಚಾಗಿತ್ತು. ಹಾಗಾಗಿ ಅವರನ್ನು ಹಣ ಕೇಳಲಿಲ್ಲ. ಆದರೆ ಈ ಸುದ್ದಿ ಶೆಟ್ಟರಿಗೆ ಪರರಿಂದ ತಿಳಿದಾಗ ಶೆಟ್ಟರು ತಕ್ಷಣವೇ ಕರಿಯಪ್ಪನನ್ನು ಕರೆಯಿಸಿ. ಅವರ ಮಗನ ವೈದ್ಯಕೀಯ ಅಭ್ಯಾಸಕ್ಕೆ ಆರ್ಥಿಕ ಸಹಾಯ ಮಾಡಿದ ಬಗ್ಗೆ ಸಂಶೋಧಕ ಭೋಜರಾಜ ಪಾಟೀಲರು ಹೇಳುತ್ತಾರೆ. ಈ ಘಟನೆ ಶೆಟ್ಟರು ಚಳುವಳಿಕಾರರ ಮೇಲಿಟ್ಟ ಗೌರವಕ್ಕೆ ಸ್ಪಷ್ಟ ಸಾಕ್ಷಿಯಾದರೆ, ಜಿಲ್ಲೆಯಲ್ಲಿ ಆರ್ಥಿಕವಾಗಿ ಸಬಲರಾದವರು ಚಳುವಳಿಗಾರರಿಗೆ ಹೇಗೆ ಸಹಾಯ-ಸಹಕಾರ ನೀಡುತ್ತಿದ್ದರು ಎಂಬುದಕ್ಕೆ ಸಾಕ್ಷಿ.

**ಚಳುವಳಿಕಾಲಕ್ಕೆ ಕೆ.ಎಫ್. ಪಾಟೀಲರಿಗೆ ಸಹಾಯ ಮಾಡಿದವರು** : ೧೯೪೨ರ ಚಲೇಜಾವ್ ಚಳುವಳಿ ಕಾಲಕ್ಕೆ ಪೊಲೀಸರಿಂದ ಕೆ.ಎಫ್. ಪಾಟೀಲ್ ತಪ್ಪಿಸಿಕೊಂಡು ಓಡಾಡುವುದು ಅನಿವಾರ್ಯವಾಗಿತ್ತು. ಇಂಥ ಸಮಯದಲ್ಲಿ ಹಾವೇರಿಯಲ್ಲಿ ಮುಸ್ಸಂಜೆ ಸಮಯ ಅಜ್ಞಾತ ವ್ಯಕ್ತಿಯೊಬ್ಬ 'ನಿಮ್ಮ ಶಿಷ್ಯ(ಮಹದೇವಪ್ಪ ಮೈಲಾರ)ಮರಡೂರ ಸಾಹೇಬರ ಕಟ್ಟಿಗೆ ಅಡ್ಡೆಯಲ್ಲಿ ನಿಮಗಾಗಿ ಕಾಯುತ್ತಿದ್ದಾನೆ. ಬರೀ ಗೈಯಲ್ಲಿ ಹೋಗಬಾರದು' ಎಂದು ಹೇಳಿ ಮಾಯವಾದನು. ಹೀಗೆ ಹೇಳಿದ ವ್ಯಕ್ತಿ ಯಾರು ಅಂತ ಕೆ.ಎಫ್.ಪಾಟೀಲರಿಗೆ ಗೊತ್ತಿಲ್ಲ. ಆದರೆ ಆ ವ್ಯಕ್ತಿ ಹೇಳಿದ ಹೆಸರುಗಳು ಸರಿಯಾಗಿದ್ದವು. ಹೀಗೆ ಸಾಮಾನ್ಯನು ಕೂಡ ಈ ರೀತಿಯಲ್ಲಿ ಮಧ್ಯವರ್ತಿಯಾಗಿ ಕಾರ್ಯನಿರ್ವಹಿಸಿದ್ದು ಅಂದು ಮಹತ್ವದ ಹಾಗೂ ಕಷ್ಟದಾಯಕ ಕಾರ್ಯವೆಂಬುದನ್ನು ಅಲ್ಲಗಳೆಯುವಂತಿಲ್ಲ.

ಮಹದೇವಪ್ಪನಿಗೆ ಹಣದ ಅವಶ್ಯಕತೆಯಿರಬಹುದೆಂದು ಕೊಡಲು ಇವರ ಕಡೆ ಹಣವಿರಲಿಲ್ಲ. ಆಗ ಎದುರಿಗೆ ಬಂದ ಹೆರೂರ ಶಿವಲಿಂಗಪ್ಪನನ್ನು ಹಣ ಕೇಳಿದರು. ಅವರು ಯಾಕೆ? ಏನು?

ಎನ್ನದೇ ನೂರರ ಐದು ನೋಟುಗಳನ್ನು ಕೊಟ್ಟು ಹೋದರು. ಅವರು ಚಳುವಳಿಗಾರರಲ್ಲದಿರ ಬಹುದು. ಆದರೆ ಅವರು ಕೊಡುವ ಹಣ ಜಿಲ್ಲೆಯ ಚಳುವಳಿಯ ನಾಯಕ ಮಹದೇವಪ್ಪನಿಗೆ ಎಂಬುದು ಅವರಿಗೆ ಗೊತ್ತಿತ್ತೊ ಇಲ್ಲವೋ! ಅದನ್ನು ಸಹ ಕೇಳದೇ ಕೊಟ್ಟಿದ್ದು ಅವರು ಚಳುವಳಿಗಾರರ ಬಗ್ಗೆ ಇದ್ದ ಅಭಿಮಾನದ ದ್ಯೋತಕವಾಗಿದೆ. ಹಣ ಪಡೆದುಕೊಂಡು ಮರಡೂರ ಸಾಹೇಬರ ಕಟ್ಟಿಗೆ ಅಡ್ಡೆಗೆ ಹೋದರು. ಅಲ್ಲಿ ಮಹದೇವಪ್ಪನೊಂದಿಗೆ ಮಾತನಾಡಿ, ಇಲ್ಲಿಂದ ತಪ್ಪಿಸಿಕೊಳ್ಳಲು ಹೇಳಿದರು. ಆದರೆ ಇವರಿಬ್ಬರನ್ನೂ ತಮ್ಮ ಕಟ್ಟಿಗೆ ಅಡ್ಡೆಯಲ್ಲಿ ಸೇರಿಸಿಕೊಂಡ ಮರಡೂರ ಸಾಹೇಬರನ್ನು ಸ್ಮರಿಸಲು ಅರ್ಹರು. ಬಹುಶಃ ಆ ರೀತಿಯ ಸಹಾಯ-ಸಹಕಾರ ನೀಡಿರುವುದರಿಂದಲೇ ಚಳುವಳಿಗಾರರಿಗೆ ಅಲ್ಪ-ಸ್ವಲ್ಪವಾದರೂ ತೊಂದರೆ ತಪ್ಪಿಸಿಲು ಸಾಧ್ಯವಾಯಿತು. ಇದನ್ನೇ ದೊಡ್ಡ ಕಲ್ಲಿಗೆ ಚೀಪು ಕಲ್ಲಿನ ಸಹಾಯ ಎಷ್ಟು ಅವಶ್ಯ ಎಂಬುದನ್ನು ಗ್ರಹಿಸಬೇಕಾಗುತ್ತದೆ.

**ಬೆಟಗೇರಿ ರಾಮಣ್ಣ**

"ಹಿರೇಕೆರೂರು ತಾಲೂಕಿನ ಬೆಟಗೇರೂರ ಗ್ರಾಮದ ಆರಿಕಟ್ಟಿ ಮನೆತನದ ಬಸನಗೌಡ-ಮಲ್ಲಮ್ಮ ದಂಪತಿಗಳ ಪುತ್ರ. ಸಾಮಾನ್ಯ ಕೃಷಿ ಕುಟುಂಬದಲ್ಲಿ ಜನಿಸಿದ ಇವರು ಬ್ಯಾಡಗಿಯಲ್ಲಿ ಗುಮಾಸ್ತರಾಗಿ ನಂತರದಲ್ಲಿ ಸ್ವತಂತ್ರವಾದ ವ್ಯಾಪಾರವನ್ನು ಪ್ರಾರಂಭಿಸಿ ವ್ಯಾಪಾರದೊಂದಿಗೆ ಸಾಮಾಜಿಕ ಸೇವೆಯನ್ನು ಮಾಡಲಾರಂಭಿಸಿದರು.

**ರಾಷ್ಟ್ರಪ್ರೇಮ**- ಬೆಟಗೇರಿ ರಾಮಣ್ಣ ಧಾರವಾಡ ಜಿಲ್ಲೆ ದಕ್ಷಿಣ ಭಾಗದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾದ ವೀರನಗೌಡ ಪಾಟೀಲ್, ಕೆ.ಎಫ್. ಪಾಟೀಲ್, ಟಿ.ಆರ್. ನೆಶ್ವಿ, ಹಳ್ಳಿಕೇರಿ ಗುದ್ಲೆಪ್ಪ, ವೆಂಕಟೇಶ ಮಾಗಡಿ, ಸಂಗೂರ ಕರಿಯಪ್ಪ, ಲಿಂಗರಾಜ ಮುದ್ದಣ್ಣನವರ, ಸಿದ್ದಲಿಂಗಯ್ಯ ಹಿರೇಮಠ, ಸಿ.ಬಿ.ಸೂಳಿಕೇರಿಮಠ ಮೊದಲಾದವರಿಗೆ ಬೆಂಬಲವಾಗಿ ನಿಂತವರು. ರಾಮಣ್ಣನ ಮನೆಯಲ್ಲಿ ಎಲ್ಲರೂ ರಾಟಿಯಿಂದ ನೂಲು ತೆಗೆಯುತ್ತಿದ್ದರು. ಬ್ಯಾಡಗಿಯಲ್ಲಿ ಕಾಂಗ್ರೆಸ್ ಪಕ್ಷವನ್ನು ಸ್ಥಾಪಿಸಿದವರು ಮತ್ತು ಸಂಘಟಿಸಿದವರು. ಇವರೊಂದಿಗೆ ಸಿದ್ದಪ್ಪ ಹುಂಬಿ, ಪಂಚಪ್ಪನವರ ಕಬ್ಬೂರು, ಮುರಿಗೆಪ್ಪನವರ ಮೋಟಗಿ, ಗಣೇಶಪ್ಪ ಮೆಲ್ಮುರಿ, ಫಕ್ಕೀರಪ್ಪ ದಂದೂರು ಇನ್ನೂ ಮುಂತಾದವರು ಇವರೊಂದಿಗೆ ಗುರುತಿಸಿಕೊಂಡವರು."[೧]

ಗಾಂಧೀಜಿ ಹಾವೇರಿ ಜಿಲ್ಲೆಯ ಪ್ರವಾಸ ಕೈಗೊಂಡಾಗ ರಾಮಣ್ಣ ಅವರನ್ನು ಬ್ಯಾಡಗಿಗೆ ಬರಮಾಡಿಕೊಂಡು ಹರಿಜನ ನಿಧಿಗೆ ಕಾಣಿಕೆ ನೀಡಿದರು. ನಂತರದಲ್ಲಿ ಬ್ಯಾಡಗಿ ಭಾಗದಲ್ಲಿ ಪಾನನಿರೋಧ ಚಳುವಳಿ ಅಂಗವಾಗಿ ಸೇಂದಿಗಿಡ ಕಡಿಯುವ ಯೋಜನೆಯೊಂದನ್ನು ಕಾಂಗ್ರೆಸ್ ಮಿತ್ರರೊಂದಿಗೆ ರೂಪಿಸಿದರು. ಅದರಲ್ಲಿ ಪಾಲ್ಗೊಳ್ಳಲು ರಾಮಣ್ಣ ಅನೇಕರನ್ನು ಪ್ರೇರೇಪಿಸಿದರು. ಅದಕ್ಕಾಗಿ ಹಲವಾರು ತಂಡಗಳನ್ನು ಮಾಡಿ ಒಬ್ಬೊಬ್ಬ ನಾಯಕರೊಂದಿಗೆ ಬೇರೆ ಬೇರೆ ಸ್ಥಳಗಳಿಗೆ ಕಳುಹಿಸಿದರು. ತಾವು ಒಂದು ತಂಡದ ನೇತೃತ್ವ ವಹಿಸಿಕೊಂಡರು. ಇತರ ತಂಡಗಳನ್ನು ಪೊಲೀಸರು ಆಗಲೇ ಬಂಧಿಸಿದರು. ಆದರೆ ಇವರ ತಂಡ ಪೊಲೀಸರಿಗೆ ಸಿಗದೆ ತಮ್ಮ ಕಾರ್ಯವನ್ನು ಮುಗಿಸಿ ಬಂದಿತು. ಆಗ ರಾಮಣ್ಣನನ್ನು ಬಂಧಿಸಲು ಪೊಲೀಸ್ ವಾರೆಂಟ್

ತೆಗೆದಾಗ ಇವರು ತಪ್ಪಿಸಿಕೊಂಡು ಮಲೆನಾಡು ಭಾಗಕ್ಕೆ ಹೋಗಿ ಭೂಗತರಾಗಿ ಪೋಲೀಸ್ ವಾರೆಂಟ್ ನಿರರ್ಥಕಗೊಳಿಸಿದ ಬಗ್ಗೆ ಹಾಗೂ ಚಳುವಳಿಕಾರರಿಗೆ ಸಹಾಯ ಮಾಡುವುದರೊಂದಿಗೆ ಸ್ವತಃ ಚಳುವಳಿಯಲ್ಲಿ ಭಾಗಿಯಾಗಿ ಪ್ರೇರಣೆಯಾದ ವಿವರವನ್ನು ಪುಟ್ಟಪ್ಪ ಹರಬಿ ಹಾಗೂ ಷಡಕ್ಷರಪ್ಪ ಮಹಾರಾಜಪೇಟೆಯವರಿಂದ ತಿಳಿಸಲಾಗಿದೆ.

**ಆಶ್ರಮ ಸ್ಥಾಪನೆ** : "ವ್ಯಾಪಾರಿಗಳಾದ ರಾಮಣ್ಣ ಚಳುವಳಿಗಾರ ಹರ್ಡೀಕರ್ ಮಂಜಪ್ಪ ಆತ್ಮೀಯ ಸ್ನೇಹಿತರಾಗಿದ್ದು ಮಂಜಪ್ಪನವರ ಸಮಾಜೋದ್ಧಾರ ಕಾರ್ಯದಲ್ಲಿ ರಾಮಣ್ಣ ಸಹಾಯ ಇದ್ದೇ ಇರುತ್ತಿತ್ತು. ೧೯೨೪ರಲ್ಲಿ ಹರ್ಡೇಕರ್ ಮಂಜಪ್ಪ ಗಾಂಧೀಜಿಯ ಸಾಬರಮತಿ ಆಶ್ರಮದ ವಿಚಾರವನ್ನು ರಾಮಣ್ಣನಿಗೆ ತಿಳಿಸಿದ್ದರಿಂದ ತಾವು ಆ ರೀತಿಯ ಆಶ್ರಮ ಸ್ಥಾಪಿಸಬೇಕೆಂಬ ಯೋಚನೆ ಮೂಡತೊಡಗಿತು.

**ಭಾರತೀಯ ತರುಣ ಸಂಘ** : ಬೆಟಗೇರಿ ರಾಮಣ್ಣ ತಮ್ಮ ಕಲ್ಪನೆಯ ಆಶ್ರಮ ಕಾಂಗ್ರೆಸ್ ಕಾರ್ಯಕರ್ತರು ಒಂದೆಡೆ ಸೇರಲು, ಸಭೆ ನಡೆಸಲು, ವಿಶ್ರಾಂತಿ ಪಡೆಯಲು ಹಾಗೂ ಅಲ್ಲಿಂದ ಸಾಮಾಜಿಕ ಕಾರ್ಯಗಳನ್ನು ಮಾಡಲು ಯೋಗ್ಯ ಸ್ಥಳವಾಗಬೇಕೆಂಬ ಧ್ಯೇಯ ಅವರದ್ದಾಗಿತ್ತು. ಹಾಗಾಗಿ ತಮಗಿಂತಲೂ ಹಿರಿಯರಾದ ವೀರನಗೌಡ ಪಾಟೀಲ್, ಟಿ.ಆರ್. ನೆಶ್ವಿ ಮುಂತಾದವರೊಂದಿಗೆ ಸೇರಿಕೊಂಡು 'ಭಾರತೀಯ ತರುಣ ಸಂಘ'ವೆಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ಅದರ ಕೇಂದ್ರ ಧಾರವಾಡದಲ್ಲಿತ್ತು. ಟಿ.ಆರ್.ನೆಶ್ವಿ, ವೀರನಗೌಡ ಪಾಟೀಲರಿಗೆ ಆಶ್ರಮವನ್ನು ನಡೆಸಿಕೊಂಡು ಹೋಗಲು ಹಲವು ರೀತಿಯ ಅನುಕೂಲತೆಗಳನ್ನು ರಾಮಣ್ಣ ಮಾಡಿಕೊಟ್ಟರು. ಅದಕ್ಕಾಗಿ ತಾವು ತಡಸದಲ್ಲಿ ಕೊಂಡುಕೊಂಡ ೪೪ ಎಕರೆ ಜಮೀನನ್ನೂ ಭಾರತೀಯ ತರುಣ ಸಂಘಕ್ಕೆ ದಾನ ಮಾಡಿದರು."[೯೧] ಇದು ಅವರ ರಾಷ್ಟ್ರಪ್ರೇಮ ಮತ್ತು ಚಳುವಳಿಗಾರರ ಮೇಲಿರುವ ಗೌರವದ ಸಂಕೇತವೆಂಬುದನ್ನು ಗಮನಿಸಬಹುದು. ಅಲ್ಲದೇ ಜಿಲ್ಲೆಯಲ್ಲಿ ಈ ರೀತಿಯ ಪರೋಪಕಾರಿ ಮನೋಭಾವದ ವ್ಯಕ್ತಿಗಳಿರುವುದಕ್ಕೆ ನಿದರ್ಶನವಾಗಿದೆ.

"ತಡಸದಿಂದ-ಬ್ಯಾಡಗಿಗೆ ಹೋಗುವ ಮುಖ್ಯ ಮಾರ್ಗದ ಬಲಬದಿಗೆ ಈ ಕ್ಷೇತ್ರವಿದೆ. ಆಶ್ರಮಕ್ಕಾಗಿ ಒಂದು ಮನೆಯನ್ನು ರಾಮಣ್ಣನವರೇ ಕಟ್ಟಿಸಿಕೊಟ್ಟರು. ಅವರ ಉದ್ದೇಶದಂತೆ ಕಾಂಗ್ರೆಸ್ ಕಾರ್ಯಕರ್ತರಿಗೆ ಅದೊಂದು ಮಹತ್ವದ ನೆಲೆಯಾಗಿತ್ತು. ಆ ಭಾಗದ ಗ್ರಾಮಗಳ ಜನತೆ ಈಗಲೂ ಆ ಆಶ್ರಮವಿದ್ದ ಸ್ಥಳಕ್ಕೆ 'ಕಾಂಗ್ರೆಸ್ ಮಟ್ಟಿ' ಎಂದೇ ಕರೆಯುತ್ತಾರೆ. ಆ ಆಶ್ರಮದಲ್ಲಿ ಸಿದ್ಧಲಿಂಗಯ್ಯ ಹಿರೇಮಠ, ತಿ.ರು. ನೆಶ್ವಿ ಹೆಚ್ಚಾಗಿ ಇರುತ್ತಿದ್ದರು. ಜಿ.ವಿ.ಹಳ್ಳಿಕೇರಿ, ನ್ಯಾಮತಿ ವೀರಭದ್ರಪ್ಪ, ವಿ.ಟಿ. ಮಾಗಡಿ, ವೀರನಗೌಡ ಪಾಟೀಲ್ ಮುಂತಾದವರು ಆಗಾಗ ಬರುತ್ತಿದ್ದರು. ಆಶ್ರಮವನ್ನು ಅಭಿವೃದ್ಧಿಪಡಿಸಲು ಟಿ.ಆರ್. ನೆಶ್ವಿ ತಮ್ಮ ಸ್ವಂತ ಹಣದಿಂದ ಬಾವಿ ತೋಡಿಸುವ ಕಾರ್ಯ ಆರಂಭಿಸಿದರೆ, ಕಜ್ಜರಿ ಸಿದ್ಧಲಿಂಗಯ್ಯ ಊರಲ್ಲಿಯ ರೈತರ ಎತ್ತುಗಳನ್ನು ತಂದು ಬೇಸಾಯ ಮಾಡುತ್ತಿದ್ದರು.

**'ಭಾರತೀಯ ತರುಣ ಸಂಘ'**ವು ಸುತ್ತಮುತ್ತಲಿನ ಗ್ರಾಮಗಳಲ್ಲಿ ಗ್ರಾಮೋದ್ಯೋಗ, ಖಾದಿ, ನೂಲುವುದು, ನೇಯುವುದು ಮುಂತಾದ ಕಾರ್ಯಚಟುವಟಿಕೆಗಳಿಂದ ಗ್ರಾಮೀಣ ಮಹಿಳೆಯರು, ವಿಧವೆಯರು, ಬಲಹೀನರಿಗೆ ಉತ್ಪನ್ನಕ್ಕೆ ಮಾರ್ಗ ಕಲ್ಪಿಸಿದರೆ, ಇನ್ನೊಂದೆಡೆ ಉಳಿತಾಯದ ದಾರಿಯನ್ನು ಈ ಆಶ್ರಮ ತೋರಿಸಿತು."[೯೨]

ಆಶ್ರಮದಲ್ಲಿ ಪ್ರತಿದಿನ ಮುಂಜಾನೆ ಪ್ರಭಾತ ಫೇರಿ ಹೊರಡಿಸಿ ಜನರಲ್ಲಿ ದೇಶಾಭಿಮಾನ ಮೂಡಿಸಿದರು. ಹರಿಜನರಿಗೆ ಗ್ರಾಮಗಳಲ್ಲಿ ಹೊಂಡದ ನೀರನ್ನು ಬಳಸಲು ಮುಕ್ತ ಅವಕಾಶ ಕಲ್ಪಿಸಿದರು. ಹಳ್ಳಿಗರ ಚಿಕ್ಕಮುಟ್ಟ ರೋಗಗಳಿಗೆ ಔಷಧಿಯನ್ನು ಕೊಡುತ್ತಿದ್ದರು. ಹೀಗೆ ಹತ್ತಾರು ರೀತಿಯಲ್ಲಿ ಸಮಾಜ ಸೇವೆ ಭರದಿಂದ ನಡೆಯತೊಡಗಿತ್ತು. ಟಿ.ಆರ್.ನೆಶ್ವಿ ಆಶ್ರಮದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು.

"ಆಶ್ರಮದ ನಿರ್ಮಾತೃ ರಾಮಣ್ಣ ಬೆಟಗೇರಿಯ ಆರ್ಥಿಕ ಸ್ಥಿತಿಗತಿ ದುರ್ಬಲವಾಗುತ್ತಿದ್ದರೂ ತ್ಯಾಗ ಬುದ್ಧಿಯ ರಾಮಣ್ಣ ಆಶ್ರಮ ಜಮೀನನ್ನು ಆಶ್ರಮಕ್ಕೆ ಕಾನೂನುಬದ್ಧ ಮಾಡಲು ಕೊಡದ(ಆಗ ತಾಲೂಕಾ ಕೇಂದ್ರ)ಉಪನೋಂದಣಿ ಕಛೇರಿಯಲ್ಲಿ 'ಭಾರತೀಯ ತರುಣ ಸಂಘ'ಕ್ಕೆ ಬಕ್ಷೀಸ್ ಕೊಟ್ಟು ನೋಂದಣಿ ಮಾಡಿಸಿದರು. ಆಗ ಅವರ ವಯಸ್ಸು ಕೇವಲ ೩೬. ೧೯೪೨ರ ಚಳುವಳಿ ಉಗ್ರ ಸ್ವರೂಪ ತಾಳಿದ ಕಾಲದಲ್ಲಿ ಪೊಲೀಸರು ಈ ಆಶ್ರಮವನ್ನು ನಾಶಪಡಿಸಿದರು. ಸ್ವಾತಂತ್ರ್ಯ ನಂತರ ಇದು ಸಂಪೂರ್ಣವಾಗಿ ಅನಾಥವಾಯಿತು. ರಾಮಣ್ಣ ಯಾವ ಉದ್ದೇಶಗಳಿಗಾಗಿ ಈ ಆಶ್ರಮ ಸ್ಥಾಪಿಸಿದ್ದರೋ ಭಾಗಶಃ ಅವು ಈಡೇರಿದ್ದವು. ಆದ್ದರಿಂದ ಈ ಆಶ್ರಮದ ಅಗತ್ಯತೆ ಅಷ್ಟಾಗಿ ಕಂಡುಬರದಿದ್ದರಿಂದ ಟಿ.ಆರ್. ನೆಶ್ವಿ ರಾಮಣ್ಣನ ಈ ಆಶ್ರಮದ ೪೪ ಎಕರೆ ಜಮೀನನ್ನು ಪುನಃ ಅವರ ಪುತ್ರ ಮೃತ್ಯುಂಜಯ ಬೆಟಗೇರಿಗೆ ಮರಳಿಸಿದರು."[೯೩] ಇದು ಕೂಡಾ ಚಳುವಳಿ ನಾಯಕರ ನಿಸ್ವಾರ್ಥದ ಪ್ರತೀಕ ಎಂಬುದನ್ನು ಗಮನಿಸಲಾಗಿದೆ.

ಹಂಸಬಾವಿಯ ಹೈಸ್ಕೂಲಿನಲ್ಲಿ ವಿದ್ಯಾರ್ಥಿಗಳು ಅರಣ್ಯ ಸತ್ಯಾಗ್ರಹ ಮಾಡಿದ್ದಕ್ಕೆ ಕೆಲ ವಿದ್ಯಾರ್ಥಿಗಳಿಗೆ ಶಿಕ್ಷೆಯಾಯಿತು. ಈ ವಿದ್ಯಾರ್ಥಿಗಳ ಹಿಂದೆ ಒಬ್ಬ ನಾಯಕ ಇರಲೇಬೇಕು ಅವರನ್ನು ಪತ್ತೆ ಹಚ್ಚಿರೆಂದು ಪೊಲೀಸರಿಗೆ ನ್ಯಾಯಾಲಯ ಆದೇಶ ನೀಡಿತು. ಆಗ ಪೊಲೀಸರಿಗೆ ಕೇಳಿಬಂದ ಹೆಸರು ಕೆ.ಎಫ್. ಪಾಟೀಲರದು. ಅದಕ್ಕಾಗಿ ಅವರನ್ನು ಬಂಧಿಸಲು ಅವರಿಗೆ ಬರುವ ಪತ್ರಗಳನ್ನು ಪತ್ತೆ ಹಚ್ಚುವ ಕಾರ್ಯ ಆರಂಭಿಸಿದರು.

ಕೆ.ಎಫ್. ಪಾಟೀಲರಿಗೆ ಬರುವ ಪತ್ರಗಳನ್ನು ಹಂಸಬಾವಿಯ ಪೋಸ್ಟ್ ಆಫೀಸಿನ ಮಾಸ್ತರರಾದ ತಿಪ್ಪಣ್ಣ ವೈಶ್ಯ ಎಂಬುವವರು. ಇವರು ಈ ಹಿಂದೆ ಕೆ.ಎಫ್. ಪಾಟೀಲರಿಗೆ ಮೋಟೆಬೆನ್ನೂರಿನಲ್ಲಿ ಶಿಕ್ಷಕರಾಗಿದ್ದವರು. ಇವರು ಹಂಸಬಾವಿಯಲ್ಲಿ ಪೋಸ್ಟ್ ಮಾಸ್ತರಾಗಿ ಕಾರ್ಯನಿರ್ವಹಿಸುವಾಗ ಪಾಟೀಲರಿಗೆ ಬರುವ ಪತ್ರಗಳನ್ನು ತಮ್ಮಲ್ಲಿಯೇ ಇಟ್ಟುಕೊಂಡು ಪಾಟೀಲರು ಬಂದ ಮೇಲೆ ಅವರಿಗೆ ಮುಟ್ಟಿಸುತ್ತಿದ್ದರು. ಆದರೆ ಈ ವೇಳೆಗಾಗಲೇ ಪಾಟೀಲರಿಗೆ ಬರುವ ಪತ್ರಗಳು

ಬ್ಯಾಡಗಿಯಲ್ಲಿ ಸೆನ್ಸಾರ್ ಆಗಿ ಬರುತ್ತಿದ್ದರಿಂದ ಪೊಲೀಸರಿಗೆ ಮಾಹಿತಿ ಸಿಕ್ಕಿತ್ತು. ಈಗ ಹಂಸಬಾವಿಯಲ್ಲಿ ಪೋಸ್ಟ್ ಆಫೀಸಿನಲ್ಲಿಯೇ ಕುಳಿತ ಪೊಲೀಸ್ ಅಧಿಕಾರಿ ಪಾಟೀಲರು ಬಂದು ಪತ್ರ ತೆಗೆದುಕೊಳ್ಳುವಾಗ ಆ ಪತ್ರವನ್ನು ಹಿಡಿದರು. ಈ ಸಹಾಯ ಮಾಡುತ್ತಿದ್ದ ತಿಪ್ಪಣ್ಣ ವೈಶ್ಯರಿಗೆ ಗದರಿಸುತ್ತ, ಕೆಟ್ಟದಾಗಿ ಬೈಯಲಾಯಿತು."೯೪ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ನೇರವಾಗಿ ಚಳುವಳಿಗೆ ಭಾಗವಹಿಸದಿದ್ದರೂ ತಿಪ್ಪಣ್ಣ ವೈಶ್ಯರು ಈ ರೀತಿ ಸಹಾಯ ಮಾಡಿರುವುದು ಸ್ಮರಣಾರ್ಹವೇ.

**ಹಾಲಗಿ ಗ್ರಾಮದ ಮಹಿಳೆಯರು** : ಸ್ವಾತಂತ್ರ್ಯ ಹೋರಾಟದಲ್ಲಿ ಚಳುವಳಿಗಾರರಿಗೆ ಸಹಾಯ ಮಾಡಿದ ಗ್ರಾಮಗಳಲ್ಲಿ ಹಾವೇರಿ ತಾಲೂಕಿನ ಹಾಲಗಿ ಗ್ರಾಮವು ಮಹತ್ವದ ಪಾತ್ರ ವಹಿಸಿದೆ. ಈ ಪುಟ್ಟಗ್ರಾಮ ಅಂದು ಚಳುವಳಿಗಾರರಿಗೆ ನೆಚ್ಚಿನ ಗ್ರಾಮವಾಗಿತ್ತು. ಕಾರಣ ಮಹದೇವಪ್ಪ ಮೈಲಾರರ ತಂಡದ ಸದಸ್ಯರು ಹಾಲಗಿ ಭಾಗದಲ್ಲಿ ಯಾವತ್ತು ಊಟದ ತೊಂದರೆಯನ್ನು ಎದುರಿಸಲಿಲ್ಲ. ಕಾರಣ ಈ ಊರ ಮಹಿಳೆಯರು ತಾವು ತಮ್ಮ ತಮ್ಮ ಹೊಲ-ಗದ್ದೆಗಳಿಗೆ ಹೋಗುವಾಗ ತಮ್ಮ ತಮ್ಮ ಮನೆಯ ಆರ್ಥಿಕ ಸ್ಥಿತಿಗತಿಗೆ ತಕ್ಕಂತೆ ಹೆಚ್ಚು ಹೆಚ್ಚು ಊಟಕ್ಕೆ ತೆಗೆದುಕೊಂಡು ಹೋಗುತ್ತಿದ್ದರು. ಕಾರಣ ತಮ್ಮ ಹೊಲಗಳ ಬದುವಿನಲ್ಲಿ ಊಟದ ಗಂಟನ್ನು ಇಟ್ಟು ತಮ್ಮ ಕಾರ್ಯದಲ್ಲಿ ತಾವು ಮಗ್ನರಾಗಿರುತ್ತಿದ್ದರೆ, ಚಳುವಳಿಗಾರರು ಯಾರೇ ಬಂದರೂ ಹೊಲದ ಬದುವಿನಲ್ಲಿಯ ಊಟವನ್ನು ಮಾಡಬಹುದಿತ್ತು. ಅಂತಹ ವ್ಯವಸ್ಥಿತಿವಾದ ರೀತಿಯಲ್ಲಿ ಚಳುವಳಿಗಾರರಿಗೆ ಊಟ ನೀಡಿದ ಗ್ರಾಮವಿದು. ಹಾಗಾಗಿ ಹಾಲಗಿ ಗ್ರಾಮದ ಕಡೆ ಹೋದರೆ ತಮಗೆ ಊಟದ ಚಿಂತೆಯಿಲ್ಲ ಎನ್ನುವ ಮಟ್ಟಿಗೆ ಚಳುವಳಿಗಾರರಿಗೆ ಬರವಸೆ ನೀಡಿದ ಗ್ರಾಮವಿದು. ಹೀಗೆ ಚಳುವಳಿ ಕಾಲದಲ್ಲಿ ಈ ರೀತಿಯ ಅನ್ನವಿಟ್ಟು ಸಲುಹಿದ ಈ ಗ್ರಾಮದ ಕಾರ್ಯ ಸ್ಮರಣಾರ್ಹವಾದುದು ಎಂಬುದನ್ನು ಅದೇ ಭಾಗದ ದೇವೇಂದ್ರಪ್ಪ ವಿಭೂತಿ, ಪರಮಣ್ಣ ಹರಕಂಗಿ, ಫಕ್ಕೀರಯ್ಯ ಕುಲಕರಣಿ, ನಾಗವ್ವ ಉಂಡಿ ಮೊದಲಾದ ಚಳುವಳಿಗಾರರು ನೆನಪಿಸಿಕೊಳ್ಳುತ್ತಾರೆ.

**ಸಮ್ಮದ್ ಸಾಹೇಬ ಬೆಳ್ಳೂಡಿ : ಸಾ॥ ರಾಣೆಬೆನ್ನೂರು**

ಜನಾಬ ಸಮ್ಮದ್ ಸಾಹೇಬ್ ಹಾವೇರಿ ಜಿಲ್ಲೆಯ ರಾಣೆಬೆನ್ನೂರಿನವರು. ಹಾವೇರಿ ಭಾಗದ ಪ್ರಸಿದ್ಧ ಜನಪದ ಲಾವಣಿಕಾರರಾಗಿ ಅಸಾಧಾರಣ ಕೀರ್ತಿ ಪಡೆದವರು. ಕೇವಲ ಎರಡನೇ ತರಗತಿಯವರೆಗೆ ಓದಿದವರು. ಇವರು ತತ್ಕ್ಷಣವೇ ಹಾಡು ಕಟ್ಟಿ ರಾಗಬದ್ಧವಾಗಿ ಹಾಡುವ ಧೀಮಂತ ಕಲಾವಿದರಾಗಿದ್ದರು.

"ವಸಾಹತು ಪೂರ್ವದಲ್ಲಿ ಜನಿಸಿದ ಇವರು ದೇಶಪ್ರೇಮಿ. ಗಾಂಧೀಜಿ ಕರೆಕೊಟ್ಟ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಾಡಿ ಮಡಿದ ವೀರರ ಕಥೆಗಳನ್ನು ಲಾವಣಿ ರೂಪದಲ್ಲಿ ಹಾಡಿ ಜನಜಾಗೃತಿ ಮೂಡಿಸಿ ಜನಮನ ಗೆದ್ದವರು. ಇವರು ಮೈಲಾರ ಮಹದೇವಪ್ಪನ ಆತ್ಮೀಯ ಸ್ನೇಹಿತನಾಗಿದ್ದು

ಕೆಲವೊಮ್ಮೆ ಮಹದೇವಪ್ಪ ಭೂಗತ ಕಾರ್ಯ ಮಾಡುವಾಗ ಎಷ್ಟೋ ಸಾರಿ ಅವರಿಗೆ ಊಟದ ವ್ಯವಸ್ಥೆಯನ್ನು ಮಾಡಿದವನು.

ವೃತ್ತಿಯಿಂದ ಕಾಚಿನ(ದನಗಳ ಹೆಗಲಲ್ಲಿ ಆದ ಗಡ್ಡೆ ಕರಗಿಸುವ ಔಷಧಿ)ಮಾತ್ರೆಗಳನ್ನು ಮಾರುವವರಾದ ಇವರು ಪ್ರತಿಯೊಂದು ಊರುಗಳಿಗೆ, ಸಂತೆಗಳಿಗೆ ಹೋಗಿ ಡಪ್ಪು ಬಾರಿಸುತ್ತ ಸುಶ್ರಾವ್ಯವಾಗಿ ಪ್ರಸಂಗಗಳನ್ನು ಕುರಿತು ಹಾಡಲು ಪ್ರಾರಂಭಿಸಿದರೆ, ಜನ ಅವರಿಗರಿವಿಲ್ಲದಂತೆ ಸೇರಿ ಹಾಡನ್ನು ಕೇಳಿ ಮಾತ್ರೆಗಳನ್ನು ಖರೀದಿಸುತ್ತಿದ್ದರು. ಇವರ ಹಾಡುಗಳು ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದವು. ಇವರು ಆಶುಕವಿ, ಸಾದಾಸೀದಾ ಉಡುಪು ಧರಿಸಿ ಜನಮನ ಮುಟ್ಟುವಂತೆ ಹಾಡುವುದು ವಿಶೇಷ. ಇಂದಿಗೂ ಶಾಲಾ-ಕಾಲೇಜುಗಳಲ್ಲಿ ಅವರ ಹಾಡುಗಳು, ಲಾವಣಿಗಳು ಪ್ರಸ್ತುತ."[೫] ಮುಖ್ಯವಾಗಿ ಮಹದೇವಪ್ಪನ ಕುರಿತಾದ-

"ಕಾಂತನ ಕಳೆದುಕೊಂಡ ಕಾಮಿನಿಯಂತೆ ಭಾರತ ಹಾಕ್ವುದು ಕಣ್ಣೀರ ।
ಶಾಂತಿ ಸಮರದೊಳು ಗುಂಡಿನೇಟಿನೊಳು ಮಡಿದ ಮಹದೇವ ಮೈಲಾರ" ॥ಪ॥

ಈ ಜಾನಪದ ಗೀತೆ ಇಂದಿಗೂ ಜನಮಾನಸದಲ್ಲಿದೆ. ಇವರು ಮಹದೇವಪ್ಪ ಹುತಾತ್ಮನಾದ ಮೇಲೆ ಅವರ ಕುರಿತು ಈ ಹಾಡು ಕಟ್ಟಿ (ಜಾನಪದ)ಹಾಡುವಾಗ ಪೊಲೀಸರ ಗುಂಡಿನೇಟಿನೋಳು ಎನ್ನುವಾಗ ದುಃಖಿತರಾಗುತ್ತಿದ್ದರು. ಇವರು ತುಂಬಾ ಸ್ವಾಭಿಮಾನಿ. ಸ್ವಾತಂತ್ರ್ಯ ನಂತರದಲ್ಲಿ ಇವರಿಗೆ ಚಳುವಳಿಗಾರರ ಪರವಾಗಿ ಇವರು ಮಾಡಿದ ಸೇವೆಗಾಗಿ ಸರಕಾರದಿಂದ ಗೌರವ ಧನ ಕೊಡಿಸಲು ಚಳುವಳಿಗಾರರು ಕೇಳಿದರೆ ತಾನು ಮುಂದೆ ಈ ರೀತಿ ಸಹಾಯ ಪಡೆಯುವ ಸಲುವಾಗಿ ಅಂದು ಲಾವಣಿ ಹಾಡಿಲ್ಲ. ಹಾಗಾಗಿ ನಾ ಸರಕಾರದ ಹಣ ಪಡೆಯುವುದಿಲ್ಲ ಎಂದು ನಿರಾಕರಿಸಿದ ಸ್ವಾಭಿಮಾನಿ ಎಂದು ಸಂಶೋಧಕರಾದ ಲಿಂಗರಾಜ ಕಮ್ಮಾರ ಸಂದರ್ಶನದಲ್ಲಿ ವಿವರಿಸುತ್ತಾರೆ.

**೨. ಜಿಲ್ಲೆಯ ನೆರೆಯ ತಾಲೂಕುಗಳಿಂದ ಬಂದ ಸ್ವಾತಂತ್ರ್ಯ ಹೋರಾಟಗಾರರು**

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಇಲ್ಲಿಯ ಚಳುವಳಿಗಾರರೊಂದಿಗೆ ಗಡಿ ಜಿಲ್ಲೆ, ತಾಲೂಕುಗಳಿಂದ ಬಂದು ಇಲ್ಲಿಯ ನಾಯಕರ ನೇತೃತ್ವದಲ್ಲಿ ಹಲವು ವಿಧಾಯಕ ಕಾರ್ಯಗಳನ್ನು ಮಾಡಿದ ಕೀರ್ತಿಗೆ ಪಾತ್ರರಾಗಿರುವುದನ್ನು ಗುರುತಿಸಲಾಗಿದೆ. ಅಂಥ ಪ್ರಕರಣಗಳಲ್ಲಿ ಮಹತ್ವವಾದ ಒಂದು ತಂಡವೆಂದರೆ ಶಿರಹಟ್ಟಿ ತಾಲೂಕಿನ ಕೊಗನೂರಿನ ಗೋಣೆಪ್ಪ ಕಮತದರವರ ತಂಡ. ಆ ತಂಡದ ಹಿನ್ನೆಲೆಯನ್ನು ಗಮನಿಸುವುದಾದರೆ-

"ಗಾಂಧೀಜಿ ದೇಶದ ಬಿಡುಗಡೆಗೆ ನೀಡಿದ್ದ ಕರೆಗೆ ಎಚ್ಚೆತ್ತ ಗ್ರಾಮಗಳಲ್ಲಿ ಕೊಗನೂರು ಒಂದು. ಈ ಗ್ರಾಮ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಪುಟ್ಟ ಗ್ರಾಮ. ಆದರೆ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಈ ಗ್ರಾಮ ನೀಡಿದ ಕೊಡುಗೆ ಅಪಾರ. ಈ ಚಿಕ್ಕ ಗ್ರಾಮ ಸುಮಾರು ಇಪ್ಪತ್ತು ಜನ ಚಳುವಳಿಗಾರರಿಗೆ ಜನ್ಮ ನೀಡಿದ್ದು ವಿಶೇಷವೇ ಸರಿ. ಈ ಊರಿನವರೇ ಹೊಸರಿತ್ತಿ ಗ್ರಾಮದಲ್ಲಿಯ ವೀರಭದ್ರೇಶ್ವರ ದೇವಾಲಯದಲ್ಲಿ ಮೈಲಾರ ಮಹದೇವಪ್ಪನೊಂದಿಗೆ ವೀರಯ್ಯ ಹಿರೇಮಠ ಮತ್ತು ತಿರುಕಪ್ಪ ಮಡಿವಾಳರ ರಕ್ತಾಭಿಷೇಕ ಎರೆದವರು.

ಕೊಗನೂರಿನ ಅಯ್ಯಪ್ಪ ಮತ್ತು ಗುರುಪಾದಮ್ಮ ದಂಪತಿಗಳ ಮೂರು ಜನ ಪುತ್ರರಲ್ಲಿ ವೀರಯ್ಯ ಹಿರೇಮಠ ಕೊನೆಯ ಮಗ. ತಿರುಕಪ್ಪ ಮಡಿವಾಳರ ಇವರ ತಂದೆ-ತಾಯಿ ಯಮುನಪ್ಪ-ಯಮುನವ್ವ ದಂಪತಿಗಳ ಪುತ್ರ. ಇವರೀರ್ವರೂ ಕೊಗನೂರಿನಲ್ಲಿ ಆರನೆಯ ತರಗತಿಯವರೆಗೂ ಓದಿದವರು. ಇವರಲ್ಲಿ ವೀರಯ್ಯ ಮಾತ್ರ ಮುಂಡರಗಿಯ ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನದ ಮಠದಲ್ಲಿದ್ದು ಮುಲ್ಕಿ ಪರೀಕ್ಷೆ ಪಾಸು ಮಾಡಿಕೊಂಡು ಮರಳಿ ಕೊಗನೂರಿಗೆ ಬಂದವರು. ಇಬ್ಬರೂ ಬಡ ಕುಟುಂಬವಾಗಿದ್ದರಿಂದ ಮನೆಯಲ್ಲಿ ಕೃಷಿ ಕಾಯಕದಲ್ಲಿ ತೊಡಗಿದವರು. ಹೀಗಿರುವಾಗ ದೇಶಾದ್ಯಂತ ಸ್ವಾತಂತ್ರ್ಯ ಸಮರದ ಚಂಡಮಾರುತ ಬೀಸತೊಡಗಿತ್ತು. ಆ ಚಂಡಮಾರುತ ಕೊಗನೂರನ್ನು ತಲುಪಿತು. ಗಾಂಧೀಜಿಯ 'ಮಾಡು ಇಲ್ಲವೇ ಮಡಿ' ಎಂಬ ಸಂದೇಶ ಇಡೀ ಭಾರತವನ್ನು ಬಡಿದೆಬ್ಬಿಸಿದಂತೆ ಕೊಗನೂರಿನ ಯುವಕರಿಗೆ ಗೋಣೆಪ್ಪ ಕಮತರಿಂದ ಬಡಿಯತೊಡಗಿತು."[೯೬]

ಗೋಣೆಪ್ಪ ಕಮತ ಜನಪರ ಹೋರಾಟಗಾರರು. ಕೊಗನೂರಿನ ಯುವಕರಿಗೆಲ್ಲ ನಾಯಕರಾಗಿದ್ದವರು. ಇವರ ತಂಡದಲ್ಲಿ ಇದ್ದ ಪ್ರಮುಖರೆಂದರೆ-ಗುಡ್ಡಪ್ಪ ಡಿಳ್ಳೆಪ್ಪನವರ, ವೀರಯ್ಯ ಹಿರೇಮಠ, ತಿರುಕಪ್ಪ ಮಡಿವಾಳರ, ವೀರಪ್ಪ ಅಂಗಡಿ, ನಿಂಗಪ್ಪ ಕೊರಗುಂದ, ವೀರಭದ್ರಗೌಡ ಪಾಟೀಲ, ಭಗವಂತಪ್ಪ ಭೂದನೂರು, ವಾಸರೆಡ್ಡಿ ಹೊಸಮನಿ, ನಿಸ್ಸೀಮಪ್ಪ ಚಿನ್ನೂರು, ಇಷ್ಟಲಿಂಗಯ್ಯ ಹಿರೇಮಠ, ಮುದ್ದಪ್ಪ ಹಡಪದ, ಬಸವಕುಮಾರ ಶಿಗ್ಲಿ, ಗುರಪ್ಪ ಗೋಧಿ ಹೀಗೆ ಯುವ ಪಡೆ ಗೋಣೆಪ್ಪನ ನೇತೃತ್ವದಲ್ಲಿ ಸ್ವಾತಂತ್ರ್ಯ ಸಮರಕ್ಕೆ ಸಿದ್ಧವಾಯಿತು.

"ಈ ಯುವಪಡೆಗೆ ನೆಚ್ಚಿನ ನಾಯಕ ಗೋಣೆಪ್ಪ ದೊಡ್ಡಾಟದ ತಾಲೀಮು ನೆಪದಲ್ಲಿ ಎಲ್ಲ ಯುವಕರನ್ನು ಚಾವಡಿಯ ಹತ್ತಿರದ ಒಂದು ಮನೆಯಲ್ಲಿ ಸೇರಿಸಿ ದೇಶದ ಸ್ವಾತಂತ್ರ್ಯದ ವಿಚಾರವಾಗಿ ವಿವಿಧ ಭಾಗಗಳಲ್ಲಿ ನಡೆಯುವ ವಿದ್ಯಮಾನಗಳನ್ನು ಯುವಕರಿಗೆ ತಿಳಿಸುತ್ತಿದ್ದರು. ನಾವೆಲ್ಲ ಬಿಳಿಯರನ್ನು ದೇಶದಿಂದ ಹೊರಹಾಕದಿದ್ದರೆ ನಮ್ಮ ಜನ ಸುಖವಾಗಿರಲಾರರು. ರೈತರು ಸುಧಾರಿಸಲಾರರು, ಕೂಲಿಕಾರರ ಸಮಸ್ಯೆಗಳು ಬಗೆಹರಿಯಲಾರವು. ಇವೆಲ್ಲವುಗಳಿಗೆ ಒಂದೇ ಪರಿಹಾರದ ಮಂತ್ರ **'ಮಾಡು ಇಲ್ಲವೇ ಮಡಿ'**. ದೇಶದ ಸ್ವಾತಂತ್ರ್ಯಕ್ಕಾಗಿ ನಾವು ಏನಾದರೂ ಮಾಡಬೇಕು. ಅದು ನಮ್ಮ ಉದ್ದೇಶವಾಗಬೇಕು, ಆ ಪವಿತ್ರ ಕಾರ್ಯದಲ್ಲಿ ನಾವು ಮಡಿದರೂ ಚಿಂತೆಯಿಲ್ಲ ಎಂಬ ಅವರ ವಾಣಿಗೆ ಯುವಪಡೆ ಸಿದ್ಧವಾಯಿತು. ಹಾಗೆಯೇ ಕೊಗನೂರು, ಹೆಬ್ಬಾಳ ಭಾಗಗಳಲ್ಲಿ ಸರಕಾರಿ ಚಾವಡಿಗಳನ್ನು ಸುಟ್ಟು ಭೂದಿ ಮಾಡಿದರು."[೯೭]

**ಕೊಗನೂರಿನ ಗೋಣೆಪ್ಪನ ತಂಡದ ಕಾರ್ಯಗಳು :** ಹಾವೇರಿ ಭಾಗದ ಚಳುವಳಿ ನಾಯಕ ಮಹದೇವಪ್ಪ ಮೈಲಾರರಿಗೆ ತಿಳಿದು ಆ ತಂಡದ ಕಾರ್ಯಗಳ ಕುರಿತು ಸ್ನೇಹಿತರೊಂದಿಗೆ ಮೆಚ್ಚುಗೆಯ ಮಾತುಗಳನ್ನು ಆಡಿದ್ದರು. ಹೀಗಿರುವಾಗ ಗೋಣೆಪ್ಪನೊಂದಿಗೆ ಭೇಟಿಯಾಗುವ ಅವಕಾಶ ಲಭಿಸಿತು. ತಾವು ಎರಡು ತಂಡ ಸೇರಿ ಚಳುವಳಿ ಮಾಡಿದರೆ ಸರಕಾರಕ್ಕೆ ಮತ್ತಷ್ಟು ಅಪಾರ ಹಾನಿ ಮಾಡಿ ಆಡಳಿತ ಯಂತ್ರ ಕುಸಿಯುವಂತೆ ಮಾಡಲು ಯಶಸ್ವಿಯಾಗುತ್ತೇವೆ ಎಂದು ನಿರ್ಧರಿಸಿ ಗೋಣೆಪ್ಪನ ತಂಡ ಮಹದೇವಪ್ಪನ ತಂಡದೊಂದಿಗೆ ಸೇರಿತ್ತು.

ಮಹದೇವಪ್ಪ ಮೈಲಾರರ ತಂಡದೊಂದಿಗೆ ಸಮರಕ್ಕೆ ಹೆಜ್ಜೆಯಿಟ್ಟ ಕೊಗನೂರಿನ ಎಲ್ಲ ಯುವಪಡೆ ಮಹದೇವಪ್ಪನ ತಂಡದೊಂದಿಗೆ ಸೇರಿತು. ಮಹದೇವಪ್ಪ ಎಲ್ಲ ತರುಣರನ್ನು ಬೆಳಗಿನ ಐದು ಗಂಟೆಗೆ ಎಬ್ಬಿಸಿ ಒಂದೆಡೆ ಸೇರಿಸಿ ದೇಹದಾಢ್ಯ ದೈಹಿಕ ಶಕ್ತಿ, ನಿಯಮಿತ ವ್ಯಾಯಾಮದ ಪ್ರವೃತ್ತಿ ಬೆಳೆಸಿದನು.

ಈ ತಂಡ ಕಟ್ಟಿಕೊಂಡ ಮಹದೇವಪ್ಪ ಮೈಲಾರ ಗದಗ, ಶಿರಹಟ್ಟಿ, ಹಾವೇರಿ, ಮುಂಡರಗಿ, ಹಡಗಲಿ, ಹರಪನಹಳ್ಳಿ, ಸವಣೂರು, ಶಿಗ್ಗಾವ ಮುಂತಾದ ತಾಲೂಕುಗಳಲ್ಲಿ ಸರಕಾರಿ ಕಾಗದ ಪತ್ರ, ಚಾವಡಿ, ರೈಲ್ವೆ ಸ್ಟೇಷನ್‌ಗಳಿಗೆ ಬೆಂಕಿಹಚ್ಚುವ ಕಾರ್ಯ ಬರದಿಂದ ನಡೆಯಿತು. ತಾರು ತಂತಿ ಕತ್ತರಿಸುವುದು, ತಾರು ಕಂಬಗಳನ್ನು ಕೀಳುವುದು ಹೀಗೆ ಮೊದಲಾದ ವಿಧ್ವಂಸಕ ಕಾರ್ಯಗಳನ್ನು ಯಶಸ್ವಿಯಾಗಿ ಮಾಡುತ್ತಿದ್ದ ಬಗ್ಗೆ ತಂಡದ ಸದಸ್ಯರಾದ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕ್ಕಂಗಿ, ಫಕ್ಕಿರಯ್ಯ ಕುಲಕರಣಿ ಮುಂತಾದ ಚಳುವಳಿಗಾರರ ಹೇಳಿಕೆಯಿಂದ ಗುರುತಿಸಲಾಗಿದೆ.

"ಹೊಸರಿತ್ತಿಯ ಹಪ್ತೆಯನ್ನು ಲೂಟಿ ಮಾಡಲೇಬೇಕೆಂದು ನಿರ್ಧರಿಸಿದ ಮಹದೇವಪ್ಪನ ಗುಂಪು ೩೧.೪.೧೯೪೩ರಂದು ಕೊಗನೂರಿನ ಸಮೀಪದ ಭೈರಿದೇವರ ಗುಡ್ಡಕ್ಕೆ ಎಲ್ಲರೂ ಸೇರಿದರು. ಮಧ್ಯರಾತ್ರಿಯ ಪ್ರಯಾಣ ಹೊಸರಿತ್ತಿಯ ಕಡೆ ಸಾಗಿತು. ಒಟ್ಟು ೨೪ ಜನ ಚಳುವಳಿಗಾರರಿದ್ದರು. ಮಹದೇವಪ್ಪನ ನೇತೃತ್ವದಲ್ಲಿ ನಿಬ್ಬಣದ ಚಕ್ಕಡಿ ಬೆಳಗಿನ ೫ ಗಂಟೆಗೆ ಹೊಸರಿತ್ತಿಯನ್ನು ತಲುಪಿತು. ಲೂಟಿ ಕಾರ್ಯಕ್ಕೆ ಹೋಗುವ ಮೊದಲು ತಿರುಕಪ್ಪ ಅಗಸರ ದೇವಾಲಯದ ಹತ್ತಿರ ಪೊಲೀಸರು ಎಷ್ಟು ಜನರಿದ್ದಾರೆ ಪರಿಸ್ಥಿತಿ ಹೇಗಿದೆ ಎಂಬ ಮಾಹಿತಿ ತಿಳಿದುಕೊಂಡು ಬಂದನು."[೯೮] ಮಹದೇವಪ್ಪ ಅಂದುಕೊಂಡಂತೆ ಮೂರರಿಂದ ನಾಲ್ಕು ಜನ ಪೊಲೀಸರು ಬಿಟ್ಟು ಎಲ್ಲರೂ ಬೆಳಗಿನ ಪ್ರಾತವಿಧಿ: ತೀರಿಸಿಕೊಂಡು ಬರಲು ಹೊಳೆಯ ಕಡೆ ಹೋಗಿದ್ದರು. ಆದರೆ ದೇವಾಲಯದಲ್ಲಿ ಗಾಡಿಯ ಸದ್ದಿಗೆ ಒಬ್ಬ ಪೊಲೀಸ್ ಎಚ್ಚರಗೊಂಡನು. ಅಷ್ಟರಲ್ಲಿ ಮಹದೇವಪ್ಪನ ತಂಡದ ಸದಸ್ಯರು ದೇವಾಲಯಕ್ಕೆ ನುಗ್ಗಿದರು. ನಿದ್ದೆಗಣ್ಣಿನಲ್ಲಿದ್ದ ಪೊಲೀಸನೊಬ್ಬ ಗುಂಡು ಹಾರಿಸತೊಡಗಿದ. ಈ ವೇಳೆಗಾಗಲೇ ಮಹದೇವಪ್ಪನ ಎದೆಗೆ ದೇವಾಲಯದ ಗರ್ಭಗುಡಿಯಲ್ಲಿದ್ದ ಪೊಲೀಸನೊಬ್ಬ ಗುಂಡು ಹಾರಿಸಿದ್ದರಿಂದ ಮಹದೇವಪ್ಪ ಕುಸಿದು ಬಿದ್ದನು. ಅವನ ಸಹಾಯಕ್ಕೆ ಧಾವಿಸಿದ ತಿರುಕಪ್ಪ ಮಡಿವಾಳರ, ವೀರಯ್ಯ ಹಿರೇಮಠರಿಗೂ ಗುಂಡು ತಗಲಿದವು. ಉಳಿದ ಸದಸ್ಯರು ತಮ್ಮಲ್ಲಿ ಬಂದೂಕುಗಳಿಂದ ಪೊಲೀಸರ ಮೇಲೆ ಗುಂಡು ಹಾರಿಸಲು ನಿರ್ಧರಿಸಿದಾಗ ಸಾಯುವ ಸ್ಥಿತಿಯಲ್ಲಿದ್ದ ಮಹದೇವಪ್ಪ ಮೈಲಾರ ನಾವು ಅಹಿಂಸಾವಾದಿಗಳು, ನೀವು ಪೊಲೀಸರ ಮೇಲೆ ಕೈ ಮಾಡಬೇಡಿ. ಇಲ್ಲಿಂದ ತಪ್ಪಿಸಿಕೊಳ್ಳಿ ಈ ಚಳುವಳಿಯನ್ನು ಮುಂದುವರಿಸಿ ಎನ್ನುತ್ತಲೇ ಪ್ರಾಣ ಬಿಡುತ್ತಲೇ ಎಲ್ಲ ಸದಸ್ಯರು ಅಲ್ಲಿಂದ ಕಾಲ್ಕಿತ್ತ ಬಗ್ಗೆ ತಂಡದ ಸದಸ್ಯರಾದ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕಂಗಿ ಅಂದಿನ ಭಯಾನಕ ಘಟನೆಗೆ ಸಾಕ್ಷಿಭೂತರಾಗಿದ್ದಾರೆ.

"ತಿರುಕಪ್ಪ ಮಡಿವಾಳರ ಹುತಾತ್ಮನಾದ ಹಾವೇರಿಯ ಸಮೀಪ ವೀರಯ್ಯ ಹಿರೇಮಠ ಹುತಾತ್ಮರಾದರು. ಈ ಪ್ರಕರಣದಲ್ಲಿ ಕೊಗನೂರಿನ ಯುವಕರ ನಾಯಕ ಗೋಣೆಪ್ಪ ಕಮತದ ಯುವಕರನ್ನು ರಕ್ಷಿಸಿಕೊಳ್ಳಲು ಪೊಲೀಸರ ಬಂದೂಕು ಕಸಿಯಲು ಹೋಗಿ ಬಲಗೈಯ ಬೆರಳುಗಳು ಬಂದೂಕಿನ ಬಾನೆಟ್ ತಾಗಿ ನಾಲ್ಕು ಬೆರಳುಗಳು ತುಂಡರಿಸಿದವು. ಮತ್ತೊಬ್ಬ ಕೊಗನೂರಿನ ಯುವಕ ಹಡಪದ ಮುದಕಪ್ಪ ಸಹ ಸದಸ್ಯರನ್ನು ಕಾಪಾಡಲು ಹೋಗಿ ಅವರ ಸೊಂಟದ ಕೆಳಗಿನ ಹಿಂಬಾಗಕ್ಕೆ ಗುಂಡು ಬಡಿಯಿತು. ಈ ಘಟನೆಯ ನಂತರದಲ್ಲಿ ಕೊಗನೂರಿನ ನಾಯಕ ಗೋಣೆಪ್ಪ ಕಮತ ೧೧ ತಿಂಗಳು ಅಜ್ಞಾತರಾಗಿದ್ದರು. ಆದರೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅವರನ್ನು ಬಂಧಿಸಲಾಯಿತು. ಒಂದು ವರ್ಷ ಜೈಲು ಶಿಕ್ಷೆ ೧೦೦ ರೂ. ದಂಡವಾಗಿ ಬುಧಗಾಂವ್‌ನಲ್ಲಿ ಶಿಕ್ಷೆ ಅನುಭವಿಸಿದರು."[೯೯] ಅಲ್ಲದೇ ತಂಡದ ಇತರ ಸದಸ್ಯರು ವಿವಿಧ ರೀತಿಯ ಶಿಕ್ಷೆಗೆ ಒಳಗಾದರು.

ಜಿಲ್ಲೆಯ ಗಡಿಭಾಗದ ತಾಲೂಕಿನ ಕೊಗನೂರಿನ ಯುವ ಪಡೆ ಸ್ವಾತಂತ್ರ್ಯ ಚಳುವಳಿಯಲ್ಲಿ ಅದ್ಭುತವಾದ ಕಾರ್ಯ ಸಾಧನೆಗೈದ ಮಹನೀಯರೆನಿಸಿದ್ದಾರೆ. ಆದರೆ ಇತ್ತೀಚಿನ ಸರಕಾರ, ಆಡಳಿತ ವ್ಯವಸ್ಥೆ ಅವರನ್ನು, ಅವರ ಕಾರ್ಯಸಾಧನೆಯನ್ನು ಗುರುತಿಸುವ ವಿಚಾರದಲ್ಲಾಗಲೀ ಮತ್ತು ಸದ್ಯದ ಯುವಪಡೆಯ ದೇಶಾಭಿಮಾನವನ್ನು ಗಮನಿಸಿದರೆ,– 'ಹೇಳುವುದಕವರಲ್ಲ ಕೇಳುವುದಕವರಲ್ಲ ಮಾಡಿ ಮಡಿಯುವುದಕವರು' ಎಂಬ ಕವಿವಾಣಿ ಇಂಥ ಸನ್ನಿವೇಶವನ್ನು ನೋಡಿಯೇ ಹೇಳಿದಂತಿದೆ. ಹೀಗೆ ಜಿಲ್ಲೆಯ ಹೋರಾಟದಲ್ಲಿ ಗಡಿ ಜಿಲ್ಲೆಯ ಈ ಚಳುವಳಿಗಾರರ ಹೋರಾಟವನ್ನು ಮರೆಯುವಂತಿಲ್ಲ.

**ಜಿ.ಆರ್. ಸ್ವಾಮಿಯವರು :** ಮೈಸೂರು ಪ್ರಾಂತ

ಶಿಗ್ಗಾವಿ ಭಾಗದಲ್ಲಿಯ ನೀರಲಗಿ, ಬಂಕಾಪುರ, ದುಂಡಸಿ ಮುಂತಾದ ಕಡೆ ಅರಣ್ಯ ಸತ್ಯಾಗ್ರಹ ಯಶಸ್ವಿಯಾಗಿ ನಡೆದು ಸರಕಾರಕ್ಕೆ ಮುಜುಗರವಾಗಿತ್ತು. ಹಾಗಾಗಿ ಧಾರವಾಡ ಜಿಲ್ಲೆಯ ಕಲೆಕ್ಟರರು ಸತ್ಯಾಗ್ರಹವನ್ನು ಹತ್ತಿಕ್ಕಲು ಮತ್ತು ಜನತೆಯ ಪ್ರೀತಿ–ವಿಶ್ವಾಸ ಗಳಿಸಲು 'ರಾಜನಿಷ್ಠರ' ಸಭೆಯನ್ನು ಕರೆಯಲು ಸೂಚಿಸಿದನು.

"ಶಿಗ್ಗಾವಿಯಲ್ಲಿ 'ರಾಜನಿಷ್ಠೆ' ಸಭೆಯನ್ನು ವಿಫಲಗೊಳಿಸಲು ಸ್ಥಳೀಯರು ಹೋರಾಡುವಾಗ ಮೈಸೂರಿನಿಂದ ಬಂದ ಜಿ.ಆರ್. ಸ್ವಾಮಿ ಸಜ್ಜನರಂತೆ ನಟಿಸಿ ಸಭೆಯಲ್ಲಿ ಪ್ರವೇಶ ಪಡೆದು "ನಾನು ಒಂದೆರಡು ಮಾತನಾಡಬಹುದೇ ಎಂದು ವಿನಂತಿಸಿಕೊಂಡು ನಮ್ಮ ಹೋರಾಟ ಬ್ರಿಟಿಷರ ಕೂಡ ಇರುವುದಿಲ್ಲ, ಆದರೆ ನಮ್ಮ ಚಳುವಳಿ ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧವಿದೆ. ಆದ್ದರಿಂದ ಅಂಥ ಸಾಮ್ರಾಜ್ಯದ ನೌಕರರಾದ ಕಲೆಕ್ಟರ್‌ನಿಗೆ ಬಹಿಷ್ಕರಿಸುವುದೇ ನಮ್ಮ ಇಂದಿನ ಸತ್ಯಾಗ್ರಹದ ಹಿನ್ನೆಲೆ ತಿಳಿಸಿ ಕಲೆಕ್ಟರ್‌ನಿಗೆ ಕರಿ ಬಾವುಟವನ್ನು ಕೊಡಲು ಮುಂದಾದಾಗ ಶಿಗ್ಗಾವಿ ಮಾಮಲೇದಾರ ಅವರನ್ನು ಬಂಧಿಸಲು ಹುಕ್ಕುಂ ಮಾಡಿದರು.

ಜಿ.ಆರ್. ಸ್ವಾಮಿಯನ್ನು ದರ್ಬಾರ ಒಳಗೆ ಬಂಧಿಸಿದ ಸುದ್ದಿ ದರ್ಬಾರನ ಹೊರಗೆ ಇದ್ದ ಚಳುವಳಿಗಾರರಿಗೆ ತಿಳಿದು ಜಿ.ಆರ್. ಸ್ವಾಮಿ ಬಿಡುಗಡೆಗೊಳಿಸಬೇಕೆಂದು ಧರಣಿ ನಡೆಸಿದರು. ಧರಣಿಗೆ ಮಣಿದ ಅಧಿಕಾರಿಗಳು ಜಿ.ಆರ್. ಸ್ವಾಮಿಯನ್ನು ಬಿಡುಗಡೆಗೊಳಿಸಿದರು."[೧೦೦] ಚಳುವಳಿಗಾಗಿ ಮೈಸೂರಿನಿಂದ ಬಂದ ಸ್ವಾಮಿಯ ದೇಶಭಕ್ತಿ ಒಂದೆಡೆಯಾದರೆ ಸ್ಥಳೀಯ ಕಾಂಗ್ರೆಸ್ ಕಾರ್ಯಕರ್ತರು ಮೈಸೂರಿನ ಚಳುವಳಿಗಾರನ ಬಿಡುಗಡೆಗಾಗಿ ಮಾಡಿದ ಧರಣಿ ಸತ್ಯಾಗ್ರಹ ಚಳುವಳಿಗಾರರಿಗೆ ಜಿಲ್ಲೆ/ತಾಲೂಕು ಎಂಬ ಗಡಿ ಬೇಧವಿರಲಿಲ್ಲ ಎಂಬುದಕ್ಕೆ ಈ ಘಟನೆ ಸಾಕ್ಷಿಯಾಗಿದೆ.

**ವೆಂಕಟೇಶ ಮಾಗಡಿ :** ಜನನ. ೧೯೧೧ ಸಾ॥ ಮಾಗಡಿ, ತಾ॥ ಶಿರಹಟ್ಟಿ, ಜಿಲ್ಲೆ॥ ಗದಗ

"ಧಾರವಾಡ ಜಿಲ್ಲೆಯ ಪ್ರಮುಖ ಚಳುವಳಿಗಾರರಲ್ಲಿ ಒಬ್ಬರಾದ ವೆಂಕಟೇಶ ಮಾಗಡಿ ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ಹಲವು ಕಾರ್ಯಗಳನ್ನು ಮಾಡಿದ್ದಾರೆ–

* ೧೯೩೧ರಲ್ಲಿ ಹಿರೇಕೆರೂರು ತಾಲೂಕಿನ ತಡಸದ ಆಶ್ರಮದಲ್ಲಿದ್ದುಕೊಂಡು ಸುತ್ತಮುತ್ತಲಿನ ಗ್ರಾಮಗಳಿಗೆ ಭೇಟಿ ನೀಡಿ ಹಳ್ಳಿಗಳಲ್ಲಿ ಸ್ವಚ್ಛತೆಯ ಕಾರ್ಯ ಆರಂಭಿಸಿದರು. ಕಾರಣ ಗ್ರಾಮಗಳಲ್ಲಿ ಮನೆಯ ಎದುರುಗಡೆ ತಿಪ್ಪೆಗಳನ್ನು ಹಾಕಿಕೊಂಡು ಹಲವು ರೋಗ-ರುಜಿನಗಳಿಗೆ ಒಳಗಾಗುತ್ತಿದ್ದ ಹಳ್ಳಿಯ ಜನತೆಗೆ ಸ್ವಚ್ಛತೆಗೆ ಗಮನಹರಿಸುವಂತೆ ತಿಳುವಳಿಕೆ ನೀಡುವ ಕಾರ್ಯ ಕೈಗೊಂಡರು. ಮತ್ತು ಗ್ರಾಮಗಳಲ್ಲಿ ಮಲೇರಿಯಾ ರೋಗಕ್ಕೆ ತುತ್ತಾಗಿದ್ದ ಜನತೆಗೆ ಔಷಧಿ ನೀಡುವ ಕಾಯಕವನ್ನು ಮಾಡಿದರು. ಅಲ್ಲದೆ, ಹಾವೇರಿ ತಾಲೂಕಿನ ಕರ್ಜಗಿಯಲ್ಲಿ ಶ್ರೀರಾಮ ವಿಷ್ಣುಪಂತ ಟೆಂಬೆಯವರ ಸಹೋದರಿ ರಾಧಾಬಾಯಿಯವರ ಮನೆಯಲ್ಲಿ ಬುಲೆಟಿನ್ ಹೊರಡಿಸುವ ಕಾರ್ಯ, ನಂತರದಲ್ಲಿ ಹಾವೇರಿ ತಾಲೂಕಿನ ದೇವಗಿರಿಯ ಶಿವಪೂಜಿಯವರ ಮನೆಯಲ್ಲಿ ೧೫ ದಿನಗಳ ಕಾಲವಿದ್ದು ಅಲ್ಲಿಯೂ ಜನಜಾಗೃತಿ ಕಾರ್ಯವನ್ನು ಮಾಡಿದರು."[೧೦೧]

೧೯೩೪ರಲ್ಲಿ ೨೦-೩೦ ಜನ ತರುಣರ ಗುಂಪು ಕಟ್ಟಿಕೊಂಡು ಹೊಸರಿತ್ತಿಯಲ್ಲಿ ಗಾಂಧಿ ಆಶ್ರಮವನ್ನು ಹಳ್ಳಿಕೇರಿ ಗುದ್ಲೆಪ್ಪನೊಂದಿಗೆ ಸ್ಥಾಪಿಸುವಲ್ಲಿ ಪ್ರಮುಖ ಪಾತ್ರವಹಿಸಿದವರು. ಆ ಆಶ್ರಮದ ಮೂಲಕ ಖಾದಿ ಗ್ರಾಮೋದ್ಯೋಗದ ಕಾರ್ಯ ಆರಂಭಿಸಿದರು. ಆಶ್ರಮಕ್ಕೆ ವೆಂಕಟೇಶ ಮಾಗಡಿ ಕಾರ್ಯದರ್ಶಿಯಾಗಿ ನೇಮಕವಾದರು. ಇವರು ಆರಂಭಿಸಿದ ಆಶ್ರಮದಲ್ಲಿ ೨೦೦ ಕುಟುಂಬಗಳು ಖಾದಿ, ಗ್ರಾಮೋದ್ಯೋಗವನ್ನೇ ಆಧರಿಸಿ ಸ್ವಾವಲಂಬನೆಯ ಜೀವನ ನಡೆಸುತ್ತಿದ್ದರು. ಆ ಶ್ರಮಕ್ಕೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲು ತರಬೇತಿಗಾಗಿ ಸಾಗರದ ಹತ್ತಿರದ ಶೇಗಾಂವಗೆ, ನಂತರದಲ್ಲಿ ವಾರ್ಧಾದಲ್ಲಿ ಕಾರ್ಡಿಂಗ್ ಮಶೀನ್‌ನ ದಾರ ತಯಾರಿಸುವ ತರಬೇತಿಯನ್ನು ಪಡೆದು ಹೊಸರಿತ್ತಿ ಆಶ್ರಮದಲ್ಲಿ ಅದರ ಉಪಯೋಗವಾಗುವಂತೆ ಮಾಡಿದ ಬಗ್ಗೆ ಆಶ್ರಮವಾಸಿ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕ್ಕಂಗಿ ವೆಂಕಟೇಶ ಮಾಗಡಿಯವರ ಕಾರ್ಯವನ್ನು ನೆನಪಿಸಿಕೊಳ್ಳುತ್ತಾರೆ.

"ಟಿ.ಆರ್. ನೆಶ್ವಿ ಹಿಂಡಲಗಾ ಜೈಲಿನಿಂದ ಬಿಡುಗಡೆಯ ನಂತರ ಮುಂಡರಗಿಯಲ್ಲಿ ಗಡಿಪಾರು ಶಿಕ್ಷೆ ಕಳೆಯುವಾಗ ಅಲ್ಲಿ ಸಹಾಯ ನೀಡಿದವರು ಮುಖ್ಯವಾಗಿ ಮುಂಡರಗಿಯ

'ಅನ್ನದಾನೇಶ್ವರ ಮಠ'. ಮಠದ ಶ್ರೀಗಳು ಚಳುವಳಿಗಾರರಿಗೆ ಊಟ ವಸತಿ ನೀಡಿದ್ದಾರೆ. ಅಲ್ಲದೇ ಪ್ರಸಿದ್ಧ ವ್ಯಾಪಾರಿಗಳಾದ ವೀರಭದ್ರಪ್ಪ ಕೊಪ್ಪದ, ಟಿ.ಆರ್. ನೆಶ್ವಿಗೆ ಮುಂಡರಗಿಯಿಂದ ತಪ್ಪಿಸಿಕೊಳ್ಳಲು ಕಾರಣರಾದರೆ, ನೆಶ್ವಿಯವರನ್ನು ತಮ್ಮ ಮನೆಯಲ್ಲಿ ಉಳಿಸಿಕೊಂಡು ಊಟ ಮಾಡಿಸಿ ಅಲ್ಲಿಂದ ಇವರನ್ನು ಊರಿಗೆ ಕಳುಹಿಸಲು ಚಕ್ಕಡಿ ವ್ಯವಸ್ಥೆ ಮಾಡಿ, ಅದರ ಬಾಡಿಗೆಯನ್ನು ನೀಡಿದವರು ಹೊಳೆಗೊಂದಿಯ ಕುಲಕರ್ಣಿ ಸಿದ್ದಪ್ಪ."[೧೦೨] ಅದೇ ರೀತಿ ಟಿ.ಆರ್. ನೆಶ್ವಿ ಭೂಗತಾಗಿ ಕಾರ್ಯಮಾಡುವಾಗ ಮಲೆನಾಡಲ್ಲಿ ಸಾಗರದ ಸಮೀಪದ ಪಡವಗೋಡ ಗ್ರಾಮದ ರುದ್ರಗೌಡರು ಮರೂರು ನೆಶ್ವಿಯನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡು ತಮ್ಮ ಭಾಗದಲ್ಲಿ ಚಳುವಳಿ ವ್ಯಾಪಿಸಲು ಕಾರಣಿಕರ್ತರು. ಮತ್ತು ನೆಶ್ವಿಯೊಂದಿಗೆ ಮಲೆನಾಡಿನಲ್ಲಿ ಚಳುವಳಿಗೆ ಬೆಂಬಲವಾಗಿ ನಿಂತವರು ಪಾರ್ಥನಾರಾಯಣ ಪಂಡಿತ, ವಾಸಪ್ಪ ಗೋಗಿ, ಎಣ್ಣಿಕೊಪ್ಪದ ಮಲ್ಲಿಕಾರ್ಜುನಗೌಡರು, ವೀರಭದ್ರಪ್ಪ ಗೌಡರು, ಮಳಲಗದ್ದೆ ಬಸವಣ್ಯಪ್ಪ, ಸಾಗರದ ಬಾಪಟ್ ಮೃತ್ಯುಂಜಯಪ್ಪ, ಮಳಲಗದ್ದೆ ಬಸಮ್ಮ ಇನ್ನೂ ಮುಂತಾದವರು ಚಳುವಳಿಗೆ ಸಹಾಯ ನೀಡಿದ ಬಗ್ಗೆ ಸಂಶೋಧಕ ಭೋಜರಾಜ ಪಾಟೀಲ ಸಂದರ್ಶನದಲ್ಲಿ ಹೇಳಿರುತ್ತಾರೆ.

"ಟಿ.ಆರ್. ನೆಶ್ವಿ ಹಿಂಡಲಗಾ ಜೈಲಿನಲ್ಲಿದ್ದಾಗ ಅವರ ದಂಡದ ಹಣಕ್ಕಾಗಿ ಸರಕಾರ ಅವರ ಮನೆಯ ವಸ್ತುಗಳನ್ನು, ದನಕರುಗಳನ್ನು ಮತ್ತು ನೆಶ್ವಿಯವರ ತಾಯಿ, ಪತ್ನಿ, ಇವರ ಅಣ್ಣ ಹಾಗೂ ಅಣ್ಣನ ಪತ್ನಿಯ ಲಿಂಗದ ಕಾಯಿಗಳನ್ನು ಹರಾಜು ಹಾಕಿ ದಂಡದ ಹಣ ಭರ್ತಿ ಮಾಡಿಕೊಂಡಿತು. ಈ ವಿಷಯ ತಿಳಿದ ತುರುಬಿಗುಡ್ಡದ ಮುರಡಪ್ಪ ಗೌಡರು ನೆಶ್ವಿಯ ಮನೆಯವರಿಗೆ ಲಿಂಗದಕಾಯಿಗಳನ್ನು ಮುಟ್ಟಿಸುವ ಕಾರ್ಯ ಮಾಡಿದವರು."[೧೦೩] ಈ ಘಟನೆ ಚಳುವಳಿಗಾರರಿಗೆ ಜನಸಾಮಾನ್ಯರು ಹೇಗೆ ಸಹಾಯಕ್ಕೆ ಬರುತ್ತಿದ್ದರು ಎಂಬುದಕ್ಕೆ ಸಾಕ್ಷಿ.

**ಸ್ವಾತಂತ್ರ್ಯಯೋಧರಿಗೆ ಸಹಕರಿಸಿದ ಲಂಬಾಣಿಗರು :** ಸ್ವಾತಂತ್ರ್ಯ ಹೋರಾಟದಲ್ಲಿ ಹಾವೇರಿ ಜಿಲ್ಲೆಯ ಚಳುವಳಿಗಾರರಿಗೆ ಗಡಿ ಜಿಲ್ಲೆಯಾದ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಮರೊಡಿ ತಾಂಡಾ(ಗ್ರಾಮ)ದ ನಾಯಕರಾದ ದುರಗಪ್ಪ, ಮಾನಪ್ಪ, ಕಪನಪ್ಪ ಇವರ ನಾಯಕತ್ವದಲ್ಲಿ ಲಮಾಣಿಗರು ಊಟ-ನೀರು ನೀಡಿ, ಆಶ್ರಯ ಕೊಟ್ಟು ಸ್ಮರಣಾರ್ಹವಾದ ಸೇವೆ ಮಾಡಿದ್ದಾರೆ.

ಹಾವೇರಿ ಭಾಗದ ಮೈಲಾರ ಮಹದೇವಪ್ಪನ ತಂಡದ ಸದಸ್ಯರು ಸರಕಾರದ ಕೆಂಗಣ್ಣಿನಿಂದ ತಪ್ಪಿಸಿಕೊಳ್ಳಲು ಕಪ್ಪತಗುಡ್ಡದಲ್ಲಿ ಆಶ್ರಯ ಪಡೆದಾಗ ಇವರೆಲ್ಲರಿಗೂ ಅನ್ನದಾತರಾಗಿ, ಸುದ್ದಿ ಸೂರಣ್ಣಗಳಾಗಿ, ಸುದ್ದಿ ಹೊತ್ತು ಬರುವುದು ಮತ್ತು ಇವರ ವಿಧ್ವಂಸಕ ಕೃತ್ಯಗಳಲ್ಲಿ ಜೊತೆಗಿದ್ದವರು ಮುರಾಡಿ-ವಿರಾಪುರ ತಾಂಡಾದ ಲಂಬಾಣಿಗರು.

ಈ ಲಂಬಾಣಿಗರು ಅತ್ಯಂತ ಶೂರ ಸಮುದಾಯವರು. ಪೊಲೀಸರಿಗೂ ಹೆದರದ ಧೈರ್ಯಸ್ಥರು. ಮಹದೇವಪ್ಪ ಮೈಲಾರರ ಗುಂಪಿಗೆ ಹಲವು ರೀತಿಯಲ್ಲಿ ಸಹಾಯ ಮಾಡಿದ್ದಾರೆ. ಅದರಲ್ಲಿ ಪ್ರಮುಖರೆಂದರೆ ಮುರುಡಿ ತಾಂಡಾದ ದುರುಗಪ್ಪ ಲಮಾಣಿ, ಲಾಲಸಿಂಗಪ್ಪ ದುರುಗಪ್ಪ ಲಮಾಣಿ, ಕಶನಪ್ಪ ಟಾಕರೆಪ್ಪ ಲಮಾಣಿ, ಗಣೆಯಪ್ಪ ಲಚ್ಚಪ್ಪ ಲಮಾಣಿ, ಶ್ರೀಮತಿ ಸೋನವ್ವಾ

ಹರಿಸಿಂಗ ಲಮಾಣಿ, ಶ್ರೀಮತಿ ಕೇಶಲೆಮ್ಮ ಮಾನಪ್ಪ ಲಮಾಣಿ, ವೀರಾಪುರ ತಾಂಡಾದ ಶ್ರೀಮತಿ ಪೂನ್ನವ್ವ ಹೂವಪ್ಪ ಲಮಾಣಿ ಇನ್ನೂ ಮೊದಲಾದವರು.

"ಲಮಾಣಿ ತಂಡದ ನಾಯಕರಾದ ದುರಗಪ್ಪ ಲಾಲಸಿಂಗ, ಲಾಲಸಿಂಗ ದುರುಗಪ್ಪ ಲಮಾಣಿ ಇವರು ಮಹದೇವಪ್ಪನಿಗೆ ನಿಷ್ಠಾವಂತರು ಮತ್ತು ನಂಬಿಗಸ್ಥರಾಗಿದ್ದರು. ಇವರೇ ತಂಡದ ಸದಸ್ಯರಿಗೆ ಆಹಾರ ಸರಬರಾಜು ಮಾಡುತ್ತಿದ್ದರು. ಅಲ್ಲದೇ ಮಹದೇವಪ್ಪನ ತಂಡದೊಂದಿಗೆ ಇವರೂ ಸಹ ಅಂಚೆ ಕಛೇರಿಗೆ ಅಗ್ನಿಸ್ಪರ್ಶ, ಚಾವಡಿಗಳಿಗೆ ಬೆಂಕಿ, ಟಪಾಲು ಅಪಹರಣ ಮೊದಲಾದ ಕಾರ್ಯಗಳಲ್ಲಿ ಭಾಗವಹಿಸಿದವರು. ಅಲ್ಲದೆ ಲಾಂಬಾಣಿಗಳ ನಾಯಕರು ಬನ್ನಿಕೊಪ್ಪದ ಚನ್ನಬಸಪ್ಪ ಅಣ್ಣಿಗೇರಿ ಅವರ ಕಿರಾಣಿ ಅಂಗಡಿಯಿಂದ ಆಹಾರ ಸಾಮಗ್ರಿಗಳನ್ನು ಪೂರೈಸುತ್ತಿದ್ದರು. ಹೊನ್ನಪ್ಪ, ಗಣಿಯಪ್ಪ, ಕಶನಪ್ಪ, ಮಾನಪ್ಪ ಮತ್ತು ಹರಿಸಿಂಗ ಇವರು ಕಿರಾಣಿ ವಸ್ತುಗಳನ್ನು ಮಹದೇವಪ್ಪನ ಗುಂಪಿಗೆ ಮುಟ್ಟಿಸಲು ಹೋಗುವಾಗಲೇ ಪೊಲೀಸರಿಗೆ ಸಿಕ್ಕು ಶಿರಹಟ್ಟಿ ಜೈಲು ಸೇರಿದರು. ಎರಡು ದಿನಗಳಲ್ಲಿ ಶಿರಹಟ್ಟಿಯ ದೇಶಪಾಂಡೆ ವಕೀಲರು ಎಲ್ಲ ಲಮಾಣಿಗಳನ್ನು ಬಿಡಿಸಿದರು."[೧೦೪] ಹೀಗೆ ಚಳುವಳಿಯಲ್ಲಿ ದೇಶಪಾಂಡೆ ವಕೀಲರು ಪರೋಕ್ಷವಾಗಿ ಸಹಾಯ ಮಾಡಿದರು.

**ಎಣ್ಣಿಕೊಪ್ಪದ ಮಲ್ಲಿಕಾರ್ಜುನಗೌಡ :** ಜಿಲ್ಲೆಯ ಚಳುವಳಿಕಾರರಿಗೆ ಸಹಾಯ-ಸಹಕಾರ ನೀಡಿದ ಗಡಿ ಜಿಲ್ಲೆಯ ಮತ್ತೊಬ್ಬ ಧೀರಯೋಧನೆಂದರೆ ಶಿವಮೊಗ್ಗ ಜಿಲ್ಲೆಯ ಆನವಟ್ಟಿ ಹೋಬಳಿಯ ಎಣ್ಣಿಕೊಪ್ಪದ ಮಲ್ಲಿಕಾರ್ಜುನಗೌಡರು. ಇವರು ದೊಡ್ಡ ಜಮೀನ್ದಾರರು ಹಾಗೂ ಪೊಲೀಸ್ ಪಾಟೀಲ ಮನೆತನ. ಇವರು ಹಾವೇರಿ ಜಿಲ್ಲೆಯ ಪ್ರಮುಖ ಚಳುವಳಿ ನಾಯಕರಾದ ವೀರನಗೌಡ ಪಾಟೀಲ, ತಿಮ್ಮಣ್ಣ ನೆಶ್ವಿ, ಕೆ.ಎಫ್. ಪಾಟೀಲ್, ಹಳ್ಳಿಕೇರಿ ಗುದ್ಲೆಪ್ಪ, ಮಹದೇವಪ್ಪ ಮೈಲಾರ, ವೀರಭದ್ರಪ್ಪ ನ್ಯಾಮತಿ, ದೇವೇಂದ್ರಪ್ಪ ವಿಭೂತಿ, ಮೆಣಸಿನಾಳದ ತಿಮ್ಮನಗೌಡರು, ಸಂಗೂರು ಕರಿಯಪ್ಪ, ವೆಂಕಟೇಶ ಮಾಗಡಿ, ದುಂದೂರು ವಕೀಲರು, ಹಾಲಪ್ಪ ತೊಗರ್ಸಿ ಇನ್ನೂ ಮುಂತಾದವರಿಗೆ ಹಲವು ರೀತಿಯಲ್ಲಿ ಸಹಾಯ ಮಾಡಿದ್ದಾರೆ.

ಹಾವೇರಿ ಜಿಲ್ಲೆಯ ಚಳುವಳಿಯ ನಾಯಕರು ವಿಧ್ವಂಸಕ ಕಾರ್ಯಗಳಿಂದಾಗಿ ಪೊಲೀಸರ ಕಾಟ ಹೆಚ್ಚಾದಾಗ ಇವರಿಗೆ ತಕ್ಷಣಕ್ಕೆ ನೆನಪಾಗುವ ಸ್ಥಳ ಮತ್ತು ವ್ಯಕ್ತಿಯೆಂದರೆ ಎಣ್ಣಿಕೊಪ್ಪದ ಮಲ್ಲಿಕಾರ್ಜುನಗೌಡರು. ಜಿಲ್ಲೆಯ ನಾಯಕರು ಒಂದೊಂದು ರೀತಿಯಲ್ಲಿ ಅವರಿಂದ ಸಹಾಯ ಪಡೆದವರು. ಮುಖ್ಯವಾಗಿ ೧೯೪೨ರ ಚಲೇಜಾವ್ ಚಳುವಳಿ ಕಾಲಕ್ಕೆ ಜಿಲ್ಲೆಯಲ್ಲಿ ಚಳುವಳಿಯ ನಾಯಕರ ಬಂಧನವಾಗುವಂತಹ ಸಮಯಕ್ಕೆ ಎಲ್ಲ ನಾಯಕರು ಮುಂದಿನ ಕಾರ್ಯಗಳಿಗೆ ಚರ್ಚಿಸಲು ಒಂದೆಡೆ ಸೇರಲು ನಿರ್ಧರಿಸಿದ ಸ್ಥಳ ಎಣ್ಣಿಕೊಪ್ಪದ ಮಲ್ಲಿಕಾರ್ಜುನಗೌಡರ ಮನೆ ಎಂಬುದನ್ನು ಹಲವು ಚಳುವಳಿಗಾರರು ನೆನಪಿಸುತ್ತಾರೆ.

"ಮಲ್ಲಿಕಾರ್ಜುನಗೌಡರ ಮನೆಯಲ್ಲಿ ರೂಪಿಸಿದ ಕಾರ್ಯಗಳು: ಜಿಲ್ಲೆಯ ಪ್ರಮುಖ ನಾಯಕರಾದ ಮಹದೇವಪ್ಪ ಮೈಲಾರ, ಸಂಗೂರು ಕರಿಯಪ್ಪ, ತಿಮ್ಮನಗೌಡ ಮೆಣಸಿನಾಳ,

ತಿ.ರು.ನೆಶ್ವಿ ಈ ನಾಲ್ಕು ತಂಡಗಳಿಗೆ ಸಹಾಯ-ಸಹಕಾರ, ಪ್ರಾಂತಿಯ ಮತ್ತು ಎ.ಐ.ಸಿ.ಸಿ.ಯಿಂದ ಬಂದ ಸಂದೇಶಗಳನ್ನು ಮುಟ್ಟಿಸುವ ಕಾರ್ಯ. ಬ್ಯಾಡಗಿ ರೈಲ್ವೆ ಸ್ಟೇಶನ್ ಸುಡುವ ಕಾರ್ಯವನ್ನು ಕರಿಯಪ್ಪ ಸಂಗೂರು, ತಿಮ್ಮನಗೌಡ ಮೆಣಸಿನಾಳ ಮತ್ತು ವೀರಭದ್ರಪ್ಪ ನ್ಯಾಮತಿ ಅವರಿಗೆ ವಹಿಸಲಾಯಿತು. ಅಮರಗೋಳ, ದುಂದೂರು ಮತ್ತು ಕುಸಗಲ್ ರೇಲ್ವೆ ಸ್ಟೇಶನ್ ಸುಡುವ ಕಾರ್ಯಕ್ಕೆ ದುಂದೂರು ವಕೀಲರು, ವೆಂಕಟೇಶ ಮಾಗಡಿ ಅವರಿಗೆ ವಹಿಸಿ ಕೊಡಲಾಯಿತು. ಹೀಗೆ ೧೯೪೨ರ ಚಳುವಳಿ ರೂಪುರೇಷೆಗಳನ್ನು ಎಣ್ಣಿಕೊಪ್ಪದ ಮಲ್ಲಿಕಾರ್ಜುನ ಗೌಡರ ಮನೆಯಲ್ಲಿ ತೀರ್ಮಾನಿಸಲಾಯಿತು. ವಿಶೇಷವೆಂದರೆ ಇಲ್ಲಿಯ ಎಲ್ಲ ವಿವರಗಳು ಪೊಲೀಸರಿಗೆ ತಿಳಿದಿತ್ತು. ಗುಪ್ತಚರ ಪೊಲೀಸ್ ಶಾಖೆ ಧಾರವಾಡ ಆಫೀಸ್‌ನ ಫೈಲ್ ನಂ. ೫/ಐ.ಎನ್.ಸಿ. ಪುಟ ೭೭, ೭೯, ೮೩ರಿಂದ ಸಂಗ್ರಹಿಸಿದ್ದು."[೧೦೫]

ಹಾವೇರಿ ಜಿಲ್ಲೆಯ ಚಳುವಳಿಯ ರೂಪುರೇಷೆಗಳು ಅಲ್ಲಿ ನಿರ್ಧಾರವಾಗುತ್ತಿರುವುದಕ್ಕೆ ಕಾರಣಾನವಟ್ಟಿ ಮೈಸೂರು ಸಂಸ್ಥಾನಕ್ಕೆ ಸೇರಿದ್ದುದರಿಂದ. ಮುಂಬೈ ಕರ್ನಾಟಕದಲ್ಲಿ ಇರುವಷ್ಟು ಪೊಲೀಸರ ತೊಂದರೆ ಆ ಭಾಗದಲ್ಲಿ ಇರಲಿಲ್ಲ ಎಂಬುದನ್ನು ಗುರುತಿಸಲಾಗಿದೆ.

**ಪಿ.ಎ. ಸವಣೂರು** "ಇವರು ಮೂಲತಃ ಬೆಳಗಾವಿ ಜಿಲ್ಲೆಯವರು. ಧಾರವಾಡದ 'ಭಾರತೀಯ ತರುಣರ ಸಂಘ'ದ ಸದಸ್ಯರಾದ ಮೇಲೆ ಶಿಕ್ಷಣವನ್ನು ನಿಲ್ಲಿಸಿ ೧೯೩೦ರಲ್ಲಿ ಚರಕ ಸಂಘ ಸೇರಿದ ಇವರು ಹಾವೇರಿ ತಾಲೂಕಿನ ಹೊಸರಿತ್ತಿ ಗಾಂಧಿ ಆಶ್ರಮದ ಚಟುವಟಿಕೆಗಳಲ್ಲಿ ಭಾಗವಹಿಸಿದವರು. ೧೯೩೨ರಲ್ಲಿ ರಾಣೆಬೆನ್ನೂರು ತಾಲೂಕು ದೇವರಗುಡ್ಡದ ಜಾತ್ರೆಯಲ್ಲಿ ನಾಲ್ಕು ಜನ ಮಹಿಳೆಯರು ಮತ್ತು ನಾಲ್ಕು ಜನ ಚಳುವಳಿಗಾರರು ಸೇರಿಕೊಂಡು (ನಾಲ್ಕು ಜನ ಮಹಿಳೆಯರಲ್ಲಿ ಮಲ್ಲಮ್ಮ ಪವಾರ ಮತ್ತು ಗೌರಮ್ಮ ಕರಿಕಟ್ಟಿ ಭಾಗವಹಿಸಿದ್ದರು.) ಜಾತ್ರೆಗೆ ಬಂದ ಜನತೆಯನ್ನು ಜಯಘೋಷಗಳೊಂದಿಗೆ ಕರೆಯುವಾಗ ಪೊಲೀಸರು ಬಂದು ಇವರೆಲ್ಲರನ್ನು ಬಂಧಿಸಿ ರಾಣೆಬೆನ್ನೂರು ಲಾಕಪ್‌ಗೆ ಹಾಕಿದರು. ನಂತರ ಮೂರು ತಿಂಗಳ ಶಿಕ್ಷೆಯಾಗಿ ಎಂಟು ಜನರನ್ನು ಹಿಂಡಲಗಾ ಜೈಲಿಗೆ ಕಳುಹಿಸಲಾಯಿತು.

ಪುನಃ ಹೊಸರಿತ್ತಿ ಗಾಂಧಿ ಆಶ್ರಮಕ್ಕೆ ಬಂದ ಸವಣೂರು ವಸ್ತ್ರ ಸ್ವಾವಲಂಬನ ಪ್ರಚಾರ ಹಾಗೂ ಖಾದಿ ಉತ್ಪನ್ನ ಕಾರ್ಯವನ್ನು ಪ್ರಾರಂಭಿಸಿದರು. ಹಳ್ಳಿಕೇರಿ ಗುದ್ಲೆಪ್ಪನವರ ಆಶ್ರಮದ ೩೦ ಜನ ಆಶ್ರಮವಾಸಿಗಳೊಂದಿಗೆ ಹೊಸರಿತ್ತಿಯ ಸುತ್ತಮುತ್ತಲಿನ ೩೦ ಹಳ್ಳಿಗಳಲ್ಲಿ ಕಾಲ್ನಡಿಗೆಯ ಪ್ರವಾಸ ಮಾಡುವ ಮೂಲಕ ಜನಜಾಗೃತಿ ಕಾರ್ಯದಲ್ಲಿ ತಮ್ಮ ಸೇವೆ ಸಲ್ಲಿಸಿದವರು."[೧೦೬] ಖಾದಿ ಮಾರಾಟದಿಂದ ಹೊಸರಿತ್ತಿ ಭಾಗದಲ್ಲಿ ಜನಜಾಗೃತಿ ಕಾರ್ಯ ಮಾಡಿದ ಕೀರ್ತಿಗೆ ಪಾತ್ರರಾಗಿದ್ದಾರೆ.

**ರುದ್ರಪ್ಪ ರಾಮಪ್ಪ ಪತ್ತಾರ** : ಜನನ ೧೯೧೪, ಸಾ॥ ಗರಗ, ತಾ॥ ಜಿ॥ ಧಾರವಾಡ

ಇವರು "೧೯೩೬ರ ವೇಳೆಗೆ ಹಿರೇಕೆರೂರು ತಾಲೂಕಿನ ಸೂಡಂಬಿ ಗ್ರಾಮದಲ್ಲಿ ಶಿಕ್ಷಕರಾಗಿ ಸೇವೆ ಆರಂಭಿಸಿದರು. ಆಗ ಸೂಡಂಬಿ, ಕಚವಿ ಗ್ರಾಮಗಳಲ್ಲಿ ಸಂಗೂರು ಕರಿಯಪ್ಪ ಮತ್ತು ಹೊದಿಕೆ ಮಾಸ್ತರ ಕಾರ್ಯಗಳನ್ನು ಗುರುತಿಸಿದವರು. ಕಚವಿ ಗ್ರಾಮದಲ್ಲಿ ಕರಿಯಪ್ಪ ಆರಂಭಿಸಿದ್ದ

'ಗ್ರಾಮ ಸೇವಾಕಾರ್ಯ' ಗಮನಿಸಿದ ಇವರು ಕರಿಯಪ್ಪನೊಂದಿಗೆ ಸೇರಿ ರೈತರಿಗೆ ದೇಶಾಭಿಮಾನ ಹಾಗೂ ಗಾಂಧೀಜಿ ವಿಚಾರಧಾರೆಗಳನ್ನು ತಿಳಿಸುವ ಕಾರ್ಯವನ್ನು ಶಾಲೆಯ ಬಿಡುವಿನ ವೇಳೆಯಲ್ಲಿ ಆರಂಭಿಸಿದರು."[೧೦೭] ಶಿಕ್ಷಕರಾಗಿದ್ದುಕೊಂಡೇ ಕಚವಿ ಹಾಗೂ ಹಂಸಬಾವಿ ಭಾಗಗಳಲ್ಲಿ ರಾಷ್ಟ್ರಸೇವೆಗೆ ಯುವಕರನ್ನು ಪ್ರೇರೇಪಿಸಿದ್ದು ವಿಶೇಷ ಕಾರ್ಯವಾಗಿದೆ.

**ಬಸವಕುಮಾರ ಮುಳಗುಂದಮಠ** : ಜನನ: ೧೯೧೮, ಸಾ॥ ಶಿಗ್ಲಿ, ತಾ॥ ಶಿರಹಟ್ಟಿ, ಜಿ॥ ಗದಗ

ಇವರು "೧೯೪೨ರ ಚಲೇಜಾವ್ ಚಳುವಳಿಯಲ್ಲಿ ಮಹದೇವಪ್ಪ ಮೈಲಾರ ಗುಂಪಿನಲ್ಲಿ ಕಾರ್ಯ ಮಾಡುತ್ತಿದ್ದವರು. ಸವಣೂರು ರೇಲ್ವೆ ಸ್ಟೇಷನ್ ಸುಟ್ಟಾಗ(೨೨.೧೧.೧೯೪೨) ಆದಯ್ಯ ಹಿರೇಮಠ, ಮಹದೇವಪ್ಪ ತಂಬ್ರಳ್ಳಿ, ಗುರಪ್ಪ ಗೋದಿ ಹಾಗೂ ರಾಯಪ್ಪ ನರಗುಂದ ಮೊದಲಾದವರ ಜೊತೆ ಕೆಲಸ ಮಾಡಿದವರು. ಕೊರಡೂರು ಮತ್ತು ಹೊಸರಿತ್ತಿ ಆಶ್ರಮದಲ್ಲಿದ್ದಾಗ ಅಲ್ಲಿಯ ವಿಧಾಯಕ ಕಾರ್ಯಗಳಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡವರು. ಸ್ವಾತಂತ್ರ್ಯ ನಂತರ ೧೯೪೮ರಲ್ಲಿ ಹೊಸರಿತ್ತಿ ಮಾದರಿಯ ಸೇವಾಮಂದಿರ ಸ್ಥಾಪಿಸಿ ಗ್ರಾಮ ಸೇವೆ ಮಾಡಿದವರು."[೧೦೮] ಹಾವೇರಿ ಭಾಗದ ಮಹದೇವಪ್ಪನ ತಂಡದಲ್ಲಿಯ ಸದಸ್ಯನಾಗಿ ಅವರ ವಿಧಾಯಕ ಕಾರ್ಯಗಳಲ್ಲಿ ಭಾಗವಹಿಸಿದವರು.

ಜಿಲ್ಲೆಯ ಚಳುವಳಿಗಾರರಿಗೆ ಸಹಾಯ ಮಾಡಿದವರಲ್ಲಿ ನೆರೆಯ ಜಿಲ್ಲೆ/ತಾಲೂಕಿನ ಮಹಿಳೆಯರೂ ಸೇರಿದ್ದಾರೆ. ಚಳುವಳಿಗಾರರಾದ ಮಾಸೂರಿನ ನ್ಯಾಮತಿ ವೀರಭದ್ರಪ್ಪಗೆ ಸಹಾಯ ಮಾಡಿದ್ದಾರೆ. ಹಾಗೆಯೇ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಆನವಟ್ಟಿ ಹೊಬಳಿಯ ಉದ್ರಿ ಗ್ರಾಮದ ದೇಸಾಯಿ ಪಾರ್ವತಮ್ಮನವರೂ ಒಬ್ಬರು.

ನ್ಯಾಮತಿ ವೀರಭದ್ರಪ್ಪ ಆನವಟ್ಟಿ ಭಾಗದ ಕಾಡಲ್ಲಿ ಒಂದು ರಾತ್ರಿ ಮುಳ್ಳಿನ ಕಂಟಿಗೆ ಬಿದ್ದು ತುಂಬಾ ನೋವು ಪಟ್ಟರು. "ದೇಸಾಯಿ ಪಾರ್ವತಮ್ಮ ಅವರನ್ನು ರಕ್ಷಿಸಿ ತಮ್ಮ ಮನೆಗೆ ಕರೆದುಕೊಂಡು ಬಂದು ಆರೈಕೆ ಮಾಡಿದರು. ವೀರಭದ್ರಪ್ಪ ನ್ಯಾಮತಿ ಆ ತಾಯಿ ದೇಸಾಯಿ ಪಾರ್ವತಮ್ಮ ಸಾಯುವ ಸ್ಥಿತಿಯಲ್ಲಿದ್ದ ನನ್ನನ್ನು ಬದುಕಿಸಿದ ದೇವತೆ' ಎಂದು ನೆನಪಿಸಿರುತ್ತಾರೆ."[೧೦೯] ಇದೇ ರೀತಿ ವೀರಭದ್ರಪ್ಪಗೆ ಸಹಾಯ ಮಾಡಿದವರಲ್ಲಿ ಆನವಟ್ಟಿಯ ಸಾಹುಕಾರ ಲಕ್ಷ್ಮೀಕಾಂತಪ್ಪ ಒಬ್ಬರು. ಹೀಗೆ ಗಡಿ ಜಿಲ್ಲೆಯ ಹಲವರು ವಿವಿಧ ರೀತಿಯಲ್ಲಿ ಜಿಲ್ಲೆಯ ಚಳುವಳಿಗಾರರಿಗೆ/ ನಾಯಕರುಗಳಿಗೆ ಗಂಡಾಂತರ ಪರಿಸ್ಥಿತಿಯಲ್ಲಿಯೂ ಸಹಾಯ ಮಾಡಿದ್ದಾರೆ.

**೩. ಹೋರಾಟವನ್ನು ಬೆಂಬಲಿಸಿದ ಸರಕಾರಿ ಅಧಿಕಾರಿಗಳು/ಅಧಿಕಾರೇತರರು**

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಚಳುವಳಿಗಾರರೊಂದಿಗೆ ನೇರವಾಗಿ ಹೋರಾಟಕ್ಕೆ ಧುಮುಕದಿದ್ದರೂ ಸರಕಾರಿ ಕೆಲಸದಲ್ಲಿ ಇದ್ದುಕೊಂಡೇ ಪ್ರೋತ್ಸಾಹಿಸಿದ ಧೀರರು;

ಟಿ.ಆರ್. ನೆಶ್ವಿ ಹಿರೇಕೆರೂರು ಭಾಗದಲ್ಲಿ ಕರ ನಿರಾಕರಣ ಚಳುವಳಿ ಮಾಡುತ್ತಿರುವಾಗ ಹತ್ತಿರದಿಂದ ಕಂಡವರು ಮಾಮಲೆದಾರ ಕರಜಗಿ ಬಸಪ್ಪ. ಅವರ ಬಗ್ಗೆ ಟಿ.ಆರ್.ನೆಶ್ವಿ ಉಲ್ಲೇಖಿಸಿರುವಂತೆ 'ಅಂದು ಕರ ನೀಡದಿರುವ ರೈತರ ಜಮೀನನ್ನು ಅಥವಾ ಅವರ ಮನೆಯ ವಸ್ತುಗಳನ್ನು ಹರಾಜಿಗೆ ಹಾಕಲಿಲ್ಲ. ಅಲ್ಲದೆ ರೈತರಿಗೆ ಯಾವಾಗಲೂ ಯಾರಿಗೂ ಶಿಕ್ಷೆ ವಿಧಿಸುವ ಗೋಜಿಗೆ ಹೋಗಲಿಲ್ಲ. ಅಂಥವರು ಗೌರವಕ್ಕೆ ಅರ್ಹರು'; ಕರಜಗಿ ಬಸಪ್ಪನವರು ಕೃಷಿಕರ ಹಿತೈಷಿಯಾಗಿ ನಡೆದುಕೊಂಡಿದ್ದಲ್ಲದೆ ಚಳುವಳಿಗಾರರಿಗೂ ಯಾವುದೇ ರೀತಿಯಲ್ಲಿ ತೊಂದರೆ ಕೊಟ್ಟವರಲ್ಲ. ಇದರಿಂದ ಕರ ನಿರಾಕರಣ ಚಳುವಳಿಗೆ ಅವರಿಂದ ಪರೋಕ್ಷವಾಗಿ ಸಹಾಯವಾಗಿರುವುದನ್ನು ಮರೆಯುವ ಹಾಗಿಲ್ಲ.

"ಕರ ನಿರಾಕರಣ ಚಳುವಳಿ ಸಂದರ್ಭದಲ್ಲಿ ಟಿ.ಆರ್.ನೆಶ್ವಿಯೊಂದಿಗೆ ತಾಲೂಕಿನ ಆಣೆವಾರಿ ಮಾಡುವ ಕಾರ್ಯದಲ್ಲಿ ಸರಕಾರದಿಂದ ನೇಮಕವಾಗಿದ್ದ ಡಿ.ಡಿ.ಸಿ. ವಿದ್ಯಾಶಂಕರ ಸುಮಾರು ೬೦ ಹಳ್ಳಿಗಳ ಆಣೆವಾರಿ ಮಾಡುವಾಗ ಯಾವುದೇ ರೀತಿಯ ದರ್ಪವಿಲ್ಲದೆ ರೈತರ ಹೊಲ-ಗದ್ದೆಗಳಿಗೆ ಹೋಗಿ ರೈತರಿಗೆ ಹಾನಿಯಾಗಿರುವುದನ್ನು ನೋಡಿದವರು. ಸರಕಾರದಿಂದ ನೇಮಕವಾಗಿದ್ದರೂ ರೈತರ ಕಷ್ಟಕ್ಕೆ ಸ್ಪಂದಿಸಿ ರೈತರ ಪರವಾಗಿ ಸರಕಾರಕ್ಕೆ ವರದಿ ನೀಡಿದ ಈ ಅಧಿಕಾರಿ ರೈತರಿಗೆ ೪೬,೦೦೦ ರೂ/- ಹಣ ನೀರುಸಾರಿಗೆ ಸೂಟ್ ಆಗಲೂ ಪರೋಕ್ಷವಾಗಿ ಕಾರಣರಾದವರು"[೧೧೦] ಎಂಬುದನ್ನು ಮರೆಯುವಂತಿಲ್ಲ.

೧೯೪೨ರ ಚಲೇಜಾವ್ ಚಳುವಳಿ ಕಾಲಕ್ಕೆ ಹಾವೇರಿ ಜಿಲ್ಲೆಯ ನಾಲ್ಕು ತಂಡಗಳಿಗೆ ರಾಯಬಾರಿಯಾಗಿ ಕಾರ್ಯ ಮಾಡುತ್ತಿದ್ದ ಕೆ.ಎಫ್. ಪಾಟೀಲರನ್ನು ಪೊಲೀಸರು ಹಿಡಿಯಲಿಲ್ಲ. ಕೆಳ ಹಂತದ ಅಧಿಕಾರಿಗಳು ಅವರ ಹೆಸರನ್ನು ಸೇರಿಸಿದರೂ ಮೇಲಾಧಿಕಾರಿಗಳಾದ ಬ್ಯಾಡಗಿ ಭಾಗದಲ್ಲಿ ಶೇಖ ಮತ್ತು ಎನ್.ಎಂ. ಪಾಟೀಲ ಆ ಹೆಸರನ್ನು ತೆಗೆದು ಹಾಕುತ್ತಿದ್ದ ಬಗ್ಗೆ ಚಳುವಳಿಗಾರ ಪುಟ್ಟಪ್ಪ ಹರಬಿ, ಮಳ್ಳಪ್ಪ ಕೊಪ್ಪದ ಹಾಗೂ ದೇವೇಂದ್ರಪ್ಪ ವಿಭೂತಿ ಹೇಳುತ್ತಾರೆ.

"ಕೆ.ಎಫ್. ಪಾಟೀಲ ಜಿಲ್ಲಾ 'ಸ್ಕೂಲ್ ಬೋರ್ಡ್‌ನ ಅಧ್ಯಕ್ಷ'ರಾದ ಸಮಯದಲ್ಲಿ ಆಫೀಸಿನಲ್ಲಿಯೇ ಚಳುವಳಿಗೆ ಸಂಬಂಧಿಸಿದ ಬುಲೆಟಿನ್‌ಗಳನ್ನು ಸಿದ್ಧಗೊಳಿಸುವುದು, ಎಲ್ಲೆಡೆ ಕಳುಹಿಸಿಕೊಡುವುದು ಇವರ ಪ್ರಮುಖ ಕಾರ್ಯವಾಗಿತ್ತು. ಇವರ ಈ ಕಾರ್ಯಕ್ಕೆ ಆಫೀಸಿನ ಸಿಪಾಯಿ ಅಂಕೋಲಾದ ಬೊಮ್ಮ ನಾಯ್ಕ ಎಂಬುವವನು ನೆರಳಾಗಿ ನಿಂತು ಸೇವೆ ಸಲ್ಲಿಸಿರುವುದು ವಿಶೇಷ"[೧೧೧] ಹೀಗೆ ಒಬ್ಬ ಸಿಪಾಯಿ ಕೂಡ ರಾಷ್ಟ್ರೀಯ ಚಳುವಳಿಯಲ್ಲಿ ತನ್ನಿಂದಾದ ಸಹಾಯವನ್ನು ಮಾಡಿರುವುದು ತಿಳಿದುಬರುತ್ತದೆ.

ಕೆ.ಎಫ್. ಪಾಟೀಲ ಬಂಧನಕ್ಕೊಳಗಾಗುವ ವಾತಾವರಣವಿದ್ದರೂ ಜೈಲಿನಲ್ಲಿದ್ದ ಹಳ್ಳಿಕೇರಿ ಗುದ್ಲೆಪ್ಪ ಪಾಟೀಲಗೆ ಹಿರೇಕೆರೂರು ಭಾಗದಲ್ಲಿ ಪೊಲೀಸರು ಮಹಿಳೆಯರ ಮೇಲೆ ದೌರ್ಜನ್ಯ ವೆಸಗುತ್ತಿದ್ದಾರೆ, ನೀವು ಜಿಲ್ಲಾ ಕಲೆಕ್ಟರನ್ನು ಭೇಟಿಯಾಗಿ ವಿಷಯ ತಿಳಿಸಿ ಎಂದು ಕಳುಹಿಸಿದ್ದರು.

ಪಾಟೀಲರು ಜಿಲ್ಲಾ ಕಲೆಕ್ಟರ್‌ರಾದ ಡಾಯಸ್‌ರನ್ನು ಭೇಟಿಯಾದಾಗ ಆ ಅಧಿಕಾರಿ 'ಪಾಟೀಲರೇ ನೀವೆಲ್ಲ ಎಣ್ಣಿಕೊಪ್ಪದ ಮಲ್ಲಿಕಾರ್ಜುನಗೌಡರ ಮನೆಯಲ್ಲಿ ಸೇರಿದ್ದು, ಏನೇನು ಯೋಜನೆ ಹಾಕಿದಿರಿ ಮತ್ತು ನಿಮ್ಮ ಕಾರ್ಯವೇನು'? ನನಗೆ ಎಲ್ಲ ಗೊತ್ತು."[೧೧೨] ಎಂದು ಹೇಳಿದರೂ, ಅಧಿಕಾರಿ ಬಂಧಿಸಲಿಲ್ಲ. ಎಣ್ಣಿಕೊಪ್ಪದ ಮನೆಯಲ್ಲಿ ನಡೆದ ವಿಷಯ ಉನ್ನತ ಅಧಿಕಾರಿಗೆ ತಿಳಿದಿದ್ದರೂ ಕೆ.ಎಫ್. ಪಾಟೀಲರನ್ನು ಬಂಧಿಸದೇ ಬಿಡುವ ಮೂಲಕ ಆ ಅಧಿಕಾರಿಯ ಪರೋಕ್ಷವಾಗಿ ಚಳುವಳಿಗೆ ಸಹಕರಿಸಿದ್ದು ಸ್ಮರಣಾರ್ಹ.

ಹಾವೇರಿ ಭಾಗದ ಪೋಲೀಸ್ ಅಧಿಕಾರಿ ಮಜೀದ ಫೌಜದಾರ, ಪತ್ರೋಳಿ ಇನ್ಸ್‌ಪೆಕ್ಟರ್ ಮತ್ತು ಫೈ ಇನ್ಸ್‌ಪೆಕ್ಟರ್ ಮೊದಲಾದ ಅಧಿಕಾರಿಗಳು ಮಹದೇವಪ್ಪ ಮೈಲಾರ ಮತ್ತು ದೇವೇಂದ್ರಪ್ಪ ವಿಭೂತಿ ಇವರ ಸ್ನೇಹಿತರು. ಹಾಗಾಗಿಯೇ ಮಹದೇವಪ್ಪನ ಸುಮಾರು ೭೪ ಭೂಗತ ಕಾರ್ಯಗಳು ಯಶಸ್ವಿಯಾಗುವಲ್ಲಿ ಅದಕ್ಕೆ ಇವರ ಕೊಡುಗೆಯನ್ನು ಅಲ್ಲಗಳೆಯುವಂತ್ತಿಲ್ಲ. ಇದಕ್ಕೆ ಸ್ಪಷ್ಟನೆಯೆನ್ನುವಂತೆ–

ಚಳುವಳಿಗಾರ ಪರಮಣ್ಣ ಹರಕಂಗಿ ಹೇಳಿರುವಂತೆ ತಮ್ಮನ್ನು ನೆಗಳೂರಿಂದ ಬಂಧಿಸಿ ಹಾವೇರಿಯ ಪೋಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋದರು. ಅಲ್ಲಿ ಹೇಳಿಕೆ ನೀಡುವಾಗ ಇವರ ತಂಡ ಸತ್ಯವನ್ನೇ ಹೇಳಿತು. ಆದರೆ ಮಜೀದ್ ಪೌಜುದಾರ 'ಲೇ ನೀವೇನ್ ಚಳುವಳಿ ಮಾಡ್ತಿರಿ ಲೇ. ನಾ ಹೇಳಿದ ಹಾಗೆ ಬರೆದು ಕೊಟ್ಟು ಹೋಗಿ' ಎಂದು ಹೇಳುವ ಆ ಅಧಿಕಾರಿಯ ದೇಶಾಭಿಮಾನ ಚಳುವಳಿಗಾರರಿಗೆ ಕಮ್ಮಿಯೇನು ಅಲ್ಲ. ಹೀಗೆ ಉನ್ನತ ಅಧಿಕಾರಿಗಳಷ್ಟೇ ಅಲ್ಲದೇ ಕೆಳಹಂತದ ಅಧಿಕಾರಿಗಳು ಸಹ ಚಳುವಳಿಗಾರರಿಗೆ ಬೆಂಬಲವಾಗಿ ನಿಂತಿರುವುದನ್ನು ಜಿಲ್ಲೆಯ ಚಳುವಳಿಯ ಸಮಯದಲ್ಲಿಯ ಘಟನೆಗಳಿಂದ ತಿಳಿಯಬಹುದಾಗಿದೆ.

**೪. ಸ್ವಾತಂತ್ರ್ಯ ನಂತರದ ಸವಣೂರು ಸಂಸ್ಥಾನ**

ಹಾವೇರಿ ಜಿಲ್ಲೆಯ ಸವಣೂರು ಸಂಸ್ಥಾನ ನವಾಬರಿಗೆ ಸೇರಿತ್ತು. ಜಿಲ್ಲೆಯ ಚಳುವಳಿಗಾರರಿಗೆ ಈ ಭಾಗದಲ್ಲಿ ಚಳುವಳಿಗೆ ಆಸ್ಪದ ನೀಡದ ಪ್ರದೇಶವೆಂದರೆ ತಪ್ಪಿಲ್ಲ. ಆದರೆ ಮೈಲಾರ ಮಹದೇವಪ್ಪನ ನಾಯಕತ್ವದಲ್ಲಿ ಕೆಲ ವಿಧ್ವಂಸಕ ಕಾರ್ಯಗಳು ನಡೆದದ್ದು ಬಿಟ್ಟರೆ ಹೇಳಿಕೊಳ್ಳುವಂತಹ ಚಳುವಳಿಯ ಕಾರ್ಯಗಳು ನಡೆಯದಂತೆ ನವಾಬರು ನೋಡಿಕೊಂಡಿದ್ದನ್ನು ದಾಖಲೆಗಳಿಂದ ಅರಿಯಬಹುದಾಗಿದೆ.

ಚಳುವಳಿಯ ಕಾಲಕ್ಕೆ ಸವಣೂರಿನ ನವಾಬ ಅಬ್ದುಲ್ ಮಜೀದಖಾನನಿದ್ದನು. ಈತನು ತನ್ನ ಮೂವತ್ತಾರು ವರ್ಷಗಳ ಆಳ್ವಿಕೆಯನ್ನು ಆಧುನಿಕ ರೀತಿಯಲ್ಲಿ ಆಡಳಿತ ನಡೆಸಿದ ಇವನು ತನ್ನ ಸಂಸ್ಥಾನದಲ್ಲಿ ಸ್ವಾತಂತ್ರ್ಯದ ಚಳುವಳಿಗಳು ನಡೆಯದ ಹಾಗೆ ನೋಡಿಕೊಂಡಿದ್ದ ಮತ್ತು ಅವನು ವಿಧಿಸುತ್ತಿದ್ದ ಉಗ್ರ ಶಿಕ್ಷೆಗಳು ಕಾರಣವಾಗಿರಬಹುದು.

"ಸವಣೂರು ಸಂಸ್ಥಾನ ಬ್ರಿಟಿಷರ ಪ್ರಾಂತವಾಗಿದ್ದರಿಂದ ಅಲ್ಲಿ ಆಂಗ್ಲರಿಗೆ ಅನ್ವಯಿಸುವ ಕಾನೂನುಗಳೇ ಅನುಷ್ಠಾನದಲ್ಲಿದ್ದವು. ದಿವಾಣಿ ಹಾಗೂ ಫೌಜುದಾರಿ ನ್ಯಾಯಾಲಯಗಳಿದ್ದವು.

ಸಂಸ್ಥಾನದ ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿ ನವಾಬ ಅಬ್ದುಲ್ ಮಜೀದಖಾನ ನಾಗಿದ್ದ. ಆದರೆ ಸಂಸ್ಥಾನದ ಆಳ್ವಿಕೆಯ ಹಿಂದೆ ಧಾರವಾಡದ ಕಲೆಕ್ಟರನೇ ರಾಜಕೀಯ ಕಾರಭಾರಿಯಾಗಿದ್ದು ನ್ಯಾಯಾಡಳಿತವನ್ನು ನಿರ್ವಹಿಸುತ್ತಿದ್ದನು. ಇಲ್ಲಿಯ ನಾಣ್ಯ ವ್ಯವಸ್ಥೆ, ತೂಕ–ಅಳತೆಗಳೂ ಕೂಡ ಆಂಗ್ಲರ ಆಡಳಿತ ಪ್ರದೇಶಗಳಲ್ಲಿರುವಂತೆ ಇದ್ದದ್ದು ವಿಶೇಷ.

**ವಿಲೀನೀಕರಣ ತೆರೆಯ ಮರೆಯಲ್ಲಿ** : ೧೯೪೭ ಆಗಸ್ಟ್ ೧೪ರ ಮಧ್ಯ ರಾತ್ರಿ ಸಿಕ್ಕ ಸ್ವಾತಂತ್ರ್ಯ ಜಿಲ್ಲೆಯ ಸವಣೂರು ಸಂಸ್ಥಾನಕ್ಕೆ ಲಭಿಸಲಿಲ್ಲ. ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ೧೯೪೭ರ ಕೊನೆಗೆ ಐದುನೂರಕ್ಕೂ ಮಿಕ್ಕಿದ ಸಂಸ್ಥಾನಗಳಲ್ಲಿ ವಿಲೀನೀಕರಣ ಪ್ರಕ್ರಿಯೆ ಆರಂಭವಾಯಿತು. ಅದಕ್ಕೆ ಅನುಸರಿಸಿ ಸವಣೂರನ್ನು ಗಮನಿಸುವುದಾದರೆ–ಸವಣೂರು ಅತ್ಯಂತ ಸಣ್ಣ ಸಂಸ್ಥಾನವಿತ್ತು. ೧೯೪೭ ಆಗಸ್ಟ್ ೧೪ರ ಮಧ್ಯರಾತ್ರಿ ಶೂನ್ಯ ವೇಳೆಯಲ್ಲಿ ದೇಶವು ಬ್ರಿಟಿಷರಿಂದ ಸ್ವಾತಂತ್ರ್ಯವನ್ನು ಪಡೆದಾಗ ಸಂಸ್ಥಾನಿಕರು ತಮಗೂ ಬ್ರಿಟಿಷರು ಸಾರ್ವಭೌಮತ್ವವನ್ನು ಕೊಟ್ಟು ಹೋಗಿದ್ದಾರೆಂಬ ಭ್ರಮೆಯಲ್ಲಿದ್ದರು. ತಮ್ಮ ತಮ್ಮ ಸಂಸ್ಥಾನಗಳನ್ನು ತಾವೇ ಆಳುವೆವು ಎನ್ನುವ ಕಲ್ಪನಾಲೋಕದಲ್ಲಿ ವಿಹರಿಸುತ್ತಿದ್ದರು.

ಗೃಹಮಂತ್ರಿ ವಲ್ಲಭಭಾಯಿ ಪಟೇಲರು ಸಂಸ್ಥಾನಗಳನ್ನು ಭಾರತದ ಒಕ್ಕೂಟಕ್ಕೆ ಸೇರ್ಪಡೆ ಮಾಡಿಕೊಳ್ಳುವ ಪ್ರಕ್ರಿಯೆ ಆರಂಭಿಸಿದರು. ಇತ್ತ ಮುಂಬೈ ಪ್ರಾಂತದ ದಕ್ಷಿಣ ಸಂಸ್ಥಾನಗಳಾದ ಸಾಂಗ್ಲಿ, ಅಕ್ಕಲಕೋಟೆ, ಔಂಧ, ಕುರಂದವಾಡ, ಕೊಲ್ಲಾಪುರ, ಜತ್ತ್, ಮಿರಜ್, ರಾಮದುರ್ಗ, ಮುಧೋಳ, ಜಮಖಂಡಿ, ಸವಣೂರು ಮುಂತಾದ ಸಂಸ್ಥಾನಗಳ ರಾಜರು/ನವಾಬರು ತಮ್ಮದೇಯಾದ ಒಂದು ಒಕ್ಕೂಟವನ್ನು ರಚಿಸಿಕೊಂಡಿದ್ದರು. ಕಾರಣ ತಮ್ಮ ತಮ್ಮ ಸಂಸ್ಥಾನಗಳನ್ನು ತಮ್ಮ ಅಧೀನದಲ್ಲಿಯೇ ಉಳಿಸಿಕೊಳ್ಳುವುದರ ಸಲುವಾಗಿ ಈ ಹುನ್ನಾರ ನಡೆಸಿದ್ದರು. ಆದರೆ ಆಯಾ ಸಂಸ್ಥಾನಗಳಲ್ಲಿದ್ದ ಪ್ರಜಾ ಹಿತರಕ್ಷಕ ಸಂಘಗಳು ಅಥವಾ ಪ್ರಜಾ ಪರಿಷತ್ತುಗಳು ಅವರ ನೀತಿಯನ್ನು ವಿರೋಧಿಸುತ್ತಿದ್ದವು. ಯಾವ ಪ್ರಜೆಗಳಿಗೂ ರಾಜರುಗಳ ಆಳ್ವಿಕೆ ಇಷ್ಟವಿರಲಿಲ್ಲ. ಕಾರಣ ಈ ಹಿಂದೆ ರಾಜ/ನವಾಬ ತಮ್ಮ ತಮ್ಮ ಸಂಸ್ಥಾನಗಳಲ್ಲಿ ಪ್ರಾತಿನಿಧಿಕ ಸಂಸ್ಥೆಗಳನ್ನು ಸ್ಥಾಪಿಸಿ, ಜವಾಬ್ದಾರಿ ರಾಜ್ಯ ಪದ್ಧತಿಯನ್ನು ಆರಂಭಿಸಬೇಕೆಂದು ಪ್ರಜಾ ಪರಿಷತ್ತಿನವರು ಕೇಳಿಕೊಂಡಾಗ ರಾಜ/ನವಾಬರು ನಿರಾಕರಿಸಿದ್ದರು.”[೧೧೩]

ಸವಣೂರು ಸಂಸ್ಥಾನದಲ್ಲಿ ಚಳುವಳಿ ಕಾಲದಲ್ಲಿ ಪ್ರಜೆಗಳು ಸದಾ ಭೀತಿಯ ನೆರಳಲ್ಲಿಯೇ ಬಾಳುತ್ತಿದ್ದರು. ಸವಣೂರಲ್ಲಿ ಗಾಂಧಿ ಟೊಪ್ಪಿಗೆ ಧರಿಸುವುದು ಅಪರಾಧವಾಗಿತ್ತು. ಅಲ್ಲಿ ವಾಕ್ ಸ್ವಾತಂತ್ರ್ಯವಿರಲಿಲ್ಲ. ಮಜೀದಖಾನ್ ನವಾಬನು ಅತ್ಯಂತ ದುಡುಕಿನ ಸ್ವಭಾವದವನಾಗಿದ್ದನು. ಅವನು ಹೇಳಿದ್ದೇ ಕಾನೂನು. ಎಂಥ ಅಧಿಕಾರಿಯಾದರೂ ನವಾಬರಿಗೆ ಅಂಜುತ್ತಿದ್ದರು. ಯಾರದ್ದೋ ಚಾಡಿ ಮಾತು ಕೇಳಿ ಮಜೀದಖಾನನು ಪ್ರಜೆಗಳನ್ನು ಹಿಂಸಿಸುತ್ತಿದ್ದನು. ಇವನ ಆಳ್ವಿಕೆಯಲ್ಲಿ ಕೆಲವರು ಗಡಿಪಾರು ಆದರೆ, ಇನ್ನೂ ಕೆಲವರು ಇಡೀ ದೇಹವೇ ಹಣ್ಣಾಗುವಂತೆ ಹೊಡಿಸಿಕೊಂಡಿದ್ದರು. ಅನೇಕರ ಭೂಮಿಗಳನ್ನು ನವಾಬರು ಲಿಲಾವು ಮಾಡಿಸಿದ್ದರು. ನವಾಬರು

ಸವಣೂರಿನ ಬೀದಿಯಲ್ಲಿ ಹೊರಟರೆ ದಾರಿಯಲ್ಲಿರುವವರು, ಅಂಗಡಿಗಳಲ್ಲಿ ಇರುವವರು ಎಲ್ಲರೂ ರಸ್ತೆಗೆ ಬಂದು ನೆಲಕ್ಕೆ ಬಾಗಿ ಸಲಾಮು ಮಾಡಬೇಕು. ಹಾಗೇನಾದರೂ ಮಾಡದಿದ್ದರೆ ಅಂಥವರಿಗೆ ಅಲ್ಲಿಯೇ ಪಾದರಕ್ಷೆಗಳಿಂದಲೇ ಬಡಿಯುತ್ತಿದ್ದರು. ಇದರಿಂದ ನವಾಬರ ಕೆಲ ಒಳ್ಳೆಯ ಗುಣಗಳು ಮತ್ತು ಒಳ್ಳೆಯ ಕಾರ್ಯಗಳು ಇಂಥ ಕಾರ್ಯಗಳಿಂದಾಗಿ ಸಾರ್ವಜನಿಕವಾಗಿ ಕೆಟ್ಟವರೆನಿಸಿದ್ದನ್ನು ದಾಖಲೆಗಳಿಂದ ಹಾಗೂ ಚಳುವಳಿಗಾರರಿಂದ, ಚಳುವಳಿಯನ್ನು ನೋಡಿದವರಿಂದ, ಅಂದಿನ ಘಟನೆಗಳನ್ನು ಕೇಳಿದವರಿಂದ ಸ್ಪಷ್ಟವಾಗುತ್ತದೆ.

೧೯೪೭ರ ಸೆಪ್ಟೆಂಬರ್‌ನಿಂದ ಭಾರತ ಸರಕಾರವು ಸಂಸ್ಥಾನಗಳ ಭವಿಷ್ಯವನ್ನು ನಿರ್ಧರಿಸಲು ಒಂದು ಯೋಜನೆಯನ್ನು ಸಿದ್ಧ ಪಡಿಸಿತು. ರಾಜಧನವನ್ನು ಕೊಟ್ಟು ರಾಜ-ಮಹಾರಾಜ, ನಿಜಾಮ-ನವಾಬರ ಸಂಸ್ಥಾನಗಳನ್ನು ಭಾರತದ ಒಕ್ಕೂಟಕ್ಕೆ ಸೇರಿಸಿಕೊಳ್ಳುವುದೇ ಈ ಯೋಜನೆಯಾಗಿತ್ತು. 'Instrument of Accession ಎನ್ನುವ ಕರಾರು ಪತ್ರವನ್ನು ಸಿದ್ಧಪಡಿಸಿ, ಮಹಾರಾಜರೊಂದಿಗೆ ಕರಾರು ಪತ್ರ ಮಾಡಿಕೊಂಡು ಸಂಸ್ಥಾನಿಕ ಪ್ರದೇಶಗಳನ್ನು ಆಯಾ ರಾಜ್ಯಗಳ ಸಮೀಪದ ಜಿಲ್ಲೆಗೆ ಸೇರಿಸಿಕೊಳ್ಳುವುದೇ ಈ ವಿಲೀನೀಕರಣ ಧ್ಯೇಯವಾಗಿತ್ತು."[೧೧೪]

ನವಾಬರು ಸವಣೂರಲ್ಲಿ ಫೆಬ್ರುವರಿ ೨, ೧೯೪೮ರಲ್ಲಿ ಸಂಸ್ಥಾನದ ಸಂಸತ್ತಿನ ಸದಸ್ಯರನ್ನು ಕರೆದು ನಮ್ಮ ಸಂಸ್ಥಾನದ ಪ್ರಜೆಗಳು ಸವಣೂರು ಸಂಸ್ಥಾನದ ಭವಿಷ್ಯವನ್ನು ನಿರ್ಧರಿಸಬೇಕು, ಸಂಸ್ಥಾನಿಕನಾದ ನಾನು ಹೇಗೆ ನಡೆದುಕೊಳ್ಳಬೇಕು ಎಂದು ತಮ್ಮನ್ನು ಕೇಳುತ್ತೇನೆ. ನೀವೆಲ್ಲರೂ ನಮ್ಮ ಸಂಸ್ಥಾನವು ಮುಂಬೈ ಪ್ರಾಂತದಲ್ಲಿ ವಿಲೀನವಾಗಬೇಕೆಂದು ಬಯಸಿದರೆ ನನ್ನ ಅಭ್ಯಂತರವಿಲ್ಲ. ಇದನ್ನು ಜನತೆಯೇ ನಿರ್ಧರಿಸಬೇಕು. ನೀವು ಸಮಾಲೋಚಿಸಿ ನನಗೆ ಖಚಿತವಾದ ಉತ್ತರವನ್ನಿತ್ತರೆ, ನಾನು ಸಂಸ್ಥಾನಗಳ ಸಚಿವ ಶಾಖೆಯನ್ನು ಸಂಪರ್ಕಿಸಿ, ಮುಂದಿನ ಕಾರ್ಯಕ್ಕೆ ಉದ್ಯುಕ್ತನಾಗುತ್ತೇನೆ. ಕಳೆದ ಹಲವಾರು ವರುಷಗಳಿಂದ ಸವಣೂರಿಗೆ ಪ್ರಜೆಗಳು ಶಾಂತ ರೀತಿಯಲ್ಲಿ ವರ್ತಿಸಿದ್ದಕ್ಕೆ ಹಾಗೂ ಸಂಸ್ಥಾನಿ ಸಿಬ್ಬಂದಿ ವರ್ಗದವರು ನಿಷ್ಠರಾಗಿ ಸೇವೆಯನ್ನು ಸಲ್ಲಿಸಿದ್ದಕ್ಕೆ ನಾನು ತುಂಬಾ ಋಣಿಯಾಗಿದ್ದೇನೆ ಎಂದು ಸದಸ್ಯರಿಗೆ ಹೇಳಿದನು. ನವಾಬ ತಮ್ಮ ಮೂವತ್ತಾರು ವರ್ಷಗಳ ಆಳ್ವಿಕೆಯಲ್ಲಿ ಇಷ್ಟು ನಮ್ರವಾಗಿ ನಡೆದುಕೊಂಡಿದ್ದು ಇದೇ ಮೊದಲು. ಸಂಸ್ಥಾನದ ಸಂಸತ್ ಸದಸ್ಯರು ಈ ಸಭೆಯಲ್ಲಿ ಯಾವ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ. ಆದರೆ ಸಂಸತ್ತು ಸದಸ್ಯರು ಧಾರವಾಡ ಜಿಲ್ಲೆಯಲ್ಲಿ ವಿಲೀನವಾಗಬೇಕೆಂದು ನಂತರ ನವಾಬರಿಗೆ ಹೇಳಿದರು. ನವಾಬರು ಸಂಸತ್ ಸದಸ್ಯರಿಗೆ ಸಂಸ್ಥಾನದ ಭವಿಷ್ಯದ ಕುರಿತು ಕೇಳಿದ ಅಭಿಪ್ರಾಯವನ್ನು ಮುಂಬೈ ಟೈಮ್ಸ್ ಆಫ್ ಇಂಡಿಯಾ ಮತ್ತು ಫ್ರಿಪ್ರೆಸ್ ಜರ್ನಲ್ ಪತ್ರಿಕೆಗಳು ಮೆಚ್ಚುಗೆ ವ್ಯಕ್ತಪಡಿಸಿದವು.

ಫೆಬ್ರುವರಿ ೧೯, ೧೯೪೮ರಂದು ವಲ್ಲಭಭಾಯಿ ಪಟೇಲರ ಕಾರ್ಯದರ್ಶಿ ಎಂ.ಜೆ. ದೇಸಾಯಿ ಮಜೀದಖಾನನ್ನು ಮುಂಬೈಗೆ ಬುಲಾವ್ ಮಾಡಿದನು. ಇವರ ಜೊತೆ ದಕ್ಷಿಣದ

ಸಂಸ್ಥಾನದ ಹಲವಾರು ಮಹಾರಾಜರು ಬಂದಿದ್ದರು. ವಿಲೀನೀಕರಣ ಪ್ರಶ್ನೆಯನ್ನು ಈ ರಾಜರ ಮುಂದೆ ಇಡಲಾಯಿತು. ಆ ಸಭೆಯಲ್ಲಿ ಮುಧೋಳ ಮತ್ತು ಕೊಲ್ಲಾಪುರ ಮಹಾರಾಜರು ತಾವು ಸಿಂಹಾಸನವನ್ನು ತ್ಯಜಿಸಿ ಭಾರತ ಒಕ್ಕೂಟಕ್ಕೆ ಸೇರಲು ಇಚ್ಛಿಸುತ್ತೇವೆ ಎಂದು ಹೇಳಿದರು. ಉಳಿದ ಸಂಸ್ಥಾನಿಕರು ವಿಲೀನೀಕರಣಕ್ಕೆ ಒತ್ತಾಯಪೂರ್ವಕವಾಗಿ ಒಪ್ಪಲೇಬೇಕಾಯಿತು. ವಲ್ಲಭಭಾಯಿ ಪಟೇಲರು ವಿಲೀನೀಕರಣದ ಒಪ್ಪಂದ ಪತ್ರವನ್ನು ಸಿದ್ಧವಾಗಿಸಿದ್ದರು. ಅಲ್ಲಿ ಉಳಿದ ರಾಜ/ನವಾಬರಂತೆ ಸವಣೂರು ನವಾಬರು ಒಪ್ಪಂದಕ್ಕೆ ಸಹಿ ಹಾಕಿದರು. ಈ ಘಟನೆ ನಡೆದು ಎರಡು ಗಂಟೆಗಳಲ್ಲಿ ಧಾರವಾಡದಿಂದ ಕಲೆಕ್ಟರ್ ಹಿರಿಯ ಅಧಿಕಾರಿಗಳನ್ನು ಸವಣೂರಿಗೆ ಕಳುಹಿಸಿದರು. ಬಂದ ಅಧಿಕಾರಿಗಳು ಸವಣೂರಿನ ಹುಜೂರ ಟ್ರೇಝುರಿಗೆ ಮೊಹರು ಮಾಡಿಸಿದರು. ಸವಣೂರಿಗೆ ಬಂದ ಮಜೀದಖಾನರ ಮುಖ ಕಳಾಹೀನವಾಗಿತ್ತು. ಸವಣೂರು ಟ್ರೇಝುರಿಯಲ್ಲಿ ಒಂಬತ್ತು ಲಕ್ಷ ರೂಪಾಯಿ ಶಿಲ್ಕು ಇತ್ತು. ಅದನ್ನು ನವಾಬರು ಮುಟ್ಟುವಂತಿರಲಿಲ್ಲ."[೧೧೫] ಕಾರಣ ಅದು ಭಾರತ ಸರಕಾರಕ್ಕೆ ಸೇರಿತ್ತು. ಹೀಗೆ ಸವಣೂರು ಸಂಸ್ಥಾನ ಅಧಿಕೃತವಾಗಿ ಭಾರತ ಸರಕಾರಕ್ಕೆ ಸೇರಿತು.

**ವಿಲೀನಿಕರಣ ಸಮಾರಂಭ** : ಮಾರ್ಚ್ ೮, ೧೯೪೮ರಂದು ಧಾರವಾಡ ಜಿಲ್ಲಾ ಕಲೆಕ್ಟರ್ ಅಬ್ದುಲ್ ಮಜೀದಖಾನನಿಂದ ಸವಣೂರು ಸಂಸ್ಥಾನವನ್ನು ಭಾರತ ಸರಕಾರದ ಪರವಾಗಿ ಸ್ವೀಕರಿಸಬೇಕೆಂದು ಕೇಂದ್ರ ಸರಕಾರ ನಿರ್ದೇಶನ ನೀಡಿತ್ತು. ಇಲ್ಲಿಯವರೆಗೂ ಸರಕಾರಿ ಮಹಲಿನ ಮೇಲೆ ಬ್ರಿಟೀಷರ ಗುಲಾಮಗಿರಿ ಪ್ರತೀಕವಾಗಿದ್ದ ಯೂನಿಯನ್ ಜಾಕ್ ಧ್ವಜವು ಹಾರುತ್ತಿತ್ತು.

"ಮಾರ್ಚ್ ೭, ೧೯೪೮ರಂದೇ ಧಾರವಾಡದ ಕಲೆಕ್ಟರ್ ಮಿ॥ ಬೆಂಜಮಿನ್ ಆರಕ್ಷಕ ಅಧೀಕ್ಷಕರು ಹಾಗೂ ನೂರು ಜನ ಆರಕ್ಷಕರು ಸವಣೂರಿಗೆ ಬಂದರು. ಮಾರ್ಚ್ ೮ರಂದು ಮುಂಜಾನೆ ಪೊಲೀಸರು ಒಂದು ಗಂಟೆ ಪಥ ಸಂಚಲನ ಮಾಡಿದರು. ಊರಿನ ಗಣ್ಯರೆಲ್ಲರೂ ನೆರೆದಿದ್ದರು. ನವಾಬ ಮಜೀದಖಾನ್‌ನು ದರ್ಬಾರಿ ವೇಷ ಧರಿಸಿ, ಧ್ವಜಾರೋಹಣಕ್ಕೆ ಸ್ವಲ್ಪ ಮೊದಲು ಬಂದನು. ಇದೇ ಅವನ ಕೊನೆಯ ಬಾರಿ ಧರಿಸಿದ ಸವಣೂರು ದರ್ಬಾರಿ ವೇಷವಾಗಿತ್ತು. ಮಜೀದಖಾನ ಬಂದಾಗ ಸವಣೂರು ನಾಗರಿಕರು ಮೊದಲಿನಂತೆ ಉತ್ಸಾಹವನ್ನು ತೋರಿಸಲಿಲ್ಲ. ನೆಲಕ್ಕೆ ಕೈ ಹಚ್ಚಿ ಸಲಾಮು ಮಾಡಲಿಲ್ಲ. ಸವಣೂರಿಗೆ ನಿಜವಾದ ಸ್ವಾತಂತ್ರ್ಯ ಅಂದು ಬಂದಿತ್ತು. ನವಾಬನ ಮುಖ ಬಾಡಿತ್ತು. ನವಾಬ ಯಾರೊಡನೆಯೂ ಮಾತನಾಡಲಿಲ್ಲ. ಧಾರವಾಡದ ಕಲೆಕ್ಟರ್ ಬೆಂಜಮಿನ್‌ರು ಧ್ವಜಾರೋಹಣವನ್ನು ಮಾಡಿ, ಪೊಲೀಸರಿಂದ ಸಲಾಮು ಸ್ವೀಕರಿಸಿದರು. ಆರಕ್ಷಕರು ಅಂದು ನವಾಬ ಮಜೀದಖಾನನಿಗೆ ಸಲಾಮನ್ನೀಯಲಿಲ್ಲ. ನವಾಬ ಅಂದು ಕೇವಲ ಸವಣೂರಿನ ಒಬ್ಬ ಪ್ರಜೆಯಾಗಿದ್ದನು.

ಧ್ವಜಾರೋಹಣ ಮುಗಿದೊಡನೆ ನವಾಬನು ಧ್ವಜಸ್ತಂಭದ ಹತ್ತಿರ ನಿಂತ ಕಲೆಕ್ಟರ್ ಬೆಂಜಮಿನ್ನನ ಕೈ ಕುಲುಕಿ, ಸಮೀಪವಿದ್ದ 'ಸವಣೂರು ಸ್ಟೇಟ್' ಎಂಬ ಬೋರ್ಡ್ ಇರುವ ಕೆಂಪು ಕಾರನ್ನು

ಹತ್ತುವಾಗ 'ಇನ್ನೆಂದೂ ತನ್ನ ಕಾಲು ಸವಣೂರು ನೆಲವನ್ನು ಸ್ಪರ್ಶಿಸುವುದಿಲ್ಲ'ವೆಂದು ಪ್ರತಿಜ್ಞೆ ಮಾಡಿ ಬೆಂಗಳೂರಿಗೆ ಹೋದನು. ಅವನ ದೃಢ ನಿರ್ಧಾರದಂತೆ ಕೊನೆಗೂ ಅವನ ಶವವು (ಸಾವು ೩೦.೫.೧೯೫೪) ಬೆಂಗಳೂರಿನಿಂದ ಮೇ ೩೧ಕ್ಕೆ ಸವಣೂರಿಗೆ ಬಂದಿತು. ಖಾದರಾ ಭಾಗದಲ್ಲಿ ಅವನ ಗೋರಿಯಾಯಿತು."[೧೧೬]

ಹೀಗೆ ಹದಿನೈದನೇ ತಲೆಮಾರಿನವನಾದ ಅಬ್ದುಲ್ ಮಜೀದಖಾನನ ತಲೆಗೆ ಎರಡು ನೂರಾ ಎಪ್ಪತ್ತಾರು ವರುಷ (೧೬೮೬-೧೯೪೮). ಸವಣೂರು ರಾಜ್ಯ ಸ್ಥಾಪನೆಗೆ ಅಬ್ದುಲ್ ರವೂಫಖಾನ ನವಾಬನು ಮೂಲ ಕಾರಣಕರ್ತನಾದರೆ, ಅಬ್ದುಲ್ ಮಜೀದಖಾನ ನವಾಬನು ಕೊನೆಯ ಲಯ ಕರ್ತನಾದನು.

ಹೀಗೆ ಹಾವೇರಿ ಜಿಲ್ಲೆಯ ಸವಣೂರು ಭಾಗಕ್ಕೆ ೧೯೪೭ ಆಗಸ್ಟ್ ೧೫ಕ್ಕೆ ದೊರೆಯದೆ ಇದ್ದ ಸ್ವಾತಂತ್ರ್ಯ ಮಾರ್ಚ್ ೮, ೧೯೪೮ರಂದು ಧಾರವಾಡ ಕಲೆಕ್ಟರ್ ಬೆಂಜಮಿನ್ ರಾಷ್ಟ್ರಧ್ವಜ ಹಾರಿಸುವುದರೊಂದಿಗೆ ದೊರೆಯಿತು.

ಸವಣೂರು ಸಂಸ್ಥಾನವು ೧೯೪೮ ಮಾರ್ಚ್ ೮ರಂದು ಧಾರವಾಡ ಜಿಲ್ಲೆಯಲ್ಲಿ ವಿಲೀನವಾಗಿ ಶಿಗ್ಗಾವಿ ತಾಲೂಕಿಗೆ ಸೇರಿತು. ಆದರೆ ಸವಣೂರಿಗೆ ತಾಲೂಕಿನ ಸ್ಥಾನ-ಮಾನ ಮಾತ್ರ ಸಿಕ್ಕಿರಲಿಲ್ಲ. ನಂತರದಲ್ಲಿ ಎಸ್. ನಿಜಲಿಂಗಪ್ಪ ಸವಣೂರು ಭಾಗದಿಂದ ಅವಿರೋಧವಾಗಿ ಶಾಸಕರಾಗಿ ಆಯ್ಕೆಯಾದರು. ಅವರು ಮುಖ್ಯಮಂತ್ರಿಯಾದ ನಂತರ ಸವಣೂರಿಗೆ ತಾಲೂಕಿನ ಸ್ಥಾನಮಾನಗಳು ದೊರೆತವು.

**ಕೊನೆ ಟಿಪ್ಪಣೆಗಳು**

೧. ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮, ಪುಟ ೭೫೩

೨. ಅದೇ, ಪುಟ ೩೮೧ ಮತ್ತು ೩೮೨

೩. ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ನೀಡಿದ ವಿವರ

೪. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೭೫೪

೫. ಅದೇ, ಪುಟ ೭೫೫

೬. ಅದೇ, ಪುಟ ೭೫೮ ಮತ್ತು ೭೬೦

೭. ಹಾವೇರಿಯ ಚಳುವಳಿಗಾರ ನಾರಾಯಣ ರಾಮಚಂದ್ರ ಕರ್ಪೂರ ನೀಡಿದ ವಿವರ

೮. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೭೭೧

೯. ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿಯಿಂದ ಸಂದರ್ಶನದಲ್ಲಿ ಪಡೆದ ವಿವರ

೧೦. ಹಾವೇರಿಯ ಚಳುವಳಿಗಾರ ನಾರಾಯಣ ರಾಮಚಂದ್ರ ಕರ್ಪೂರ ನೀಡಿದ ವಿವರ

೧೧. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೧, ಪುಟ ೭೭೬

೧೨. ನೆಗಳೂರಿನ ಚಳುವಳಿಗಾರರಾದ ಪರಮಣ್ಣ ಹರಕಂಗಿ ಹಾಗೂ ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿಯ ಹೇಳಿಕೆ

೧೩. ಪೂರ್ವೋಕ್ತ,ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೧, ಪುಟ ೭೮೩

೧೪. ಅದೇ, ಪುಟ ೭೮೫

೧೫. ಅದೇ, ಪುಟ ೭೮೭

೧೬. ಸಂಕಣ್ಣನವರ ಜಿ. ಸಂಕಮ್ಮ., ಹೆಣ್ಣು ಹೆಜ್ಜೆ-'ನೆಲದ ನಕ್ಷತ್ರ' ವೀರಮ್ಮ ಕರಿಯಪ್ಪ ಸಂಗೂರು ಕೌರವ ಪತ್ರಿಕೆಯ ಲೇಖನ, ಪುಟ ೪

೧೭. ಪಾಟೀಲ ಭೋಜರಾಜ : ಸ್ವಾತಂತ್ರ್ಯಯೋಧ ಟಿ.ಆರ್. ನೆಶ್ವಿ, ನೆಶ್ವಿ ಪ್ರಕಾಶನ ಹಂಸಬಾವಿ, ತಾ॥ ಹಿರೇಕೆರೂರು, ೧೯೯೮. ಪುಟ ೧೫

೧೮. ಅದೇ, ಪುಟ ೨೪ ಮತ್ತು ೩೦

೧೯. ಅದೇ, ಪುಟ ೩೮, ೩೯ ಮತ್ತು ೪೦

೨೦. ಅದೇ, ಪುಟ ೩೩

೨೧. ಅದೇ, ಪುಟ ೪೭

೨೨. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೩೧ ಮತ್ತು ೮೩೩

೨೩. ಚವಲಾರ ಸರೋಜಿನಿ(ಸಂ), ಚಿರ ಚೇತನ. ಕೆ.ಎಫ್.ಪಾಟೀಲರ ಅಭಿನಂದನಾ ಗ್ರಂಥ, ಕೆ.ಎಫ್. ಪಾಟೀಲರ ೮೪ನೆಯ ವರ್ಧಂತಿ ಸನ್ಮಾನ ಸಮಿತಿ, ರಾಣೆಬೆನ್ನೂರು, ೧೯೮೯, ಪುಟ ೧೦.

೨೪. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೩೬, ೮೩೭

೨೫. ಅದೇ, ಪುಟ ೮೩೯

೨೬. ಹಿತ್ತಲಮನಿ ವಿ.ಸಿ., ಮಾಡಿ ಮಡಿದ ಮೈಲಾರ ಮಹದೇವ, ಸಪ್ನ ಬುಕ್‌ಹೌಸ್, ಬೆಂಗಳೂರು, ೧೯೯೯, ಪುಟ ೩೦

೨೭. ಅದೇ, ಪುಟ ೩೮

೨೮. ಬಳಿಗಾರ ಮನು, ಮೈಲಾರ ಮಹದೇವನ ಬಲಿದಾನದ ವೀರಗಾಥೆ, ಪ್ರಕಟಿತ ಲೇಖನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರಕಾರ.

೨೯. ದಾನಿ ಸುರೇಂದ್ರ, ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಾಮ, ಬುರ್ಲಿ ಬಿಂದುಮಾಧವ ಸ್ಮಾರಕ ಪ್ರತಿಷ್ಠಾನ, ಹುಬ್ಬಳ್ಳಿ ೧೯೯೬, ಪುಟ ೧೬೭

೩೦. ಸಂಕಣ್ಣನವರ ಜಿ. ಸಂಕಮ್ಮ, ಹೋರಾಟದ ಒಂದು ನೋಟ, ಶ್ರೀಮತಿ ಸಿದ್ದಮ್ಮ ಮಹದೇವಪ್ಪ ಮೈಲಾರ, ಸಮೃದ್ಧಿ ಪ್ರಕಾಶನ, ಬ್ಯಾಡಗಿ, ೨೦೧೩. ಪುಟ ೩೩, ೬೧

೩೧. ಪೂರ್ವೋಕ್ತ, ಹಿತ್ತಲಮನಿ ವಿ.ಸಿ., ಮಾಡಿ ಮಡಿದ ಮೈಲಾರ ಮಹದೇವ, ಪುಟ ೮೯ ಮತ್ತು ೯೦

೩೨. ಅದೇ, ಪುಟ ೯೮ ಮತ್ತು ೧೦೧

೩೩. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೨೯೩

೩೪. ಕಾಮತ್ ಸೂರ್ಯನಾಥ(ಸಂ), ಧಾರವಾಡ ಜಿಲ್ಲೆ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಸರಕಾರ, ಕಾವೇರಿ ಭವನ, ಬೆಂಗಳೂರು, ೧೯೯೫, ಪುಟ ೧೩೯

೩೫. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯ ಯೋಧ ಟಿ.ಆರ್. ನೆಶ್ವಿ ಪುಟ ೧೭, ೧೮

೩೬. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧ ಮತ್ತು ೩ ಪುಟ ೩೦೫ ಮತ್ತು ೭೯೦

೩೭. ಬಣಕಾರ ಎನ್.ಜಿ, ಕ್ರಾಂತಿವೀರ ಮೆಣಸಿನಾಳ ತಿಮ್ಮನಗೌಡ್ರು, ಅಪ್ರಕಟಿತ ಲೇಖನ, ಪುಟ ೨ ಮತ್ತು ೪

೩೮. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೭೫೭

೩೯. ಬಳಿಗಾರ ಮನು, ಹುತಾತ್ಮ ಮೈಲಾರ ಮಹದೇವಪ್ಪ ಧರ್ಮ ಪತ್ನಿ ಸಿದ್ದಮ್ಮ ಮೈಲಾರ(ಅವರ ಕಿರುಪರಿಚಯ), ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೨, ಪುಟ ೧

೪೦. ಪೂರ್ವೋಕ್ತ, ಸಂಕಣ್ಣನವರ ಜಿ. ಸಂಕಮ್ಮ, ಹೋರಾಟದ ಒಂದು ನೋಟ, ಪುಟ ೧೫ ಮತ್ತು ೩೮

೪೧. ಪೂರ್ವೋಕ್ತ, ಸಂಕಣ್ಣನವರ ಜಿ.ಸಂಕಮ್ಮ, ಹೋರಾಟದ ಒಂದು ನೋಟ, ಪುಟ ೩೮ ಮತ್ತು ೩೯

೪೨. ಅದೇ, ಪುಟ ೪೬

೪೩. ಅದೇ, ಪುಟ ೧೦೦

೪೪. ಸಂಪಳ್ಳಿ ಕಮಲಾ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರವನಿತೆಯರು, ಪ್ರಕಾಶನ ಆನಂದ ನಗರ, ಹೆಬ್ಬಾಳ, ಬೆಂಗಳೂರು, ೧೯೯೨, ಪುಟ ೧೧೯

೪೫. ಅದೇ, ಪುಟ ೧೧೦

೪೬. ಅದೇ, ಪುಟ ೧೧೨

೪೭. ಅದೇ, ಪುಟ ೧೧೫

೪೮. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೪೨೧

೪೯. ಪೂರ್ವೋಕ್ತ, ಸಂಪಳ್ಳಿ ಕಮಲಾ(ಸಂ), ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರವನಿತೆಯರು, ಪುಟ ೧೩೧

೫೦. ಭಿಕ್ಷಾವರ್ತಿಮಠ ಕೆ.ಬಿ., ಸ್ವಾತಂತ್ರ್ಯ ಸೇನಾನಿಗಳು ದೇವಕ್ಕ ಹಾಗೂ ರಮಾನಂದ ಮನ್ನಂಗಿ, ಗ್ರಾಮೀಣ ಪ್ರಕಾಶನ, ಕೂರಗುಂದ, ತಾ॥, ಜಿ॥ ಹಾವೇರಿ, ೨೦೦೮, ಪುಟ ೬

೫೧. ಪೂರ್ವೋಕ್ತ, ಸಂಪಳ್ಳಿ ಕಮಲಾ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರವನಿತೆಯರು, ಪುಟ ೧೨೭

೫೨. ಪೂರ್ವೋಕ್ತ, ಭಿಕ್ಷಾವರ್ತಿಮಠ ಕೆ.ಬಿ., ಸ್ವಾತಂತ್ರ್ಯ ಸೇನಾನಿಗಳು ದೇವಕ್ಕ ಹಾಗೂ ರಮಾನಂದ ಮನ್ನಂಗಿ, ೨೦೦೭. ಪುಟ ೮ ಮತ್ತು ೧೧

೫೩. ಅದೇ, ಪುಟ ೧೩ ಮತ್ತು ೧೬

೫೪. ಪೂರ್ವೋಕ್ತ, ಕಾಮತ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೭೫೪

೫೫. ಮೂಡ್ವಿ ವ್ಹಿ.ಎಂ.. ಹಿರೇಕೆರೂರ ತಾಲೂಕಿನ ಗಾಂಧಿ, ಪ್ರಕಾಶಕರು ಶ್ರೀಮತಿ ಅನಸೂಯಕ್ಕ ಶಂಭುಲಿಂಗಪ್ಪ ಜವಳಿ, ಆನಂದನಗರ ಹುಬ್ಬಳ್ಳಿ, ೧೯೯೮, ಪುಟ ೧ ಮತ್ತು ೪

೫೬. ಅದೇ, ಪುಟ ೧೧ ಮತ್ತು ೧೩

೫೭. ತುಮ್ಮಿನಕಟ್ಟಿಯ ಚಳುವಳಿಗಾರ ಸಿದ್ದಪ್ಪ ನವಾತಿ(ತಿಮ್ಮನಗೌಡರ ತಂಡದ ಸದಸ್ಯ)ನೀಡಿದ ವಿವರ

೫೮. ಮೂಡ್ವಿ ವ್ಹಿ.ಎಂ., ಹಿರೇಕೆರೂರ ತಾಲೂಕಿನ ಗಾಂಧಿ, ಪುಟ ೨೭ ಮತ್ತು ೨೮

೫೯. ಪೂರ್ವೋಕ್ತ, ಭಿಕ್ಷಾವರ್ತಿಮಠ ಕೆ.ಬಿ., ಸ್ವಾತಂತ್ರ್ಯ ಸೇನಾನಿಗಳು ದೇವಕ್ಕ ಹಾಗೂ ರಮಾನಂದ ಮನ್ನಂಗಿ. ಪುಟ ೩

೬೦. ಚಳುವಳಿಗಾರ ಪರಮಣ್ಣ ಹರಕಂಗಿ ನೀಡಿದ ವಿವರ

೬೧. ಚಳುವಳಿಗಾರ ಪರಮಣ್ಣ ಹರಕಂಗಿ ಸಂದರ್ಶನದಲ್ಲಿ ನೀಡಿದ ವಿವರ

೬೨. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೪೯

೬೩. ಅದೇ, ಪುಟ ೮೪೫

೬೪. ಪಾರ್ವತಿ ಇಂದುಶೇಖರ, ಕ್ರಾಂತಿವೀರ ಡಾ. ಶಿವಣ್ಣ ನೆಶ್ವಿ(ಜೀವನ ಚರಿತ್ರೆ), ನಂದಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು, ೧೯೯೧, ಪುಟ ೨೫ ಮತ್ತು ೪೦

೬೫. ಸುಶೀಲಾ ಸುಬ್ರಹ್ಮಣ್ಯ, ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು. ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಬೆಂಗಳೂರು, ೧೯೯೩, ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಯೋಧರು ಮತ್ತು ಉತ್ತರಾಧಿಕಾರಿಗಳ ಸಂಸ್ಥೆ, ಬೆಂಗಳೂರು, ಪುಟ ೭೧

೬೬. ಅದೇ, ಪುಟ ೧೬೪

೬೭. ಬ್ಯಾಡಗಿ ಚಳುವಳಿಗಾರ ಷಡಕ್ಷರಪ್ಪ ಮಹಾರಾಜಪೇಟಿ ಸಂದರ್ಶನದಲ್ಲಿ ನೀಡಿದ ವಿವರ

೬೮. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೫೫

೬೯. ಅದೇ, ಪುಟ ೮೬೧

೭೦. ಅದೇ, ಪುಟ ೮೪೦

೭೧. ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ಹೇಳಿದ ವಿವರ

೭೨. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೪೩

೭೩. ಅದೇ, ಪುಟ ೭೯೬ ಮತ್ತು ೭೯೭

೭೪. ಅದೇ, ಪುಟ ೮೦೫

೭೫. ಹಾವೇರಿಯ ಚಳುವಳಿಕಾರ ನಾರಾಯಣ ರಾಮಚಂದ್ರ ಕರ್ಪೂರ ನೀಡಿದ ವಿವರ

೭೬. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೧, ಪುಟ ೮೦೮

೭೭. ಅದೇ, ಪುಟ ೮೦೯

೭೮. ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ಸಂದರ್ಶನದಲ್ಲಿ ಹೇಳಿದ ವಿವರ

೭೯. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೧೭

೮೦. ಅದೇ, ಪುಟ ೮೧೮

೮೧. ಹಾವೇರಿಯ ಚಳುವಳಿಗಾರ ನಾರಾಯಣ ರಾಮಚಂದ್ರ ಕರ್ಪೂರ ಸಂದರ್ಶನದಲ್ಲಿ ನೀಡಿದ ವಿವರ

೮೨. ನರಗುಂದ ರಾಯಪ್ಪ ಬಸಪ್ಪ, ಕಾಯಕಯೋಗಿ ಸ್ವಾತಂತ್ರ್ಯ ಯೋಧ ರಾಯಪ್ಪ ನರಗುಂದ(ಜೀವನ ಚರಿತ್ರೆ) ಶಾಂತೇಶ ಆಶ್ರಮ ಟ್ರಸ್ಟ್ ಹೂಪಿನಶಿಗ್ಗಿ, ೨೦೦೮, ಪುಟ ೨ ಮತ್ತು ೧೨

೮೩. ನೆಗಳೂರಿನ ದೇವೇಂದ್ರಪ್ಪ ವಿಭೂತಿಯಿಂದ ಸಂದರ್ಶನದಲ್ಲಿ ಪಡೆದ ವಿವರ

೮೪. ನರಗುಂದ ರಾಯಪ್ಪ ಬಸಪ್ಪ, ಕಾಯಕಯೋಗಿ ಸ್ವಾತಂತ್ರ್ಯಯೋಧ ರಾಯಪ್ಪ, ಪುಟ ೧೯ ಮತ್ತು ೨೫

೮೫. ಅದೇ, ಪುಟ ೨೭

೮೬. ಪೂರ್ವೋಕ್ತ, ಮೂಡಿ ವ್ಹಿ.ಎಂ., ಹಿರೇಕೆರೂರ ತಾಲೂಕಿನ ಗಾಂಧಿ, ಪುಟ ೩೦

೮೭. ಅದೇ, ಪುಟ ೩೩

೮೮. ರಾಣೆಬೆನ್ನೂರು ತಾಲೂಕಿನ ಚಳುವಳಿಗಾರರಾದ ಮಿನ್ನಪ್ಪ ಹಳ್ಳಿ ಹಾಗೂ ತುಮ್ಮಿನಕಟ್ಟಿಯ ಶಿವನಗೌಡ ಮರಿಗೌಡ್ರ ನೀಡಿದ ವಿವರ

೮೯. ಪಾಟೀಲ ಭೋಜರಾಜ, ಬಹುಮುಖ ವ್ಯಕ್ತಿತ್ವದ ಲಿಂ. ಶಿವಬಸಪ್ಪ ಬಶೆಟ್ಟಿಯವರು, ಶ್ರೀಮಹಾಂತಸ್ವಾಮಿ ವಿದ್ಯಾಪೀಠ(ರಿ), ಕುರುಬಗೊಂಡ ತಾ॥ ಹಾವೇರಿ, ೨೦೧೧ ಪುಟ ೫೨

೯೦. ಅದೇ, ಪುಟ ೫೫ ಮತ್ತು ೫೭

೯೧. ಪಾಟೀಲ ಭೋಜರಾಜ, ಶರಣ ಬೆಟಗೇರಿ ರಾಮಣ್ಣ, ರುದ್ರಗೌಡರು ಮತ್ತು ಡಾ. ಕೃಷ್ಣಬಾಯಿ ಪಾಟೀಲ ಪಬ್ಲಿಕ್ ಚಾರಿಟೇಬಲ್ ಟ್ರಸ್ಟ್, ಹಂಸಬಾವಿ, ತಾ॥ ಹಿರೇಕೆರೂರು, ೧೯೯೪ ಪುಟ ೪೫

೯೨. ಪೂರ್ವೋಕ್ತ, ಪಾಟೀಲ ಭೋಜರಾಜ, ಶರಣ ಬೆಟಗೇರಿ ರಾಮಣ್ಣ, ಪುಟ ೫೧

೯೩. ಅದೇ, ಪುಟ ೫೨

೯೪. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೩೫

೯೫. ಕರ್ನಾಟಕ ಏಕೀಕರಣದಲ್ಲಿ ಹಾವೇರಿ ಜಿಲ್ಲೆ, ಪ್ರಕಾಶನ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಸುವರ್ಣ ಕರ್ನಾಟಕ ಸಂಸ್ಕೃತಿ ದಿಬ್ಬಣ, ಜಿಲ್ಲಾ ಆಡಳಿತ ಭವನ, ಹಾವೇರಿ, ೨೦೦೬, ಪುಟ ೫೪

೯೬. ಚುರ್ಚಿಹಾಳಮಠ ಸಿ.ಎಂ.(ಮು.ಸಂ.), ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದ್ರಾಬಾದ್ ವಿಮೋಚನಾ ಹೋರಾಟ, ಮುಂಡರಗಿ ತಾಲೂಕಾ ಸ್ವಾತಂತ್ರ್ಯ ಯೋಧರ ಸಂಘ, ಮುಂಡರಗಿ, ಜಿಲ್ಲಾ॥ ಗದಗ, ೧೯೯೯, ಪುಟ ೭೮೯

೯೭. ಅದೇ, ಪುಟ ೭೯೦

೯೮. ಅದೇ, ಪುಟ ೭೯೨

೯೯. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೩, ಪುಟ ೩೬೩

೧೦೦. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೨೨

೧೦೧. ಅದೇ, ಪುಟ ೪೧೩

೧೦೨. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ಟಿ.ಆರ್. ನೆಶ್ವಿ, ಪುಟ ೨೨ ಮತ್ತು ೨೮

೧೦೩. ಅದೇ, ಪುಟ ೩೬

೧೦೪. ಪೂರ್ವೋಕ್ತ, ಚುರ್ಚಿಹಾಳಮಠ ಸಿ.ಎಂ.(ಮು. ಸಂ). ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ, ಪುಟ ೫೦೪

೧೦೫. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೩೬

೧೦೬. ಅದೇ, ಪುಟ ೬೫೪

೧೦೭. ಅದೇ, ಪುಟ ೬೫೮

೧೦೮. ದೇವೇಂದ್ರಪ್ಪ ವಿಭೂತಿ ಮತ್ತು ಪರಮಣ್ಣ ಹರಕಂಗಿ ನೀಡಿದ ವಿವರ

೧೦೯. ಪೂರ್ವೋಕ್ತ, ಮೂಡ್ವಿ ವ್ಹಿ.ಎಂ., ಹಿರೇಕೆರೂರು ತಾಲೂಕಿನ ಗಾಂಧೀ, ಪುಟ ೪೧ ಮತ್ತು ೫೩

೧೧೦. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯ ಯೋಧ, ಟಿ.ಆರ್. ನೆಶ್ವಿ, ಪುಟ ೨೦

೧೧೧. ಪೂರ್ವೋಕ್ತ, ಕಾಮತ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧, ಪುಟ ೮೩೯

೧೧೨. ಅದೇ, ಪುಟ ೮೩೯

೧೧೩. ದೇಸಾಯಿ ಗೋವಿಂದಮೂರ್ತಿ, ಸವಣೂರು ನವಾಬರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ, ಹಂಪಿ, ೧೯೯೯, ಪುಟ ೧೪೮ ಮತ್ತು ೧೫೧

೧೧೪. ಅದೇ, ಪುಟ ೧೫೨

೧೧೫. ಅದೇ, ಪುಟ ೧೫೪

೧೧೬. ಅದೇ, ಪುಟ ೧೫೬



ಅಧ್ಯಾಯ : ಆರು

# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಕೊಡುಗೆಗಳು

## ಅಧ್ಯಾಯ : ಆರು

# ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಕೊಡುಗೆಗಳು

### ೬.೧. ಸಾಮಾಜಿಕ ಕೊಡುಗೆ

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ಭಾರತದ ಬಂಧ ವಿಮೋಚನೆಗೆ ಹೋರಾಟ ಮಾಡುವುದರೊಂದಿಗೆ ಸಮಾಜದಲ್ಲಿಯ ಅಸ್ಪೃಶ್ಯತೆ, ಮೂಢನಂಭಿಕೆ, ಸ್ವಚ್ಛತೆ ಮುಂತಾದವುಗಳ ಜಾಗೃತಿ ಕಾರ್ಯವನ್ನೂ ಮಾಡುತ್ತ ಚಳುವಳಿಯೊಂದಿಗೆ ಸ್ವಾಸ್ಥ್ಯ ಸಮಾಜಕ್ಕಾಗಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರದಲ್ಲಿ ಸಾಮಾಜಿಕ ಕಾರ್ಯಗಳನ್ನು ಮಾಡಿರುವುದನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

**ಪರಮಣ್ಣ ಹೊಸಮನಿ**

ಪರಮಣ್ಣ ಹೊಸಮನಿ ಸ್ವಾತಂತ್ರ್ಯ ಹೋರಾಟದೊಂದಿಗೆ ಸಾಮಾಜಿಕ ಅನಿಷ್ಟ ಪದ್ಧತಿಗಳ ವಿರುದ್ಧ ಜಾಗೃತಿ ಕಾರ್ಯ ಮಾಡಿದವರು. "ಹುಬ್ಬಳ್ಳಿಯಲ್ಲಿ ಪ್ರಾಣಿದಯಾ ಸಂಘದ ಪ್ರಚಾರಕರಾದ ಹರಿಹರದ ತಂಡ ಪರಮಣ್ಣ ಹೊಸಮನಿಯನ್ನು ಭೇಟಿಯಾಗಿ ನಿಮ್ಮ ಹಾಗೂ ನೆರೆಹೊರೆಯ ತಾಲೂಕುಗಳಲ್ಲಿ ದೇವಿ ಜಾತ್ರೆಗಾಗಿ ಪ್ರಾಣಿಗಳನ್ನು ಬಲಿ ಕೊಡುತ್ತಿದ್ದರು. ಅದನ್ನು ನಿಲ್ಲಿಸಬೇಕು ಎಂದು ಕೇಳಿಕೊಂಡಾಗ ಪರಮಣ್ಣ ತಮ್ಮ ಚಳುವಳಿಯೊಂದಿಗೆ ಈ ಪ್ರಾಣಿ ಬಲಿ ನಿಷೇಧದ ಕಾರ್ಯವೂ ಆಗಲೆಂದು ನಿರ್ಧರಿಸಿದರು. ಯಾವ ಯಾವ ಭಾಗದಲ್ಲಿ ಪ್ರಾಣಿ ಬಲಿ ನಡೆಯುವುದೋ ಅಲ್ಲಲ್ಲಿ ಪ್ರಾಣಿ ಬಲಿ ನೀಡುವುದನ್ನು ನಿಲ್ಲಿಸಬೇಕು. ನಾವು ಅಹಿಂಸಾವಾದಿಗಳು ಹಿಂಸೆಯನ್ನು ದೇವರ ಹೆಸರಿನಲ್ಲಿ ಮಾಡುವುದು ಸರಿಯಲ್ಲ ಎಂಬುದನ್ನು ಜನತೆಗೆ ತಿಳಿಸಿದರು. ಕರ್ಜಗಿಯಲ್ಲಿ ಸಾರ್ವಜನಿಕ ಸಭೆ ಕರೆದು ಪ್ರಾಣಿ ಬಲಿ ಬಗ್ಗೆ ಎಲ್ಲ ಜನತೆಗೆ ತಿಳಿಸಿದಾಗ ಎಲ್ಲರೂ ಒಪ್ಪಿಕೊಂಡು ಪ್ರಾಣಿ ಬಲಿಯನ್ನು ನಿಲ್ಲಿಸಿ ದೇವಿ ಜಾತ್ರೆ ಮಾಡಿದರು."[1] ಇದು ಚಳುವಳಿಕಾರ ಪರಮಣ್ಣ ಹೊಸಮನಿಯ ಸಮಾಜಿಕ ಕೊಡುಗೆಗೆ ನಿದರ್ಶನ.

**ಟಿ.ಆರ್. ನೆಶ್ವಿ**

ಟಿ.ಆರ್. ನೆಶ್ವಿ ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ಸ್ವಾತಂತ್ರ್ಯನಂತರವೂ ಸಾಮಾಜಿಕ ಸೇವೆ ಮಾಡಿದವರು. ಇವರು ಕಾರವಾರದ ಕಡಲ ತೀರದಲ್ಲಿ ನಡೆದ ಸಭೆಯಲ್ಲಿ ಪಾಲ್ಗೊಂಡರು.

ಅಲ್ಲಿ ಗಾಂಧೀಜಿ 'ಅಸ್ಪೃಶ್ಯತೆ ಭಾರತಕ್ಕೆ ಹತ್ತಿದ ಕಳಂಕ', 'ಹರಿಜನರಿಗೆ ಮುಕ್ತಿಯಿಲ್ಲದೆ ಭಾರತಕ್ಕೆ ಮುಕ್ತಿಯಿಲ್ಲ' ಎಂಬ ಸಂದೇಶವಿತ್ತರು. ಆ ಸಂದೇಶದಂತೆ ಟಿ.ಆರ್. ನೆಶ್ವಿ ದೀಪಿಗಿಹಳ್ಳಿ, ಹುಲ್ಲತ್ತಿ, ಸೂಡಂಬಿ, ನಾಗವಂದ, ಭೋಗಾವಿ ಮುಂತಾದ ಗ್ರಾಮಗಳಲ್ಲಿ ಹರಿಜನರನ್ನು ಸೇರಿಕೊಂಡು ಕೆರೆ-ಬಾವಿ-ಗುಡಿಗಳಿಗೆ ಪ್ರವೇಶ ಮಾಡಿದರು. ಟಿ.ಆರ್.ನೆಶ್ವಿಯವರು ಯಾವುದೇ ಊರಿಗೆ ಹೋದರೂ ಮೊದಲು ಹರಿಜನ ಕೇರಿಗೆ ಹೋಗುವ ಪರಿಪಾಠ ಹಾಕಿಕೊಂಡಿದ್ದ ಬಗ್ಗೆ ಚಳುವಳಿಗಾರರ ಹೇಳಿಕೆಯಿಂದ ಗುರುತಿಸಲಾಗಿದೆ.

**ಪ್ರಾಣಿಬಲಿ ತಡೆ :** "೧೯೪೬ರಲ್ಲಿ ಪ್ರಸಿದ್ಧ ಕೀರ್ತನಕಾರರಾದ ಹುಬ್ಬಳ್ಳಿಯ ಕಳ್ಳಿ ಶಾಸ್ತ್ರಿಯವರನ್ನು ಜೊತೆ ಮಾಡಿಕೊಂಡು ಹಾವನೂರು ದ್ಯಾಮವ್ವ ದೇವತೆ ಜಾತ್ರೆಗೆ ಹೋಗಿ ಅಂದು ರಾತ್ರಿ ಸುದೀರ್ಘ ಕಾಲ ಕಳ್ಳಿ ಶಾಸ್ತ್ರಿಯವರು ಕೀರ್ತನ ಮಾಡಿದರೆ, ಟಿ.ಆರ್. ನೆಶ್ವಿ ಭಾಷಣ ಮಾಡಿದರು. ಇವರ ವಿಚಾರಗಳಿಂದ ಪ್ರಭಾವಿತರಾದ ಭಕ್ತರು ಹಾಗೂ ಹಿರಿಯರು ಸೇರಿಕೊಂಡು ದೇವಿಗೆ ಕೊಡಬಹುದಾಗಿದ್ದ ಕೋಣನ ಬಲಿ ನಿಲ್ಲಿಸಿದ್ದು ವಿಶೇಷವೇ ಸರಿ.

**ಪಾನ ಪ್ರತಿಬಂಧ :** ಪಾನ ಪ್ರತಿಬಂಧ ಜಾರಿಗೆ ತರುವ ನಿಮಿತ್ಯ 'ಪ್ರಾಂತೀಯ ಪಾನ ಪ್ರತಿಬಂಧ ಬೋರ್ಡ್' ಎಂಬ ಸಂಸ್ಥೆಯನ್ನು ಸರಕಾರ ಸ್ಥಾಪಿಸಿತ್ತು. ಅದರ ಧಾರವಾಡ ಜಿಲ್ಲಾ ಘಟಕಕ್ಕೆ ಟಿ.ಆರ್.ನೆಶ್ವಿ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು"[೨] ಸ್ವಾತಂತ್ರ್ಯ ನಂತರ ತಡಸದ ಆಶ್ರಮದ ಅವಶ್ಯಕತೆಯಿಲ್ಲವೆಂಬುದನ್ನು ಅರಿತ ಟಿ.ಆರ್. ನೆಶ್ವಿ, ರಾಮಣ್ಣ ಬೆಟಗೇರಿ ಬಿಟ್ಟುಕೊಟ್ಟಿದ್ದ ಜಮೀನನ್ನು ಅವರ ಪುತ್ರರಾದ ಮೃತ್ಯುಂಜಯಪ್ಪ ಬೆಟಗೇರಿಗೆ ಮರಳಿಸಿದ್ದು ಅವರ ನಿಸ್ವಾರ್ಥಕ್ಕೆ ಇದೊಂದು ನಿದರ್ಶನವೆಂಬುದನ್ನು ಅಧ್ಯಯನದಿಂದ ತಿಳಿಯಲಾಗಿದೆ.

**ಹಳ್ಳಿಕೇರಿ ಗುದ್ಲೆಪ್ಪ**

ಇವರು ಸ್ವಾತಂತ್ರ್ಯ ಚಳುವಳಿಯೊಂದಿಗೆ ತಾವು ಕಟ್ಟಿದ ಕೊರಡೂರು ಆಶ್ರಮದಿಂದ ಸಮಾಜಕ್ಕೆ ವಿವಿಧ ರೀತಿಯ ಸಮಾಜಮುಖಿ ಕಾರ್ಯಗಳನ್ನು ಮಾಡಿದವರು. ಕ್ರಿ.ಶ. ೧೯೩೪-೧೯೩೫ರಲ್ಲಿ ಹೊಸರಿತ್ತಿಯಲ್ಲಿ ಹಳ್ಳಿಕೇರಿ ಗುದ್ಲೆಪ್ಪ ಮಹದೇವಪ್ಪ ಮೈಲಾರ ಸೇರಿ 'ಗಾಂಧೀಜಿ ಆಶ್ರಮ' ಸ್ಥಾಪಿಸಿ ಹೊಸರಿತ್ತಿಯ ಸುತ್ತಮುತ್ತಲಿನ ಹಳ್ಳಿಗಳ ಜನತೆಗೆ ಅದರಲ್ಲಿಯೂ ಮಹಿಳೆಯರಲ್ಲಿ ಸ್ವದೇಶಿ ಆಂದೋಲನದ ಮೂಲಕ ನೂಲುವುದು, ನೇಯುವುದರಿಂದ ಸ್ವಾವಲಂಬಿ ಜೀವನ ನಡೆಸಲು ಕಾರಣಿಕರ್ತರಾದವರು.

**ಹೊಸರಿತ್ತಿ ಆಶ್ರಮದ ಚಳುವಳಿಕಾರರಿಂದ ಹತಭಾಗಿನಿಯರ ಮನ ಪರಿವರ್ತಿಸಿದ ಘಟನೆ**

ಹೊಸರಿತ್ತಿಯ ಗುದ್ಲಿಸ್ವಾಮಿಯ ಜಾತ್ರೆಯ ಸಂದರ್ಭದಲ್ಲಿ ಚಳುವಳಿಗಾರರು ಒಂದು ಅನಿಷ್ಟ ವ್ಯವಸ್ಥೆಯನ್ನು ಕಂಡರು. "ಜಾತ್ರೆ ನಡೆಯುವ ಸ್ಥಳದಿಂದ ಸ್ವಲ್ಪ ದೂರದಲ್ಲಿ ಸುಮಾರು ೪೦ ಚಿಕ್ಕ ಚಿಕ್ಕ ಗುಡಿಸಲುಗಳಿದ್ದು, ಅಲ್ಲಿ ಮಂದಬೆಳಕಿನಲ್ಲಿ ಮುರುಕು ಹೊರಸುಗಳ ಮೇಲೆ ಸ್ತ್ರೀತ್ವವನ್ನೇ ಮಾರಿಕೊಳ್ಳುವ ಹೃದಯವಿದ್ರಾವಕ ಕಾರ್ಯ ನಡೆದಿತ್ತು. ಎಳೆಯ ವಯಸ್ಸಿನ

ಮಹಿಳೆಯರು ಹೊಟ್ಟೆಪಾಡಿಗಾಗಿ ಕಾಸಿನ ಲೆಕ್ಕದಿಂದ ಮೈ ಮಾರಾಟ ನಡೆಸುತ್ತಿರುವುದು ಮತ್ತು ಜಾತ್ರೆಗೆ ಬಂದ ಎಳೆಯ ಹುಡುಗರೂ ಈ ಕಾರ್ಯದಿಂದ ತಮ್ಮ ಜೀವನವನ್ನು ಹಾಳು ಮಾಡಿಕೊಳ್ಳುವುದನ್ನು ಸ್ವಯಂಸೇವಕರಾಗಿ ಹೋಗಿದ್ದ ೨೦ ಜನ ಚಳುವಳಿಗಾರರು ಗಮನಿಸಿದರು. ಇದಕ್ಕೆ ಪರಿಹಾರ ಕಂಡುಕೊಳ್ಳಲು ಚಳುವಳಿಗಾರರು ಹಳ್ಳಿಕೇರಿ ಗುದ್ಲೆಪ್ಪನವರ ಅನುಮತಿ ಪಡೆದು, ಗುಡಿಸಲುಗಳ ಮುಂದೆ ಆ ಉದ್ಯೋಗವನ್ನು ನಿಲ್ಲಿಸಲು ರಾತ್ರಿ ಧರಣಿ ಸತ್ಯಾಗ್ರಹ ನಡೆಸಿದರು. ಸ್ವಯಂಸೇವಕರು ಈ ರೀತಿ ಧರಣಿ ಕುಳಿತುಕೊಂಡಿದ್ದಕ್ಕೆ ಗುಡಿಸಲುಗಳ ಹುಡುಗಿಯರು ಅಶ್ಲೀಲವಾಗಿ ಬೈದರು. ಚಳುವಳಿಗಾರರು ಆ ಹುಡುಗಿಯರಿಗೆ ಏನೂ ಅನ್ನಲಿಲ್ಲ. ಇದರಿಂದ ಅಲ್ಲಿ ನಡೆಯುವ ಕಾರ್ಯ ನಿಂತಿತ್ತು. ಕಾರಣ ಗುಡಿಸಲುಗಳ ಮುಂದೆ ಕುಳಿತಿದ್ದರಿಂದ ತರುಣ ಗಿರಾಕಿಗಳು ಅತ್ತ ಸುಳಿಯಲಿಲ್ಲ. ಚಳುವಳಿಗಾರರು ಒಳ್ಳೆಯದೇನೋ ಸಾಧಿಸಿದ ಉತ್ಸಾಹದಿಂದ ಆಶ್ರಮಕ್ಕೆ ಮರಳಿದರು.

ಚಳುವಳಿಗಾರರೆಲ್ಲ ಆಶ್ರಮಕ್ಕೆ ಮರಳಿದ ಸ್ವಲ್ಪ ಸಮಯದಲ್ಲಿ ಆ ೪೦ ಹತಭಾಗಿನಿ ಹುಡುಗಿಯರು ಅಳುತ್ತ, ಎದೆ ಎದೆ ಬಡಿದುಕೊಳ್ಳುತ್ತ ಆಶ್ರಮದ ಮುಂದೆ ಬಂದು ಧರಣಿ ಸತ್ಯಾಗ್ರಹ ನಡೆಸಿದರು. ಕಾರಣ ಚಳುವಳಿಗಾರರು ಅವರ ಗುಡಿಸಲುಗಳ ಮುಂದೆ ಧರಣಿ ನಡೆಸಿದ್ದಕ್ಕೆ, ಯಾವ ಗಿರಾಕಿಗಳು ಬಾರದಿರುವುದರಿಂದ ತಮಗೆ ಊಟವಿಲ್ಲದ ಹಸಿವಿನ ಸಂಕಷ್ಟವನ್ನು ಹೇಳಿದರು. ಅವರ ಹಸಿವಿನ ಸಂಕಷ್ಟವನ್ನು ನೀಗಿಸಲು ಚಳುವಳಿಗಾರರು ಕೂಡಲೇ ಜಾತ್ರೆಯಲ್ಲಿ ಬುತ್ತಿ-ರೊಟ್ಟಿ, ಪಲ್ಲೆಯನ್ನು ಭಿಕ್ಷೆ ಬೇಡಿಕೊಂಡು ಬಂದು ಅವರ ಹಸಿವು ನೀಗಿಸಿದಾಗ ಸ್ವಯಂಸೇವಕರಿಗಾದ ಸಂತೋಷ ಹೇಳತೀರದು."[೩]

ಅವರೆಲ್ಲರ ಊಟವಾದ ಮೇಲೆ ಚಳುವಳಿಯ ನಾಯಕರು ನಿಮಗೆ ಇಂದು ಊಟ ನೀಡಿದ್ದೇವೆ, ನಾಳೆ? ಅದಕ್ಕೆ ಪರಿಹಾರವಿದೆ ನೀವು ಎಲ್ಲರೂ ಒಪ್ಪುವುದಾದರೆ, ನೀವು ರಾಟಿಯ ಉದ್ಯೋಗದಿಂದ ಸಮಾಜದಲ್ಲಿ ಗೌರವಯುತರಾಗಿ ಬದುಕಬಹುದು ಎಂಬ ವಿಚಾರಗಳನ್ನು ತಿಳಿಸಿದರು, ಅದಕ್ಕೆ ಬೇಕಾದ ವ್ಯವಸ್ಥೆಯನ್ನು ಮಾಡಲಾಯಿತು. ಅಂದಿನ ಆ ಘಟನೆಯನ್ನು ಇಂದಿಗೂ ನೆನಪಿಸಿಕೊಂಡು ನೋವು ಮತ್ತು ಹೆಮ್ಮೆಯಿಂದ ಪರಮಣ್ಣ ಹರಕಂಗಿ ಹಾಗೂ ಫಕ್ಕೀರಯ್ಯ ಹಾಲಯ್ಯ ಕುಲಕರ್ಣಿ ತಿಳಿಸುತ್ತಾರೆ.

**ಕರಿಯಪ್ಪ ಸಂಗೂರು(ಎರೇಶಿಮಿ)**

ಇವರು ಚಳುವಳಿಯೊಂದಿಗೆ ಹರಿಜನೋದ್ಧಾರದ ಕಾರ್ಯಗಳಲ್ಲಿ ಭಾಗವಹಿಸಿ ಸಮಾಜದ ಏಕತೆಗೆ ಹೋರಾಡಿದವರು. "೧೯೪೩ರಲ್ಲಿ ಹಾವೇರಿ ಜಿಲ್ಲೆ ರಾಣೆಬೆನ್ನೂರನಲ್ಲಿಯ ಹರಿಜನ ಕೇರಿಯಲ್ಲಿ ಒಂದು ಧರ್ಮ ಶಾಲೆ ಆರಂಭಿಸಿದರು. ಅಲ್ಲಿ ನಿತ್ಯವೂ ಹರಿಜನ ಕೇರಿಯನ್ನು ಸ್ವಚ್ಛ ಮಾಡುವುದು, ಹರಿಜನ ಮಕ್ಕಳಿಗೆ ಸ್ವಚ್ಛತೆ ಬಗ್ಗೆ ತಿಳಿಸುವುದು, ಹರಿಜನ ಪರಿವಾರದವರ ಜೊತೆ ಬೆರೆತು, ಅವರಿಗೆ ಕೆರೆ, ಹೊಂಡ, ದೇವಸ್ಥಾನಗಳಿಗೆ ಪ್ರವೇಶ ಇನ್ನು ಮುಂತಾದ

ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು. ಹರಿಜನರಿಗೆ ಪ್ರವೇಶವಿರದ, ಗೌರವವಿರದ ಯಾವ ಕಾರ್ಯಕ್ರಮಗಳಿಗೂ ಇವರು ಹೋಗುತ್ತಿರಲಿಲ್ಲ. ೧೯೩೭ರಲ್ಲಿ ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದಲ್ಲಿ ಕೆಲ ತಿಂಗಳು ಇದ್ದು ಅಲ್ಲಿ ಭಂಗಿ ಕಾರ್ಯ ಮಾಡಿದರು."[೪] ಇವರ ಮತ್ತೊಂದು ಮಹತ್ವದ ಆದರ್ಶಮಯವಾದ ಕಾರ್ಯವೆಂದರೆ, ಗಾಂಧೀಜಿ ಆಶೆಯಂತೆ ಹರಿಜನ ಜಾತಿಯ ವೀರಮ್ಮರನ್ನು ವಿವಾಹವಾಗಿ ಆದರ್ಶಪ್ರಾಯರಾದವರು.

**ನ್ಯಾಮತಿ ವೀರಭದ್ರಪ್ಪ** : ತಮ್ಮ ಸಾಮಾಜಿಕ ಕಾರ್ಯಗಳಿಂದ ಗಮನ ಸೆಳೆದ ಮತ್ತೊಬ್ಬ ಚಳುವಳಿಗಾರರೆಂದರೆ ನ್ಯಾಮತಿ ವೀರಭದ್ರಪ್ಪ. ಇವರು ಚಳುವಳಿ ಕಾಲಕ್ಕೆ ಹೆಚ್ಚು ಇರುತ್ತಿದ್ದುದು ಬ್ಯಾಡಗಿ ತಾಲೂಕಿನ ತಡಸದ ಆಶ್ರಮದಲ್ಲಿ. ಅಲ್ಲಿ ನೂಲುವುದು, ನೇಯುವುದು, ಸ್ವಚ್ಛತಾ ಕಾರ್ಯಕ್ರಮಗಳನ್ನು ಕ್ರಮೇಣ ಸುತ್ತಲಿನ ಗ್ರಾಮಗಳಿಗೆ ವಿಸ್ತರಿಸಿದರು. ಪ್ರತಿದಿನ ಹರಿಜನ ಕೇರಿಗೆ ಹೋಗಿ ಸ್ವಚ್ಛತೆ ಬಗ್ಗೆ, ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ಹರಿಜನ ಮಕ್ಕಳ ಶಿಕ್ಷಣದ ಬಗ್ಗೆ ಅರಿವು ಮೂಡಿಸುವ ಕಾರ್ಯ ಆರಂಭಿಸಿದರು.

"ಹರಿಜನರಿಗೆ ದೇವಸ್ಥಾನಗಳಲ್ಲಿ ಪ್ರವೇಶವಿರಲಿಲ್ಲ. ಕೆರೆ, ಹೊಂಡ, ಬಾವಿಗಳಿಂದ ನೀರು ಸೇದಲು ಅವಕಾಶವಿರಲಿಲ್ಲ. ಶಾಲೆಗಳಲ್ಲಿ ಹರಿಜನ ಮಕ್ಕಳು ಇತರ ಮಕ್ಕಳೊಂದಿಗೆ ಬೆರೆಯುವಂತಿರಲಿಲ್ಲ. ರಸ್ತೆಗಳಲ್ಲಿ ಹರಿಜನರು ಉಗುಳುವಂತಿರಲಿಲ್ಲ. ಹೀಗೆ ಸಮಾಜದಲ್ಲಿ ವಿವಿಧ ರೀತಿಯಿಂದ ಹರಿಜನರನ್ನು ಕೀಳಾಗಿ ನೋಡುತ್ತಿದ್ದದ್ದು ಮತ್ತು ಅವರು ದುಡಿಯಲು ಮಾತ್ರ ಯೋಗ್ಯರು ಎಂಬ ಮನೋಸ್ಥಿತಿಯಲ್ಲಿದ್ದ ಸಮಾಜವಾಗಿತ್ತು. ಈ ರೀತಿಯಲ್ಲಿ ಸಮಾಜದಿಂದ ತಿರಸ್ಕೃತಗೊಂಡ ದಲಿತರು, ಅನಾಥರು, ನಿರ್ಗತಿಕರು, ದುಃಖಿಗಳ ಪರವಾಗಿ ಸೇವೆಗೆ ನಿಂತವರು. ಗ್ರಾಮಗಳಲ್ಲಿ ಜನಸಾಮಾನ್ಯರನ್ನು ಸೇರಿಸಿ(ಸವರ್ಣಿಯರನ್ನು ಸೇರಿಸಿ) ದಲಿತರೂ ಮನುಷ್ಯರೆ, ದೇವರ ಕಣ್ಣಲ್ಲಿ ಎಲ್ಲರೂ ಸಮಾನರು. ನಮ್ಮ ನಡೆ ಮೆಚ್ಚುವಂಥದ್ದು ಆಗಿರಬೇಕು. ದಲಿತರು ನೀರಿಲ್ಲದೇ ಬದುಕುವುದಾದರೂ ಹೇಗೆ? ಈ ರೀತಿ ದಲಿತರಿಗೆ ವಂಚನೆ ಮಾಡುವುದು ಸವರ್ಣಿಯರಿಗೆ ಒಳ್ಳೆಯದಲ್ಲ ಎಂದು ಹಳ್ಳಿ ಹಳ್ಳಿಗಳಲ್ಲಿ ಜಾಗೃತಿ ಮೂಡಿಸುವುದನ್ನು ಕಾಯಕವನ್ನಾಗಿ ಮಾಡಿಕೊಂಡರು."[೫] ನಾಯಿ ನರಿಗಳಿಗಿಂತ ಈ ನರರು ಕಡೆಯಾದರೇ? ಒಂದು ನಾಯಿ ಮಾಂಸವನ್ನು ತಿಂದು ಹೊಂಡದಲ್ಲಿ ನೀರು ಕುಡಿದರೆ ಅದನ್ನು ಸಹಿಸಿಕೊಳ್ಳುತ್ತೀರಿ, ಅದೇ ದಲಿತರು ಬಂದರೆ ನೀರು ತುಂಬಲು ಬಿಡುವುದಿಲ್ಲ. ಅವರು ಬಾಯಾರಿಕೆಯಿಂದ ಸಾಯಬೇಕೆ? ಅವರ ಮನೆಯಲ್ಲಿ ವೃದ್ಧರು, ಮಕ್ಕಳು, ಕುರುಡರು, ಅಂಗವಿಕಲರು, ಗರ್ಭಿಣಿಯರು ಹನಿ ನೀರಿಗಾಗಿ ಹಂಬಲಿಸುತ್ತಿದ್ದಾರೆ. ಅವರ ನೋವು ನಿಮಗೆ ಕೇಳುವುದಿಲ್ಲವೇ? ಹುಟ್ಟಿನಿಂದ ಯಾರನ್ನು ಮೇಲು–ಕೀಳು ಎಂದು ಪರಿಗಣಿಸಬಾರದು. ನೀವು ಪಾಪಕ್ಕೆ ಗುರಿಯಾಗದೇ, ದಲಿತರಿಗೆ ನೀರು ಕೊಟ್ಟು ಪುಣ್ಯ ಕಟ್ಟಿಕೊಳ್ಳಿರಿ ಎಂದು ಕೇಳಿಕೊಂಡರು. ಹೀಗೆ ಸತತ ಪ್ರಯತ್ನದಿಂದಾಗಿ ಹಿರೇಕೆರೂರು, ಹಂಸಬಾವಿ, ಹಿರೇಕೊಣತಿ, ಚಿಕ್ಕೊಣತಿ, ಸುತ್ತಕೋಟಿ, ನಾಗವಂದ, ಬ್ಯಾಡಗಿ ಮುಂತಾದ ಕಡೆಗಳಲ್ಲಿ ಹರಿಜನರಿಗೆ ಹೊಂಡ, ಕೆರೆ–ಬಾವಿಗಳಿಂದ ನೀರು ಸೇದಿಕೊಳ್ಳುವಂತೆ

ಮಾಡಿಸಿದರು. ಒಂದುವೇಳೆ ದಲಿತರು ನೀರು ತುಂಬುವಲ್ಲಿ ಅಂಜುತ್ತಿದ್ದರೆ ವೀರಭದ್ರಪ್ಪನವರೇ ಪ್ರೋತ್ಸಾಹಿಸಿ, ದಲಿತರಿಗೆ ನೀರು ತುಂಬಿಸುತ್ತಿದ್ದರು ಎಂಬುದನ್ನು ಚಳುವಳಿಗಾರರ ಹೇಳಿಕೆಗಳಿಂದ ತಿಳಿದುಬರುತ್ತದೆ.

**ಹರಿಜನ ಹಾಸ್ಟೆಲ್** : ವೀರಭದ್ರಪ್ಪ ನ್ಯಾಮತಿ ಬ್ಯಾಡಗಿಯಲ್ಲಿ ಹರಿಜನ ಮಕ್ಕಳಿಗಾಗಿ ೧೯೩೦ ರಲ್ಲಿ ಹಾಸ್ಟೆಲ್ ಪ್ರಾರಂಭಿಸಿದರು. ದಲಿತರಲ್ಲಿ ಜಾಗೃತಿ, ಸ್ವಾಭಿಮಾನ, ಶಿಸ್ತು, ಸ್ವಚ್ಛತೆ, ಆತ್ಮಾಭಿಮಾನ ಮೂಡಿಸಬೇಕಾದರೆ ಅವರು ಮೊದಲು ಸಾಕ್ಷರರಾಗಬೇಕು ಎಂಬುದನ್ನು ಮನಗಂಡು ಬ್ಯಾಡಗಿಯಲ್ಲಿ ಬಾಡಿಗೆ ಮನೆ ಪಡೆದು ಅನೇಕ ದಲಿತ ಹುಡುಗರನ್ನು ಕರೆತಂದರು. ಅವರಿಗೆ ಸ್ವಚ್ಛತೆಯ ಅರಿವು ಮೂಡಿಸಿ, ಶಾಲೆಗೆ ಕಳುಹಿಸುತ್ತಿದ್ದರು. ರಾತ್ರಿ ಶಿವಶರಣರ ವಚನಗಳನ್ನು ವಿದ್ಯಾರ್ಥಿಗಳಿಗೆ ಹೇಳಿಕೊಡುತ್ತಿದ್ದರು. ಕೆಲ ದಿನಗಳ ನಂತರ ಹರಿಜನ ಕೇರಿಗೆ ಕರೆದುಕೊಂಡು ಹೋಗಿ ಶ್ರಮದಾನ ಮಾಡಿಸಿ ಕೇರಿಯನ್ನು ಸ್ವಚ್ಛ ಮಾಡಿ ಬರುತ್ತಿದ್ದರು. ತಮ್ಮ ಸುತ್ತಲಿನ ಪ್ರದೇಶವನ್ನು ಸ್ವಚ್ಛವಾಗಿ ಇಟ್ಟುಕೊಳ್ಳುವುದರಿಂದ ರೋಗಗಳಿಂದ ದೂರವಿರಬಹುದು ಎಂಬ ಅರಿವು ಮೂಡಿಸುತ್ತಿದ್ದರು. ಮೂಢನಂಬಿಕೆ, ಕಂದಾಚಾರ, ಅಂಧಶ್ರದ್ಧೆಗಳನ್ನು ಹೋಗಲಾಡಿಸಲು ಹರಿಜನ ಕೇರಿಗೆ ನಿತ್ಯ ಪಾದಯಾತ್ರೆ ಕೈಗೊಳ್ಳುತ್ತಿದ್ದರು.

**ಹರಿಜನ ಮಕ್ಕಳ ವೆಚ್ಚಕ್ಕಾಗಿ** : ಹರಿಜನ ಮಕ್ಕಳು ವಸತಿ ಇರುವ ಬಾಡಿಗೆ ಮನೆಗೆ, ಅವರ ಊಟೋಪಚಾರಕ್ಕಾಗಿ ಮತ್ತು ಅವರ ಶಿಕ್ಷಣಕ್ಕಾಗಿ ಬ್ಯಾಡಗಿಯಲ್ಲಿ ವೀರಭದ್ರಪ್ಪ ಹರಿಜನ ಮಕ್ಕಳೊಂದಿಗೆ ತಾವು ಕೈಯಲ್ಲಿ ಜೋಳಿಗೆ ಹಿಡಿದು ಭಿಕ್ಷೆ ಬೇಡಿದರು. ಯಾರು ಇಲ್ಲವೆನ್ನಲಿಲ್ಲ. ನಂತರದಲ್ಲಿ ಭಿಕ್ಷೆ ಬೇಡುವ ಪ್ರಸಂಗ ಬರಲಿಲ್ಲ. ಕಾರಣ ಬ್ಯಾಡಗಿಯ ವ್ಯಾಪಾರಸ್ಥರು, ಧನಿಕರು, ರೈತರು, ರೈತಕಾರ್ಮಿಕರು ಮುಂತಾದವರು ತಾವೇ ಬಂದು ಹರಿಜನ ಮಕ್ಕಳ ಬೋರ್ಡಿಂಗ್‌ಗೆ ಫಂಡ್ ಕೊಟ್ಟು ಹೋಗುತ್ತಿದ್ದರು. ಹೀಗಾಗಿಯೇ ಹರಿಜನ ಮಕ್ಕಳ ಶಿಕ್ಷಣಕ್ಕೆ ಯಾವುದೇ ತೊಂದರೆ ಇಲ್ಲದೆ ಸಾರಾಗವಾಗಿ ನಡೆಯುತ್ತಿತ್ತು. ನಂತರದ ದಿನಗಳಲ್ಲಿ ಶಿಕ್ಷಣ ಪಡೆದ ಹರಿಜನ ಮಕ್ಕಳು ಹಲವರು ಉನ್ನತ ಅಧಿಕಾರಿಗಳಾದರೆ, ಇನ್ನೂ ಕೆಲವರು ಚಳುವಳಿಗಾರರಾದ ಬಗ್ಗೆ ಮಳ್ಳಪ್ಪ ಕೊಪ್ಪದ ಹಾಗೂ ಪುಟ್ಟಪ್ಪ ಹರಬಿ ಅವರ ಹೇಳಿಕೆಯಿಂದ ತಿಳಿಯುತ್ತದೆ.

ಹಿರೇಕೆರೂರಲ್ಲಿ ನಾಡಿನಲ್ಲಿಯೇ ಖ್ಯಾತಿ ಗಳಿಸಿದ ದುರುಗಮ್ಮನ ಜಾತ್ರೆ ಅದ್ಧೂರಿಯಿಂದ ನಡೆದುಕೊಂಡು ಬರುತ್ತಿದ್ದದ್ದು ವಾಡಿಕೆ. ಆದರೆ ಈ ಜಾತ್ರೆಯಲ್ಲಿ ಹಿಂಸೆಯಾಗುತ್ತಿತ್ತು. ಆ ಜಾತ್ರೆಯಲ್ಲಿ ಸುಮಾರು ೫೦,೦೦೦ ಕುರಿಗಳು, ನಾಲ್ಕಾರು ಕೋಣಗಳು ಬಲಿಯಾಗುತ್ತಿದ್ದವು. ಇದನ್ನು ಗಮನಿಸಿದ ವೀರಭದ್ರಪ್ಪ ನೀವು ಮಾಂಸವನ್ನು ತಿನ್ನಲು ನಾನು ಬೇಡ ಎನ್ನುವುದಿಲ್ಲ. ಆದರೆ ದೇವರ ಹೆಸರಿನಲ್ಲಿ ನೀವು ಮಾಡುತ್ತಿರುವ ಪಶುಬಲಿಯನ್ನು ನಾನು ವಿರೋಧಿಸುತ್ತೇನೆ. ದುರುಗಮ್ಮ ಯಾವ ಪ್ರಾಣಿಯನ್ನೂ ಬಲಿ ಕೇಳುವುದಿಲ್ಲ. ಬದಲಾಗಿ ನಿಮ್ಮ ಕೆಟ್ಟ ಗುಣಗಳೆಂಬ ದುಃಶ್ಚಟಗಳೆಂಬ ಕೋಣವನ್ನು ಕಡಿಯಿರಿ. ನಿಮ್ಮಲ್ಲಿರುವ ಅರಿಷಡ್ವರ್ಗಗಳನ್ನು ಹಾಗೂ ಅಷ್ಟಮದ ಗಳೆಂಬ ಕೋಣವನ್ನು ದೇವಿಗೆ ಬಲಿಯಾಗಿ ಅರ್ಪಿಸಿ, ಮುಕ್ತರಾಗಿರಿ ಎಂದು ಹೇಳುತ್ತಿದ್ದರು.

ದೇವಿ ನಾಮ ಸ್ಮರಣೆಗೆ ಮಾತ್ರ ಒಲಿಯುತ್ತಾಳೆ. ಅವಳಿಗೆ ಬೇಕಾಗಿರುವುದು ಭಕ್ತಿ ಮಾತ್ರ; ಧನ, ಕನಕ, ವಸ್ತ್ರ, ವಾಹನ, ಸರಾಯಿ, ಮಾಂಸವನ್ನು ಕೇಳುವುದಿಲ್ಲ ಎಂದು ಹೇಳಿ ಜನರ ಅಜ್ಞಾನ, ಮೌಢ್ಯಗಳನ್ನು ಹೋಗಲಾಡಿಸಲು ಪ್ರಯತ್ನಿಸಿದರು."[೬] ಈ ರೀತಿಯ ಸಾಮಾಜಿಕ ಕಾರ್ಯಗಳನ್ನು ಮಾಡಿದ ಹಿರಿಮೆ ನ್ಯಾಮತಿ ವೀರಭದ್ರಪ್ಪ ಅವರಿಗೆ ಸಲ್ಲುತ್ತದೆ.

**ವೀರನಗೌಡ ನಾಗಮ್ಮ ಪಾಟೀಲ ದಂಪತಿಗಳು**

ರಾಷ್ಟ್ರೀಯ ಚಳುವಳಿಯ ಕಾಲಕ್ಕೆ ಗಾಂಧೀಜಿ 'ಹರಿಜನರ ಸೇವೆಯೂ ಚಳುವಳಿಯ ಒಂದು ಭಾಗ' ಎಂಬ ಹೇಳಿಕೆಯಂತೆ ವೀರನಗೌಡ ನಾಗಮ್ಮ ದಂಪತಿಗಳಿಗೆ ಹರಿಜನ ಮಕ್ಕಳ ಶಿಕ್ಷಣ, ಅಸ್ಪೃಶ್ಯತಾ ನಿವಾರಣೆಯ ಕಾರ್ಯವೇ ಧ್ಯೇಯವಾಗಿತ್ತು.

**ಕುಟುಂಬ ಮತ್ತು ಸಾಮಾಜಿಕ ಸ್ಥಾನ-ಮಾನ** : "ವೀರನಗೌಡ ಪಾಟೀಲ ದಂಪತಿಗಳ ಹರಿಜನ ಬಾಲಕಿಯರ ಸಾಮಾಜಿಕ ಸೇವೆಯಿಂದ ಅವರ ಬಂಧುಗಳು, ರಕ್ತಸಂಬಂಧಿಗಳು ಇವರಿಂದ ದೂರವಾದರು. ಅಲ್ಲದೆ ಸಾಮಾಜಿಕ ನಿಂದನೆಗಳನ್ನು ಎದುರಿಸಬೇಕಾಯಿತು. ಸಂಬಂಧಿಕರು ಸಭೆ-ಸಮಾರಂಭಗಳಿಗೆ ಈ ದಂಪತಿಗಳನ್ನು ಕರೆಯುವುದನ್ನು ಬಿಟ್ಟರು. ಇದರಿಂದ ನಾಗಮ್ಮ ನೊಂದುಕೊಂಡಾಗ ಅವರಿಗೆ ಮಾನಸಿಕ ಧೈರ್ಯವನ್ನು, ಬೆಂಬಲವನ್ನು ತುಂಬಿದವರು ಕೆ.ಎಫ್. ಪಾಟೀಲ್ ಮತ್ತು ಸಂಗೂರು ಕರಿಯಪ್ಪ."[೭] ಈ ಘಟನೆ ಸಾಮಾಜಿಕ ಸುಧಾರಣೆಯಲ್ಲಿ ಚಳುವಳಿಗಾರರು ಎದುರಿಸಿದ ಸಮಸ್ಯೆಯ ಅನಾವರಣವಾಗುತ್ತದೆ.

**ಆಶ್ರಮದ ಮುಖಾಂತರ** : ಆಶ್ರಮದಿಂದ ಹರಿಜನರಲ್ಲಿ ಜಾಗೃತಿ ತರುವ ಉದ್ದೇಶದಿಂದ ಪ್ರಭಾತ ಫೇರಿ, ಹರಿಜನ ಓಣಿಯ ಸಂದರ್ಶನ, ಸ್ವಚ್ಛತೆ, ಮಕ್ಕಳಿಗೆ ಕಥೆ, ಹಾಡು, ಆಟ-ಪಾಠ ಕಲಿಸುವುದು ಇನ್ನು ಮುಂತಾದ ಚಟುವಟಿಕೆಗಳಿಂದ ಸ್ವಲ್ಪಮಟ್ಟಿಗೆ ಸಾಮಾಜಿಕ ವಾತಾವರಣ ತಿಳಿಗೊಂಡಿತು. ವಿವಾಹ, ಸಭೆ-ಸಮಾರಂಭಗಳಿಗೆ ಹರಿಜನ ಬಾಲಿಕಾಶ್ರಮದ ಮಕ್ಕಳಿಗೆ ಆಮಂತ್ರಣ ನೀಡಲಾರಂಭಿಸಿದರು. ಮುಖ್ಯವಾಗಿ-

* "ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀಗಳು ಹರಿಜನ ಬಾಲಿಕಾಶ್ರಮ ಮಕ್ಕಳಿಗೆ ಸಹಪಂಕ್ತಿ ಭೋಜನ ಮತ್ತು ಪ್ರತಿ ವರ್ಷವೂ ಮಕ್ಕಳಿಗೆ ಸಹ ಪಂಕ್ತಿಭೋಜನ ಮಾಡಿಸುವುದಾಗಿ ಘೋಷಿಸಿದರು. ಕೆ.ಎಫ್. ಪಾಟೀಲ್ ತಮ್ಮ ವಿವಾಹ ಸಂದರ್ಭದಲ್ಲಿ ರಾಣೆಬೆನ್ನೂರಿನ ಆಶ್ರಮದ ಎಲ್ಲ ಮಕ್ಕಳನ್ನು ಆಮಂತ್ರಿಸಿ ಆ ಮಕ್ಕಳೇ ಎಲ್ಲ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡಿದರು. ಈ ಮೂಲಕ ಸಮಾಜದಲ್ಲಿಯ ಹರಿಜನ ಭೇದಭಾವವನ್ನು ಕಡಿಮೆ ಮಾಡುವ ಕಾರ್ಯಕ್ಕೆ ಮುನ್ನುಡಿ ಬರೆದರು.

* ಹುಬ್ಬಳ್ಳಿಯ ದಿನಕರ ರಾಮಪ್ಪ, ಭದ್ರಪೂರ, ಬೆಳಮಕರ ಮುಂತಾದವರು ವಿವಾಹ ಸಮಾರಂಭ, ಹುಟ್ಟುಹಬ್ಬ, ಗೃಹಪ್ರವೇಶಾದಿಗಳಿಗೆ ಆಶ್ರಮದ ಮಕ್ಕಳನ್ನು ಕರೆಸುತ್ತಿದ್ದರು. ಈ ಪರಿವರ್ತನೆಯ ಹೊಸ ಆಶಾಕಿರಣವಾಗಿ ಕಾರ್ಯ ನಿರ್ವಹಿಸಿದವರು ಪಾಟೀಲ್ ದಂಪತಿಗಳು.

ಹುಬ್ಬಳ್ಳಿಯಿಂದ ಇಡೀ ಪ್ರಾಂತದಲ್ಲಿ ಹರಿಜನ ಕಾರ್ಯವು ತನ್ನ ಕಂಪು ಬೀರಲಾರಂಭಿಸಿತು. ಇದರಿಂದ ಮತ್ತಷ್ಟು ಸಮಾನತೆಯ ಯೋಜನೆಗಳನ್ನು ಜಾರಿಗೆ ತರಲು ನಿರ್ಧರಿಸಿದರು.

೧೯೩೫ರಲ್ಲಿ ಹುಬ್ಬಳ್ಳಿ ತಾಲೂಕಿನ ೩೦ ಹಳ್ಳಿಗಳಲ್ಲಿ ಕಾಲ್ನಡಿಗೆಯಲ್ಲಿ ಪ್ರವಾಸ ಕೈಗೊಂಡರು. ಹಳ್ಳಿಯಿಂದ ಹಳ್ಳಿಗೆ ಸಾಗಿದಂತೆ ಆಶ್ಚರ್ಯಕರ ಪರಿವರ್ತನೆ ಆಗಿರುವುದನ್ನು ಪಾಟೀಲ್ ದಂಪತಿಗಳು ಮತ್ತು ಹರಿಜನ ಮಕ್ಕಳು ಗಮನಿಸತೊಡಗಿದರು. ಕಾರಣ ಹಳ್ಳಿಗಳ ಜನತೆ ಇವರನ್ನು ಆದರದಿಂದ ಬರಮಾಡಿಕೊಳ್ಳುತ್ತಿದ್ದರು. ಇವರ ತಂಡಕ್ಕೆ ಊಟ ಹಾಗೂ ವಸತಿ ಒದಗಿಸಿಕೊಡುತ್ತಿರುವುದು ಇವರಿಗೆ ಅಭಿಮಾನವನ್ನು ಉಂಟುಮಾಡಿತು.

ಆಶ್ರಮದ ಮುಖಾಂತರ ಹರಿಜನರಲ್ಲಿ ಜಾಗೃತಿ ತರುವುದೇ ಪಾಟೀಲ್ ದಂಪತಿಗಳ ಉದ್ದೇಶವಾಗಿತ್ತು. ಅದಕ್ಕಾಗಿ ಪ್ರಭಾತ ಫೇರಿ, ಹರಿಜನ ಓಣಿಯ ಸಂದರ್ಶನ, ಸ್ವಚ್ಛತೆ, ಮಕ್ಕಳಿಗೆ ಕಥೆ, ಹಾಡು, ಆಟ ಪಾಠಗಳ ಮೂಲಕ ಶಿಕ್ಷಣ ನೀಡಲಾಗುತ್ತಿತ್ತು. ಹಲವು ಗ್ರಾಮಗಳಲ್ಲಿ ಪ್ರಭಾತ್ ಫೇರಿ, ಮೆರವಣಿಗೆ, ಸಭೆಗಳು ನಿತ್ಯದ ಕಾರ್ಯಕ್ರಮಗಳಾಗಿರುತ್ತಿದ್ದವು. ಕೆಲ ಹಳ್ಳಿಗಳಲ್ಲಿ ಡೋಲು ಮುಂತಾದ ವಾದ್ಯಗಳೊಂದಿಗೆ ಇವರನ್ನು ಕರೆದೊಯ್ದು ಸಾರ್ವಜನಿಕ ಕೆರೆ, ಬಾವಿಗಳಿಂದ ನೀರು ಸೇದುತ್ತಿದ್ದರು. ಆದರೂ ಕೆಲ ಸವರ್ಣಿಯರು ಆಶ್ರಮದ ಮಕ್ಕಳಿಂದ ದೂರವಿರುತ್ತಿದ್ದರು. ಇನ್ನೂ ಕೆಲ ಸವರ್ಣಿಯರು ಮಕ್ಕಳ ಸ್ವಚ್ಛತೆ, ಸಾಚಾತನ, ಖಾದಿ ಉಡುಪು ಮುಂತಾದವುಗಳಿಂದ ಮನಸ್ಸನ್ನು ಪರಿವರ್ತನೆ ಆದ ವಿವರವನ್ನು ಸುಬ್ಬಣ್ಣಾಚಾರ್ಯ ಅಕ್ಕಿವಳಿ ಹಾಗೂ ದೇವೇಂದ್ರಪ್ಪ ವಿಭೂತಿ ವಿವರಿಸುತ್ತಾರೆ.

"ಹರಿಜನ ಸೇವೆ, ಸಾಮಾಜಿಕ ಸಮಾನತೆ ಎಂಬ ವಿಚಾರಗಳನ್ನು ಇಟ್ಟುಕೊಂಡು ಮಾತನಾಡುವವರು ಹೆಚ್ಚು ಸಿಗಬಹುದು. ಆದರೆ ಇಂತಹ ಮಾತುಗಳನ್ನು ಆಡುವುದರೊಂದಿಗೆ ನಡೆದು ತೋರಿಸಿದವರು ಪಾಟೀಲ್ ದಂಪತಿಗಳು. ತಮ್ಮ ಮಗಳು ಲೀಲಾವತಿ ಅನ್ಯಜಾತೀಯ ವೆಂಕಟೇಶ ಮಾಗಡಿ ಎಂಬುವವರನ್ನು ವಿವಾಹವಾಗುತ್ತೇನೆ ಎಂದಾಗ, ಮಗಳ ಆಶೆಯಂತೆ ಜನವರಿ ೨೬, ೧೯೪೨ರಂದು ಹುಬ್ಬಳ್ಳಿಯ ಹರಿಜನ ಬಾಲಕಿಯರ ಆಶ್ರಮದಲ್ಲಿ ನೆರವೇರಿಸಿಕೊಟ್ಟರು. ಆದರೆ ಅಂತರ್ಜಾತೀಯ ವಿವಾಹವಾಗಿದ್ದರಿಂದ ಪಾಟೀಲ್ ದಂಪತಿಗಳ ಬಂಧು ಬಳಗದವರು ಈ ಶುಭ ಕಾರ್ಯಕ್ಕೆ ಯಾರೂ ಬರಲಿಲ್ಲ."[೮] ಈ ರೀತಿ ಬಂಧು-ಬಳಗದವರು ಇವರನ್ನು ಕರೆಯದಿದ್ದರೂ ಮತ್ತು ಇವರ ಮನೆಗೆ ಬರದಿದ್ದರೂ ಈ ದಂಪತಿಗಳು ತಮ್ಮ ಸಾಮಾಜಿಕ ಸೇವೆಯನ್ನು ಮುಂದುವರಿಸಿದು ಅವರ ಸಾಮಾಜಿಕ ಸೇವೆಯ ಕಳಕಳಿಗೆ ಸಾಕ್ಷಿ.

**ತಿಮ್ಮನಗೌಡ ಮೆಣಸಿನಾಳ :** ಇವರು ಕೇವಲ ಭಾಷಣ ಮಾಡುವುದರಿಂದ ಅಸ್ಪೃಶ್ಯತಾ ನಿವಾರಣೆ ಆಗದೆಂದು ಆ ಕಾರ್ಯವನ್ನು ತಮ್ಮ ಮನೆಯಿಂದಲೇ ಪ್ರಾರಂಭಿಸಿದವರು. ತಮ್ಮ ಮನೆಯಲ್ಲಿ ಏನಾದರೂ ಕಾರ್ಯಕ್ರಮಗಳು ನಡೆದರೆ ಹರಿಜನರನ್ನು ಕರೆಯುವ ಪರಿಪಾಠ ಆರಂಭಿಸಿದರು.

ಹರಿಜನರಿಗೆ ಸಮಾನ ಹಕ್ಕು ಕೊಡುವ ಬಗ್ಗೆ ಪ್ರಚಾರ ಕೈಗೊಂಡರು. ಸಾರ್ವಜನಿಕ ಕೆರೆ ಬಾವಿ, ಹೊಂಡಗಳಿಂದ ನೀರು ಸೇದಲು ಊರ ಜನತೆಯನ್ನು ಒಪ್ಪಿಸಿದರು. ಹೀಗೆ ಹಲವು ಊರುಗಳಿಗೆ ಹೋಗಿ ಆ ಕಾರ್ಯ ಯಶಸ್ವಿಯಾಗುವಂತೆ ಮಾಡುವಲ್ಲಿ ಶ್ರಮವಹಿಸಿದರು."[೯] ಅದರೊಂದಿಗೆ ದೇವಾಲಯಕ್ಕೆ ಪ್ರವೇಶ ಕೊಡಿಸುವ ಕಾಯಕವೂ ನಡೆದಿತ್ತು. ಹೀಗೆ ಹರಿಜನೋದ್ಧಾರದ ಕಾರ್ಯ ಚಳುವಳಿಯ ಸಮಯದಲ್ಲಿ ಜೊತೆಯಾಗಿಯೇ ಮಾಡಿದವರು. ತಿಮ್ಮನಗೌಡ್ರ ತಂಡದ ಸದಸ್ಯ ಶಿವನಗೌಡ ಮರಿಗೌಡ್ರ ಹೇಳಿಕೆಯಿಂದ ತಿಳಿಯುತ್ತದೆ.

**ಶಿವಣ್ಣ ನೆಶ್ವಿ** : ಹಿರೇಕೆರೂರು ತಾಲೂಕಿನ ದೀವಿಗಿಹಳ್ಳಿಯ ತಿ.ರು. ನೆಶ್ವಿಯವರ ಸಹೋದರ. ಅಲ್ಲದೆ ಸ್ವಾತಂತ್ರ್ಯ ಸಂಗ್ರಾಮದ ಜೊತೆ ಜೊತೆಯಲ್ಲಿ ಸಾಮಾಜಿಕ ಕಾರ್ಯಗಳನ್ನು ಮಾಡಿದ ಕೀರ್ತಿಗೆ ಪಾತ್ರರಾದವರು.

"ಇವರು ವಿದ್ಯಾರ್ಥಿ ದೆಶೆಯಿಂದಲೇ ರಾಷ್ಟ್ರೀಯ ಚಳುವಳಿಯಲ್ಲಿ ಸಾಮಾಜಿಕ ಸೇವೆಯನ್ನು ಮಾಡಿದವರು. ಮುಖ್ಯವಾಗಿ ಖಾದಿ ವೃತಧಾರಿ, ಸ್ವದೇಶಿವೃತ, ನಿಶಾಬಂಧ ಆಂದೋಲನ, ಹರಿಜನೋದ್ಧಾರಕ, ಕೋಮುಸಾಮರಸ್ಯ, ಮಹಿಳೆಯರ ಉದ್ಧಾರ, ಕೃಷಿಕರ ಏಳ್ಗೆ, ಭ್ರಷ್ಟಾಚಾರ ನಿರ್ಮೂಲನೆ, ಸದಾಚಾರ ಮತ್ತು ಚರಕಾದಿಂದ ನೂಲುವುದು. ಯಾವಾಗಲೂ ಖಾದಿ ಧರಿಸುವಂತೆ ಇವರ ಮುಖ್ಯ ಉದ್ದೇಶಗಳಾಗಿದ್ದವು.

ಶಿವಣ್ಣ ಇಂಗ್ಲಿಷ್ ಶಾಲೆಗೆ ಕಾಲಿಡುತ್ತಲೇ ಮದ್ಯಪಾನ ವಿರೋಧದಲ್ಲಿ ಭಾಗಿಯಾಗಿದ್ದವರು. ಸೇಂದಿ ಅಂಗಡಿ ಪಿಕೆಟಿಂಗ್, ಸೇಂದಿ ಗಿಡಗಳ ಸಂಹಾರ ಮೊದಲಾದವುಗಳ ಬಗ್ಗೆ ಪ್ರಚಾರ ಹಾಗೂ ಸಕ್ರಿಯವಾಗಿ ದುಡಿದಿದ್ದರು. ಹರಿಜನೋದ್ಧಾರ ಕಾರ್ಯದಲ್ಲಿ ಸಹೋದರ ತಿ.ರು. ನೆಶ್ವಿ ಹಾಗೂ ವೀರನಗೌಡ ಪಾಟೀಲರ ಕಾರ್ಯದಲ್ಲಿ ಭಾಗಿಯಾಗಿದ್ದಲ್ಲದೆ ಸವರ್ಣೀಯರು ಕುಡಿಯುವ ಹೊಂಡ, ಬಾವಿಗಳಿಂದ ಅಸ್ಪೃಶ್ಯರು ನೀರು ತುಂಬಿಸಿಕೊಳ್ಳಲು ಪ್ರಚೋದಿಸುತ್ತಿದ್ದರು."[೧೦]

೧೯೩೪ರಲ್ಲಿ ಹರಿಜನೋದ್ಧಾರ ಕಾರ್ಯಕ್ರಮದ ನಿಮಿತ್ತ ನಿಧಿ ಸಂಗ್ರಹಕ್ಕಾಗಿ ಗಾಂಧೀಜಿ ಬ್ಯಾಡಗಿಗೆ ಬಂದಾಗ ಶಿವಣ್ಣ ಹಂಸಬಾವಿ ಶಾಲೆಯ ಎಲ್ಲ ವಿದ್ಯಾರ್ಥಿಗಳನ್ನು ಕರೆದೊಯ್ದು ಅಸ್ಪೃಶ್ಯತಾ ನಿವಾರಣೆಯ ಅವಶ್ಯಕತೆಯ ಬಗ್ಗೆ ಮನವರಿಕೆ ಮಾಡಿಕೊಟ್ಟರು. ಶಿವಣ್ಣ ಹಂಸಬಾವಿಯ ಹೆಣ್ಣುಮಕ್ಕಳ ಬೋರ್ಡಿಂಗಿಗೆ ಅಧ್ಯಕ್ಷರಾಗಿದ್ದಾಗ ಹರಿಜನ ಹೆಣ್ಣುಮಕ್ಕಳಿಗೆ ವಿದ್ಯೆಗೆ ಅನುಕೂಲ ಮಾಡಿಕೊಟ್ಟು ಜಾತಿ ಮತ ಬೇಧವಿಲ್ಲದಂತೆ ನೋಡಿಕೊಳ್ಳುತ್ತಿದ್ದ ಬಗ್ಗೆ ಚಳುವಳಿಗಾರ ಪುಟ್ಟಪ್ಪ ಹರಭಿ ಹಾಗೂ ಬಿ.ಜಿ.ಬಣಕಾರ ಹೇಳಿಕೆಗಳು ಸಾಕ್ಷಿಗಳಾಗಿವೆ.

**ಸಿದ್ದಪ್ಪ ಹೊಸಮನಿ**

ಹಾವೇರಿ ಭಾಗದಲ್ಲಿ ಬಡವರ ವಕೀಲರು ಎಂಬ ಖ್ಯಾತಿ ಹೊಸಮನಿ ಸಿದ್ದಪ್ಪರಿತ್ತು. ಇವರಿಗೆ ಹಣ ಬರದಿದ್ದರೂ ಚಳುವಳಿಯ ಕಾಲಕ್ಕೆ ಇವರು ರಸ್ತೆಗೆ ಬಂದರೆ ಜನ ಸಾಗರ ಸೇರುವಂತೆ ಬಾಳಿದವರು. ಸ್ವಾತಂತ್ರ್ಯ ಹೋರಾಟದೊಂದಿಗೆ ಸಾಮಾಜಿಕ ಕಾರ್ಯಗಳನ್ನು ಮಾಡಿದ ಶ್ರೇಯಸ್ಸಿಗೆ ಭಾಜನರಾಗಿದ್ದಾರೆ. ಸಮಾಜಕ್ಕೆ ಅನೂಕೂಲವಾಗುವಂತಹ ಕೆಲವು ಸಂಘ

ಸಂಸ್ಥೆಗಳ ನಿರ್ಮಾತೃಗಳು ಹಾಗೂ ಕೆಲವು ಸಂಸ್ಥೆಗಳ ಶ್ರೇಯಸ್ಸಿಗೆ ಶ್ರಮಿಸಿದ್ದಾರೆ. ಇವರ ಸೇವೆಯ ಲಾಭ ಪಡೆದ ಕೆಲವು ಸಂಸ್ಥೆಗಳೆಂದರೆ-

* ಹಾವೇರಿ ಹಾಗೂ ಕರ್ಜಗಿ ಸೊಸೈಟಿ, ಜಿಲ್ಲಾ ಪ್ರೌಢ ಶಾಲೆಗೆ ಕಟ್ಟಡ ಕಟ್ಟಿಸಲು ಕಾರಣರಾದವರು. ಹೀಗೆ ಹತ್ತು ಹಲವು ಸಾಮಾಜಿಕ ಕಾರ್ಯಗಳನ್ನು ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಸುಮಾರು ವರ್ಷಗಳ ಕಾಲ ಹಾವೇರಿಯ ನಗರ ಸಭೆಯ ಅಧ್ಯಕ್ಷರಾಗಿ ಬ್ರಿಟಿಷ ಅಧಿಕಾರಿಗಳಿಗೆ ಯಾವುದೇ ಅಂಜದೇ ಅಧಿಕಾರ ನಡೆಸಿದವರು"[೧೧] ಎಂಬುದಾಗಿ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಸಹಮತ ವ್ಯಕ್ತಪಡಿಸುತ್ತಾರೆ.

**ಹಾವೇರಿಯ ಸ್ವಾತಂತ್ರ್ಯಯೋಧ ಗುರುಶಾಂತಪ್ಪ ಜಾಬಿನ**

ಇವರು ಸ್ವಾತಂತ್ರ್ಯ ನಂತರ "೧೯೯೦ರಲ್ಲಿ ಹಾವೇರಿಯ ಪುರಸಭಾ ಸದಸ್ಯರಾಗಿ ಆಯ್ಕೆಯಾಗಿ ನಂತರ ಪುರಸಭೆಯ ಅಧ್ಯಕ್ಷರಾದರು. ಆ ಸಮಯದಲ್ಲಿ ಹಾವೇರಿಯ ಪುರಸಭೆಯ 'ಆಡಳಿತ ನಿರ್ವಹಣೆ ಚೆನ್ನಾಗಿದೆ ಎಂದು ಪರಿಗಣಿಸಿದ ಕರ್ನಾಟಕ ಸರಕಾರ ಒಂದು ಲಕ್ಷ ರೂ.ಗಳ ಬಹುಮಾನ ಘೋಷಿಸಿತು. ಸಾರ್ಥಕ ಆಡಳಿತ ನಿರ್ವಹಣೆ ಮಾಡಿದ್ದಕ್ಕೆ ಗುರುಶಾಂತಪ್ಪ ಜಾಬಿನರನ್ನು ಗೌರವಿಸಲಾಯಿತು."[೧೨] ಹೀಗೆ ಗೌರವಯುತ ಆಡಳಿತ ನೀಡಿದ ಇವರನ್ನು ಜನತೆ ಗೌರವದಿಂದಲೇ ಕಾಣುವಂತಾಯಿತು ಎಂಬುದು ನಾರಾಯಣ ಕರ್ಪೂರ ಅವರ ಅಭಿಪ್ರಾಯ.

**ಚಿಕ್ಕ ಎಡಚಿಯ ಸ್ವಾತಂತ್ರ್ಯ ಯೋಧ ಶಂಕರಗೌಡ ಪಾಟೀಲ**

ಹಿರೇಕೆರೂರು ತಾಲೂಕಿನ ಚಿಕ್ಕಎಡಚಿ ಗ್ರಾಮದ ಶಿವನಗೌಡ-ರುದ್ರಮ್ಮ ದಂಪತಿಗಳ ಪುತ್ರ ಶಂಕರಗೌಡ ಪಾಟೀಲ. ಇವರು ಮೆಣಸಿನಾಳ ತಿಮ್ಮನಗೌಡ ಹಾಗೂ ಸಂಗೂರು ಕರಿಯಪ್ಪನ ತಂಡದಲ್ಲಿ ಗುರುತಿಸಿಕೊಂಡವರು. ಚಳುವಳಿಯೊಂದಿಗೆ ಗ್ರಾಮ ಸುಧಾರಣೆಯ ಕಡೆ ಒಲವು ತೋರಿದ ಇವರು ಸ್ನೇಹಿತರನ್ನು ಮತ್ತು ಊರ ಜನತೆಯನ್ನು ಕೂಡಿಸಿಕೊಂಡು ಸಾಮಾಜಿಕ ಅಭಿವೃದ್ಧಿ ಕಾರ್ಯಕ್ಕೆ ನಿರ್ಧರಿಸಿ ಚಿಕ್ಕಎಡಚಿಯಲ್ಲಿ 'ಗ್ರಾಮ ಸುಧಾರಣೆ ಸಂಘ'ವನ್ನು ಸ್ಥಾಪಿಸಿದರು."[೧೩]

ಆ ಸಂಘದ ಮೂಲಕ ಪ್ರಾರಂಭಿಸಿದ ಕಾರ್ಯಗಳು-

* ಊರಲ್ಲಿಯ ಚಿಕ್ಕ ಚಿಕ್ಕ ರಸ್ತೆಗಳನ್ನು ಅಗಲೀಕರಣ ಮತ್ತು ಸ್ವಚ್ಚತೆಗಾಗಿ ಶ್ರಮದಾನದ ಮೂಲಕ ಯಶಸ್ವಿಗೊಳಿಸಿದರು. * ರಟ್ಟಿಹಳ್ಳಿ-ಹಿರೇಕೆರೂರು ರಸ್ತೆ ಚಿಕ್ಕದಾಗಿತ್ತು. ಅದು ರೈತರ ಚಕ್ಕಡಿಗಳು ಸಹ ಹೋಗುವ ಸ್ಥಿತಿಯಿರಲಿಲ್ಲ. ತಮ್ಮ ಸಂಘ ಹಾಗೂ ಊರಿನವರ ಸಹಕಾರದಿಂದ ಸುರಕ್ಷಿತ ರಸ್ತೆ ಮಾಡುವಲ್ಲಿ ಯಶಸ್ಸು ಕಂಡರು. * **ನೀರುಣಿಸುವ ಕಾರ್ಯ**- ಚಿಕ್ಕ ಎಡಚಿಯ ರಿ.ಸ.ನಂ.೮೦ ರಲ್ಲಿಯ ಕೆರೆ ಎಷ್ಟು ಮಳೆ ಬಂದರೂ ತುಂಬುತ್ತಿರಲಿಲ್ಲ. ಕಾರಣ ಆ ಕೆರೆಯಲ್ಲಿ ವಿಪರೀತ ಹೂಳು ತುಂಬಿದ್ದು, ನೀರು ಬರುವ ಕಾಲುವೆಗಳು ಮುಚ್ಚಿಹೋಗಿದ್ದವು. ಕೃಷಿಕರ ದನ-ಕರುಗಳಿಗೆ ಕುಡಿಯುವ ನೀರಿನ ಸಮಸ್ಯೆಯಾಗುತ್ತಿತ್ತು. ಹಾಗಾಗಿಯೇ ಶಂಕರಗೌಡ ಆ ಕಾರ್ಯಕ್ಕೆ ತಮ್ಮ ಸಂಘ ಹಾಗೂ ಊರ ಜನತೆಯ ಶ್ರಮದಾನದಿಂದ ಕಾಲುವೆಗಳ ಸ್ವಚ್ಛತೆ

ಮತ್ತು ಕೆರೆಯ ಹೂಳೆತ್ತುವ ಕಾರ್ಯ ಮುಗಿಸಿದರು. ಮಳೆಗಾಲ ಪ್ರಾರಂಭವಾಗುತ್ತಿದ್ದಂತೆ ಕೆರೆ ತುಂಬಿ ತುಳುಕುವಂತಾಯಿತು."[೧೪]

* **ಪ್ರಾಥಮಿಕ ಶಾಲೆಯ ಕಟ್ಟಡ;** ೧೯೫೪ರ ಸಮಯದಲ್ಲಿ ತಮ್ಮ ಊರಿನ ಶಾಲೆ ಊರ ದೇವಾಲಯದಲ್ಲಿ ನಡೆಯುತ್ತಿತ್ತು. ಇದನ್ನು ಗಮನಿಸಿದ ಶಂಕರಗೌಡ ಪಾಟೀಲ ಪ್ರಾಂತೀಯ ಆಫೀಸರರಾದ ಸಾಲೀಮಠರನ್ನು ಭೇಟಿಯಾಗಿ ಚರ್ಚಿಸಿ ಊರ ಶಾಲೆಯ ಬೇಡಿಕೆಯಿಟ್ಟರು. ಅವರ ಹಾಗೂ ಊರಿನವರ ಸಹಾಯದಿಂದ ಶಾಲಾ ಕಟ್ಟಡವನ್ನು ಕಟ್ಟಿಸಿ ಊರ ಮಕ್ಕಳಿಗೆ ಶೈಕ್ಷಣಿಕ ಅಭಿವೃದ್ಧಿಯ ಹರಿಕಾರರಾದರು.

**ವಾಚನಾಲಯ ನಿರ್ಮಾಣ;** ಊರಲ್ಲಿ ದೇವಾಲಯಕ್ಕಿಂತ ಒಂದು ವಾಚನಾಲಯ ಮುಖ್ಯವೆಂಬುದನ್ನು ಮನಗಂಡ ಶಂಕರಗೌಡ ತಮ್ಮ ಸ್ನೇಹಿತರೊಂದಿಗೆ ಚರ್ಚಿಸಿದರು. ನಂತರ ಧಾರವಾಡದ ಕಲೆಕ್ಟರ್ ರೆಬೆಲೊರನ್ನು ಭೇಟಿಯಾಗಿ ವಿಷಯ ತಿಳಿಸಿದಾಗ ಅವರು ಸಂತೋಷಪಟ್ಟು ಅವರೇ ಊರಿಗೆ ಬಂದು ವಾಚನಾಲಯದ ಶಂಕುಸ್ಥಾಪನೆ ಮಾಡಿದರು.

"The Village improvement Challenge Shield **ಶ್ರಮದಾನ ಫಲಕ** : ಮುಂಬೈ ಸರಕಾರ ಗ್ರಾಮೀಣ ಪ್ರದೇಶದಲ್ಲಿ ಶ್ರಮದಾನವನ್ನು ಪ್ರೋತ್ಸಾಹಿಸುವ ನಿಮಿತ್ತ ಒಂದು 'ರೋಲಿಂಗ್ ಶೀಲ್ಡ್' ಸ್ಥಾಪಿಸಿತ್ತು. ಪ್ರತಿ ವರ್ಷ ಯಾವ ಊರಿನವರು ಎಷ್ಟು ಶ್ರಮದಾನ ಮಾಡಿರುವರೆಂಬುದನ್ನು ಗುರುತಿಸಿ, ಹೆಚ್ಚು ಶ್ರಮಧಾನ ಮಾಡಿದ ಊರಿಗೆ ಆ ಫಲಕವನ್ನು ಪ್ರಧಾನ ಮಾಡಲಾಗುತ್ತಿತ್ತು. ಆ ಫಲಕದಲ್ಲಿ ಬೆಳ್ಳಿಯ ತಗಡಿನ ಮೇಲೆ ಆ ಊರ ಹೆಸರು ಹಾಗೂ ಜಿಲ್ಲೆಯನ್ನು ನಮೂದಿಸಲಾಗುತ್ತಿತ್ತು. ಧಾರವಾಡ ಜಿಲ್ಲಾ ಕಲೆಕ್ಟರ್ ರೆಬೆಲೊ ಚಿಕ್ಕಎಡಚಿಗೆ ವಾಚನಾಲಯ ಶಂಕುಸ್ಥಾಪನೆಗೆ ಬಂದಾಗ ಊರಲ್ಲಿಯ ಜನತೆಯ ಶ್ರಮದಾನ ಕಂಡಿದ್ದರಿಂದ ೧೯೫೪ರಲ್ಲಿಯ 'ರೋಲಿಂಗ್ ಶೀಲ್ಡ'ನ್ನು ಚಿಕ್ಕಎಡಚಿಗೆ ಬರುವಂತೆ ಮುಂಬೈ ಸರಕಾರಕ್ಕೆ ಶಿಫಾರಸ್ಸು ಮಾಡಿದರು. ಅದರಂತೆ ಆ ಶೀಲ್ಡ್ ಚಿಕ್ಕಎಡಚಿಗೆ ಧಾರವಾಡ ಜಿಲ್ಲಾ ಕಲೆಕ್ಟರ್ ರೆಬೆಲೊರಿಂದ ಪ್ರಧಾನ ಮಾಡಲಾಯಿತು. ಚಿಕ್ಕಎಡಚಿಯ ಗ್ರಾಮ ಶ್ರಮದಾನದ ವಿಷಯ ಇಡೀ ಮುಂಬೈ ರಾಜ್ಯಕ್ಕೆ ಮಾದರಿಯಾಗಿ ನಿಂತಿತ್ತು."[೧೫] ಈ ಕೀರ್ತಿಯನ್ನು ದೊರಕಿಸಿ ಕೊಟ್ಟ ಶ್ರೇಯಸ್ಸು ಸ್ವಾತಂತ್ರ್ಯ ಯೋಧ ಶಂಕರಗೌಡ ಪಾಟೀಲಗೆ ಸಲ್ಲುತ್ತದೆ. ಹೀಗೆ ವಸಾಹತುಶಾಹಿ ನಂತರವೂ ಚಳುವಳಿಗಾರರ ಸಮಾಜಮುಖಿ ಕಾರ್ಯಗಳಿಗೆ ಸಾಕ್ಷಿಯಾಗಿ ನಿಲ್ಲುವಂತಾಗಿದೆ.

**ವಿರುಪಾಕ್ಷಪ್ಪ ಅಂಗಡಿ**

"೧೯೨೯ರಲ್ಲಿ ಹಾವೇರಿಯಲ್ಲಿ ಸ್ವಯಂಸೇವಕರ ಶಿಬಿರವೊಂದು ಪ್ರಾರಂಭವಾದಾಗ ವೀರಪ್ಪ ಅಂಗಡಿ ಅವರ ವಯಸ್ಸು ೧೬. ಶಾಲೆಯನ್ನು ಬಿಟ್ಟು ಶಿಬಿರದಲ್ಲಿ ಕಾರ್ಯಕರ್ತನಾಗಿ ಸೇರಿಕೊಂಡರು. ಶಿಬಿರದಲ್ಲಿ ಸ್ವಯಂಸೇವಕನಾಗಿ ಹಳ್ಳಿಗಳಲ್ಲಿ ಸಂಚರಿಸಿ ಅಸ್ಪೃಶ್ಯತಾ ನಿವಾರಣೆ, ನೂಲುವುದು, ಸ್ವದೇಶಿ ಪ್ರಚಾರ ಮುಂತಾದ ವಿಧಾಯಕ ಕಾರ್ಯಕ್ರಮಗಳನ್ನು ಗ್ರಾಮಗಳಿಗೆ

ಮುಟ್ಟಿಸುವಲ್ಲಿ ಪ್ರಮುಖ ಪಾತ್ರವಹಿಸಿದವರು."[೯೬] ಗ್ರಾಮಗಳ ಸಾಮಾನ್ಯ ಜನತೆಗೆ ಸ್ವಾವಲಂಬನೆಯ ಜೀವನ ನಿರ್ವಹಣೆಗೆ ಇವರು ಶ್ರಮಿಸಿರುವುದನ್ನು ಗುರುತಿಸಲಾಗಿದೆ.

**ಶಾಂತೇಶ್ವರ (ರಾಯಪ್ಪ) ನರಗುಂದ**

ಹೂವಿನಶಿಗ್ಲಿಯ ಸ್ವಾತಂತ್ರ್ಯ ಹೋರಾಟಗಾರ ರಾಯಪ್ಪ ನರಗುಂದ. "ವೈಯಕ್ತಿಕ ಸತ್ಯಾಗ್ರಹ ಮಾಡಿ ಜೈಲು ಶಿಕ್ಷೆ ಅನುಭವಿಸಿ ರಾಯಪ್ಪ ಹೂವಿನಶಿಗ್ಲಿ ಊರಿಗೆ ಬಂದರು. ಸಮಾಜದ ಮೇಲ್ವರ್ಗದ ಜನರು ಹರಿಜನರನ್ನು ಕೀಳಾಗಿ ಕಾಣುತ್ತಿದ್ದರು. ಬಾವಿ, ಹೊಂಡಗಳಲ್ಲಿ ನೀರನ್ನು ಮುಟ್ಟುವಂತಿರಲಿಲ್ಲ. ಮೇಲ್ವರ್ಗದವರು ತಮ್ಮ ಕೊಡಗಳಿಂದ ಹರಿಜನರಿಗೆ ನೀರು (ಹಾಕುವ) ಹಣಿಸುವುದನ್ನು ನಿಲ್ಲಿಸಲು ಊರವರನ್ನು ಒಪ್ಪಿಸಿ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಶ್ರಮಿಸಿದವರು. ಆ ಕಾರ್ಯ ತಮ್ಮ ಮನೆಯಿಂದಲೇ ಆರಂಭವಾಗಲೆಂದು ಹರಿಜನರನ್ನು ತಮ್ಮ ಮನೆಗೆ ಬರಮಾಡಿಕೊಂಡು ಇನ್ನೂ ತಾವು ಯಾರ ಮಾತನ್ನು ಕೇಳದೆ ಹೊಂಡ, ಬಾವಿಗಳಲ್ಲಿ ನೀರು ತುಂಬಿಕೊಳ್ಳಬೇಕು."[೯೭] ಅದಕ್ಕೆ ನನ್ನ ಸಹಕಾರ ಯಾವತ್ತು ಇರುತ್ತದೆ ಎಂದು ಧೈರ್ಯ ತುಂಬಿದವರು.

ಹೀಗೆ ಜಿಲ್ಲೆಯ ಸ್ವಾತಂತ್ರ್ಯ ಯೋಧರು ಚಳುವಳಿಯ ಕಾಲಕ್ಕೂ ಮತ್ತು ಸ್ವಾತಂತ್ರ್ಯ ನಂತರವೂ ತಮ್ಮ ಹಲವಾರು ಸಾಮಾಜಿಕ ಚಟುವಟಿಕೆಗಳನ್ನು ಮಾಡಿರುವುದನ್ನು ಗುರುತಿಸಲಾಗಿದೆ.

**೬.೨. ರಾಜಕೀಯ ಕೊಡುಗೆ**

ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ಚಳುವಳಿಗೆ ಮಾತ್ರ ಸೀಮಿತವಾಗಿರದೆ ಸಮಯಕ್ಕೆ ತಕ್ಕಂತೆ ಚಳುವಳಿಯ ಕಾಲಕ್ಕೆ ದೇಶದಲ್ಲಿ ಬ್ರಿಟಿಷರ ವಿರುದ್ಧ ರಾಷ್ಟ್ರ ನಾಯಕರು ಆದೇಶಿಸುವ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿ, ವಿವಿಧ ಚುನಾವಣೆಗಳನ್ನು ಎದುರಿಸಿ ಗೆಲುವು ಪಡೆದರೂ ಅಧಿಕಾರಕ್ಕೆ ಅಂಟಿಕೊಳ್ಳದೇ ನಾಯಕರ ಆದೇಶದಂತೆ ಪುನಃ ತಮ್ಮ ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಿ ಚಳುವಳಿಯಲ್ಲಿ ಭಾಗವಹಿಸಿ ಪುನಃ ಸೆರೆಮನೆವಾಸ ಅನುಭವಿಸಿದರು. ಸ್ವಾತಂತ್ರ್ಯ ನಂತರದ ರಾಜಕೀಯದಲ್ಲಿ ಭಾಗಿಗಳಾಗಿ ಜನಸೇವೆ ಮಾಡಿ ಜನಸಾಮಾನ್ಯರ ಮನಸ್ಸಿನಲ್ಲಿ ಅಚ್ಚಳಿಯ ಸ್ಥಾನ ಪಡೆದವರಿದ್ದಾರೆ. ಅಂಥ ಆದರ್ಶ ರಾಜಕಾರಣ ಮಾಡಿದ ಕೆಲವರನ್ನು ಪರಿಚಯಿಸಲಾಗಿದೆ.

**ತಿ.ರು. ನೆಶ್ವಿ** : ಹಿರೇಕೆರೂರು ತಾಲೂಕಿನ ದೀವಿಗಿಹಳ್ಳಿ ಗ್ರಾಮದ ತಿ.ರು.ನೆಶ್ವಿ ಚಳುವಳಿಯೊಂದಿಗೆ ರಾಜಕೀಯದಲ್ಲಿ ತಮ್ಮದೇಯಾದ ಕೊಡುಗೆಯನ್ನು ನೀಡಿದ್ದಾರೆ.

ಕ್ರಿ.ಶ. ೧೯೩೬ರಲ್ಲಿ ಧಾರವಾಡ ಜಿಲ್ಲಾ ಲೋಕಲ್ ಬೋರ್ಡ್ ಚುನಾವಣೆಗಳು ನಡೆದು ಹಿರೇಕೆರೂರು ತಾಲೂಕಿನಿಂದ ವೀರನಗೌಡ ಪಾಟೀಲ ಮತ್ತು ಟಿ.ಆರ್. ನೆಶ್ವಿ ಕಾಂಗ್ರೆಸ್‌ನಿಂದ ಸ್ಪರ್ಧಿಸಿದ್ದರು. ಇವರ ಎದುರಾಳಿಗಳಾಗಿ ತಾಲೂಕಿನಾಚೆಯೂ ಪ್ರತಿಷ್ಠಿತರಾಗಿದ್ದ ಬಸವಣ್ಣೆಪ್ಪ ತಂಬಾಕದ ಪುನರಾಯ್ಕೆ ಬಯಸಿ ಚುನಾವಣಾ ಕಣಕ್ಕಿಳಿದಿದ್ದರು. ತಾಲೂಕಿನ ಜನತೆ ೮ ರೂ ಹಪ್ತೆ (ಕರ) ಕಟ್ಟುವವರಿಗೆ ಮಾತ್ರ ಮತದಾನವಿದ್ದು ೨ ಜನರಿಗೆ ಮತ ಹಾಕಬಹುದಿತ್ತು.

ತಂಬಾಕದ ವಕೀಲರ ವಿರುದ್ಧ ಯಾರೂ ಗೆಲ್ಲಲಾರರೆಂಬ ರೂಢವಾಗಿದ್ದ ಕಾಲ. ಚುನಾವಣೆ ನಡೆದು ಹಾವೇರಿಯಲ್ಲಿ ನಡದ ಮತ ಎಣಿಕೆಯಲ್ಲಿ ಬಸವಣ್ಯಪ್ಪ ತಂಬಾಕದ ಜಯ ಗಳಿಸಿ, ತಿ.ರು. ನೆಶ್ವಿ ಸೋಲುಂಡರು. ವೀರನಗೌಡ ಪಾಟೀಲ ಅತ್ಯಧಿಕ ಮತ ಗಳಿಸಿ ಜಯ ಗಳಿಸಿದರು. ಆದರೆ ಸ್ನೇಹಿತ ತಿ.ರು.ನೆಶ್ವಿಯ ಸೋಲನ್ನು ಸಹಿಸದ ಪಾಟೀಲ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿ, ತನ್ನ ನಂತರ ಹೆಚ್ಚು ಮತ ಪಡೆದ ತಿ.ರು. ನೆಶ್ವಿಯನ್ನೇ ವಿಜೇತರೆಂದು ಸಾರಬೇಕೆಂದು ಕೇಳಿಕೊಂಡರು. ಆಗ ಅದಕ್ಕೆ ಅವಕಾಶವಿತ್ತು, ಆದರೆ ತಿ.ರು. ನೆಶ್ವಿ ಪಾಟೀಲರ ಈ ಕ್ರಮವನ್ನು ಒಪ್ಪಲಿಲ್ಲ, ಆದರೆ ಕಬ್ಬೂರ ಡಾಕ್ಟರ್ ಮಧ್ಯಸ್ಥಿಕೆಯಿಂದ ಒಪ್ಪಿಸಲಾಯಿತು. ತಿ.ರು. ನೆಶ್ವಿಯನ್ನು ವಿಜೇತರೆಂದು ಸಾರಲಾಯಿತು."[೧೮] ಈ ಘಟನೆ ಚಳುವಳಿಗಾರರು ಅಧಿಕಾರಕ್ಕೆ ಆಸೆ ಪಡದೇ ತಮ್ಮ ಸ್ಥಾನವನ್ನು ತ್ಯಾಗ ಮಾಡುವ ಮನೋಭಾವ ಹೊಂದಿದ್ದರೆಂಬುದಕ್ಕೆ ಉತ್ತಮ ಉದಾಹರಣೆ.

**ಇವರು ಮಾಡಿದ ಪ್ರಮುಖ ಕಾರ್ಯಗಳು** : ಧಾರವಾಡ ಜಿಲ್ಲಾ ಲೋಕಲ್ ಬೋರ್ಡ್ ಸದಸ್ಯರಾದ ಮೇಲೆ ತಿ.ರು.ನೆಶ್ವಿ ಬಸವಣ್ಯಪ್ಪ ತಂಬಾಕದರೊಂದಿಗೆ ಸೇರಿ ಗ್ರಾಮಗಳಿಗೆ ಕಚ್ಚಾ ರಸ್ತೆಗಳ ನಿರ್ಮಾಣಕ್ಕೆ ಆದ್ಯತೆ ನೀಡಿದರು. ಹಾವೇರಿ–ಕಾಗಿನೆಲ್ಲೆ–ಹಂಸಬಾವಿ, ಮಾಸೂರು–ಹಳ್ಳೂರು ಈ ರಸ್ತೆಗಳ ಕಾರ್ಯ ಮಾಡಿದ ಬಗ್ಗೆ ಬಿ.ಜಿ. ಬಣಕಾರ ಹೇಳಿಕೆ ನೀಡಿದ್ದಾರೆ.

**ಪಾರ್ಲಿಮೆಂಟರಿ ಸೆಕ್ರೆಟರಿ** : ಮುಂಬೈ ಅಸೆಂಬ್ಲಿಗೆ ೧೯೩೭ರ ಫೆಬ್ರುವರಿಯಲ್ಲಿ ಚುನಾವಣೆ ನಡೆಯಿತು. ಆಗಿನ ಮುಂಬೈ ಪ್ರಾಂತಕ್ಕೆ ಧಾರವಾಡ ದಕ್ಷಿಣ ಮತ ಕ್ಷೇತ್ರದಿಂದ ಈರ್ವರು ಸ್ಪರ್ಧಿಗಳಾಗಿ ಧಾರವಾಡ ದಕ್ಷಿಣದಿಂದ ತಿ.ರು. ನೆಶ್ವಿಯನ್ನು ಹಾಗೂ ಹಾವೇರಿಯ ಶ್ರೀಮಂತರಾದ ಶ್ರೀಪಾದರಾವ್ ಕರಿಗುದರಿಯನ್ನು ಸೂಚಿಸಿದರು. ಟಿ.ಆರ್. ನೆಶ್ವಿಗೆ ಚುನಾವಣಾ ವೆಚ್ಚ ವಹಿಸುವುದು ಕಷ್ಟವಾದ್ದರಿಂದ ಶ್ರೀಪಾದರಾವ್ ಕರಿಗುದರಿ ನೋಡಿಕೊಳ್ಳಬೇಕೆಂದು ಸೂಚಿಸಲಾಯಿತು.

ಈಗಲೂ ಇವರಿಗೆ ವಿರೋಧವಾಗಿ ಸ್ಪರ್ಧಿಸಿದವರು ರಾಜಕಾರಣ ಪಟು ಎಂದೇ ಖ್ಯಾತರಾದ ಬಿ.ಆರ್. ತಂಬಾಕದ ವಕೀಲರು. ಸ್ಪರ್ಧೆ ಅತೀ ತುರುಸಿನದಾದಾಗ ಲಿಂಗಾಯತರಾದ ನೆಶ್ವಿ ಮತ್ತು ತಂಬಾಕದ ಬಸವಣ್ಯಪ್ಪ ಆರಿಸುವ ಸಾಧ್ಯತೆಯಿದೆಯೆಂಬುದು ತಿಳಿಯುತ್ತಿದ್ದಂತೆ, ಟಿ.ಆರ್. ನೆಶ್ವಿ ಧರ್ಮ, ಜಾತಿಗಿಂತ ಪಕ್ಷ ದೊಡ್ಡದು, ಆದ್ದರಿಂದ ಎಲ್ಲರೂ ಜಾತಿಯನ್ನು ಗಮನಿಸದೆ ಕಾಂಗ್ರೆಸ್ಸಿಗೆ ಮತ ನೀಡಬೇಕೆಂದು ಪ್ರಚಾರ ಮಾಡಿದರು. ಇವರಿಗೆ ಬೆಂಬಲವಾಗಿ ಬಂದವರು ಹೊಸಮನಿ ಸಿದ್ದಪ್ಪ, ಹಳ್ಳಿಕೇರಿ ಗುದ್ಲೆಪ್ಪ ಧಾರವಾಡ ಕ್ಷೇತ್ರಗಳಲ್ಲಿ ಸಂಚರಿಸಿ ಅಭ್ಯರ್ಥಿಗಳ ಪರ ಪ್ರಚಾರ ಮಾಡಿದರು. ಮತ ಎಣಿಕೆ ನಡೆದು ಟಿ.ಆರ್. ನೆಶ್ವಿ ಹಾಗೂ ಶ್ರೀಪಾದರಾವ್ ಕರಿಗುದರಿ ಜಯ ಗಳಿಸಿದರು."[೧೯] ಮುಂಬೈ ಪ್ರಾಂತದಲ್ಲಿ ಕಾಂಗ್ರೆಸ್ ಸರಕಾರ ಅಧಿಕಾರಕ್ಕೆ ಬಂದು ಬಿ.ಜಿ. ಖೇರ್ ಮುಖ್ಯಮಂತ್ರಿಯಾದರು. ಟಿ.ಆರ್. ನೆಶ್ವಿಯವರನ್ನು ಪಿ.ಡಬ್ಲ್ಯೂ.ಡಿ. ಶಾಖೆಗೆ ಪಾರ್ಲಿಮೆಂಟರಿ ಸೆಕ್ರೆಟರಿ ಎಂದು ನೇಮಿಸಲಾಯಿತು.

**ಪಾರ್ಲಿಮೆಂಟರಿ ಸದಸ್ಯರಾದ ನಂತರ** : ಟಿ.ಆರ್. ನೆಶ್ವಿಯ ಸ್ಥಾನಮಾನ ಹೆಚ್ಚಾದರೂ ಸಾಮಾನ್ಯರಂತೆಯೇ ಇದ್ದು ವಿಜಾಪುರ, ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ, ಆಡಳಿತ ಯಂತ್ರ ಸುಗಮವಾಗಿ ನಡೆಯುತ್ತಿರುವ ಬಗ್ಗೆ ಪರಿಶೀಲಿಸುತ್ತಿದ್ದರು.

"ಟಿ.ಆರ್. ನೆಶ್ವಿ ಲೋಕೋಪಯೋಗಿ ಖಾತೆಗೆ ಸಂಬಂಧಿಸಿದ್ದವರಾಗಿದ್ದರಿಂದ ಹಿರೇಕೆರೂರು, ಹಾನಗಲ್ಲು ತಾಲೂಕುಗಳ ಕೆರೆಗಳಿಗೆ ನೀರು ತುಂಬಿಸುವ ಕಾರ್ಯಕ್ಕೆ ಚಾಲನೆ ನೀಡಿದರು. ಸುಮಾರು ೭೫೦ರಿಂದ ೮೦೦ ಕೆರೆಗಳ ದುರಸ್ತಿಗೆ ವಿಶೇಷ ಕಾಳಜಿ ವಹಿಸಿದರು. ತಡಕನಹಳ್ಳಿಗೆ ಒಂದು ಗ್ರಾಮಾಂತರ ಆಸ್ಪತ್ರೆಯನ್ನು ಮಾಡಿಸಿದರು"[೨೦] ಎಂಬುದನ್ನು ಗುರುತಿಸಲಾಗಿದೆ.

**ರಾಜೀನಾಮೆ :** "೧೯೩೯ರ ಸೆಪ್ಟೆಂಬರ್ ೩ಕ್ಕೆ ದ್ವಿತೀಯ ಜಾಗತಿಕ ಮಹಾಯುದ್ಧ ಆರಂಭವಾದಾಗ, ಇಂಗ್ಲೆಂಡ್‌ನ ಯುದ್ಧ ನೀತಿಯನ್ನು ಪ್ರತಿಭಟಿಸಲು ದೇಶದ ಪ್ರಾಂತಗಳಲ್ಲಿ ಕಾಂಗ್ರೆಸ್ ಅಧಿಕಾರ ನಡೆಸುತ್ತಿತ್ತೋ ಅಲ್ಲಿಯ ಸರಕಾರಗಳು ೧೯೩೯ರ ಅಕ್ಟೋಬರ್ ಹಾಗೂ ನವೆಂಬರ್ ತಿಂಗಳಲ್ಲಿ ರಾಜೀನಾಮೆ ನೀಡಿ ಹೊರಬಂದವು. ಅದರಂತೆ ಟಿ.ಆರ್. ನೆಶ್ವಿ ರಾಜೀನಾಮೆಯಿತ್ತು ಊರಿಗೆ ಮರಳಿದರು."[೨೧] ಇತ್ತ ನೆಶ್ವಿ ಇದೇ ಯುದ್ಧನೀತಿಯನ್ನು ವಿರೋಧಿಸಿ ವೈಯಕ್ತಿಕ ಸತ್ಯಾಗ್ರಹ ಮಾಡಿ ಜೈಲು ಸೇರಿದ್ದು ಅವರು ಕೇವಲ ರಾಜಕೀಯ, ಅಧಿಕಾರ ಅಷ್ಟೇ ಅಲ್ಲ, ಚಳುವಳಿಯೂ ಎಷ್ಟು ಮುಖ್ಯವಾಗಿತ್ತು ಎಂಬುದಕ್ಕೆ ಸಾಕ್ಷಿಯಾದರು.

**ರಾಜಕೀಯ ಸಂತ್ರಸ್ತ ನಿಧಿ :** ಟಿ.ಆರ್. ನೆಶ್ವಿ ವೈಯಕ್ತಿಕ ಸತ್ಯಾಗ್ರಹ ಮಾಡಿ ಜೈಲು ಶಿಕ್ಷೆ ಮುಗಿಸಿಕೊಂಡು ಬಂದ ನಂತರ, ಚಳುವಳಿಗಾರರ ಕುಟುಂಬಗಳು ತುತ್ತು ಅನ್ನಕ್ಕೂ ಕಷ್ಟಪಡುತ್ತಿದ್ದ ವಿಷಯ ತಿಳಿದರು. ಅಂತ ಕುಟುಂಬಗಳಿಗೆ ನೆರವಾಗಬೇಕೆಂದು ದೊಡ್ಡಮೇಟಿ ಅಂದಾನೆಪ್ಪ ನವರೊಂದಿಗೆ ಚರ್ಚಿಸಿದರು. ನೆಶ್ವಿಯವರ ಈ ಯೋಜನೆಯನ್ನು ಹಳ್ಳಿಕೇರಿ ಗುದ್ಲೆಪ್ಪ, ಬಳ್ಳಾರಿ ಸಿದ್ದಮ್ಮ ಬೆಂಬಲಿಸಿದ್ದಲ್ಲದೆ ನೆಶ್ವಿಯೊಂದಿಗೆ ಹೆಜ್ಜೆ ಹಾಕಿದರು. ೨೭.೪.೧೯೪೪ರಂದು ಕಳಗೊಂಡದ ಒಂದು ಮದುವೆಗೆ ಹೋಗಿದ್ದ ನೆಶ್ವಿಯವರು ಅಲ್ಲಯೇ ೪೫ ರೂ. ಸಂಗ್ರಹಿಸಿದರು. ಒಂದು ಸಲ ಈ ಮೂವರು ನಿಧಿ ಸಂಗ್ರಹಕ್ಕಾಗಿ ಬಳ್ಳಾರಿಗೆ ಹೋಗಿ ತೊಗರಿ ವೀರಮಲ್ಲಪ್ಪನನ್ನು ಕಂಡು ಧನಸಹಾಯ ಮಾಡಲು ಕೇಳಿದಾಗ ಅವರು ಒಪ್ಪಿದರು. ಆದರೆ ತಾವು ಮಾಡುವ ಹಣಸಹಾಯ ವೀರಶೈವರಿಗೆ ಮಾತ್ರ ತಲುಪಬೇಕು ಎಂದಾಗ, ನೆಶ್ವಿಯವರು ರಾಜಕೀಯ ಸಂತ್ರಸ್ತರಲ್ಲಿ ಭೇದಭಾವ ಎಣಿಸಲು ಸಿದ್ಧರಾಗಲಿಲ್ಲ. ಹಾಗಾಗಿ ಅವರ ಸಹಾಯವನ್ನು ನಿರಾಕರಿಸಿದ್ದು ಜಾತಿಯಾಚೆ ನಿಂತು ಸಹಾಯಕ್ಕೆ ನಿಂತಿರುವುದನ್ನು ಗುರುತಿಸಲಾಗಿದೆ.

**ಮಹಿಳಾ ಪರಿಷತ್ತು :** ಟಿ.ಆರ್. ನೆಶ್ವಿ ಮಹಿಳೆಯರಲ್ಲಿ ಸಾಮಾಜಿಕ ಮತ್ತು ರಾಜಕೀಯ ಜಾಗೃತಿಯನ್ನುಂಟುಮಾಡುವ ಸದುದ್ದೇಶದಿಂದ ಮಹಿಳಾ ಸಮ್ಮೇಳನವನ್ನು "ಕೋಡ ತಾಲೂಕಾ ಪ್ರಾಥಮಿಕ ಮಹಿಳಾ ಪರಿಷತ್ತನ್ನು ಹಂಸಬಾವಿಯಲ್ಲಿ ೨೭.೫.೧೯೪ ರಂದು ಸಮಾವೇಶ ಮಾಡಿದರು. ಸಂಸ್ಥಾನ ಬರೋಡಾ ನಗರದಲ್ಲಿ ಲೇಡಿ ರೆಸಿಡೆಂಟ್ ಮೆಡಿಕಲ್ ಆಫೀಸರಾದ, ಭೋಗಾವಿಯ ರುದ್ರಗೌಡ ಪಾಟೀಲರ ಪತ್ನಿ ಡಾ. ಕೃಷ್ಣಬಾಯಿ ಪಾಟೀಲರು ಅಧ್ಯಕ್ಷತೆ ವಹಿಸಿದ್ದರು. ಸ್ವಾತಂತ್ರ್ಯ ಯೋಧೆ ದಾವಣಗೆರೆಯ ಬಳ್ಳಾರಿ ಸಿದ್ದಮ್ಮನವರು ಮುಖ್ಯ ಅತಿಥಿಯಾಗಿದ್ದರು. ಸ್ವಾಗತ ಸಮಿತಿಯಲ್ಲಿ ೩೨ ಮಹಿಳೆಯರ ಹೆಸರು ಗಳಿದ್ದದ್ದು, ಅತ್ಯಂತ

ವೈಭವಪೂರ್ಣವಾಗಿ ಜರುಗಿದ ಈ ಸಮ್ಮೇಳನ ಮಹಿಳೆಯರಲ್ಲಿ ರಾಜಕೀಯ ಜಾಗೃತಿಯನ್ನುಂಟು ಮಾಡುವಲ್ಲಿ ಯಶಸ್ವಿಯಾಯಿತು."[೨೨] ಟಿ.ಆರ್. ನೆಶ್ವಿ ಮಹಿಳೆಯರಿಗೆ ರಾಜಕೀಯ ಜಾಗೃತಿ ಮೂಡಿಸಲು ಪ್ರಯತ್ನಿಸಿರುವುದನ್ನು ಗುರುತಿಸಲಾಗಿದೆ.

**ಲೋಕಸಭಾ ಸದಸ್ಯ :** "೧೯೫೨ರ ಲೋಕಸಭಾ ಚುನಾವಣೆಯಲ್ಲಿ ಧಾರವಾಡ ದಕ್ಷಿಣದಿಂದ ನೆಶ್ವಿಯವರು ಆಯ್ಕೆಯಾದರು. ನಂತರ ೧೯೫೭ರಲ್ಲಿ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ಸಿನಿಂದ ಇವರಿಗೆ ಪುನಃ ಆಯ್ಕೆಯಾಗಲು ಶಿಫಾರಸ್ಸು ಮಾಡಿದವರಲ್ಲಿ ವೀರನಗೌಡ ಪಾಟೀಲ್ ಪ್ರಮುಖರು. ಆ ಚುನಾವಣೆಯಲ್ಲಿ ಎಸ್.ಕೆ. ಪಾಟೀಲರನ್ನು ಟಿ.ಆರ್. ನೆಶ್ವಿ ೭೮,೦೦೦ ಮತಗಳಿಂದ ಪರಾಭವಗೊಳಿಸಿದರು.

ಮೊದಲ ಸಲ ಲೋಕಸಭೆಯ ಸದಸ್ಯರಾಗಿದ್ದಾಗ ಲಂಚ ವಿರೋಧ ಹಾಗೂ ಬೇಸಾಯಕ್ಕೆ ಸಂಬಂಧಿಸಿದ ಎರಡು ಕಮೀಟಿಗಳಿಗೆ ಸದಸ್ಯರಾಗಿದ್ದರು. ಹತ್ತು ವರ್ಷಗಳ ಅವಧಿಯಲ್ಲಿ ರೇಲ್ವೆ, ಅಂಚೆ ಸಂಪರ್ಕ, ಟೆಲಿಫೋನ್ ಖಾತೆಗಳ ಸೌಕರ್ಯಗಳು ಗ್ರಾಮೀಣ ಪ್ರದೇಶದಲ್ಲಿ ಹಬ್ಬುವಂತೆ ಮಾಡಿದರು. ಜಾಮೀನು ಮೇಲೆ ಕೂಡುವ ಕರಾರುಗಳನ್ನು ತೆಗೆಸಿಹಾಕಿದರು. ಅವಶ್ಯವಿದ್ದಲ್ಲಿ ತ್ವರಿತವಾಗಿ ದೊರಕುವಂತೆ ವ್ಯವಸ್ಥೆ ಮಾಡಿದರು. ಅಂಚೆ, ಟೆಲಿಫೋನ್ ದೊರಕಿಸುವಲ್ಲಿ ಧಾರವಾಡ ಜಿಲ್ಲೆಯು ಆಗ ರಾಷ್ಟ್ರದಲ್ಲಿಯೇ ಮೊದಲನೆಯದಾಗಿತ್ತು ಎಂಬ ವಿವರವನ್ನು ನೆಶ್ವಿಯವರ ಒಡನಾಡಿ ಸಂಶೋಧಕ ಭೋಜರಾಜ ಪಾಟೀಲ ಹೇಳಿಕೆಯಿಂದ ಗುರುತಿಸಲಾಗಿದೆ.

**ಆತ್ಮೀಯರೆ ವಿರೋಧಿಗಳಾಗಿ ಟಿಕೆಟ್ ವಂಚಿತರಾದದ್ದು :** ೧೯೬೨ರ ಲೋಕಸಭೆಯ ಚುನಾವಣೆಗೆ ವೀರನಗೌಡ ಪಾಟೀಲ ಹಾಗೂ ಟಿ.ಆರ್.ನೆಶ್ವಿ ಲೋಕಸಭೆಗೆ ಸ್ಪರ್ಧಿಸಲು ಸುದೀರ್ಘ ಕಾಲದ ಸ್ನೇಹಿತರಾದ ಇವರು ಟಿಕೆಟಿಗಾಗಿ ತುರುಸಿನ ಸ್ಪರ್ಧೆ ಏರ್ಪಟ್ಟ ಪರಿಣಾಮ ಇವರೀರ್ವರನ್ನೂ ಬಿಟ್ಟು, ಮೂಲತಃ ಹಿರೇಕೆರೂರಿನ ತಾಲೂಕಿನವರಾದ ಮೊಹಸೀನರವರಿಗೆ ಕಾಂಗ್ರೆಸ್ ಟಿಕೇಟು ದೊರೆತ ಬಗ್ಗೆ ಬಿ.ಜಿ. ಬಣಕಾರ ಸಂದರ್ಶನದಲ್ಲಿ ನೆನಪಿಸಿಕೊಳ್ಳುತ್ತಾರೆ.

**ಕಾಂಗ್ರೆಸ್ ಬಿಟ್ಟರು :** ಟಿ.ಆರ್. ನೆಶ್ವಿ ಟಿಕೆಟ್ ಸಿಗದಿದ್ದಕ್ಕೆ ಅವರ ಅಭಿಮಾನಿಗಳು ಸ್ವತಂತ್ರವಾಗಿ ಸ್ಪರ್ಧಿಸಲು ಒತ್ತಾಯ ತಂದರು. 'ಪ್ರಜಾ ಸೋಶಿಯಲಿಸ್ಟ್' ಪಕ್ಷದ ಗೋವಿಂದರೆಡ್ಡಿ ನೆಶ್ವಿಯನ್ನು ಕಂಡ ತಮ್ಮ ಪಕ್ಷದಿಂದ ಸ್ಪರ್ಧಿಸಲು ಒತ್ತಾಯ ಮಾಡಿದರು. ಪರಿಣಾಮ ೧೩.೧.೧೯೬೨ರಂದು ಟಿ.ಆರ್. ನೆಶ್ವಿ ಪಕ್ಷಕ್ಕೆ ರಾಜೀನಾಮೆ ಸಲ್ಲಿಸಿದರು. "ಅಖಂಡ ೩೨ ವರ್ಷಗಳವರೆಗೆ ಕಾಂಗ್ರೆಸ್ ಪಕ್ಷದೊಂದಿಗಿದ್ದ ಅವರ ಸಂಬಂಧ ಘನ ನಿರಾಶೆಯೊಂದಿಗೆ ಅಂತ್ಯ ಕಂಡಿತು. ಕಾಂಗ್ರೆಸ್ ಪಕ್ಷವನ್ನು ಹಿರೇಕೆರೂರು ಹಾಗೂ ಸುತ್ತಲಿನ ತಾಲೂಕುಗಳಲ್ಲಿ ಗ್ರಾಮ ಮಟ್ಟದವರೆಗೂ ಮುಟ್ಟಿಸಿದ ಶ್ರೇಯಸ್ಸು ಅವರದು. ೧೯೩೭ರಲ್ಲಿ ಧಾರವಾಡ ಜಿಲ್ಲಾ ಕಾಂಗ್ರೆಸ್ ಕಮೀಟಿ ಅಧ್ಯಕ್ಷನಾಗಿ, ೧೯೪೭ರಿಂದ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮೀಟಿಯ ಉಪಾಧ್ಯಕ್ಷನಾಗಿ ಪಕ್ಷ ಕಟ್ಟುವಲ್ಲಿ, ಬೆಳೆಸುವಲ್ಲಿ ಶ್ರಮ ವಹಿಸಿದ್ದರು. ಚುನಾವಣಾ ಫಲಿತಾಂಶ

ಟಿ.ಆರ್.ನೆಶ್ವಿ ಜಯಶಾಲಿಯಾಗಲಿಲ್ಲ."[೨೨] ಇಲ್ಲಿಗೆ ಮನನೊಂದು ಟಿ.ಆರ್. ನೆಶ್ವಿ ರಾಜಕೀಯ ಜೀವನದಿಂದ ದೂರ ಸರಿದರು.

ಹೀಗೆ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ನಂತರವೂ ರಾಜಕೀಯದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಟಿ.ಆರ್. ನೆಶ್ವಿ ಆರಂಭದ ರಾಜಕಾರಣದಲ್ಲಿ ಆಂಗ್ಲರ ವಿರುದ್ಧ ಅಸಮಾಧಾನದ ರಾಜಕಾರಣ ಮಾಡಿದರು. ಸ್ವಾತಂತ್ರ್ಯ ನಂತರ ಮನಸ್ಸಿಗೆ ತೃಪ್ತಿಯಾಗುವಂತಹ ರಾಜಕಾರಣ ಮಾಡಲಾಗಲಿಲ್ಲವೆಂಬ ಕೊರಗು ಅವರಲ್ಲಿ ಕಾಡತೊಡಗಿತು. ಟಿ.ಆರ್. ನೆಶ್ವಿ ಕೊನೆಗಾಲದಲ್ಲಿ ಅವರ ಆಸ್ಪತ್ರೆಯ ಫೀ ಕಟ್ಟಲು ಪರದಾಡುವಂತಹ ಪ್ರಸಂಗ ಅವರದ್ದಾಗಿತ್ತು. ಇದು ಅವರ ವ್ಯಕ್ತಿತ್ವದ ಅನಾವರಣ ಗೋಚರಿಸುತ್ತದೆ ಎಂದು ಚಳುವಳಿಹಾರ ಪುಟ್ಟಪ್ಪ ಹರಭಿ, ಟಿ.ಆರ್. ನೆಶ್ವಿ ಒಡನಾಡಿ ಭೋಜರಾಜ ಪಾಟೀಲರ ಅಭಿಪ್ರಾಯವಾಗಿದೆ.

**ಹಳ್ಳಿಕೇರಿ ಗುದ್ಲೆಪ್ಪ**

ಹಳ್ಳಿಕೇರಿ ಗುದ್ಲೆಪ್ಪ ಪಕ್ಷನಿಷ್ಠರು, ತತ್ವನಿಷ್ಠರು, ಸ್ವಭಾವತಃ ನೇರ ನುಡಿ-ನಡೆ, ತತ್ವಾದರ್ಶ ಪಾಲನೆ ಸಲುವಾಗಿ ಮುರಿದುಕೊಂಡರೇ ಹೊರತು ಮಣಿಯಲಿಲ್ಲ. ಆದ್ದರಿಂದಲೇ ಮಹತ್ವದ ರಾಜಕೀಯ ಸ್ಥಾನಮಾನಗಳಿಂದ ವಂಚಿತರಾದರೆಂಬುದು ಇತಿಹಾಸ. ಇವರು ಬೆಂಬಲಿಸಿದವರು ಶಾಸಕರಾದರು, ಸಂಸದರಾದರು, ಮಂತ್ರಿಗಳಾದರು. ಮುಖ್ಯಮಂತ್ರಿಗಳೂ ಆದರೂ ಇವರಿಗೆ ಮಾತ್ರ ಹೇಳಿಕೊಳ್ಳುವಂಥ ಸ್ಥಾನಮಾನ ಸಿಗಲಿಲ್ಲ ಎಂದು ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ಹಾಗೂ ಪರಮಣ್ಣ ಹರಕ್ಕಂಗಿ ವಿವರ ನೀಡಿರುತ್ತಾರೆ. ಅಲ್ಲದೆ ಗುದ್ಲೆಪ್ಪ ಹಳ್ಳಿಕೇರಿಯ ಅರ್ಧ ಶತಮಾನದ ರಾಜಕೀಯ ಬದುಕಿನ ನಿಕಟವರ್ತಿ ಧಾರವಾಡದ ಸಿ.ಜೆ.ಕಮಲಾನಿ ಅಭಿಪ್ರಾಯ ಇದನ್ನು ಸಮರ್ಥಿಸುತ್ತದೆ.-

"Shri Gudleppa Hallikeri as long as he lived-was the uncrowned king in the Congress party of Dharwad District and he had tremendous influence in the neighboring districts. He was Secular in his approach and always encouraged youth. His boldness become a stumbling black for him to occupy higher posts in political life" ಇದು ಅಪ್ಪಟ ಸತ್ಯ ಎಂಬ ಉಲ್ಲೇಖವಿದೆ.

೧೯೪೬ರಲ್ಲಿ ಧಾರವಾಡ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಗುದ್ಲೆಪ್ಪ ಹಳ್ಳಿಕೇರಿ ೧೯೬೦ರವರೆಗೆ ಅವಿರೋಧವಾಗಿ ಅಧ್ಯಕ್ಷ ಪದವಿಯಲ್ಲಿದ್ದರು. ೧೯೫೨ರಲ್ಲಿ ಮೊರಾರ್ಜಿ ದೇಸಾಯಿ ಮುಂಬೈ ವಿಧಾನಸಭೆಯ ಚುನಾವಣೆಯಲ್ಲಿ ಸೋತಾಗ, ಅವರನ್ನೇ ಕಾಂಗ್ರೆಸ್‌ನ ಕೇಂದ್ರ ನಾಯಕರು(ನೆಹರೂರವರು) ಮುಖ್ಯಮಂತ್ರಿಯನ್ನಾಗಿ ಘೋಷಿಸಿದರು. ಪ್ರಜಾಪ್ರಭುತ್ವವಾದಿಯಾದ ಗುದ್ಲೆಪ್ಪ, ಸೋತ ಒಬ್ಬ ಮನುಷ್ಯನನ್ನು ರಾಜ್ಯದ ಮುಖ್ಯಮಂತ್ರಿಯನ್ನಾಗಿ ಆರಿಸುವುದು ಅನೀತಿ, ಅನ್ಯಾಯವೆಂದು ಹೇಳಿ ಬಲವಾಗಿ ವಿರೋಧಿಸಿದರು. ಇದು ಅವರ ರಾಜಕೀಯ ಜೀವನದ ಮೇಲೆ ಪ್ರತಿಕೂಲ ಪರಿಣಾಮ ಬೀರಿತು. ಮುಂದೆ ಕಾಂಗ್ರೆಸ್ ವರಿಷ್ಠ ಮಂಡಳಿ, ಅವರಿಗೆ

ವಿಧಾನಸಭೆಗೆ ಸ್ಪರ್ಧಿಸಲು ಟಿಕೆಟ್ ನೀಡಲು ನಿರಾಕರಿಸಿತು."[೨೪] ಹೀಗೆ ಅಂದು ನುಡಿದ ನೇರ ಮಾತುಗಳಿಂದ ಇವರು ಕೊನೆಯವರೆಗೂ ಮೊರಾರ್ಜಿಯ ಅವಕೃಪೆಗೆ ತುತ್ತಾದ ಬಗ್ಗೆ ಚಳುವಳಿಗಾರರು ಅಭಿಪ್ರಾಯಪಡುತ್ತಾರೆ.

ಕರ್ನಾಟಕದ ಶಿಲ್ಪಿ ಖ್ಯಾತಿಯ ಎಸ್.ನಿಜಲಿಂಗಪ್ಪ ಹಳ್ಳಿಕೇರಿ ಗುದ್ಲೆಪ್ಪಗೆ ಆತ್ಮೀಯತೆಯಿತ್ತು. ಅವರಿಗೆ ಹಲವು ರೀತಿಯಲ್ಲಿ ಸಹಾಯ-ಸಹಕಾರ ನೀಡಿದವರು. ಎಸ್.ನಿಜಲಿಂಗಪ್ಪನವರನ್ನು ಶಿಗ್ಗಾವಿ ಕ್ಷೇತ್ರದಿಂದ ಅವಿರೋಧವಾಗಿ ಆಯ್ಕೆ ಮಾಡಿದ ಕೀರ್ತಿ ಗುದ್ಲೆಪ್ಪನದು. ಎಸ್. ನಿಜಲಿಂಗಪ್ಪ ಕರ್ನಾಟಕದ ಮುಖ್ಯಮಂತ್ರಿಯಾದಾಗಲೂ ಹಳ್ಳಿಕೇರಿ ಗುದ್ಲೆಪ್ಪಗೆ ಯಾವ ಸ್ಥಾನಮಾನ ಲಭಿಸಲಿಲ್ಲ ಎಂಬುದು ವಿಶೇಷ. ತಮ್ಮ ಜೀವನದ ಕೊನೆಯ ಭಾಗದಲ್ಲಿ ಕರ್ನಾಟಕ ವಿಧಾನಸಭೆಯ ಸಭಾಪತಿಯಾದ ಬಗ್ಗೆ ಬಿ.ಜಿ.ಬಣಕಾರ ಹೇಳಿಕೆಯಿಂದ ಗುರುತಿಸಲಾಗಿದೆ.

**ಕೆ.ಎಫ್. ಪಾಟೀಲ**

ಕೆ.ಎಫ್. ಪಾಟೀಲ್ ೧೯೩೬ರಲ್ಲಿ ಜಿಲ್ಲಾ ಬೋರ್ಡ್ ಸದಸ್ಯರಾಗಿ, ರಾಣೆಬೆನ್ನೂರಿಂದ ಆಯ್ಕೆಯಾದರು. ನಂತರದಲ್ಲಿ ತಿ.ರು. ನೆಶ್ವಿ, ಸಿ.ಎಸ್. ಹುಲಕೋಟಿ ಇವರನ್ನು ೧೯೩೯ರಲ್ಲಿ ಜಿಲ್ಲಾ ಸ್ಕೂಲ್ ಬೋರ್ಡಿನ ಶಾಸನಸಭೆಗೆ ಆಯ್ಕೆಯಾಗುವಂತೆ ಶ್ರಮಿಸಿದರು.[೨೭] ಇವರ ಇನ್ನಿತರ ಕೊಡುಗೆಗಳೆಂದರೆ-

* "೧೮೩೭ರಿಂದ ಜಿಲ್ಲಾ ಲೋಕಲ್ ಬೋರ್ಡ್ ಸದಸ್ಯರಾಗಿ(ಆರು ವರ್ಷ) ಹಾಗೂ ೧೯೩೯ರಿಂದ ೧೯೪೩ರವರೆಗೆ ಜಿಲ್ಲಾ ಸ್ಕೂಲ್‌ಬೋರ್ಡ್ ಚೇರಮನ್ನರಾಗಿ ಮತ್ತು ೧೯೪೨ ರಿಂದ ೧೯೪೩ರ ಮಾರ್ಚ್ ಅಂತ್ಯದವರೆಗೆ ಬ್ಯಾಡಗಿ ನಗರಸಭಾ ಅಧ್ಯಕ್ಷರಾಗಿ ಜನ ಮೆಚ್ಚುವ ರೀತಿಯಲ್ಲಿ ಅಧಿಕಾರ ಮಾಡಿದರು.

* ೧೯೪೬ರಲ್ಲಿ ರಾಣೆಬೆನ್ನೂರನಲ್ಲಿ ದ್ವಿಸದಸ್ಯ ಮತದಾರ ಸಂಘದಲ್ಲಿ ಯಲ್ಲವ್ವ ಸಾಂಬ್ರಾಣಿಯವರ ಜೊತೆ ಮುಂಬೈ ವಿಧಾನಸಭೆಗೆ ಸ್ಪರ್ಧಿಸಿ ಗೆದ್ದರು.

* ೧೯೫೨ರಲ್ಲಿ ಮುಂಬೈ ರಾಜ್ಯ ಸರಕಾರದ ಒಕ್ಕಲುತನ ಹಾಗೂ ಅರಣ್ಯ ಖಾತೆಯ ಉಪಸಚಿವರಾಗಿ ಮೊರಾರ್ಜಿ ದೇಸಾಯಿ ಸಂಪುಟದಲ್ಲಿ ಸೇವೆ ಸಲ್ಲಿಸಿದ್ದಾರೆ.

* ೧೯೫೬ ರಿಂದ ಹನುಮನಮಟ್ಟಿಯಲ್ಲಿ 'ಗ್ರಾಮಸೇವಾ ಮಂಟಪ'ವನ್ನು ಸ್ಥಾಪಿಸಿ, ಆ ಮೂಲಕ ಹನುಮನಮಟ್ಟಿ, ರಾಣೆಬೆನ್ನೂರು, ನೂಕಾಪುರ, ಬ್ಯಾಡಗಿಗಳಲ್ಲಿ ಹರಿಜನ, ಲಂಬಾಣಿ, ವಾಲ್ಮೀಕಿ ಹಾಗೂ ಹಿಂದುಳಿದವರಿಗಾಗಿ ಹೌಸಿಂಗ್ ಸೊಸೈಟಿಗಳನ್ನು ನಿರ್ಮಿಸಿ ದುರ್ಬಲ ಜನರಿಗಾಗಿ ಮನೆಗಳನ್ನು ನಿರ್ಮಿಸಿಕೊಡುವಲ್ಲಿ ಪ್ರಮುಖ ಪಾತ್ರವಹಿಸಿದವರು.

* ೧೯೫೭ರಲ್ಲಿ ಬ್ಯಾಡಗಿ-ರಾಣೆಬೆನ್ನೂರು ತಾಲೂಕುಗಳ ವತಿಯಿಂದ ನೂತನ ಮೈಸೂರ ರಾಜ್ಯದ ಶಾಸಕರಾಗಿ ಆಯ್ಕೆಗೊಂಡರು."[೨೫]

* ೧೯೭೨ರಲ್ಲಿ ಬ್ಯಾಡಗಿ ತಾಲೂಕನ್ನು ಪ್ರತಿನಿಧಿಸುವ ಮೈಸೂರು ರಾಜ್ಯದ ಶಾಸನ ಸಭೆಯ ಸದಸ್ಯರಾದರು. ಅರಣ್ಯಾಭಿವೃದ್ಧಿ ಸಂಸ್ಥೆಯ ಚೇರಮನ್‌ರಾಗಿ ಹಾಗು ೧೯೭೮ರಿಂದ ೧೯೮೦ರವರೆಗೆ ಕೇಂದ್ರ ಸರಕಾರ ರಚಿತ ಸ್ವಾತಂತ್ರ್ಯ ಯೋಧರ ಸಲಹಾ ಸಮಿತಿಯ ಸದಸ್ಯರಾಗಿ ಹಾಗೂ ಕೆಲಕಾಲ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ವಿವರವನ್ನು ಉಲ್ಲೇಖಗಳಿಗೆ ಹಲವು ಚಳುವಳಿಗಾರರ ಹೇಳಿಕೆಗಳಿಂದ ಸ್ಪಷ್ಟಪಡಿಸಲಾಗಿದೆ.

**ಶ್ರೀಮತಿ ಸಿದ್ದಮ್ಮ ಮಹದೇವಪ್ಪ ಮೈಲಾರ**

ಹಾವೇರಿ ಜಿಲ್ಲೆಯ ಚಳುವಳಿಯಲ್ಲಿ ಮಹಿಳೆಯರಿಗೂ ವಿಶೇಷವಾದ ಸ್ಥಾನಮಾನ ಇರುವಂತೆ ರಾಜಕೀಯ ಕ್ಷೇತ್ರದಲ್ಲಿಯೂ ಮಹಿಳೆಯರು ಛಾಪು ಮೂಡಿಸಿದ್ದನ್ನು ಗಮನಿಸಬಹುದಾಗಿದೆ.

"೧೯೫೭ರ ಲೋಕಸಭೆ ಮತ್ತು ವಿಧಾನಸಭೆ ಕ್ಷೇತ್ರಗಳ ಡಿಲಿಮಿಟೇಶನ್ ಆದೇಶದ ಅನುಸಾರ ಧಾರವಾಡ ಜಿಲ್ಲೆಯಲ್ಲಿ ಎರಡು ಲೋಕಸಭಾ ಸ್ಥಾನಗಳು, ೧೬ ವಿಧಾನಸಭಾ ಕ್ಷೇತ್ರಗಳನ್ನು ರಚಿಸಲಾಯಿತು. ರಾಣೆಬೆನ್ನೂರು ಕ್ಷೇತ್ರ ಎರಡು ಸ್ಥಾನಗಳನ್ನು ಒಳಗೊಂಡಿದ್ದು, ಒಂದು ಪರಿಶಿಷ್ಟ ಜಾತಿಗೆ ಮೀಸಲಾಗಿ ವಿಂಗಡಿಸಲಾಗಿತು."[೨೬]

ಸಿದ್ದಮ್ಮ ಮೈಲಾರ ೧೯೫೭ರ ಚುನಾವಣೆಗೆ ಸ್ಪರ್ಧಿಸಿ ಗೆಲ್ಲುವುದರ ಮೂಲಕ ಹಾವೇರಿ ಪ್ರಥಮ ಶಾಸಕಿ ಎಂಬ ಖ್ಯಾತಿ ಇವರಿಗಿದೆ. ಶಾಸಕಿಯಾದ ಸಮಯದಲ್ಲಿ ಮೋಟೆಬೆನ್ನೂರು, ಬ್ಯಾಡಗಿ ಭಾಗದ ಸಾರ್ವಜನಿಕರು, ಸ್ವಾತಂತ್ರ್ಯ ಚಳುವಳಿಗಾರರು ಹುತಾತ್ಮ ಮಹದೇವಪ್ಪ ಮೈಲಾರ, ವೀರಯ್ಯ ಹಿರೇಮಠ ಮತ್ತು ತಿರುಕಪ್ಪ ಮಡಿವಾಳರ ಸಮಾಧಿಗೆ ಹೊಸ ಯೋಜನೆ ರೂಪಿಸಬೇಕೆಂದು ಕೇಳಿಕೊಂಡಾಗ ಸಿದ್ದಮ್ಮ ಈ ವಿಷಯ ನನ್ನ ಸ್ವಂತ ಕಾರ್ಯವಾಗುತ್ತೆ; ಹಾಗಾಗಿ ಈ ಕಾರ್ಯ ಮಾಡಲು ನನ್ನಿಂದ ಸಾಧ್ಯವಿಲ್ಲವೆಂದು ಹೇಳಿ ನಿಸ್ವಾರ್ಥ ರಾಜಕಾರಣಕ್ಕೆ ಸಾಕ್ಷಿಯಾದ ಘಟನೆ ಸ್ಮರಣಾರ್ಹ.

ಮೂರನೆಯ ಬಾರಿಗೆ ಚುನಾವಣೆಗಳು ಬರುವ ವೇಳಗೆ ಮೋಟೆಬೆನ್ನೂರು ಬ್ಯಾಡಗಿ ತಾಲೂಕಿಗೆ ಸೇರಿತು. ಸಾಹಿತಿ ಮಹದೇವ ಬಣಕಾರನ್ನು ಪಿ.ಎಸ್.ಪಿ. ಪಕ್ಷ ತನ್ನ ಉಮೇದುವಾರನೆಂದು ಘೋಷಿಸಿತು. ಮಹದೇವ ಬಣಕಾರ ಸಿದ್ದಮ್ಮನನ್ನು ತಾಯಿಯಂತೆ ಕಾಣುತ್ತಿದ್ದರು. ಹಾಗಾಗಿ ಸಿದ್ದಮ್ಮ ಮೈಲಾರ ರಾಜಕೀಯದಿಂದ ಹಿಂದೆ ಸರಿಯಲು ನಿರ್ಧರಿಸಿದರು. ಆದರೆ ಕಾಂಗ್ರೆಸ್ ಪಕ್ಷ ಒತ್ತಾಯವಾಗಿ ಚುನಾವಣೆಗೆ ಟಿಕೆಟ್ ನೀಡಿತು. ಈ ಚುನಾವಣೆಯಲ್ಲಿ ಒಂದು ಮಹತ್ವಪೂರ್ಣವಾದ ಘಟನೆ ನಡೆಯಿತು.

ಸಿದ್ದಮ್ಮ ಮೈಲಾರ ತಮ್ಮ ಸಂಗಡಿಗರೊಂದಿಗೆ ಸೂಡಂಬಿ ಗ್ರಾಮಕ್ಕೆ ಪ್ರಚಾರಕ್ಕೆ ಹೋಗಿ ಬರುವಾಗ ಇವರ ಕಾರು ಕೆಟ್ಟು ದಾರಿ ಮಧ್ಯ ನಿಂತಿತ್ತು. ಸ್ವಲ್ಪಹೊತ್ತಿನ ನಂತರ ಮಹದೇವ ಬಣಕಾರರು ಪ್ರಚಾರದಿಂದ ಅದೇ ದಾರಿಯಲ್ಲಿ ಬಂದರು. ವಿಷಯ ತಿಳಿದು ತಮ್ಮ ಕಾರಿನಲ್ಲಿ ಬ್ಯಾನರ್‌ಗಳನ್ನು ಸಿದ್ದಮ್ಮರ ಕಾರಿಗೆ ಸಿದ್ದಮ್ಮರ ಕಾರಿನ ಬ್ಯಾನರ್‌ಗಳನ್ನು ತಮ್ಮ ಕಾರಿಗೆ ಕಟ್ಟಿಸಿ

“ಅವ್ವಾ ನೀವೀ ಕಾರಿನಲ್ಲಿ ಹೊರಡಿ. ಹೆಣ್ಣುಮಕ್ಕಳು ದೂರ ನಡೆಯುವುದಕ್ಕಾಗಲ್ಲ. ನಾವು ನಡಕೊಂಡು ಬರುತ್ತೇವೆ. ನಿಮ್ಮ ಕಾರಿನ ರಿಪೇರಿ ನಾವು ಮಾಡಿಸಿ ನಿಮಗೆ ಮುಟ್ಟಿಸುತ್ತೇವೆ ಎಂದು ಹೇಳಿ ಸಿದ್ದಮ್ಮ ಮತ್ತು ಅವರ ಸಹಾಯಕರನ್ನು ತಮ್ಮ ಕಾರಿನಲ್ಲಿಯೇ ಕಳುಹಿಸಿಕೊಟ್ಟರು.”[೨೭] ಮಹದೇವ ಬಣಕಾರರು ನಡೆದುಕೊಂಡೆ ಮೋಟೆಬೆನ್ನೂರು ಸೇರಿದರು. ಈ ಘಟನೆ ಸ್ವಾತಂತ್ರ್ಯ ನಂತರದ ಆರಂಭದ ರಾಜಕಾರಣಕ್ಕೆ ಸಾಕ್ಷಿಯಾಗಿದೆ.

“ಚುನಾವಣೆಯಲ್ಲಿ ಸಿದ್ದಮ್ಮ ಆಯ್ಕೆಯಾದರು. ಈ ಸಮಯದಲ್ಲಿ ೧೯೬೩ರಲ್ಲಿ ಕಂದಾಯ ಮಂತ್ರಿಯಾದ ಎಂ.ವಿ.ಕೃಷ್ಣಪ್ಪನವರಿಗೆ ತಮ್ಮ ಕ್ಷೇತ್ರ ಬ್ಯಾಡಗಿಯಲ್ಲಿ ತಾಲೂಕು ಕಛೇರಿ ಬ್ಯಾಡಗಿ ಮನೆಯಲ್ಲಿ ನಡೆಯುತ್ತಿದ್ದು, ಅದಕ್ಕೆ ಸರಕಾರಿ ಜಾಗೆಯನ್ನು ಮುಂಜೂರು ಮಾಡಬೇಕೆಂದು ಕೇಳಿಕೊಂಡರು. * ಸದನದಲ್ಲಿ ಸಣ್ಣ ನೀರಾವರಿ ಖಾತೆ ಮಂತ್ರಿಯಾಗಿದ್ದ ಆಲೂರು ಹನುಮಂತಪ್ಪನವರಿಗೆ ತಮ್ಮ ಕ್ಷೇತ್ರದ ಹೊಮ್ಮರಡಿ ಕೆರೆ ಹಾಗೂ ಕಾಲುವೆ ಮುಚ್ಚಿ ರೈತರ ಜಮೀನಿಗೆ ತೊಂದರೆಯಾಗಿದೆ ಅದನ್ನು ಸರಿಪಡಿಸಬೇಕೆಂದು ಕೇಳಿಕೊಂಡಾಗ ಮಂತ್ರಿಗಳು ಇವರ ಬೇಡಿಕೆಗಳಿಗೆ ಸ್ಪಂಧಿಸಿದಿರು. * ಎಸ್. ನಿಜಲಿಂಗಪ್ಪನವರಿಗೆ ‘ಮಾನ್ಯ ಮುಖ್ಯಮಂತ್ರಿಗಳೇ ದಯಮಾಡಿ ನಮ್ಮ ಭಾಗದ ಕೆರೆಗಳಿಗೆ ನೀರುಣಿಸುವ ಕಾರ್ಯ ಮಾಡಿ ಪುಣ್ಯ ಕಟ್ಟಿಕೊಳ್ಳಿ.”[೨೮] ಎಂದು ಕೇಳಿಕೊಂಡಿದ್ದು ಅವರು ರೈತಪರ ಕಾಳಜಿಗೆ ಸಾಕ್ಷಿಯಾಗಿದೆ.

ಸಿದ್ದಮ್ಮನವರು ನಂತರದ ಚುನಾವಣೆಯಲ್ಲಿ ಸೋಲನುಭವಿಸಿದರು. ಇವರ ವಿರುದ್ಧ ಮಹದೇವ ಬಣಕಾರರು ವಿಜಯಿಯಾದರು. ಆದರೆ ಸಿದ್ದಮ್ಮನವರು ಇಲ್ಲಿಂದ ತಮ್ಮ ರಾಜಕೀಯ ಜೀವನವನ್ನು ತ್ಯಜಿಸಿದರು.

**ಲೀಲಾವತಿ ವೆಂಕಟೇಶ ಮಾಗಡಿ**

ಜಿಲ್ಲೆಯ ಮತ್ತೊಬ್ಬ ಸ್ವಾತಂತ್ರ್ಯಯೋಧೆ ಲೀಲಾವತಿ ವೆಂಕಟೇಶ ಮಾಗಡಿ “೧೯೫೭ ಮತ್ತು ೧೯೬೭ರಲ್ಲಿ ಇವರು ಕರ್ನಾಟಕ ಶಾಸನಸಭಾ ಸದಸ್ಯರಾಗಿ ಆಯ್ಕೆಗೊಂಡರಲ್ಲದೆ ೧೯೬೮ರಲ್ಲಿ ವೀರೇಂದ್ರ ಪಾಟೀಲರ ಸಂಪುಟದಲ್ಲಿ ಸಚಿವೆಯಾಗಿ, ಹುಬ್ಬಳ್ಳಿಯಲ್ಲಿಯ ಅಖಿಲ ಕರ್ನಾಟಕ ಖಾದಿ ಗ್ರಾಮೋದ್ಯೋಗ ಕೇಂದ್ರದಲ್ಲಿ ಸೇವೆ ಸಲ್ಲಿಸಿದ್ದಾರೆ.”[೨೯] ಹೀಗೆ ಜನಪರ ಕಾರ್ಯ ಮಾಡಿದ ಕೀರ್ತಿಗೆ ಪಾತ್ರರಾಗಿದ್ದಾರೆ.

**ನಾಗಮ್ಮ ವೀರನಗೌಡ ಪಾಟೀಲ**

೧೯೩೭ರ ಚುನಾವಣೆಯಲ್ಲಿ ನಾಗಮ್ಮ ರಾಣೆಬೆನ್ನೂರು ಕ್ಷೇತ್ರದಿಂದ ಕಾಂಗ್ರೆಸ್ ನಾಯಕರುಗಳ ಅಪೇಕ್ಷೆಯ ಮೇರೆಗೆ ಚುನಾವಣೆಗೆ ಸ್ಪರ್ಧಿಸಿದರು. ಇವರ ವಿರುದ್ಧ ಬೆಳಗಾವಿಯ ರಾವ್ ಬಹದ್ದೂರ ಅಂಗಡಿ ಪತ್ನಿ ಪದ್ಮಾವತಿ ಸ್ಪರ್ಧಿಸಿದ್ದರು. ಈ ಚುನಾವಣೆಯಲ್ಲಿ ಕೆ.ಎಫ್. ಪಾಟೀಲ, ಟಿ.ಆರ್. ನೆಶ್ವಿ ಮತ್ತು ಪತಿ ವೀರನಗೌಡ ಪಾಟೀಲ ನಾಗಮ್ಮನ ಗೆಲುವಿಗಾಗಿ ಚುನಾವಣೆಯಲ್ಲಿ ಶ್ರಮಿಸಿದವರು. ನಾಗಮ್ಮ ಜಯಗಳಿಸಿದರು.

"ನಾಗಮ್ಮ ಪಾಟೀಲ ರಾಜಕೀಯದ ಬಗ್ಗೆ ಅವರ ಮಗಳು ಲೀಲಾವತಿ ಮಾಗಡಿ ಉಲ್ಲೇಖಿಸಿರುವಂತೆ 'ನನ್ನ ತಾಯಿಯವರೇ ಮುಂಬಯಿ ಅಸೆಂಬ್ಲಿಯಲ್ಲಿ ಕನ್ನಡ ಭಾಷೆಯಲ್ಲಿ ಮಾತನಾಡಿದ ಪ್ರಥಮ ಮಹಿಳೆ' ಎಂದು ತಾಯಿಯ ಭಾಷಾಭಿಮಾನದ ಬಗ್ಗೆ ಉಲ್ಲೇಖಿಸಿದ್ದಾರೆ."[೩೦] ನಂತರದಲ್ಲಿ "೧೯೪೦ರಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡುವುದರ ಸಲುವಾಗಿ ನಾಗಮ್ಮ ತಮ್ಮ ಹುದ್ದೆಗೆ ರಾಜೀನಾಮೆ ನೀಡಿ, ವೈಯಕ್ತಿಕ ಸತ್ಯಾಗ್ರಹ ಮಾಡಿ ಜೈಲು ಸೇರಿದರು."[೩೧] ನಾಗಮ್ಮ ರಾಜಕಾರಣ, ಅಧಿಕಾರ ಅಷ್ಟೇ ಅಲ್ಲ ಚಳುವಳಿಯಲ್ಲಿಯೂ ಅವರು ಎಷ್ಟು ಮಹತ್ವ ನೀಡಿದ್ದರು ಎಂಬುದಕ್ಕೆ ಸಾಕ್ಷಿಯಾಗಿದೆ.

**ಗ.ಮ. ಹಾಲಪ್ಪ** : ಗವಳಿವಾಡೆ, ಮಹಾವೀರ ಬೀದಿ, ರಾಣೆಬೆನ್ನೂರು.

"೧೯೪೭-೧೯೪೮ರಲ್ಲಿ ಹೈದರಾಬಾದ್ ವಿಮೋಚನ ಚಳುವಳಿಯಲ್ಲಿ ಭಾಗವಹಿಸಿದವರು. ಅಳವಂಡಿ ಶಿವಮೂರ್ತಿ ಸ್ವಾಮಿಯವರ ನಾಯಕತ್ವದಲ್ಲಿ ಇವರು ಮತ್ತು ಮುಂಡರಗಿಯ ಬಿ.ಜಿ.ಹೂಲಿ ಸೇರಿ ಶಿಬಿರ ತೆರೆದರು. ಕಾರಣ ರಜಾಕಾರರ ಹಾವಳಿಯಿಂದ ಓಡಿಬಂದ ಸಂತ್ರಸ್ತರಿಗೆ ಶಿಬಿರದಲ್ಲಿ ಆಶ್ರಯ ನೀಡಿದರು. ಇವರ ಈ ಕಾರ್ಯವನ್ನು ನೋಡಿದ ಮುಂಬಯಿ ಪ್ರಾಂತದ ಬಿ.ಜಿ.ಖೇರ ಮಂತ್ರಿ ಮಂಡಲದಲ್ಲಿದ್ದ ಕೆ.ಎಫ್. ಪಾಟೀಲ್ ಮೆಚ್ಚುಗೆ ಸೂಚಿಸಿದ್ದು"[೩೨] ಇವರ ಕಾರ್ಯಕ್ಷಮತೆಗೆ ಸಾಕ್ಷಿಯಾಗಿದೆ.

**ವೀರಭದ್ರಪ್ಪ ನ್ಯಾಮತಿ** : ಚಳುವಳಿಯೊಂದಿಗೆ ಹರಿಜನ ಸೇವಾಕಾರ್ಯಗಳಿಂದ ರಾಷ್ಟ್ರ ನಾಯಕರಿಂದ ಸ್ಮರಿಸಲ್ಪಟ್ಟವರು. ಇವರನ್ನು ಜಿಲ್ಲೆಯ ಚಳುವಳಿಯ ನಾಯಕರುಗಳು ಗೌರವದಿಂದ ಗಾಂಧಿಯೆಂದೇ ಕರೆಯುತ್ತಿದ್ದರು. ಇಂಥ ಚಳುವಳಿಯ ನಾಯಕರು ಹಿರೇಕೆರೂರಿನ ಪಂಚಾಯಿತಿ ಚುನಾವಣೆಗೆ ಬೆಂಬಲಿಗರ ಒತ್ತಾಯಕ್ಕೆ ಮಣಿದು ಚುನಾವಣೆಗೆ ಸ್ಪರ್ಧಿಸಿದರು. ಇವರ ರಾಜಕೀಯ ವಿರೋಧಿಗಳು ಇವರ ಬಗ್ಗೆ "ಹಿರೇಕೆರೂರಿನ ದುರ್ಗಾದೇವಿಯ ಕೋಣನ ಬಲಿ ವಿಷಯವನ್ನು ರಾಜಕೀಯ ಲಾಭಕ್ಕಾಗಿ ಈ ಮುದುಕ ಚುನಾವಣೆಯಲ್ಲಿ ಆರಿಸಿಬಂದರೆ ನಮ್ಮ ಊರಿನ ದುರ್ಗಾದೇವಿಗೆ ಕೋಣವನ್ನು ಬಲಿ ನೀಡಲು ಬಿಡುವುದಿಲ್ಲ. ನಮಗೆ ದುರ್ಗಾಮಾತೆ ಮುಖ್ಯ. ಅದಕ್ಕಾಗಿ ಆ ಮುದುಕನನ್ನು ಗೆಲ್ಲಿಸಬಾರೆಂದು ಜನರಿಗೆ ಪ್ರಚಾರ ಮಾಡತೊಡಗಿದರು."[೩೩] ಹಾಗೆಂದು ಅದು ಅಪಪ್ರಚಾರವಾಗಿರಲಿಲ್ಲ. ಅಹಿಂಸಾ ನೀತಿಯಲ್ಲಿ ಅಪಾರ ನಂಬಿಕೆ ಇಟ್ಟುಕೊಂಡಿದ್ದ ವೀರಭದ್ರಪ್ಪ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಹಿರೇಕೆರೂರಿನ ಜಾತ್ರೆಗೆ ಕೋಣ ಬಲಿ ನೀಡುವುದನ್ನು ವಿರೋಧಿಸಿದ್ದರು. ಈಗ ಚುನಾವಣೆಯಲ್ಲಿ ಆ ವಿಷಯವನ್ನು ಈ ರೀತಿಯಲ್ಲಿ ಪ್ರಚಾರ ಮಾಡತೊಡಗಿದರು. ವಿರೋಧಿಗಳ ಪ್ರಚಾರದಂತೆ ವೀರಭದ್ರಪ್ಪ ಸೋತರು. ಇದರಿಂದ ವೀರಭದ್ರಪ್ಪ ನೊಂದುಕೊಂಡರೂ ತಾವು ಮಾಡುತ್ತಿದ್ದ ಸಾಮಾಜಿಕ ಕಾರ್ಯವನ್ನು ನಿಲ್ಲಿಸಲಿಲ್ಲ.

ವೀರಭದ್ರಪ್ಪ ನ್ಯಾಮತಿ ಸೋತ ವಿಷಯ ತಿಳಿದ ಆನವಟ್ಟಿ ಹೋಬಳಿಯ ಉದ್ರಿ ಗ್ರಾಮದ ದೇಸಾಯಿ ಪಾರ್ವತಮ್ಮ ಹಿರೇಕೆರೂರಿಗೆ ಬಂದು ಇವರನ್ನು ಕಂಡು ತುಂಬಾ ನೊಂದುಕೊಂಡರು.

ಇಂಥ ಮಹಾನ್ ವ್ಯಕ್ತಿಯನ್ನು ಸೋಲಿಸಿದರು"[೩೪] ಎಂದು ಗೋಳಿಟ್ಟರು. ಜನತೆ ಚುನಾವಣೆಯ ಸಮಯದಲ್ಲಿ ಚಳುವಳಿಗಾರನ ಸಾಧನೆಯನ್ನು ಗುರುತಿಸಲಿಲ್ಲ, ಬದಲಾಗಿ ರಾಜಕೀಯ ಲಾಭಕ್ಕೆ ಚುನಾವಣೆ ನಡೆದಿರುವುದಕ್ಕೆ ಸಾಕ್ಷಿಯೆನ್ನಬಹುದು.

**ಸಿದ್ದಪ್ಪ ಹೊಸಮನಿ**

ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರ ಹೊಸಮನಿ ಸಿದ್ದಪ್ಪ ೧೯೨೨ರಿಂದ ೧೯೩೨ರವರೆಗೆ ಹಾವೇರಿಯ ಮುನಿಸಿಪಾಲಿಟಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಆ ಅವಧಿಯಲ್ಲಿ ಯೂರೋಪಿಯನ್ ಕಲೆಕ್ಟರ್ ಬರುತ್ತಾರೆ ಎಂದು ನೌಕರರ ವರ್ಗ ಇವರನ್ನು ಭಿನ್ನವಿಸಿದರು. ಸಿದ್ದಪ್ಪ ಹೊಸಮನಿ ಆಫೀಸಿನಲ್ಲಿ ನನ್ನದೇನು ಕೆಲಸ? ಕಾಗದ ಪತ್ರಗಳಿವೆ, ಅಧಿಕಾರಿಗಳಿದ್ದಾರೆ ನೋಡಿಕೊಂಡು ಹೋಗಲು ತಿಳಿಸಿರಿ ಎನ್ನುವ ಇವರಲ್ಲಿ ಆಂಗ್ಲ ಅಧಿಕಾರಿಯ ಭಯ ಇಲ್ಲದಿರುವುದನ್ನು ಗಮನಿಸಬಹುದು.

"೧೯೩ರಲ್ಲಿ ಧಾರವಾಡ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ ಪಕ್ಷವನ್ನು ಮತ್ತಷ್ಟು ಬಲಪಡಿಸಿದರು. ಇವರ ರಾಜಕೀಯ ಶಕ್ತಿಯನ್ನು ಗಮನಿಸಿದ್ದ ಕಾಂಗ್ರೆಸ್ ನಾಯಕರು ಸಿದ್ದಪ್ಪ ಹೊಸಮನಿಯನ್ನು ೧೯೩೪ರಲ್ಲಿ ಆರು ಜಿಲ್ಲೆಗಳಿಂದ ನಡೆಯುವ ಚುನಾವಣೆಗೆ ನಿಲ್ಲಿಸಿ ಕೇಂದ್ರ ಲೆಜಿಸ್ಲೇಟಿವ್ ಅಸೆಂಬ್ಲಿಗೆ ಪ್ರಚಂಡ ಬಹುಮತದಿಂದ ಆರಿಸಿ ಕಳುಹಿಸಿದರು.

**ಕಾಂಗ್ರೆಸ್ ಬಿಟ್ಟರು** : ೧೯೩೯ರವರೆಗೆ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮೀಟಿಯ ಅಧ್ಯಕ್ಷರಾಗಿದ್ದವರು ಸಿದ್ದಪ್ಪ ಹೊಸಮನಿ. ಆದರೆ ಈ ವೇಳೆಗೆ ಭಾರತೀಯ ಕಾಂಗ್ರೆಸ್ ಸಂಸ್ಥೆಯಲ್ಲಿ ಭಿನ್ನಾಭಿಪ್ರಾಯ ತಲೆದೋರಿತು. ಸುಭಾಸ್‌ಚಂದ್ರ ಬೋಸ್ ಕಾಂಗ್ರೆಸ್‌ನಿಂದ ಹೊರಬಂದು "ಫಾರ್ವರ್ಡ್ ಬ್ಲಾಕ್" ಪಕ್ಷ ಸಂಘಟಿಸಿದರು. ಸುಭಾಸ್‌ರು ಸ್ಥಾಪಿಸಿದ್ದ ಪಕ್ಷದ ಪ್ರಾಂತೀಯ ಅಧ್ಯಕ್ಷರಾಗಿ ಸಿದ್ದಪ್ಪ ಹೊಸಮನಿ ಕಾರ್ಯ ನಿರ್ವಹಿಸಿದರು."[೩೫] ಕಾಂಗ್ರೆಸಿನಲ್ಲಿ ಉನ್ನತ ಸ್ಥಾನದಲ್ಲಿದ್ದರೂ ಇವರು ಕಾಂಗ್ರೆಸ್ ಬಿಟ್ಟು ಸುಭಾಸರ ಹೊಸ ಪಕ್ಷ ಸಂಘಟನೆಗೆ ಶ್ರಮಿಸಿರುವುದು ಜಿಲ್ಲೆಯಲ್ಲಿ ವಿಶೇಷ ಎನ್ನಬಹುದು.

**ಸಿದ್ದಪ್ಪ ಹೊಸಮನಿ ಮನೆಗೆ ನೇತಾಜಿ** : 'ಫಾರ್ವರ್ಡ್ ಬ್ಲಾಕ್' ಪಕ್ಷ ಸಂಘಟನೆಗಾಗಿ ನೇತಾಜಿ ಸುಭಾಸ್‌ಚಂದ್ರ ಬೋಸ್ ಕರ್ನಾಟಕ ಪ್ರವಾಸ ಕೈಗೊಂಡರು. ಆ ಸಮಯದಲ್ಲಿ ಹಾವೇರಿಯ ಸಿದ್ದಪ್ಪ ಹೊಸಮನಿಯ ಮನೆಗೂ ಭೇಟಿ ನೀಡಿ ಪಕ್ಷ ಸಂಘಟನೆಯ ಬಗ್ಗೆ ಚರ್ಚೆ ನಡೆಸಿದರು. ಹಾವೇರಿಯಿಂದ ಹೋದ ನಂತರ ತಮ್ಮ 'ಫಾರ್ವರ್ಡ್ ಬ್ಲಾಕ್' ಪತ್ರಿಕೆಯಲ್ಲಿ ಪ್ರಕಟಿಸಿದ ಅಗ್ರ ಲೇಖನ ಸಿದ್ದಪ್ಪನವರ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ರಾಜಕಾರಣದಲ್ಲಿ ಎಂಥವರನ್ನೂ ಎದುರು ಹಾಕಿಕೊಳ್ಳುವಲ್ಲಿ ಹಿಂಜರಿಯದ ಸಿದ್ದಪ್ಪನವರ ವ್ಯಕ್ತಿತ್ವ ಕೆಲ ನಾಯಕರಿಗೆ ಹಿಡಿಸಲಿಲ್ಲ. ಹಾಗಾಗಿ ಹಲವು ಅವಕಾಶಗಳಿಂದ ಇವರು ವಂಚಿತರಾದರು. ಸ್ವಾತಂತ್ರ್ಯ ನಂತರ ಹಾವೇರಿಯಲ್ಲಿ ಕೂಡಿದ ಕೆ.ಪಿ.ಸಿ.ಸಿ. ಸಭೆಯು 'ಕರ್ನಾಟಕ ಪ್ರಾಂತೀಕರಣ

ಪ್ರಶ್ನೆಯನ್ನು ಸಮಾಧಿಯನ್ನು ಮಾಡಿದಾಗ ಸಿಟ್ಟಿಗೆದ್ದ ಸಿದ್ದಪ್ಪ ಸ್ಥಳೀಯ ಯುವಕರನ್ನು ಪ್ರಚೋದಿಸಿ ಅಖಂಡ ಕರ್ನಾಟಕ ಪಕ್ಷಾತೀತ ಸಭೆಯನ್ನು ಹಾವೇರಿಯಲ್ಲಿ ೧೯೫೨ರಲ್ಲಿ ನಡೆಸಿದ ಬಗ್ಗೆ ಚಳುವಳಿಗಾರ ಹಾವೇರಿಯ ಶಂಕರ ಗೋಕಾವಿ ಸಂದರ್ಶನದಲ್ಲಿ ವಿವರಿಸುತ್ತಾರೆ.

**ಅನಂತಭಟ್ಟ ಕೇಶವಭಟ್ಟ ಹುರುಳಿಕುಪ್ಪಿ** : ಜನನ; ೧೯೦೪ ಸಾ॥ ಶಿಗ್ಗಾವಿ

"೧೯೩೯ರ ತ್ರಿಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಚುನಾಯಿತ ಕೆ.ಪಿ.ಸಿ.ಸಿ ಸದಸ್ಯರಾಗಿ ಶಿಗ್ಗಾವಿ ತಾಲೂಕು ಪ್ರತಿನಿಧಿಯಾಗಿ ಅಧಿವೇಶನದಲ್ಲಿ ಭಾಗವಹಿಸಿದರು. ಚಳುವಳಿಯಲ್ಲಿರುವಾಗಲೇ ೧೯೪೬ರಲ್ಲಿ ಇವರನ್ನು ಕಾಂಗ್ರೆಸ್ ಅಭ್ಯರ್ಥಿಯಾಗಿ ಧಾರವಾಡ ಜಿಲ್ಲಾ ಲೋಕಲ್ ಬೋರ್ಡ್ ಚುನಾವಣೆಯಲ್ಲಿ ಅವಿರೋಧವಾಗಿ ಆರಿಸಲಾಯಿತು."[೬೬]

ಇದೇ ರೀತಿ ಜಿಲ್ಲೆಯ ಮತ್ತೊಬ್ಬ ಸ್ವಾತಂತ್ರ್ಯ ಯೋಧ ನೆಗಳೂರಿನ ಫಕ್ಕೀರಪ್ಪ ತಾವರೆ ಇವರು ಶಿಗ್ಗಾವಿ ತಾಲೂಕಿನ ಶಾಸಕರಾಗಿ ಜನಹಿತ ಕಾರ್ಯಗಳನ್ನು ಮಾಡಿದವರು. ಇವರ ವಿಶೇಷ ಗುಣವೆಂದರೆ ಮಾಜಿ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪ ಅವಿರೋಧವಾಗಿ ಆರಿಸಿ ಕಳುಹಿಸಲು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದ ಸಜ್ಜನ ರಾಜಕಾರಣಿ ಎಂದು ನೆಗಳೂರಿನ ಚಳುವಳಿಗಾರ ದೇವೇಂದ್ರಪ್ಪ ವಿಭೂತಿ ನೆನಪಿಸಿಕೊಳ್ಳುತ್ತಾರೆ.

ಈ ರೀತಿ ಜಿಲ್ಲೆಯ ಚಳುವಳಿಗಾರರು ಸ್ವಾತಂತ್ರ್ಯ ಹೋರಾಟದಲ್ಲಿ ಮತ್ತು ಸ್ವಾತಂತ್ರ್ಯ ನಂತರವೂ ಆದರ್ಶ ರಾಜಕಾರಣಕ್ಕೆ ಹೆಸರಾಗಿರುವುದನ್ನು ಹಾಗೂ ಅವರು ಮಾಡಿದ ಹತ್ತು ಹಲವು ಕಾರ್ಯಗಳೊಂದಿಗೆ ಗುರುತಿಸಲಾಗಿದೆ.

**೬.೩. ಶೈಕ್ಷಣಿಕ ಕೊಡುಗೆ**

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ಚಳುವಳಿಗಳೊಂದಿಗೆ ಸಮಾಜ ಎದುರಿಸುತ್ತಿದ್ದ ಹತ್ತುಹಲವು ಸಮಸ್ಯೆಗಳಿಗೆ ಸ್ಪಂದಿಸಿದ್ದಲ್ಲದೆ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಮಾಜಿಕ ಸುಧಾರಣೆಗೆ ಶಿಕ್ಷಣದ ಅವಶ್ಯಕತೆ ಅರಿತು ಅದಕ್ಕಾಗಿ ಹಲವು ಶೈಕ್ಷಣಿಕ ಕಾರ್ಯಗಳನ್ನು ಮಾಡಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಅಂಥ ಪ್ರಮುಖ ಶೈಕ್ಷಣಿಕ ಸುಧಾರಣೆಗಳು ಈ ಕೆಳಗಿನಂತೆ ಗುರುತಿಸಲಾಗಿದೆ.

**ಕೆ.ಎಫ್.ಪಾಟೀಲ್** : ತಮ್ಮ ಶೈಕ್ಷಣಿಕ ಸೇವೆಯಿಂದ ಜನ-ಮನ್ನಣೆ ಗಳಿಸಿದರು. ತಮ್ಮ ಶಿಕ್ಷಣವನ್ನು ಮುಗಿಸಿ ಹಂಸಬಾವಿಯ ಎ.ವ್ಹಿ.ಸ್ಕೂಲಿಗೆ ಚಿತ್ರಕಲಾ ಶಿಕ್ಷಕರಾಗಿ ಸೇವೆಗೆ ಸೇರಿದರು. ಪಾಟೀಲರ ಬಗ್ಗೆ ಅಂದು ಅವರ ಶಿಷ್ಯರಾಗಿದ್ದ ಮತ್ತು ಅವರೊಂದಿಗೆ ಚಳುವಳಿಗೆ ಧುಮುಕಿದ ಶಿವಣ್ಣ ನೆಷ್ವಿ ಉಲ್ಲೇಖಿಸುವಂತೆ- "ಅವರು ವಿದ್ಯಾರ್ಥಿಗಳನ್ನು ಚಂದ್ರನು ಅಂಬುಧಿಯನ್ನು ಸೆಳೆಯುವಂತೆ ಆಕರ್ಷಿಸುತ್ತಿದ್ದರು. ಶಾಲಾ ಬಾಲಕರನ್ನು ಬಹುಮುಖಿ ಸೇವೆಗೆ ತಯಾರು ಮಾಡಿದರು. ಶಾಲೆಯಲ್ಲಿ ಚರ್ಚಾಕೂಟಗಳನ್ನು ಏರ್ಪಡಿಸಿ ವಿದ್ಯಾರ್ಥಿಗಳು ಭಾಷಣಕಾರರಾಗಲು

ನೆರವಾಗುತ್ತಿದ್ದರು. ಅಲ್ಲದೇ ಹಂಸಬಾವಿಯಲ್ಲಿ ಒಂದು **"ತರುಣ ಭಾರತ"**ವೆಂಬ ಕೈಬರಹದ ಮಾಸ ಪತ್ರಿಕೆಯನ್ನು ಹೊರತರುವ ಮೂಲಕ ವಿದ್ಯಾರ್ಥಿಗಳಲ್ಲಿ ಅನೇಕರು ಬರಹಗಾರರಾಗಲು ಅನುವು ಮಾಡಿಕೊಟ್ಟರು. ಶ್ರಾವಣಮಾಸದಲ್ಲಿ ಕನ್ನಡ ವಚನಗಳನ್ನು ಮೇಲ್ತರಗತಿಯ ವಿದ್ಯಾರ್ಥಿಗಳಿಂದ ಬರೆಯಿಸಿ, ಪ್ರಮುಖ ಬೀದಿಗಳಲ್ಲಿ ಮನೆಗಳ ಮುಂಬಾಗಿಲುಗಳಿಗೆ ಅಂಟಿಸುವ ವ್ಯವಸ್ಥೆ ಮಾಡಿಸುತ್ತಿದ್ದರು."[೪೧] ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಸೇವೆಯ ಅರಿವು ಮೂಡಿಸುವುದರ ಸಲುವಾಗಿ ಮತ್ತು ಸಾರ್ವಜನಿಕರನ್ನು ಸನ್ಮಾರ್ಗಕ್ಕೆ ತರುವ ಸಲುವಾಗಿ "ಊರಲ್ಲಿ ಶರಣ ಹಾಗೂ ಮಹಾತ್ಮರ ಚರಿತ್ರೆಗಳನ್ನು ಓದಿ ಜನರಿಗೆ ಮನ ಮುಟ್ಟುವಂತೆ ವಿವರಿಸುತ್ತಿದ್ದರು. ಈ ಎಲ್ಲ ಚಟುವಟಿಕೆಗಳಿಂದ ಹಂಸಬಾವಿ ಊರು ರಾಜಕೀಯ ಮತ್ತು ಶೈಕ್ಷಣಿಕ ರಂಗದಲ್ಲಿ ಮುಂಚೂಣಿಯಲ್ಲಿ ಮೆರೆಯುವಂತಾಗಿತ್ತು."[೪೨] ಕೆ.ಎಫ್. ಪಾಟೀಲ್ ಬ್ಯಾಡಗಿ ನಗರ ಸಭಾಧ್ಯಕ್ಷರಾಗಿದ್ದಾಗ ಲಕ್ಷ್ಮಪ್ಪ ಶೆಟ್ಟರ ಮನವೊಲಿಸಿ ಹಂಸಬಾವಿಯ 'ಶಿವಯೋಗಿಶ್ವರ ಪ್ರಸಾದ' ನಿಲಯದಲ್ಲಿ ಒಂದು ಕೊಠಡಿ ಕಟ್ಟಿಸಲೆಂದು ೮೦೧ ರೂ.ಗಳ ದೇಣಿಗೆ ಕೊಡಿಸಿದ ವಿವರವನ್ನು ಅದೇ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿರುವ ಸಂಶೋಧಕ ಭೋಜರಾಜ ಪಾಟೀಲರು ತಿಳಿಸುತ್ತಾರೆ.

ಕೆ.ಎಫ್. ಪಾಟೀಲ್ ೧೯೬೧ರಿಂದ ಹನುಮಟ್ಟಿ, ರಾಣೆಬೆನ್ನೂರು, ಹಾವೇರಿಗಳಲ್ಲಿ ಬಾಲಕ-ಬಾಲಿಕಿಯರ ಪೋಷಣೆಗೆ ಅವಶ್ಯವಿರುವ ಉಚಿತ ಪ್ರಸಾದ ನಿಲಯದೊಂದಿಗೆ ಮೂರು ಹೈಸ್ಕೂಲ್‌ಗಳನ್ನು ಸ್ಥಾಪಿಸಿದರು. ಹಾವೇರಿಯ ಹೆಣ್ಣುಮಕ್ಕಳ ಹೈಸ್ಕೂಲನ್ನು ಸ್ಥಳೀಯ ಸಂಸ್ಥೆಗೆ ಬಿಟ್ಟುಕೊಟ್ಟರು. ೧೯೬೨ರಿಂದ ರೂರಲ್ ಇನ್‌ಸ್ಟಿಟ್ಯೂಟ್ ನಡೆಸಿ ಮುಂದೆ ಅದನ್ನು ನಿಲ್ಲಿಸಿದರು. ಅದಕ್ಕೆ ಸೇರಿದ ಜಾಗೆಯನ್ನು ಕೃಷಿ ವಿಶ್ವವಿದ್ಯಾಲಯಕ್ಕೆ ಉಚಿತವಾಗಿ ಬಿಟ್ಟುಕೊಟ್ಟರು.

**ಟಿ.ಆರ್. ನೆಶ್ವಿ** : ವಸಾಹತುಪೂರ್ವದಲ್ಲಿ ಟಿ.ಆರ್. ನೆಶ್ವಿ ಗುರುತಿಸಿಕೊಂಡಿದ್ದು ನೆಶ್ವಿ ಮಾಸ್ತರೆಂದು. ಇವರು ೧೯೨೮ರಲ್ಲಿ ಕೃಷಿ ಪದವಿ ಪರೀಕ್ಷೆ ಮುಗಿಸಿಕೊಂಡು ಹಂಸಬಾವಿಯ 'ವೀರಶೈವ ವಿದ್ಯಾವರ್ಧಕ ಸಂಘ'ದ ಆಂಗ್ಲೋ ವ್ಹರ್ನಾಕ್ಯುಲರ್ ಸ್ಕೂಲಲ್ಲಿ ಶಿಕ್ಷಕರಾಗಿ ಸೇರಿದರು.

ಟಿ.ಆರ್. ನೆಶ್ವಿ ಶಿಕ್ಷಕರಾಗಿದ್ದಲ್ಲದೆ ವಿದ್ಯಾಸಂಸ್ಥೆಯನ್ನು ಅಭಿವೃದ್ಧಿಗೊಳಿಸಲು ಶ್ರಮಿಸಿದವರು. ವಿದ್ಯಾರ್ಥಿಗಳಿಗೆ ಸಂಸ್ಥೆ ನಡೆಸುತ್ತಿದ್ದ ಶಿವಯೋಗೀಶ್ವರ ಉಚಿತ ಪ್ರಸಾದ ನಿಲಯಕ್ಕೆ ಭೋಗಾವಿ ರುದ್ರಗೌಡ ಇನ್ನಿತರ ಸದಸ್ಯರೊಂದಿಗೆ ಹಳ್ಳಿಗಳಲ್ಲಿ ಸಂಚರಿಸಿ ಧನ, ಧಾನ್ಯ ಸಂಗ್ರಹ ಮಾಡುತ್ತಿದ್ದ ಬಗ್ಗೆ ಪುಟ್ಟಪ್ಪ ಹರಬಿ ಹಾಗೂ ಬಿ.ಜಿ. ಬಣಕಾರ ಹೇಳುತ್ತಾರೆ.

ವೀರನಗೌಡರು ಕಾಂಗ್ರೆಸ್ ಸೇರಲು ಟಿ.ಆರ್. ನೆಶ್ವಿಯನ್ನು ಕೇಳಿಕೊಂಡಾಗ ಇವರು ಒಪ್ಪಲಿಲ್ಲ. ಕಾರಣ 'ತಾವು ಶಿಕ್ಷಕ ವೃತ್ತಿ ಬಿಟ್ಟರೆ ವಿದ್ಯಾರ್ಥಿಗಳಿಗೆ ಮತ್ತು ಸಂಸ್ಥೆಗೆ ತೊಂದರೆಯಾಗುತ್ತದೆ' ಎಂದು ವೀರನಗೌಡರಿಗೆ ಹೇಳಿದರು. ಈ ಘಟನೆಯಿಂದ ಇವರಿಗೆ ವಿದ್ಯಾರ್ಥಿಗಳು ಮತ್ತು ಸಂಸ್ಥೆ ಬಗ್ಗೆ ಇದ್ದ ಕಳಕಳಿಯನ್ನು ಗ್ರಹಿಸಬಹುದು. ನಂತರದಲ್ಲಿ ಕಾಂಗ್ರೆಸ್ ಸೇರಿದರೂ ಕರ ನಿರಾಕರಣ ಚಳುವಳಿ ಸಮಯದಲ್ಲಿ ಶಾಲೆಯ ವಿದ್ಯಾರ್ಥಿಗಳಿಗೆ ತೊಂದರೆಯಾಗದಂತೆ ಶಾಲೆ ಮುಗಿಸಿಕೊಂಡು ಅಣೆವಾರಿ ಕಾರ್ಯಕ್ಕೆ ಹೋಗುತ್ತಿದ್ದರು.

"೭.೧.೧೯೩೨ರಂದು ಹುಚಗೊಂಡರ ಹೊಳೆಬಸಪ್ಪನವರೊಂದಿಗೆ ಟಿ.ಆರ್.ನೆಶ್ವಿ ಪ್ರಸಾದ ನಿಲಯಕ್ಕೆ ಭತ್ತ ಸಂಗ್ರಹಿಸುವುದಕ್ಕಾಗಿ ಮಲೆನಾಡ ಕಡೆ ಹೊರಟು ಶಿರಾಳಕೊಪ್ಪ ಸಮೀಪದ ಜಂಬೂರಿನಲ್ಲಿ ಉಳಿದರು. ಜಂಬೂರು ಕೇಂದ್ರವಾಗಿಟ್ಟುಕೊಂಡು ಸುತ್ತಲಿನ ಗ್ರಾಮಗಳಲ್ಲಿ ಸಂಚರಿಸಿ ಭತ್ತ ಸಂಗ್ರಹಿಸತೊಡಗಿದರು. ಚಳವಳಿಯೊಂದಿಗೆ ೧೫ರಿಂದ ೨೦ ಚಕ್ಕಡಿ ಭತ್ತ ಸಂಗ್ರಹಿಸಿದರು. ಶಿವಯೋಗೀಶ್ವರ ಉಚಿತ ಪ್ರಸಾದ ನಿಲಯಕ್ಕೆ ಎರಡು ವರ್ಷಗಳ ಆಹಾರ ಧಾನ್ಯ ಚಿಂತೆ ತಪ್ಪಿದ್ದು ಒಂದಾದರೆ, ನೆಶ್ವಿಯವರಿಗೆ ಅನೇಕ ಗ್ರಾಮಗಳ ಮುಖಂಡರು, ಇತರ ನೂರಾರು ಜನರು ಚೆನ್ನಾಗಿ ಪರಿಚಯವಾದರು."[೩೮] ಈ ಪರಿಚಯ ಮುಂದಿನ ಅವರ ಚಳುವಳಿಗೂ ಅನುಕೂಲವಾಯಿತು.

"ತಿ.ರು. ನೆಶ್ವಿ ಡಿಸ್ಟ್ರಿಕ್ಟ್ ಸ್ಕೂಲ್ ಬೋರ್ಡಿಗೆ ಚುನಾಯಿತರಾದಾಗ ಗ್ರಾಮಗಳಲ್ಲಿಯ ಶಿಕ್ಷಕರ ಕರ್ತವ್ಯ ನಿರ್ವಹಣೆ ಬಗ್ಗೆ ವಿಶೇಷ ಕಾಳಜಿ ವಹಿಸಿದರು. ಅದರಲ್ಲೂ ಹಿರೇಕೆರೂರು, ಹಾನಗಲ್ಲ, ರಾಣೇಬೆನ್ನೂರು ತಾಲೂಕುಗಳ ಗ್ರಾಮಗಳ ಶಾಲೆಗೆ ಮೇಲಿಂದ ಮೇಲೆ ಭೇಟಿ ನೀಡಿ ಶಾಲೆಗಳು ಸರಿಯಾಗಿ ಕಾರ್ಯ ನಿರ್ವಹಿಸುವಂತೆ ನೋಡಿಕೊಂಡರು."[೩೯] ಇದು ಅವರ ಶೈಕ್ಷಣಿಕ ಕಾಳಜಿಗೆ ಸಾಕ್ಷಿ.

"ಮುಂಬೈ ವಿಧಾನಸಭೆಯ ಅಧ್ಯಕ್ಷರಾದ ಮಾಳವಣಕರ ಅವರನ್ನು ಹಂಸಬಾವಿಗೆ ಬರಮಾಡಿಕೊಂಡು, ಹಂಸಬಾವಿಯ ವಿದ್ಯಾರ್ಥಿಗಳಿಗೆ ಶಿಕ್ಷಣದಿಂದ ಆಗುವ ಉಪಯೋಗ ಮತ್ತು ಅದರಿಂದ ಸಮಾಜವನ್ನು ಕಟ್ಟುವ"[೪೦] ರೀತಿಯನ್ನು ತಿಳಿಸಿಕೊಡುವಲ್ಲಿ ನೆಶ್ವಿಯವರು ಮಹತ್ವದ ಪಾತ್ರವಹಿಸಿದ ಬಗ್ಗೆ ಮಳ್ಳಪ್ಪ ಕೊಪ್ಪದ ಸಹಮತ ವ್ಯಕ್ತಪಡಿಸುತ್ತಾರೆ.

**ಗುದ್ಲೆಪ್ಪ ಹಳ್ಳಿಕೇರಿಯವರ ಗಾಂಧಿ ಗ್ರಾಮೀಣ ಗುರುಕುಲ**

ಹಾವೇರಿ ಭಾಗದಲ್ಲಿ ಉಚ್ಚ ಶಿಕ್ಷಣದ ಸೌಕರ್ಯವಿರದ ೬೦ರ ದಶಕದಲ್ಲಿ ಕಲಾ ಮತ್ತು ವಿಜ್ಞಾನ ಕಾಲೇಜು ಆರಂಭಿಸಲು ೧೯೬೩ರಲ್ಲಿ ೩-೪ ತಿಂಗಳಲ್ಲಿ ಸಾರ್ವಜನಿಕರಿಂದ ೬ ಲಕ್ಷ ರೂ. ಸಂಗ್ರಹಿಸಿ ಕೆ.ಎಲ್.ಇ. ಸಂಸ್ಥೆಗೆ ನೀಡಿ ಕಾಲೇಜು ಆರಂಭವಾಗುವಂತೆ ಮಾಡಿದ ಬಗ್ಗೆ ದೇವೇಂದ್ರಪ್ಪ ವಿಭೂತಿ ಸಂದರ್ಶನದಲ್ಲಿ ಹೇಳುತ್ತಾರೆ. ಈಗ ಆ ಕಾಲೇಜಿಗೆ ಇವರ ಹೆಸರನ್ನು ಇಡಲಾಗಿದ್ದು, ಆವರಣದಲ್ಲಿ ಗುದ್ಲೆಪ್ಪನವರ ಪ್ರತಿಮೆಯನ್ನು ಅನಾವರಣಗೊಳಿಸಲಾಗಿದೆ.

ಸ್ವಾತಂತ್ರ್ಯದ ಫಲವನ್ನು ಅನುಭವಿಸಬೇಕಾದರೆ ಶಿಕ್ಷಣ ಎಲ್ಲ ಜನಸಮುದಾಯಕ್ಕೆ ದೊರೆಯಬೇಕು ಎಂದು ಹಂಬಲಿಸಿದ ಗುದ್ಲೆಪ್ಪ ಹಳ್ಳಿಕೇರಿ ಕಂಡ ಕನಸು ಹೊಸರಿತ್ತಿಯ **'ಗುರುಕುಲ ಮಾದರಿ'** ವಿದ್ಯಾಕೇಂದ್ರ.

ವಿದ್ಯಾಪಕ್ಷಪಾತಿಗಳಾದ ಗುದ್ಲೆಪ್ಪ ಹಳ್ಳಿಕೇರಿ ದೇಶದ ವಿವಿಧ ಭಾಗಗಳಲ್ಲಿಯ ಪ್ರಸಿದ್ಧ ವಸತಿ ಶಿಕ್ಷಣ ಸಂಸ್ಥೆಗಳಿಗೆ ಭೇಟಿ ಕೊಟ್ಟು, ಶಿಕ್ಷಣ ತಜ್ಞರನ್ನು ಕಂಡು ಗ್ರಾಮೀಣ ಮಕ್ಕಳಿಗೆ ಉಪಯುಕ್ತವಾದ ಸ್ವಾವಲಂಬಿ ಶಿಕ್ಷಣದ ಬಗ್ಗೆ ಅಗತ್ಯ ವಿವರಗಳನ್ನು ಸಂಗ್ರಹಿಸಿದರು. ವಾರ್ಧಾ ಆಶ್ರಮದಲ್ಲಿ ಜೀವನ ಶಿಕ್ಷಣ ತರಬೇತಿ ಪಡೆದ ಶಿಕ್ಷಣತಜ್ಞ ಮ.ಗು.ಹಂದ್ರಾಳ ಗುರುಕುಲದ ವಿಶೇಷ ಯೋಜನೆ

ರೂಪಿಸಿ ರಾಜ್ಯ ಸರಕಾರಕ್ಕೆ ಸಲ್ಲಿಸಿದರು. ದುರದೃಷ್ಟವಶಾತ್ ಸರಕಾರ ಹಸಿರು ನಿಶಾನೆ ಗುರುಕುಲಕ್ಕೆ ದೊರೆಯುವಷ್ಟರಲ್ಲಿ ಗುದ್ಲೆಪ್ಪನವರು ಇಹಲೋಕ ಯಾತ್ರೆ ಮುಗಿಸಿದ್ದರು. ಆದರೆ ಅವರ ಆಶೆ ಕೈಗೂಡಿಸಬೇಕೆಂಬ ಅವರ ಅಭಿಮಾನಿಗಳ ಸತತ ಪ್ರಯತ್ನದ ಫಲವಾಗಿ ೧೯೮೪ರ ಅಕ್ಟೋಬರ್ ೨ರಂದು ಗಾಂಧಿ ಜಯಂತಿಯಂದು ಹೊಸರಿತ್ತಿಯಲ್ಲಿ **'ಗಾಂಧೀ ಗ್ರಾಮೀಣ ಗುರುಕುಲ'** ಪ್ರಾರಂಭವಾಯಿತು. ಈ ರೀತಿಯ ಶಾಲೆ ಇರುವುದು ಕರ್ನಾಟಕದಲ್ಲಿ ಇದೊಂದೇ. ೩೨ ಎಕರೆ ವಿಸ್ತೀರ್ಣದ ಭೂಮಿಯಲ್ಲಿ ಈ ಗುರುಕುಲ ಪಸರಿಸಿದೆ. ಈ ವಿವರವನ್ನು ಗುರುಕುಲವನ್ನು ನೋಡಿಕೊಳ್ಳುತ್ತಿರುವ ೬೨ ವರ್ಷದ ಗೋಪಣ್ಣ ಕುಲಕರಣಿ, ಚಳುವಳಿಗಾರ ದೇವೇಂದ್ರಪ್ಪ ತಿಳಿಸುತ್ತಾರೆ.

"ಈ ಗುರುಕುಲದ ಶಿಕ್ಷಣವು ಮಕ್ಕಳಲ್ಲಿ ಧೈರ್ಯ, ಸ್ಥೈರ್ಯ, ಮನೋವೃತ್ತಿ ತರಬೇತಿ ನೀಡುವ ಸಂಸ್ಥೆಯಾಗಿದೆ. ಗಾಂಧೀಜಿಯ ಆದರ್ಶಗಳನ್ನು ಪ್ರತಿಬಿಂಬಿಸುವ ಚಟುವಟಿಕೆಗಳ ಕೇಂದ್ರವಾಗಬೇಕೆಂಬ ಗ್ರಾಮೀಣ ಗುರುಕುಲದ ಮೂಲ ಧ್ಯೇಯ. ಆರ್ಥಿಕವಾಗಿ ಹಿಂದುಳಿದಿರುವ ಬಡಕುಟುಂಬದಲ್ಲಿ ಬೆಳೆದು ಶಿಕ್ಷಣ ಮುಂದುವರಿಸಲು ಆರ್ಥಿಕ ಮುಗ್ಗಟ್ಟಿನಿಂದ ಬಳಲಿ ನಿಸ್ಸಾಹಾಯಕ ಸ್ಥಿತಿಯಲ್ಲಿರುವ ಗ್ರಾಮಾಂತರ ಪ್ರತಿಭಾವಂತ ಬಾಲಕರಿಗೆ ಆಶಾದಾಯಕ ಸಂಸ್ಥೆ"[೪೧] ಎಂಬುದನ್ನು ಆ ಭಾಗದ ಚಳುವಳಿಗಾರರ ಹೇಳಿಕೆಯಿಂದ ಗುರುತಿಸಲಾಗಿದೆ.

**ವೀರನಗೌಡ ನಾಗಮ್ಮ ಪಾಟೀಲ ದಂಪತಿಗಳು**

ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ವೀರನಗೌಡ ಪಾಟೀಲ ಮಾಡಿದ ಕಾರ್ಯಗಳಿಗಿಂತ ಹರಿಜನ ಸೇವೆ ಮತ್ತು ಶೈಕ್ಷಣಿಕ ಕೊಡುಗೆಗಳು ಸ್ಮರಣಾರ್ಹವಾದವು. ೧೯೧೬ರಲ್ಲಿ ಬೆಳಗಾವಿಯಲ್ಲಿ 'ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸೈಟಿ' (ಕೆ.ಎಲ್.ಇ)ಯ ರೂವಾರಿಗಳಲ್ಲಿ ವೀರನಗೌಡ ಪಾಟೀಲ ಒಬ್ಬರು.

"ಬೆಳಗಾವಿಯಲ್ಲಿ ಮರಾಠಿ ಶಾಲೆಗಳೇ ಹೆಚ್ಚಾಗಿದ್ದರಿಂದ ಅಲ್ಲಿಯ ಕನ್ನಡಿಗರಿಗೆ ಕನ್ನಡ ಕಲಿಯುವ ಅವಕಾಶವಿರಲಿಲ್ಲ. ಹಾಗಾಗಿ ಮೊದಲ ಬಾರಿ ಬೆಳಗಾವಿಯಲ್ಲಿ 'ಗಿಲಗಂಚಿ ಅರಟಾಳ ಪ್ರೌಢ ಶಾಲೆಯನ್ನು ಆರಂಭಿಸಿದರು. ಆ ಸ್ಕೂಲಿಗೆ ವೀರನಗೌಡ ಪಾಟೀಲ್ ವಿಜ್ಞಾನ ಶಿಕ್ಷಕರಾದರು. ಆ ಮೂಲಕ ಕನ್ನಡಿಗರಿಗೆ ಕನ್ನಡ ಕಲಿಯುವ ಅವಕಾಶ ಮಾಡಿಕೊಟ್ಟರು.

ಹುಬ್ಬಳ್ಳಿಯಲ್ಲಿ ಬೆಳಗಾವಿಯ ಬೋಗಲೆಯವರ ತಂಗಿ ಮಥುರಾ ಹಾಗೂ ಅವಳೊಂದಿಗೆ ಬಂದ ತಾರಾ ಇವರು ಹುಕ್ಕೇರಿ ತಾಲೂಕಿನ ಬಾಲಕಿಯರೇ ಆಗಿದ್ದರು. ಇವರಿಂದಲೇ ೧೯೩೪ರಲ್ಲಿ ಹುಬ್ಬಳ್ಳಿಯ 'ಹರಿಜನ ಬಾಲಿಕಾಶ್ರಮ' ಸ್ಥಾಪನೆಯಾಯಿತು. ಅಂದರೆ ಕರ್ನಾಟಕ ಹರಿಜನ ಬಾಲಿಕಾಶ್ರಮಕ್ಕೆ ಬಂದ ಮೊದಲ ಬಾಲಕಿಯರು. ನಂತರದಲ್ಲಿ ೨೫ ಜನ ಬಾಲಿಕಿಯರ ಸಂಖ್ಯೆಯಾಯಿತು. ಮತ್ತೊಂದು ವಿಶೇಷವೆಂದರೆ ದೇಶದಲ್ಲಿ ಸಾಬರಮತಿ ಆಶ್ರಮ ಹರಿಜನ ಬಾಲಕಿಯರಿಗೆ ಶಿಕ್ಷಣ ನೀಡುವ ಮೊದಲ ಆಶ್ರಮವಾದರೆ, ದೇಶದಲ್ಲಿಯೇ ಎರಡನೆಯ

ಆಶ್ರಮದ ಹುಬ್ಬಳ್ಳಿಯ ಹರಿಜನ ಬಾಲಿಕಾಶ್ರಮ ಎಂಬ ಕೀರ್ತಿ ಈ ಶಿಕ್ಷಣ ಸಂಸ್ಥೆಗಿದೆ"[೬೨] ಎಂಬುದು ನಾಡಿನ ಹೆಮ್ಮೆಯೇ ಸರಿ.

ಹುಬ್ಬಳ್ಳಿಯ ಹರಿಜನ ಬಾಲಿಕಾಶ್ರಮ ಮೊದಲು ವೀರನಗೌಡರ ಮನೆಯಲ್ಲಿ ಪ್ರಾರಂಭವಾಯಿತಾದರೂ ನಂತರ ಹರಿಜನ ಮಕ್ಕಳ ಶಿಕ್ಷಣಕ್ಕಾಗಿ ಹುಬ್ಬಳ್ಳಿಯ ಶ್ರೀಮಂತ ವ್ಯಾಪಾರಿ ಡೀಕಪ್ಪನವರು ಬಾಡಿಗೆ ರಹಿತವಾಗಿ ಹುಬ್ಬಳ್ಳಿ-ಧಾರವಾಡ ರಸ್ತೆಯ ಬದಿಗಿರುವ ಬಂಗ್ಲೆಯನ್ನು ಬಿಟ್ಟುಕೊಟ್ಟರು. ಅಲ್ಲಿ ಆರಂಭವಾದ ಆ ಆಶ್ರಮ ನಿರ್ಮಾತೃಗಳಾದ ಪಾಟೀಲ ದಂಪತಿಗಳಿಗೆ ಕೆ.ಎಫ್. ಪಾಟೀಲ್, ಸೋಮಣ್ಣ, ಕರಿಯಪ್ಪ ಸಂಗೂರು, ರಾಮಕೃಷ್ಣ ಪ್ರಭುಜಿ ಮೊದಲಾದವರು ಬೆಂಬಲವಾಗಿದ್ದ ವಿವರವನ್ನು ಗುರುತಿಸಲಾಗಿದೆ.

**ಮಕ್ಕಳಿಗೆ ಶಿಕ್ಷಣ :** "ಹರಿಜನ ಬಾಲಕಿಯರಿಗೆ ಶಿಕ್ಷಣ ನೀಡುವುದು ಹೇಗೆ? ಕಾರಣ ಆ ಮಕ್ಕಳು ಪಾಟಿ, ಪುಸ್ತಕಗಳನ್ನು ಮುಟ್ಟಲು ತಯಾರಿಲಿಲ್ಲ. ಆ ಮಕ್ಕಳಿಗೆ ದೇವತೆಗಳ ಹೆಸರಿನಲ್ಲಿ ಕಿವಿ, ಮೂಗು, ಕಾಲ ಬೆರಳುಗಳು ಹೀಗೆ ಮುಂತಾದ ಕಡೆ ಚುಚ್ಚಲಾಗುತ್ತಿತ್ತು. ಮೊದಲು ಅವುಗಳಿಂದ ಅವರನ್ನು ರಕ್ಷಿಸುವ ಕಾರ್ಯವಾಗಬೇಕಿತ್ತು. ಅಲ್ಲದೆ ಮಕ್ಕಳನ್ನು ಕರೆತಂದಾಗ ಅವರ ತಲೆ ಜಿಡ್ಡುಗಟ್ಟಿರುತ್ತಿತ್ತು. ಕಾರಣ ಅಂದು ಕ್ಷೌರಿಕರು ಕೂಡ ಹರಿಜನ ಮಕ್ಕಳನ್ನು ಮುಟ್ಟುತ್ತಿರಲಿಲ್ಲ. ಇಲ್ಲಿಗೆ ಬಂದಾಗ ಸಂಗೂರು ಕರಿಯಪ್ಪ ಆ ಮಕ್ಕಳ ತಲೆ ಕೂದಲನ್ನು ತೆಗೆಯುವ ಕಾರ್ಯ ಮಾಡುತ್ತಿದ್ದರು."[೬೩] ಈ ಘಟನೆ ಅಂದಿನ ಸಾಮಾಜಿಕ ವ್ಯವಸ್ಥೆಗೆ ಸಾಕ್ಷಿ.

ಹುಬ್ಬಳ್ಳಿಯಲ್ಲಿಯ ಹರಿಜನ ಬಾಲಕಿಯರ ಸಂಖ್ಯೆ ಹೆಚ್ಚಾಗುತ್ತಿದ್ದರಿಂದ ಹಾವೇರಿ ಭಾಗದಲ್ಲಿ ಒಂದು ಹರಿಜನ ಆಶ್ರಮ ತೆರೆಯಬೇಕೆಂದು ಪಾಟೀಲ್ ದಂಪತಿಗಳು ನಿರ್ಧರಿಸಿದರು. ಹಾಗಾಗಿ ಎರಡನೆಯ ಆಶ್ರಮವನ್ನು ಹಾವೇರಿ ಜಿಲ್ಲೆಯ ಬ್ಯಾಡಗಿಯಲ್ಲಿ ಸ್ಥಾಪಿಸಿದರು. ರತ್ನಕಟ್ಟಿಯವರನ್ನು ಅದಕ್ಕಾಗಿ ಬ್ಯಾಡಗಿಗೆ ಕಳುಹಿಸಿಕೊಟ್ಟರು. ಹೀಗೆ ಹುಬ್ಬಳ್ಳಿಯ ಹರಿಜನ ಬಾಲಿಕಾಶ್ರಮದ ಮತ್ತೊಂದು ಶಾಖೆ ಬ್ಯಾಡಗಿಯಲ್ಲಿ ಪ್ರಾರಂಭವಾಯಿತು. ಇದರಿಂದ ಹಾವೇರಿ ಭಾಗದ ಹರಿಜನ ಮಕ್ಕಳ ಶಿಕ್ಷಣಕ್ಕೆ ಮತ್ತು ಅವರ ಸಾಮಾಜಿಕ ಸ್ಥಾನಮಾನಕ್ಕೆ ಮತ್ತೊಂದು ಆಶ್ರಯ ದೊರೆಯುವಂತಾಗಿದ್ದು ಅಭಿಮಾನವೇ ಸರಿ.

**ಹರಿಜನ ಬಾಲಕಿಯರಿಗಾಗಿ ಪ್ರಾಥಮಿಕ ಶಾಲೆ :** ಹರಿಜನ ಮಕ್ಕಳ ಶಿಕ್ಷಣ ನಡೆಯುವಾಗ ಮಕ್ಕಳಿಗೆ ಮತ್ತೊಂದು ಆತಂಕ ಎದುರಾಯಿತು. ಹೇಗೂ ಆ ಮಕ್ಕಳಿಗೆ ಸ್ವಚ್ಛತೆ, ಆರಂಭಿಕ ಶಿಕ್ಷಣ ನೀಡಿ ಪ್ರಾಥಮಿಕ ಶಿಕ್ಷಣಕ್ಕೆ ಕಳುಹಿಸಿಕೊಟ್ಟರೆ, ಶಾಲೆಗಳಲ್ಲಿ ಆ ಮಕ್ಕಳನ್ನು ಸೇರಿಸುವುದು ಕಷ್ಟವಾಗುತ್ತಿತ್ತು. ಇದನ್ನು ಮನಗಂಡ ಪಾಟೀಲ್ ದಂಪತಿಗಳು ತಾವೇ ಒಂದು ಪ್ರಾಥಮಿಕ ಶಾಲೆ ತೆರೆದು ಶಿಕ್ಷಣ ನೀಡುವ ಸಂಕಲ್ಪ ಮಾಡಿದರು. ಒಬ್ಬ ಕ್ರಿಶ್ಚಿಯನ್ ಮಹಿಳೆಯ ಮತ್ತು ಲೀಲಾ ಅರಳೀಕಟ್ಟಿ ಎಂಬ ಶಿಕ್ಷಕಿಯರು ಆ ಕಾರ್ಯದ ಉಸ್ತುವಾರಿ ವಹಿಸಿಕೊಂಡಿರುವುದನ್ನು ಕಮಲಾ ಸಂಪಳ್ಳಿ ಉಲ್ಲೇಖಿಸಿದ್ದಾರೆ(ನಮ್ಮ ವೀರ ವನಿತೆಯರು, ಪುಟ ೧೧೧).

**ಆಶ್ರಮದ ಶಿಕ್ಷಣ :** “ದಿನ ಕಳೆದಂತೆ ಹರಿಜನ ಬಾಲಿಕಾಶ್ರಮ ಬದಲಾದ ಪರಿಸರವನ್ನು ಕಾಣತೊಡಗಿತು. ಹಿಂದಿ ಭಾಷೆಯನ್ನು ಆರಂಭದಿಂದಲೇ ಕಲಿಸಲಾಗುತ್ತಿತ್ತು. ಸತ್ಪುರುಷರ ಚರಿತ್ರೆ, ನೈತಿಕ ಪಾಠ, ಇತಿಹಾಸ, ಸಾಮಾನ್ಯ ಜ್ಞಾನ ಪಾಠಗಳು ನಡೆಯುತ್ತಿದ್ದವು. ಪ್ರತಿ ದಿನ ಮುಂಜಾನೆ ಹಾಗೂ ಸಾಯಂಕಾಲ ಪ್ರಾರ್ಥನೆ ನಡೆಯುತ್ತಿತ್ತು. ಲಾಠಿ, ಲೇಜಿಮ್, ವ್ಯಾಯಾಮ ಶಿಕ್ಷಣ ನೀಡಲಾಗುತ್ತಿತ್ತು. ಹಂಜಿ ಮಾಡುವುದು, ನೂಲುವುದು, ನೇಯುವುದು, ಹೊಲಿಗೆ ಕಲಿಸುವುದು, ಮಕ್ಕಳಿಗೆ ತಾವೇ ನೂತ ಬಟ್ಟೆಯಿಂದ ತಮ್ಮ ಬಟ್ಟೆಯನ್ನು ಹೊಲಿದುಕೊಳ್ಳುವ ತರಬೇತಿ ನೀಡಲಾಗುತ್ತಿತ್ತು. ಇದು ಮಕ್ಕಳಿಗೆ ಆಶ್ಚರ್ಯವೆನಿಸುತ್ತಿತ್ತು. ಆದರೆ ಅಷ್ಟೇ ಪ್ರೀತಿಯಿಂದ ಈ ಎಲ್ಲ ಕಾರ್ಯಗಳನ್ನು ಮಾಡುತ್ತಿದ್ದರು.”[೪೪] ಕಾರಣ ಆ ಮಕ್ಕಳಿಗೆ ಆ ಎಲ್ಲ ಕಾರ್ಯಗಳು ಹೊಸತನವಾಗಿ ಕಾಣುವುದರಿಂದ ಮಕ್ಕಳು ಲವಲವಿಕೆಯಿಂದ ಮಾಡುತ್ತಿದ್ದವು.

**ಆರ್ಥಿಕ ಸಹಾಯ :** ಹರಿಜನ ಬಾಲಿಕಾಶ್ರಮಕ್ಕೆ ಆರ್ಥಿಕ ಸಹಾಯವನ್ನು ಹುಬ್ಬಳ್ಳಿಯ ಊರಲ್ಲಿ ಶ್ರೀಮಂತ ವ್ಯಾಪಾರಿಗಳು ಸಹಾಯಕ್ಕೆ ನಿಂತದ್ದು ವಿಶೇಷ. ಅದರಲ್ಲಿಯೂ ಜಕ್ಕಲಿಯ ದೊಡ್ಡಮೇಟಿ ಅಂದಾನಪ್ಪನವರು ಹರಿಜನ ಮಕ್ಕಳ ಶಿಕ್ಷಣಕ್ಕಾಗಿ ವಾರಕ್ಕೆರಡು ಸಲ ಗೋದಿ ಚೀಲ ಮತ್ತು ಬೆಲ್ಲವನ್ನು ಕಳುಹಿಸಿಕೊಡುತ್ತಿದ್ದರು. ಹೀಗೆ ಒಂದೊಂದು ರೀತಿಯಲ್ಲಿ ಹಲವರ ಸಹಾಯದಿಂದ ಈ ಶಿಕ್ಷಣಾಶ್ರಮ ಚೆನ್ನಾಗಿ ತನ್ನ ಕಾರ್ಯವನ್ನು ಮಾಡುವಂತಾದ ಬಗ್ಗೆ ಹಲವು ಚಳುವಳಿಗಾರರು ಹರ್ಷ ವ್ಯಕ್ತಪಡಿಸುತ್ತಾರೆ.

**ಶಿವಣ್ಣ ನೆಶ್ವಿ**

ಇವರು “ಭೋಗಾವಿ ರುದ್ರಗೌಡರ ಸಹಾಯದಿಂದ ೧೯೪೯ರಲ್ಲಿ ಹಂಸಬಾವಿಯಲ್ಲಿ ಒಂದು ಹೆಣ್ಣು ಮಕ್ಕಳ ಉಚಿತಪ್ರಸಾದ ನಿಲಯವನ್ನು ಸ್ಥಾಪಿಸಿದರು. “ಮೊದಲ ವರ್ಷ ಒಬ್ಬಳೆ ವಿದ್ಯಾರ್ಥಿನಿ ಬಂದಿದ್ದರಿಂದ ಅವಳಿಗೆ ತಮ್ಮ ಮನೆಯಲ್ಲಿಯೇ ಊಟೋಪಚಾರ ಒದಗಿಸಿದರು. ಊಟ ವಸತಿ ಹಾಗೂ ಶಾಲಾ ಶುಲ್ಕವನ್ನು ಸಹ ಕಟ್ಟಲ್ಪಟ್ಟಿತ್ತು. ಸ್ವತಃ ಇವರೇ ಬೋಧಿಸುತ್ತಿದ್ದರು. ಮೊದಲು ಒಬ್ಬ ವಿದ್ಯಾರ್ಥಿನಿಯಿಂದ ಆರಂಭವಾದ ಊಟ ವಸತಿಗೃಹ ನಂತರದಲ್ಲಿ ೧೫೦ ವಿದ್ಯಾರ್ಥಿನಿಯರು ಆಗುವವರೆಗೆ ಬೆಳೆಯಿತು. ಧಾರವಾಡ, ಕಾರವಾರ, ಬೆಳಗಾವಿ, ಶಿವಮೊಗ್ಗ, ಚಿತ್ರದುರ್ಗ ಮೊದಲಾದ ಜಿಲ್ಲೆಗಳ ಹಳ್ಳಿಗಾಡಿನ ಹೆಣ್ಣುಮಕ್ಕಳು ಬಂದು ಸೇರುತ್ತಿದ್ದರು.”[೪೫]

ಹಂಸಬಾವಿಯಲ್ಲಿ ಶಿವಣ್ಣ ನೆಶ್ವಿ ಸ್ತ್ರೀ ಶಿಕ್ಷಣಕ್ಕಾಗಿ ಉಚಿತ ಬೋರ್ಡಿಂಗ್ ಸ್ಥಾಪಿಸಿದಂತೆ ಅಣ್ಣ ತಿ.ರು. ನೆಶ್ವಿ ಧಾರವಾಡದಲ್ಲಿ ಸ್ತ್ರೀ ಶಿಕ್ಷಣಕ್ಕಾಗಿ ಬೋರ್ಡಿಂಗ್ ಸ್ಥಾಪಿಸಿದರು. ಸಹೋದರರಿಬ್ಬರು ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ನೀಡಿದ್ದು ಸ್ಮರಣಾರ್ಹವಾದದು. ಹೀಗೆ ಸ್ವಾತಂತ್ರ ಚಳುವಳಿಯೊಂದಿಗೆ ಶೈಕ್ಷಣಿಕ ಚಳುವಳಿಗೂ ನಾಂದಿಹಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ.

**ಲಿಂಗರಾಜ ಮುದ್ದಣ್ಣವರ : ಬ್ಯಾಡಗಿ ತಾಲೂಕು.**

ಚಳುವಳಿಕಾರ ಲಿಂಗರಾಜ ಮುದ್ದಣ್ಣವರ ೧೯೩೪-೩೫ರಲ್ಲಿ ಸ್ವಾತಂತ್ರ್ಯದೊಂದಿಗೆ ಶಿಕ್ಷಣದ ಪ್ರಚಾರ ಕಾರ್ಯ ಕೈಗೊಂಡರು. ಉತ್ತರ ಕರ್ನಾಟಕ ವ್ಯವಹಾರವು ಮುಂಬಯಿ ಬದಲಾಗಿ

ಮರ್ಮಗೋವಾ ಮುಖಾಂತರ ನಡೆದರೆ ಕೋಟಿಗಟ್ಟಲೆ ಹಣ ಕರ್ನಾಟಕಕ್ಕೆ ಉಳಿಯುವುದೆಂದು ಅಂಕಿ–ಸಂಖ್ಯೆ ಸಂಗ್ರಹಿಸಿ ಪ್ರಚಾರ ಮಾಡಿದರು. ಗೋವೆಗೆ ಹೋಗಿ, ಕನ್ನಡ ಶಾಲೆ ಸ್ಥಾಪನೆ, ಕೂಲಿಕಾರರ ಸಂಘಟನೆ ಮಾಡಿದರು. ಇದರಿಂದಾಗಿ ಗೋವಾ ಸರಕಾರ ಗೋವಾದಿಂದ ಹೊರಹೋಗುವಂತೆ ಆದೇಶ ನೀಡಿರುವುದನ್ನು ಬ್ಯಾಡಗಿ ಚಳುವಳಿಗಾರ ಷಡಕ್ಷರಪ್ಪ ಮಹಾರಾಜಪೇಟೆ ಸಂದರ್ಶನದಲ್ಲಿ ವಿವರಿಸುತ್ತಾರೆ.

**ರಾಯಪ್ಪ ನರಗುಂದ** : (ಹೂವಿನಶಿಗ್ಗಿ) ರಾಯಪ್ಪ ನರಗುಂದ ಸ್ವಾತಂತ್ರ್ಯ ನಂತರ "೧೯೫೪ರವರೆಗೆ ಊರಲ್ಲಿ ಪ್ರಾಥಮಿಕ ಶಾಲಾ ಕಟ್ಟಡವಿರಲಿಲ್ಲ. ಸುಬ್ರಾಯಪ್ಪ ಮಂಜಲಾಪುರ ಇವರ ದನದ ಕೊಟ್ಟಿಗೆಯಲ್ಲಿ ವರ್ಗಗಳು ನಡೆಯುತ್ತಿದ್ದವು. ಈ ವ್ಯವಸ್ಥೆಯನ್ನು ಸರಿಪಡಿಸಲು ರಾಯಪ್ಪ ಊರ ಪ್ರಮುಖರೊಂದಿಗೆ ಸೇರಿ ಊರಲ್ಲಿ ವಂತಿಕೆಗೆ ಎತ್ತಿದರು. ಸರಕಾರದಿಂದಲೂ ದೊರೆತ ಹಣಕಾಸಿನ ಸಹಾಯದಿಂದ ಪ್ರಾಥಮಿಕ ಶಾಲಾ ಕಟ್ಟಡವನ್ನು ಸ್ಥಾಪಿಸಿದರು."[೪೬] ಹೀಗೆ ಊರಲ್ಲಿ ಮಕ್ಕಳ ಶಿಕ್ಷಣಕ್ಕೆ ಕಾರಣರಾದವರು ರಾಯಪ್ಪ ನರಗುಂದ.

ಈ ರೀತಿ ಚಳುವಳಿಗಾರರು ಚಳುವಳಿಯೊಂದಿಗೆ ಶಿಕ್ಷಣಕ್ಕೆ ಆದ್ಯತೆ ನೀಡಿದ್ದು, ಅದಕ್ಕಾಗಿ ಅವರು ಶ್ರಮಿಸಿರುವುದನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

### ೬.೪. ಕರ್ನಾಟಕ ಏಕೀಕರಣಕ್ಕೆ ಜಿಲ್ಲೆಯ ಚಳುವಳಿಗಾರರ ಕೊಡುಗೆಗಳು

ಜಿಲ್ಲೆಯ ಚಳುವಳಿಗಾರರು ಸ್ವಾತಂತ್ರ್ಯ ಹೋರಾಟದೊಂದಿಗೆ ಕರ್ನಾಟಕ ಏಕೀಕರಣದಲ್ಲಿ ಮಹತ್ತರವಾದ ಪಾತ್ರವಹಿಸಿರುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯ ನಂತರವೂ ಏಕೀಕರಣಕ್ಕಾಗಿ ಹಲವು ಘಟನೆಗಳಿಗೆ ಸಾಕ್ಷಿಯಾದ ಹೋರಾಟದ ವಿವರವನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

#### ಕರ್ನಾಟಕ ಏಕೀಕರಣದ ಹಿನ್ನೆಲೆ

ಭೌಗೋಳಿಕವಾಗಿ ಮತ್ತು ಭಾಷಾ ದೃಷ್ಟಿಯಿಂದ ಭಾರತವನ್ನು ಭಾಷಾವಾರು ಪ್ರಾಂತ ರಚನೆಯ ಸಿದ್ಧಾಂತವನ್ನು ಮೊದಲು ಪ್ರತಿಪಾದಿಸಿದವರು ಬಿಹಾರದ ಮಹೇಶ ನಾರಾಯಣರು. ೧೯೧೫ರಲ್ಲಿ ಪುಣೆಯಲ್ಲಿ ನಡೆದ ರಾಷ್ಟ್ರೀಯ ಪರಿಷತ್ತು ಲೋಕಮಾನ್ಯ ತಿಲಕರ ಪ್ರೇರಣೆಯಿಂದ ಭಾಷಾವಾರು ಪ್ರಾಂತ ರಚನೆಯ ಅಗತ್ಯವನ್ನು ಒತ್ತಿ ಹೇಳಿತು. ೧೯೧೬ರ ವೇಳೆಗೆ ಕನ್ನಡಿಗರ ಪರವಾಗಿ ಕಡಪ ರಾಘವೇಂದ್ರರಾವ್, ಹೊನ್ನಾಪುರಮಠ ಗದಿಗೆಯ್ಯ ಮತ್ತು ಆಲೂರು ವೆಂಕಟರಾಯರು ಕರ್ನಾಟಕ ಏಕೀಕರಣದ ಬಗ್ಗೆ ಅರಿವು ಮೂಡಿಸಿದರು.

ಕರ್ನಾಟಕ ಏಕೀಕರಣದ ವಿಷಯವಾಗಿ "೧೮೯೦ರಲ್ಲಿ ಉದಯಸಿದ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ೧೯೧೬ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತುಗಳು ಮಾಡಿದ ಪ್ರಸಾರ ಕಾರ್ಯ ಮತ್ತು ಸಾಧಿಸಿದ ಸಂಘಟನೆಗಳು ವಿಶೇಷವಾಗಿದ್ದವು. ಕರ್ನಾಟಕ ಪ್ರತ್ಯೇಕ ರಾಜ್ಯವಾಗಬೇಕೆಂಬ ಸಂಗತಿಯನ್ನು ೧೯೨೮ರಲ್ಲಿ ಮುಂಬೈಯಲ್ಲಿ ಸೇರಿದ

ಕಾಂಗ್ರೆಸ್ ಅಧಿವೇಶನದಲ್ಲಿ ಸಭೆ ಒಪ್ಪಿಕೊಂಡಿತು. ಕರ್ನಾಟಕ ಪ್ರಾಂತ ರಚನೆ ಅನಿವಾರ್ಯವೆಂದೂ, ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತವಾದ ಕೂಡಲೇ ಕನ್ನಡಿಗರ ಕನಸು ನನಸಾಗುವುದೆಂದೂ ೧೯೩೭ರಲ್ಲಿ ಗಾಂಧೀಜಿ ಸ್ಪಷ್ಟಪಡಿಸಿದರು.

ಒಂದು ಕಡೆ ಎಂ.ಪಿ. ಪಾಟೀಲ್, ಕೆ.ಎಫ್. ಪಾಟೀಲ್, ಆರ್.ಆರ್. ದಿವಾಕರ, ಡಿ.ಪಿ. ಕರಮರಕರ್, ಗುದ್ಲೆಪ್ಪ ಹಳ್ಳಿಕೇರಿ, ಅಂದಾನಪ್ಪ ದೊಡ್ಡಮೇಟಿ, ಸಿದ್ದಪ್ಪ ಹೊಸಮನಿ ಮೊದಲಾದ ನಾಯಕರು ರಾಜಕೀಯ ಮಟ್ಟದಲ್ಲಿ ಸಂಧಾನಗಳನ್ನು ನಡೆಸಿದರೆ, ಅ.ನ. ಕೃಷ್ಣರಾಯರು, ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡೆಪ್ಯುಟಿ ಚನ್ನಬಸಪ್ಪ, ದ.ರಾ.ಬೇಂದ್ರೆ ಮೊದಲಾದ ಸಾಹಿತಿಗಳು, ಶಿಕ್ಷಣತಜ್ಞರೂ ಏಕೀಕರಣದ ಸಾಂಸ್ಕೃತಿಕ ಮಹತ್ವವನ್ನು ಭಾಷಣ, ಲೇಖನ, ಕವಿತೆಗಳ ಮೂಲಕ ವಿವರಿಸಿ ಜನತೆಯ ನಾಡಿಯನ್ನು ಮಿಡಿಯುತ್ತಿದ್ದರು."[೪೭] ಈ ದೆಸೆಯಲ್ಲಿ ಪತ್ರಿಕೆಗಳು ನಿರ್ವಹಿಸಿದ ಪಾತ್ರ ಪ್ರಮುಖವಾಗಿತ್ತು.

"ಏಕೀಕರಣ ಚಳುವಳಿಯನ್ನು ಹುಟ್ಟುಹಾಕಿದ್ದು ಧಾರವಾಡ ಜಿಲ್ಲೆಯೇ. ಆಲೂರರೇ ಇದರ ಕಾರಣಪುರುಷರು. ಸೈಮನ್ ಕಮಿಶನ್ ಕೂಡ ಭಾಷಾವಾರು ಕಲ್ಪನೆಯನ್ನು ಒಪ್ಪಿತ್ತು. ಆದರೆ ಕರ್ನಾಟಕದ ಕಾಂಗ್ರೆಸ್ ಈ ಬಗ್ಗೆ ಆಯೋಗಕ್ಕೆ ಯಾವುದೇ ಮನವಿ ಸಲ್ಲಿಸಲಿಲ್ಲ. ಇದರಿಂದ ಬಹುಶಃ ಆಯೋಗವು ಆಗಲೇ ಒಪ್ಪಬಹುದಾದ ಏಕೀಕರಣಕ್ಕೆ ವಿಳಂಬವಾಯಿತು. ೧೯೩೮ರಲ್ಲಿ ವಿಶ್ವನಾಥರಾವ್ ಜೋಗ್ ಅವರು ಏಕೀಕರಣದ ಪರ ಠರಾವನ್ನು ವಿಧಾನ ಸಭೆ(ಮುಂಬೈ)ಯಲ್ಲಿ ಮಂಜೂರು ಮಾಡಿಸಿದರು."[೪೮] ನಂತರ ೧೯೪೪ರಲ್ಲಿ ಧಾರವಾಡದಲ್ಲೇ ಒಂಬತ್ತನೆಯ ಏಕೀಕರಣ ಸಮ್ಮೇಳನವಾಯಿತು.

ಇತ್ತ ಹಾವೇರಿ ಗಡಿ ಭಾಗದ "ಜಕ್ಕಲಿಯಲ್ಲಿ ದೊಡ್ಡಮೇಟಿ ಅಂದಾನಪ್ಪ ೨೪.೧೧.೧೯೫೨ ರಿಂದ ಏಕೀಕರಣಕ್ಕಾಗಿ ೨೧ ದಿನ ಆತ್ಮಶುದ್ಧಿ ಉಪವಾಸ ಮಾಡಿದರು. ನಂತರ ಅಂದಾನಪ್ಪನವರು ಮುಂಬೈ ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು. ಧಾರವಾಡ ಜಿಲ್ಲೆಯಲ್ಲಿ ಆರಂಭವಾದ ಚಳುವಳಿ ಯಶಸ್ವಿಗೆ ಕೊನೆಯ ಉಗ್ರ ಸ್ವರೂಪವೂ ಧಾರವಾಡ ಜಿಲ್ಲೆಯಲ್ಲೇ ನಡೆಯಿತು."[೪೯] ಈ ಘಟನೆ ಏಕೀಕರಣದಲ್ಲಿ ಜಿಲ್ಲೆಯ ಪಾತ್ರಕ್ಕೆ ಸ್ಪಷ್ಟನೆಯಾಗಿದೆ.

ಹುಬ್ಬಳ್ಳಿಯ ಮೂರು ಸಾವಿರ ಮಠದ ಪಕ್ಕದ ಮನೆಯ ಮಠದ ಆಫೀಸಿನಲ್ಲಿ ಅಖಿಲ ಕರ್ನಾಟಕ ಕಾಂಗ್ರೆಸಿನ ಸಮ್ಮೇಳನದ ಸಭೆ ಕರೆದರು. ಅಲ್ಲಿ ಅಂದಿನ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯ ಮತ್ತು ಮೈಸೂರು ಪ್ರದೇಶದ ಕಾಂಗ್ರೆಸಿಗರನ್ನು ಆಹ್ವಾನಿಸಲಾಯಿತು. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳ ಕಾಂಗ್ರೆಸ್ ನಾಯಕರನ್ನು ಒಂದೇ ವೇದಿಕೆಯಲ್ಲಿ ಸೇರಿಸಿದ್ದು ಹಳ್ಳಿಕೇರಿ ಗುದ್ಲೆಪ್ಪನವರ ಸಾಧನೆಯಾಗಿತ್ತು.

೧೯೫೬ ನವೆಂಬರ್ ೧ರಂದು ಕನ್ನಡಿಗರ ರಾಜ್ಯ ಮೈಸೂರು ಎಂದು ನಾಮಕರಣವಾಯಿತು. ಆದರೆ ಅದಕ್ಕಾಗಿ ಹೋರಾಟ ಮಾಡಿದವರಿಗೆ ಸಂತೋಷವಾಗಲಿಲ್ಲ. ಕಾರಣ ಕನ್ನಡ ಮಾತನಾಡುವ

ಹಲವು ಪ್ರದೇಶಗಳು ರಾಜ್ಯಕ್ಕೆ ಸೇರಲಿಲ್ಲ. ಮತ್ತು ರಾಜ್ಯ ಪುನರ್‌ರಚನಾ ಸಮಿತಿ ೧೯೫೪ರಲ್ಲಿ ನಾಡಿಗೆ ಬಂದಾಗ 'ಕರ್ನಾಟಕ'ವೆಂದಾಗಬೇಕು ಎಂದು ಕೇಳಿಕೊಳ್ಳಲಾಗಿತ್ತು. ಆಗದಿರುವುದಕ್ಕೆ ಹೋರಾಡಿದ ನಾಯಕರಿಗೆ ನೋವುಂಟಾದ ಬಗ್ಗೆ ಹಾವೇರಿಯ ಏಕೀಕರಣ ಹೋರಾಟಗಾರ ಶಂಕರ ಗೋಕಾವಿ ನೆನಪಿಸಿಕೊಳ್ಳುತ್ತಾರೆ.

ಏಕೀಕರಣದ ಸುದೀರ್ಘ ಹೋರಾಟದಲ್ಲಿ ಹಾವೇರಿ ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು ನಿರ್ವಹಿಸಿದ ಪಾತ್ರವನ್ನು ಪ್ರಸ್ತಾಪಿಸಲಾಗಿದೆ. ಗುದ್ಲೆಪ್ಪ ಹಳ್ಳಿಕೇರಿ, ಟಿ.ಆರ್.ನೆಶ್ವಿ ಕೆ.ಎಫ್. ಪಾಟೀಲ್, ಹೊಸಮನಿ ಸಿದ್ದಪ್ಪ, ಪಂಚಾಕ್ಷರಿ ಒಳಸಂಗದ, ವಿರುಪಾಕ್ಷಪ್ಪ ಅಂಗಡಿ, ವೀರನಗೌಡ ಪಾಟೀಲ್ ಹೀಗೆ ನಾಯಕರನ್ನು ಏಕೀಕರಣ ಚಳುವಳಿಗೆ ಕಾಣಿಕೆಯಾಗಿ ನೀಡಿದ ಜಿಲ್ಲೆ ಹಾವೇರಿ. ಅವರು ನಿರ್ವಹಿಸಿದ ಪಾತ್ರಗಳನ್ನು ವಿವರಿಸಲಾಗಿದೆ.

**೧. ಹಳ್ಳಿಕೇರಿ ಗುದ್ಲೆಪ್ಪ**

ಅಖಂಡ ಕರ್ನಾಟಕದ ಶಿಲ್ಪಿಗಳಲ್ಲಿ ಪ್ರಮುಖರು ಗುದ್ಲೆಪ್ಪ ಹಳ್ಳಿಕೇರಿ. ಕೆಲವೊಂದು ರಾಜಕೀಯ ಕಾರಣಗಳಿಂದ ಏಕೀಕರಣವು ವಿಳಂಬವಾಗುತ್ತಿದ್ದಾಗ ಹಾಗೂ ಏಕೀಕರಣವನ್ನು ರಾಜಕೀಯ ಕಾರಣಗಳಿಂದಾಗಿ ಮುಂದೂಡುವುದು ಗುದ್ಲೆಪ್ಪ ಅವರಿಗೆ ಅಸಮಧಾನವಾಗುತ್ತಿತ್ತು. ಸರಕಾರದ ವಿಳಂಬ ನೀತಿಯನ್ನು ಉಗ್ರವಾಗಿ ಪ್ರತಿಭಟಿಸಿ "೧೯೫೩ರ ಮಾರ್ಚ್ ೨೮ರಂದು ಅದರಗುಂಚಿಯ ಶಂಕರಗೌಡರು ಆಮರಣ ಉಪವಾಸ ಪ್ರಾರಂಭಿಸಿದರು. ಶಂಕರಗೌಡರ ಸ್ಥಿತಿಯು ದಿನೇ ದಿನೇ ಕ್ಷೀಣಿಸುತ್ತ ಚಿಂತಾಜನಕವಾಯಿತು. ಇಡೀ ನಾಡು ಉದ್ವೇಗ, ಕಾತರತೆಯಿಂದ ಶಂಕರಗೌಡರ ದೇಹಸ್ಥಿತಿ ಗಮನಿಸತೊಡಗಿತು. ಇಂತಹ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಗುದ್ಲೆಪ್ಪ ೧೯೫೩ನೇ ಏಪ್ರಿಲ್ ೯ರಂದು ಹುಬ್ಬಳ್ಳಿ ನಗರದ ಟೌನ್‌ಹಾಲ್‌ದಲ್ಲಿ ಕೆ.ಪಿ.ಸಿ.ಸಿ ಸಭೆ ಸಮಾವೇಶಗೊಳಿಸಿದರು. ಅಂದು ಹುಬ್ಬಳ್ಳಿಯ ಟೌನ್ ಹಾಲ್ ಸುತ್ತಮುತ್ತ ಸೇರಿದ ಜನಸ್ತೋಮ ಉದ್ವೇಗಕ್ಕೊಳಗಾಗಿ ತೀವ್ರ ಹಿಂಸಾಕೃತ್ಯಕ್ಕಿಳಿಯಿತು. ಕೆ.ಪಿ.ಸಿ.ಸಿ.ಯ ವಾಹನಕ್ಕೆ ಬೆಂಕಿ ಇಟ್ಟು ಸುಟ್ಟು(ದೇಜಗೌರವರ ಕರ್ನಾಟಕದ ರೂವಾರಿ ಗ್ರಂಥದಲ್ಲಿ ಹಳ್ಳಿಕೇರಿ ಗುದ್ಲೆಪ್ಪನವರ ಕಾರಿಗೆ ಬೆಂಕಿ ಹಚ್ಚಲಾಯಿತು ಎಂದು ಉಲ್ಲೇಖಿಸಲಾಗಿದೆ.) ಭಸ್ಮಗೊಳಿಸಲಾಯಿತು. ಟೌನ್ ಹಾಲ್ ಒಳಗಿದ್ದ ಕಾಂಗ್ರೆಸ್ ನಾಯಕರು ಭೀತಿಯಿಂದ ಕಂಪಿಸತೊಡಗಿದರು. ಪರಿಸ್ಥಿತಿಯ ತೀವ್ರತೆಯನ್ನು ಅರಿತ ಗುದ್ಲೆಪ್ಪ ಜನಜಂಗುಳಿಯ ಮಧ್ಯದಲ್ಲಿ ಬಂದು ನಿಂತಾಗ, ಎಲ್ಲ ಚಳುವಳಿಗಾರರು ಕ್ಷಣ ಮಾತ್ರದಲ್ಲಿ ಶಾಂತವಾದರು,"[೫೦] ದೇಜಗೌರವರು ಉಲ್ಲೇಖಿಸಿರುವ ಹಳ್ಳಿಕೇರಿ ಗುದ್ಲೆಪ್ಪನ ಕಾರನ್ನು ಚಳುವಳಿಗಾರರು ಸುಟ್ಟರು ಎಂಬ ಉಲ್ಲೇಖಕ್ಕೆ ಗುದ್ಲೆಪ್ಪ ಹಳ್ಳಿಕೇರಿಯ ಒಡನಾಡಿ ದೇವೇಂದ್ರಪ್ಪ ವಿಭೂತಿ ಹಾಗೂ ಜಿಲ್ಲೆಯ ಏಕೀಕರಣ ಹೋರಾಟಗಾರ ಶಂಕರ ಗೋಕಾವಿ ಆಕ್ಷೇಪಿಸುತ್ತಾರೆ. ಬದಲಾಗಿ ಆ ಕಾರು ಸರಕಾರಕ್ಕೆ ಸೇರಿದ್ದೇ ವಿನಃ ಹಳ್ಳಿಕೇರಿ ಗುದ್ಲೆಪ್ಪನವರದಲ್ಲ ಎಂದು ಹೇಳುತ್ತಾರೆ.

'ಮಹಾಜನತೆ ತಾಳ್ಮೆ ಕಳೆದುಕೊಳ್ಳಬಾರದು' ಕರ್ನಾಟಕ ಏಕೀಕರಣ ಕಾರ್ಯ ವಿಳಂಬವಾದರೆ ಮೊದಲು ನನ್ನ ಪ್ರಾಣ ತಾಯಿ ಭೂವನೇಶ್ವರಿಗೆ ಅರ್ಪಿಸುವೆ. ನಂತರ ಶಂಕರಗೌಡರದು.

ನಾನು ಇರುವವರೆಗೆ ಶಂಕರಗೌಡರ ಪ್ರಾಣಕ್ಕೆ ಏನೂ ಆಗದಂತೆ ನೋಡಿಕೊಳ್ಳುವೆ. ಈಗಲೇ ಖುದ್ದಾಗಿ ಅವರಲ್ಲಿ ಹೋಗಿ ಉಪವಾಸ ತ್ಯಜಿಸಲು ವಿನಂತಿಸುವೆ.' ಎಂದು ಗುದ್ಲೆಪ್ಪ ಹಳ್ಳಿಕೇರಿ ಹೇಳಿದಾಗ ಸೇರಿದ್ದ ಲಕ್ಷಾಂತರ ಜನತೆ ಚಪ್ಪಾಳೆ ತಟ್ಟಿ ಏಕೀಕರಣ ಮತ್ತು ಹಳ್ಳಿಕೇರಿ ಗುದ್ಲೆಪ್ಪಗೆ ಜಯಕಾರ ಹಾಕಿತು. ಇದು ನಡೆದಿದ್ದು ಹುಬ್ಬಳ್ಳಿಯ ದುರ್ಗದ ಬೈಲಿನಲ್ಲಿ ಎಂಬುದನ್ನು ಅಂದಿನ ಚಳುವಳಿಗಾರ ಹಾವೇರಿಯ ರುದ್ರಪ್ಪ ಜಾಬಿನ ಹಾಗೂ ಶಂಕರ ಗೋಕಾವಿ ನೆನಪಿಸಿಕೊಳ್ಳುತ್ತಾರೆ.

'೧೯೫೩-೫೪ನೇ ಸಾಲಿನಲ್ಲಿ ಹಳ್ಳಿಕೇರಿ ಗುದ್ಲೆಪ್ಪ ವಿಶಾಲ ಕರ್ನಾಟಕ ರಚನೆಯ ಕನಸನ್ನು ಮುಂದಿಟ್ಟುಕೊಂಡು, ಮೈಸೂರು ಪ್ರಾಂತದ ಅನೇಕ ರಾಜಕೀಯ ಧುರೀಣರನ್ನು, ಸಾಮಾಜಿಕ ಮುಂದಾಳುಗಳನ್ನು ಹಾಗೂ ಕವಿಗಳನ್ನು ಸಂದರ್ಶಿಸಿದರು. ಅವರಿಗೆ ಮುಂಬಯಿ ಮತ್ತು ಹೈದರಾಬಾದ್ ಕರ್ನಾಟಕದ ಮಹತ್ವವನ್ನು ವಿವರಿಸಿದರಲ್ಲದೆ, ಅಂದಿನ ಕೆ.ಪಿ.ಸಿ.ಸಿ.ಯ ಅಧ್ಯಕ್ಷರಾಗಿದ್ದ ಕೆಂಗಲ್ ಹನುಮಂತಯ್ಯ, ಎಸ್. ನಿಜಲಿಂಗಪ್ಪ, ಕೆ.ಸಿ. ರೆಡ್ಡಿ, ಎಚ್.ಸಿ. ದಾಸಪ್ಪ, ಸಿದ್ಧಲಿಂಗಯ್ಯ ಮುಂತಾದ ನಾಯಕರನ್ನು ಮುಂಬಯಿ ಮತ್ತು ಹೈದರಾಬಾದ್ ಪ್ರದೇಶಗಳಿಗೆ ಕರೆದುಕೊಂಡು ಹೋಗಿ ಅನೇಕ ಕನ್ನಡದ ಐತಿಹಾಸಿಕ ಪ್ರದೇಶಗಳ, ಅನೇಕ ದಾಸರ, ಕವಿಪುಂಗವರ, ಕ್ರಾಂತಿಕಾರಿಗಳ ಪ್ರದೇಶಗಳ ಸಂದರ್ಶನ ಮಾಡಿಸಿದರು. ಇದರಿಂದ ಸಮಗ್ರ ಕರ್ನಾಟಕ ಪರಿಕಲ್ಪನೆಯನ್ನು ತುಂಬಿದ ಕೀರ್ತಿ ಗುದ್ಲೆಪ್ಪನವರಿಗೆ ಸಲ್ಲುತ್ತದೆ" ಎಂದು ದೇವೇಂದ್ರಪ್ಪ ವಿಭೂತಿ, ಏಕೀಕರಣ ಚಳುವಳಿಗಾರ ಶಂಕರ ಗೋಕಾವಿ ಹಾಗೂ ರುದ್ರಪ್ಪ ಜಾಬಿನ್ ಹೇಳಿಕೆಯಿಂದ ಗುರುತಿಸಲಾಗಿದೆ.

"ನಾಡು-ನುಡಿ ವಿಚಾರದಲ್ಲಿ ಹಳ್ಳಿಕೇರಿ ಗುದ್ಲೆಪ್ಪ ಎಂಥವರನ್ನು ಎದುರು ಹಾಕಿಕೊಳ್ಳಲು ಹಿಂಜರಿಯುತ್ತಿರಲಿಲ್ಲ ಎಂಬುದಕ್ಕೆ ಒಂದು ಘಟನೆ-ಮಹಾರಾಷ್ಟ್ರ ಸರಕಾರದ ಒತ್ತಡಕ್ಕೆ ಮಣಿದು ಕರ್ನಾಟಕ ಮಹಾರಾಷ್ಟ್ರ ಗಡಿ ನಿರ್ಧರಿಸಲು ಭಾರತೀಯ ಕಾಂಗ್ರೆಸ್ ಕಾರ್ಯಕಾರಿ ಸಮಿತಿ 'ಮಹಾಜನ್ ಕಮೀಶನ್' ಏಕಸದಸ್ಯ ಆಯೋಗ ನೇಮಿಸಲು ನಿರ್ಣಯ ತೆಗೆದುಕೊಂಡ ಸಭೆಯಲ್ಲಿ ರಾಜ್ಯದ ಮುಖ್ಯಮಂತ್ರಿಯಾಗಿ ಹಾಗೂ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಪಾಲ್ಗೊಂಡು ಈ ಸಭೆಯಲ್ಲಿಯ ನಿರ್ಣಯಕ್ಕೆ ಸಮ್ಮತಿಸಿದ ನಿಜಲಿಂಗಪ್ಪನವರ ಕ್ರಮವನ್ನು ಬಹಿರಂಗವಾಗಿ ತರಾಟೆಗೆ ತೆಗೆದುಕೊಂಡವರು ಗುದ್ಲೆಪ್ಪ ಹಳ್ಳಿಕೇರಿ. ನಿರ್ಣಯ ತೆಗೆದುಕೊಳ್ಳುವಾಗ ಇವರೇನು ನಿದ್ರೆ ಮಾಡುತ್ತಿದ್ದರೇ? ಎಂದು ಅಸಮಾಧಾನದಿಂದ ಗರ್ಜಿಸಿ, ಮರುದಿನವೇ ಸಾಯಂಕಾಲ ಹುಬ್ಬಳ್ಳಿ ಅಶೋಕ ನಗರ ಹಾಗೂ ಕೆ.ಎಂ.ಸಿ. ನಡುವೆ ರೇಲ್ವೆ ತಡೆ ಮಾಡಿದ ಜನಸಮೂಹದ ನೇತೃತ್ವ ವಹಿಸುವ ಮೂಲಕ ತಮ್ಮ ಅಸಮಾಧಾನ ಪ್ರದರ್ಶಿಸಿದರು."[೫೧] ಇಲ್ಲಿ ತಮ್ಮದೇ ಪಕ್ಷದ ನಾಯಕರನ್ನೇ ಧಿಕ್ಕರಿಸಿದ್ದು ಅವರ ದೃಢ ನಿರ್ಧಾರಕ್ಕೆ ಸಾಕ್ಷಿ.

೧೯೭೦ರಲ್ಲಿ ಕರ್ನಾಟಕ-ಮಹಾರಾಷ್ಟ್ರ ಗಡಿ ಸಮಸ್ಯೆ ಕುರಿತು ನೇಮಿಸಲ್ಪಟ್ಟ ಮಹಾಜನ್ ಆಯೋಗ ಬಂದಾಗ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ನಾಡಿನ ಪ್ರದೇಶಗಳ ಬಗ್ಗೆ

ವಕಾಲತ್ತು ನಡೆಸಲು ಗುದ್ಲೆಪ್ಪನವರ ನೇತೃತ್ವದಲ್ಲಿ ಏಕ ಸದಸ್ಯ ಆಯೋಗವನ್ನು ನೇಮಿಸಿದರು. ಆ ಕಾರ್ಯವನ್ನು ಗುದ್ಲೆಪ್ಪ ಯಶಸ್ವಿಯಾಗಿ ನೆರವೇರಿಸಿದ ಬಗ್ಗೆ ಮತ್ತು ಕರ್ನಾಟಕ ಏಕೀಕರಣದ ಶಿಲ್ಪಿಗಳಲ್ಲಿ ಗುದ್ಲೆಪ್ಪ ಹಳ್ಳಿಕೇರಿ ಪ್ರಮುಖ ಸ್ಥಾನ ಪಡೆದ ಬಗ್ಗೆ ಹಿರಿಯ ರಾಜಕಾರಣಿ ಬಿ.ಜಿ. ಬಣಕಾರ ಅವರಿಂದ ತಿಳಿಯಬಹುದಾಗಿದೆ.

**೨. ಟಿ.ಆರ್. ನೆಶ್ವಿ**

ಸ್ವಾತಂತ್ರ್ಯ ಚಳುವಳಿ ಕರ್ನಾಟಕ ಏಕೀಕರಣ ಚಳುವಳಿ ಎರಡರಲ್ಲಿಯೂ ಸಕ್ರಿಯವಾಗಿ ಭಾಗವಹಿಸಿ, ತಮ್ಮ ಜೀವಿತಾವಧಿಯಲ್ಲಿಯೇ ಎರಡೂ ನನಸುಗೊಂಡುದುದನ್ನು ಕಂಡವರು.

ಕರ್ನಾಟಕ ಏಕೀಕರಣವನ್ನು ಭಾರತ ಸ್ವಾತಂತ್ರ್ಯದೊಂದಿಗೆ ಪ್ರತಿಪಾದಿಸುತ್ತ ಬಂದಿದ್ದ ಟಿ.ಆರ್. ನೆಶ್ವಿ ಏಕೀಕರಣ ಹೋರಾಟಕ್ಕೆ ಹಿಂದುಳಿಯಲಿಲ್ಲ. 'ನವಯುಗ' ದೈನಿಕ ಪತ್ರಿಕೆಯಲ್ಲಿ ಕರ್ನಾಟಕ ಏಕೀಕರಣ ವಿಷಯವಾಗಿ ಅನೇಕ ಲೇಖನಗಳನ್ನು, ಹಿರಿಯರ ವಿಚಾರಗಳನ್ನು ಪ್ರಕಟಿಸಿದರು. ಕನ್ನಡ ನಾಡು, ನುಡಿ ಬಗೆಗೆ ಅಧ್ಯಯನ ಮಾಡಿದರು. ಈ ಬಗೆಗೆ ಇಂಗ್ಲಿಷ್‌ನಲ್ಲಿ ಸುದೀರ್ಘ ಲೇಖನವೊಂದನ್ನು ಬರೆದು 'Statement of T.R. Nesvi MP. ಎಂಬ ರೂಪ ತಾಳಿದ ಬಗ್ಗೆ ಸಂಶೋಧಕ ಭೋಜರಾಜ ಪಾಟೀಲರು ತಿಳಿಸುತ್ತಾರೆ.

**ಉಪವಾಸ ಸತ್ಯಾಗ್ರಹ** : ತಿ.ರು. ನೆಶ್ವಿ ಪ್ರಯತ್ನಗಳಲ್ಲಿ **ಉಪವಾಸ ಸತ್ಯಾಗ್ರಹ** ಪ್ರಮುಖವಾದದ್ದು. ಸರಕಾರ ಹಾಗೂ ಜನರನ್ನು ಏಕಕಾಲದಲ್ಲಿಯೇ ಎಚ್ಚರಿಸಬೇಕೆಂಬ ಉದ್ದೇಶದಿಂದ ತೀವ್ರ ಸ್ವರೂಪದ ಸತ್ಯಾಗ್ರಹ ಕೈಗೊಳ್ಳಲು ನಿರ್ಧರಿಸಿದರು. ಹುಬ್ಬಳ್ಳಿಯ ದೇಶಪಾಂಡೆ ನಗರದ ತಾವಿದ್ದ ಬಾಡಿಗೆ ಮನೆಯಲ್ಲಿಯೇ ೧೫.೧.೧೯೫೩ರ ಬೆಳಗಿನ ೧೧ ಘಂಟೆಯಿಂದ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದರು. ೨೨.೧.೧೯೫೩ರಂದು ಮುಕ್ತಾಯಗೊಳಿಸಿದರು.

**ನೆಶ್ವಿಯವರ ಉಪವಾಸ ಹಾಗೂ ಉದ್ದೇಶಗಳಿಗೆ ಜಯ ಕೋರಿ ಅನೇಕ ವ್ಯಕ್ತಿಗಳು ಹಾಗೂ ಸಂಘ-ಸಂಸ್ಥೆಗಳು ಪತ್ರ ಬರೆದರು**

ಕರ್ನಾಟಕ ರಾಜ್ಯ ನಿರ್ಮಾಣ ಶಿಬಿರದ ಪರವಾಗಿ ಅಂದಾನಪ್ಪ ದೊಡ್ಡಮೇಟಿ, ತಿಮ್ಮಣ್ಣ ಹೊಸಮನಿ, 'ಯುಗ ಶಕ್ತಿ' ಪತ್ರಿಕೆಯ ಸಂಪಾದಕರು, ಎಂ.ಎಸ್. ಕೇಸರಿ ವಕೀಲರು, ಧಾರವಾಡ, ಡಾ. ಎನ್.ಬಿ. ಗೋಡಬೋಲೆ ಗದಗ - ಹೀಗೆ ಇನ್ನೂ ಹಲವರೊಂದಿಗೆ ಹಿರೇಕೆರೂರು, ಹಾವೇರಿ, ರಾಣೆಬೆನ್ನೂರು ಹಾಗೂ ಬ್ಯಾಡಗಿ ತಾಲೂಕುಗಳ ಅನೇಕ ಸ್ವಾತಂತ್ರ್ಯ ಯೋಧರು ಭಾಗವಹಿಸಿರುವುದನ್ನು ಜಿಲ್ಲೆಯ ಏಕೀಕರಣ ಚಳುವಳಿಕಾರರು ನೆನಪಿಸುತ್ತಾರೆ.

**ನೆಶ್ವಿಯವರು ಉಪವಾಸ ಕಾಲದಲ್ಲಿ ಭೇಟಿಗೆ ಬಂದ ಪ್ರಮುಖರು** : "ಶಾಂತಪ್ಪ ಎಳಮಲ್ಲಿ, ಮಿರ್ಜಿ ವಕೀಲರು, ಹುಬ್ಬಳ್ಳಿ, ಪಿ.ಎಸ್. ಹಿರೇಮಠ, ಡಾ.ತೆಗ್ಗಿನಮನಿ, ಡಾ.ಕಮಲಾನಿ, ಮಹಾಲಿಂಗ ಶೆಟ್ಟರ್, ಕೇಸರಿ ವಕೀಲರು, ದತ್ತಪ್ಪ ಕಟಾವಕರ, ಲೀಲಾವತಿ ಮಾಗಡಿ, ನಾಗಮ್ಮ- ವೀರನಗೌಡ ಪಾಟೀಲ ದಂಪತಿಗಳು, ಹುಲಕೋಟಿ ಎಂ.ಎಲ್.ಎ, ತೇಲ್ಕರ ದಂಪತಿಗಳು ಹಂಸಬಾವಿ,

ಶಿವಪ್ಪ ದೀವಿಗಿಹಳ್ಳಿ, ಜೆ.ವಿ. ಹಳ್ಳಿಕೇರಿ, ಎನ್.ಆರ್. ಹಿರೇಮಠ, ಎಚ್.ಓ. ಕೊಡ್ಲೇರ ಶಿದ್ದಲಿಂಗಪ್ಪ ಬೆಲ್ಲದ ಇನ್ನೂ ಮುಂತಾದವರು ನೆಶ್ವಿಯವರ ಉಪವಾಸ ಸಂದರ್ಭದಲ್ಲಿ ಬಂದು ಭೇಟಿ ಮಾಡಿದರು.

**ಲೋಕಸಭೆಯಲ್ಲಿ ಪ್ರಸ್ತಾಪ** : ತಿ.ರು. ನೆಶ್ವಿ ೨೨.೨.೧೯೫೩ರಂದು ಲೀಲಾವತಿ ತಾಯಿ ಮಾಗಡಿ, ಗುದ್ಲೆಪ್ಪ ಹಳ್ಳಿಕೇರಿ, ಮಹಾಲಿಂಗ ಶೆಟ್ಟರು, ವಿರುಪಾಕ್ಷಪ್ಪ ಕಟ್ಟಿಮನಿ, ಎನ್.ಡಿ. ವಾಲೆ ಹಾಗೂ ಅವರ ತಾಯಿ ಸೇರಿದಂತೆ ಇನ್ನೂ ಹಲವಾರು ಗಣ್ಯರ ಸಮ್ಮುಖದಲ್ಲಿ ಉಪವಾಸ ವ್ರತ ಮುಗಿಸಿದರು. ಈ ಸಂದರ್ಭದಲ್ಲಿ ಮೆಳ್ಳಿಗಟ್ಟಿ, ಚಚಡಿ, ದಿ ಹಿಂದೂ ಪ್ರತಿನಿಧಿ ಮತ್ತು ಇತರ ಪತ್ರಕರ್ತರು ಹಾಜರಿದ್ದು 'ಕರ್ನಾಟಕ ಏಕೀಕರಣ ಬಗೆಗೆ ಶ್ರೀ ಟಿ.ಆರ್. ನೆಶ್ವಿ ನಿಲುವು' ಎಂಬ ತಲೆಬರಹದಡಿಯಲ್ಲಿ ವಿಷಯ ಪ್ರಕಟವಾಯಿತು. ಮುಂಬೈಯ 'ಟೈಮ್ಸ್ ಆಫ್ ಇಂಡಿಯಾ' ಇಂಗ್ಲೀಶ್ ದೈನಿಕ ೨೫.೧.೧೯೫೩ರ ರವಿವಾರ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿತು. ೧೬.೨.೧೯೫೩ ರಂದು ಶಿವಮೂರ್ತಿಸ್ವಾಮಿ ಲೋಕಸಭೆಯಲ್ಲಿ ಭಾಷಾವಾರು ಪ್ರಾಂತ ರಚನೆ ಮೇಲೆ ಭಾಷಣ ಮಾಡಿದರು. ಆಗ ತಿ.ರು. ನೆಶ್ವಿ ಉಪವಾಸ ನಂತರ ಕೊಟ್ಟ ಹೇಳಿಕೆಯನ್ನು ಓದಿದರು."[೫೨]

ತಿ.ರು. ನೆಶ್ವಿ ಉಪವಾಸ ಆಚರಿಸಿದ್ದು ಕೇವಲ ಏಳು ದಿನಗಳು, ಅದೂ ಸಾರ್ವಜನಿಕ ಗಮನಸೆಳೆದ ಪ್ರಸಿದ್ಧ ಸ್ಥಳದಲ್ಲಲ್ಲ. ಸ್ವಗೃಹದಲ್ಲಿ; ಹೀಗಿದ್ದರೂ ಅವರಿಗೆ ಯಶಸ್ಸು ಕೋರಿ ಬಂದ ಪತ್ರಗಳು ಹಾಗೂ ಭೇಟಿಗೆ ಬಂದ ಗಣ್ಯರು ಕರ್ನಾಟಕದ ವಿವಿಧ ಭಾಗಗಳಿಗೆ ಸೇರಿದವರೆಂಬುದನ್ನು ಗಮನಿಸಿದರೆ ಅವರು ಆಚರಿಸಿದ ಉಪವಾಸ ಕರ್ನಾಟಕದ ಎಲ್ಲೆಡೆ ಜಾಗೃತಿಯನ್ನುಂಟುಮಾಡುವಲ್ಲಿ ಯಶಸ್ವಿಯಾಯಿತೆಂದು ದೃಢವಾಗುತ್ತದೆ. ಅದರಗುಂಚಿ ಶಂಕರಗೌಡ ಪಾಟೀಲ 'ಕರ್ನಾಟಕ ಏಕೀಕರಣ'ಕ್ಕಾಗಿ ಆಮರಣ ಉಪವಾಸ ಪ್ರಾರಂಭಿಸಿದ್ದು ತಿ.ರು. ನೆಶ್ವಿ ಉಪವಾಸ ಮುಕ್ತಾಯವಾದ ಎರಡು ತಿಂಗಳುಗಳ ಮೇಲೆ"[೫೩] ಎಂಬುದನ್ನು ಕಂಡುಕೊಂಡರೆ ಅವರ ಉಪವಾಸದ ಪ್ರಾಮುಖ್ಯತೆ ಅರಿವಾಗದಿರದು ಎಂದು ಸಂಶೋಧಕ ಭೋಜರಾಜ ಪಾಟೀಲರು ಹೇಳುತ್ತಾರೆ.

**೩. ಕೆ.ಎಫ್. ಪಾಟೀಲ್**

ಕೆ.ಎಫ್. ಪಾಟೀಲ್ ರಾಜಕೀಯ ಶಕ್ತಿ ಬಳಕೆಯ ಮೂಲಕವೇ ಹೊಸ ನಾಡಿನ ಹುಟ್ಟು ಸಾಧ್ಯ ಎಂದು ನಂಬಿದವರಲ್ಲಿ ಒಬ್ಬರು. ತಮ್ಮ ರಾಜಕೀಯ ಶಕ್ತಿ ಸಂಪರ್ಕದ ಅನುಭವಗಳನ್ನು ಚತುರತೆಯಿಂದ ಬಳಸಿಕೊಂಡು ಏಕೀಕರಣಕ್ಕೆ ರಾಜಕೀಯ ಶಕ್ತಿಧಾರೆ ಎರೆದವರು. ಮುಂಬೈ ಕರ್ನಾಟಕ ಸಂಘದವರು ಏರ್ಪಡಿಸಿದ್ದ ಮೊದಲ ವಾರ್ಷಿಕೋತ್ಸವದಲ್ಲಿ ಮಾತನಾಡುತ್ತಾ ನನ್ನ ಸ್ಥಾನಕ್ಕೆ ಏಕೀಕರಣಕ್ಕಾಗಿ ರಾಜೀನಾಮೆ ಕೊಟ್ಟೇನು(೭.೯.೧೯೪೭) ಎನ್ನುವ ಪಾಟೀಲರು ಕನ್ನಡದ ಭೂಮಿ, ಖನಿಜ, ಜಲ, ಅರಣ್ಯ ಶಕ್ತಿಗಳ ಸರಿಯಾದ ಉಪಯೋಗ ಹೇಳಿ ಮರಾಠಿಗರ ಕೆಂಗಣ್ಣಿಗೆ ಗುರಿಯಾದವರು. ಇವರು ಪ್ರತ್ಯೇಕ ಕನ್ನಡಿಗರ ಪ್ರಾಂತ ರಚನೆಗೆ ಆಳವಾದ ಅಭ್ಯಾಸ ಮಾಡಿ ಆ ವಿಚಾರಗಳನ್ನು ವಿಶಾಲ ಕರ್ನಾಟಕ ಪತ್ರಿಕೆಯಲ್ಲಿ ಚಳುವಳಿಗಾರರಿಗೆ ಶಕ್ತಿ ತುಂಬಿದ ಬಗ್ಗೆ ದೇವೇಂದ್ರಪ್ಪ ವಿಭೂತಿ ವಿವರಿಸುತ್ತಾರೆ.

ಕೆ.ಎಫ್. ಪಾಟೀಲ್ "೧೯೩೨ರಲ್ಲಿ ಬೆಳಗಾವಿ ಜೈಲಿನಲ್ಲಿರುವಾಗ ಒಂದು ಘಟನೆಯನ್ನು ಕಂಡರು–ಸ್ವಾತಂತ್ರ್ಯ ಯೋಧರಾಗಿದ್ದ ಮರಾಠಿ ಕೈದಿಗಳು ಕನ್ನಡಿಗ ಚಳುವಳಿಗಾರರನ್ನು ಕೀಳಾಗಿ ಕಾಣುತ್ತಿದ್ದರಿಂದ ಸಿಟ್ಟಿಗೆದ್ದ ಪಾಟೀಲರು ನಾನು ಇನ್ನೊಮ್ಮೆ ಈ ಸೆರಮನೆಗೆ ಬಂದರೆ ಅದು ಮರಾಠಿಗರ ಆಕ್ರಮಣದ ವಿರುದ್ಧ ಹೋರಾಡಿ ಬರುವೆ ಎಂದು ಗುಡುಗಿದವರು.

ಹಾವೇರಿ ಜಿಲ್ಲೆಯ ಭಾಗದ ಏಕೀಕರಣ ಹೋರಾಟಗಾರರಾದ ಹೊಸಮನಿ ಸಿದ್ದಪ್ಪ ಹಳ್ಳಿಕೇರಿ ಗುದ್ಲೆಪ್ಪ, ಟಿ.ಆರ್. ನೆಶ್ವಿ, ಎಸ್.ಬಿ. ಪಾಟೀಲ, ಎಸ್.ಬಿ. ಹಿರೇಮಠ, ಪಂಚಾಕ್ಷರಪ್ಪ ವಳಸಂಗದ, ಹಂದಿಗನೂರು ಮಾಮಲೇದೇಸಾಯಿ ಮುಂತಾದವರೊಂದಿಗೆ ನಿಕಟ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಅಂದಿನ ಗೃಹಶಾಖೆಯ ಮಂತ್ರಿಗಳಾದ ಎಚ್. ಸಿದ್ಧವೀರಪ್ಪ ಪಾಟೀಲರಿಂದ ಅನೇಕ ಮಾಹಿತಿಗಳನ್ನು ಕೇಳಿ ಪಡೆಯುತ್ತಿದ್ದರು. ಇವರಿಗೆ ಮುಂಬೈ ಮತ್ತು ಮೈಸೂರು ಸಂಸ್ಥಾನದ ಪ್ರತಿ ಜಿಲ್ಲೆಯ ವಿವಿಧ ಕ್ಷೇತ್ರಗಳ ಅಂಕಿ–ಸಂಖ್ಯೆಗಳು ತಿಳಿದಿದ್ದವು"[೫೪] ಎಂದರೆ ಪಾಟೀಲರ ಅಧ್ಯಯನದ ಪರಿ ತಿಳಿಯುತ್ತದೆ.

ಕೆ.ಎಫ್. ಪಾಟೀಲ್ "೨.೧೧.೧೯೧೧ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಿಗೆ ಪತ್ರ ಬರೆದು ರಾ.ಪು.ಆಯೋಗದ ಶಿಫಾರಸ್ಸುಗಳ ಅನುಷ್ಠಾನವು ಭಾಷಾವಾರು ರಾಜ್ಯಗಳ ರಚನೆಯಿಂದಾಗಿ ನಮ್ಮ ತರುಣ ಪ್ರಜಾಪ್ರಭುತ್ವ ವರ್ಧನೆಯಲ್ಲಿ ಹೊಸ ಶಕೆ ಪ್ರಾರಂಭಿಸುವುದು ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದರ ಸಂಗಡ ಐದು ಸಲಹೆಗಳನ್ನು ನೀಡಿದ್ದಾರೆ. ೧. ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಹೊಸಪೇಟೆ, ಶಿರಗುಪ್ಪ ಮತ್ತು ಮಲ್ಲಾಪುರ ಈ ನಾಲ್ಕು ತಾಲೂಕುಗಳನ್ನು ಕರ್ನಾಟಕದಲ್ಲಿಯೇ ಉಳಿಯಬೇಕು. ಕಾರಣ ಅಲ್ಲಿ ಶೇ. ೬೦ರಷ್ಟು ಜನ ಕನ್ನಡಿಗರಿದ್ದಾರೆ. ೨. ಅನಂತಪುರ ಜಿಲ್ಲೆಯ ಮಡಕಸಿರಾ ಕರ್ನಾಟಕಕ್ಕೆ ಬರಬೇಕು. ೩. ಕೊಲ್ಲಾಪುರ ಜಿಲ್ಲೆಯ ಅಕ್ಕಲಕೋಟೆ ತಾಲೂಕು ಕರ್ನಾಟಕಕ್ಕೆ ಸೇರಬೇಕು. ಕಾರಣ ಅಲ್ಲಿ ಶೇ. ೫೫ರಷ್ಟು ಪ್ರತಿಶತ ಕನ್ನಡಿಗರಿದ್ದಾರೆ. ೪. ದಕ್ಷಿಣ ಕೊಲ್ಲಾಪುರ ಕೂಡ ಕರ್ನಾಟಕಕ್ಕೆ ಸೇರಬೇಕು. ೫. ಬೀದರ್ ಜಿಲ್ಲೆಯ ನಾಲ್ಕು ತಾಲೂಕುಗಳಾದ ಬೀದರ, ಬಾಲ್ಕಿ, ಹುಮನಾಬಾದ ಹಾಗೂ ಸಂತಪುರ ಇವುಗಳನ್ನು ಕರ್ನಾಟಕಕ್ಕೆ ಸೇರಿಸಿಕೊಳ್ಳಬೇಕು."[೫೫]

ಹೀಗೆ ಕೆ.ಎಫ್. ಪಾಟೀಲ್ ತಮ್ಮ ಸೂಚನೆಗಳನ್ನು ಆಯೋಗಕ್ಕೆ ನೀಡಿದರು. ಅನಂತರದಲ್ಲಿ ಕರ್ನಾಟಕ ರಾಜ್ಯ ಸ್ಥಾಪನೆಯಾದಾಗ ಈ ಕೆಲವು ಸೂಚನೆಗಳು ಅನುಷ್ಠಾನಗೊಂಡದ್ದು ಇತಿಹಾಸ. ಮೈಸೂರು ರಾಜ್ಯ ಸ್ಥಾಪನೆಯಾದಾಗ ಈ ರಾಜ್ಯಕ್ಕೆ 'ಕರ್ನಾಟಕ ರಾಜ್ಯ' ಎಂದು ಹೆಸರಿಸಬೇಕಾಗಿತ್ತು ಎಂದು ಆಗಿನ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಿಗೆ ಪತ್ರ ಬರೆದು ಕೆ.ಎಫ್. ಪಾಟೀಲ್ ಪ್ರತಿಭಟಿಸಿರುವುದನ್ನು ದೇವೇಂದ್ರಪ್ಪ ವಿಭೂತಿ ಹಾಗೂ ಏಕೀಕರಣ ಚಳುವಳಿಗಾರ ಶಂಕರ ಗೋಕಾವಿ ನೆನಪಿಸುತ್ತಾರೆ.

**೪. ಸಿದ್ದಪ್ಪ ಹೊಸಮನಿ**

ಸಿದ್ದಪ್ಪ ಹೊಸಮನಿ ಕರ್ನಾಟಕ ಏಕೀರಣದ ನಾಯಕತ್ವವನ್ನು ವಹಿಸಿದವರು. ಸ್ವಾತಂತ್ರ್ಯ ನಂತರದಲ್ಲಿ ಭಾರತವನ್ನು ಭಾಷಾವಾರು ಪ್ರಾಂತ ರಚನೆ ಮಾಡಲಾಗುವುದೆಂದು "ಸ್ವಾತಂತ್ರ್ಯ

ಪೂರ್ವದಲ್ಲಿ ಕಾಂಗ್ರೆಸ್ ಒಪ್ಪಿಗೆ ನೀಡಿತ್ತು. ಆದರೆ ಸ್ವಾತಂತ್ರ್ಯ ನಂತರದಲ್ಲಿ ಏಕೀಕರಣದ ಬಗ್ಗೆ ಹಿಂದೇಟು ಹಾಕಲಾರಂಭಿಸಿದಾಗ ಸಿದ್ದಪ್ಪ ಹೊಸಮನಿ ಕನ್ನಡಿಗರನ್ನು ಎಚ್ಚರಿಸಲು ಕನ್ನಡ ಪ್ರದೇಶಗಳಲ್ಲಿ ಪ್ರವಾಸ ಮಾಡಿದರು. ಆಗ ಜಿಲ್ಲೆಯ ಚಳುವಳಿ ನಾಯಕರು, ವಿದ್ಯಾರ್ಥಿಗಳು, ರೈತರು, ಸಾಹಿತಿಗಳು, ಕೂಲಿಕಾರರು, ಸಂಘ-ಸಂಸ್ಥೆಗಳು ಹೀಗೆ ಹಲವು ರೀತಿಯಲ್ಲಿ ಬೆಂಬಲ ನೀಡಿದರು. ಹೀಗಾಗಿಯೇ ಹಾವೇರಿಯಲ್ಲಿ ಸಿದ್ದಪ್ಪ 'ಕರ್ನಾಟಕ ಏಕೀಕರಣ ಪಕ್ಷಾತೀತ ಪರಿಷತನ್ನು ಕರೆದರು."[೫೬] ಅಲ್ಲಿ ಸ್ಥಳಿಯ ಯುವಕರನ್ನು ಪ್ರೋತ್ಸಾಹಿಸಿ ೧೯೫೨ರಲ್ಲಿ ನಿರ್ಭಯದ ಠರಾವು ಪಾಸು ಮಾಡಿ ಸರ್ಕಾರಕ್ಕೆ ಎಚ್ಚರಿಸಿದ್ದರಲ್ಲದೇ ಕರ್ನಾಟಕ ಪ್ರಾಂತವನ್ನು ಕಣ್ಣಾರೆ ಕಂಡು ಸಾಯುವೆನೆಂದು ಭೀಷ್ಮ ಪ್ರತಿಜ್ಞೆಗೈದ ವಿವರವನ್ನು ಶಂಕರ ಗೋಕಾವಿ ಹಾಗೂ ದೇವೇಂದ್ರಪ್ಪ ವಿಭೂತಿ ಹೇಳಿಕೆಗಳು ದೃಢಪಡಿಸುತ್ತವೆ.

"ಸಿದ್ದಪ್ಪ ಹೊಸಮನಿ ಹಾವೇರಿಯಲ್ಲಿ ಸಂಘಟಿಸಿದ 'ಕರ್ನಾಟಕ ಏಕೀಕರಣ ಪಕ್ಷಾತೀತ ಪರಿಷತ್ತಿ'ಗೆ ನಾಡಿನ ವಿವಿಧ ಭಾಗಗಳಿಂದ ಕನ್ನಡದ ಮುಂದಾಳುಗಳು ಆಗಮಿಸಿದರು. ಹಾವೇರಿಯ ಕನ್ನಡ ಶಾಲೆಯ ಆವರಣದಲ್ಲಿ ಈ ಪರಿಷತ್ತನ್ನು ನಡೆಸಿದರು. ಇವರು ಸಂಘಟಿಸಿದ 'ಕರ್ನಾಟಕ ಏಕೀಕರಣ ಪಕ್ಷಾತೀತ ಪರಿಷತ್ತಿಗೆ' ಎಚ್.ಎಫ್. ಮುದರೆಡ್ಡಿ, ಚಿನ್ಮಯಸ್ವಾಮಿ ಓಂಕಾರಮಠ, ಶಾಂತಿನಾಥ ಇಂಗಳೆ, ಅಂದಾನಪ್ಪ ದೊಡ್ಡಮೇಟಿ, ಬಿ.ವ್ಹಿ. ಕಕ್ಕಿಲ್ಲಾಯ, ಎನ್.ಎಲ್. ಉಪಾಧ್ಯಾಯ, ಬಿ.ಎಸ್. ಪಾಟೀಲ್, ಕೋ. ಚೆನ್ನಬಸಪ್ಪ ಬಳ್ಳಾರಿ, ತಲ್ಲೂರು ರಾಮನಗೌಡ, ಬಸವರಾಜ ನಾಗನೂರು ವಿಜಾಪುರ, ಶರಣಗೌಡ್ರ ಪಾಟೀಲರು ಗುಲ್ಬರ್ಗಾ, ವೆಂಕಟೇಶ ಮಾಸ್ತಿ ಅಯ್ಯಂಗಾರ್, ಬೆಂಗಳೂರು, ಎಚ್.ಕೆ. ಪಾಟೀಲ ಬ್ಯಾಡಗಿ, ವೀರಭದ್ರಪ್ಪ ಶಿರೂರು, ಇಟಗಿಯ ವೇದಮೂರ್ತಿ, ಲಿಂಗರಾಜ ಮುದ್ದಣ್ಣ ಬ್ಯಾಡಗಿ, ಕೆ.ಎಫ್. ಪಾಟೀಲ್ ಮಂತ್ರಿಗಳು, ಸಂಗೂರು ಕರಿಯಪ್ಪ ಸಂಗೂರು, ಶ್ರೀಮತಿ ಪದ್ಮಾವತಿ ಅಂಗಡಿ, ಶಾಂತವೇರಿ ಗೋಪಾಲಗೌಡ, ಶಂಕರಗೌಡ್ರು ಅದರಗುಂಚಿ ಇನ್ನು ಮುಂತಾದವರು ಆಗಮಿಸಿ"[೫೭] ಯಶಸ್ವಿಗೊಳಿಸಿದರು.

ಮುಖ್ಯವಾಗಿ ಕರ್ನಾಟಕ ಏಕೀಕರಣದ ಬಗ್ಗೆ ಚರ್ಚೆ ನಡೆದು ಕೇಂದ್ರ ಸರಕಾರ ಕರ್ನಾಟಕ ಏಕೀಕರಣದ ಬಗ್ಗೆ ನಿರ್ಲಕ್ಷಿಸುತ್ತಿರುವ ಬಗ್ಗೆ ವಿಷಾದ ವ್ಯಕ್ತಪಡಿಸಿದ ಹೊಸಮನಿ ಸಿದ್ದಪ್ಪ ಪ್ರತಿನಿಧಿಗಳನ್ನು ಉದ್ದೇಶಿಸಿ 'ನಿಮಗೆ ಕನ್ನಡ ನಾಡಾಗುವುದು ಮುಖ್ಯವೋ ಅಥವಾ ಕಾಂಗ್ರೆಸ್ ಮುಖ್ಯವೋ' ಎಂದು ಸವಾಲು ಎಸೆದರು. ನಾವು ಏಕೀಕರಣಕ್ಕಾಗಿ ಬೇಡಿಕೆಯ ಅರ್ಜಿ ಮನವಿಗಳನ್ನು ಕೊಟ್ಟರೆ ಸಾಲದು ಏಕೀಕರಣಕ್ಕಾಗಿ ಹೋರಾಟ ಮಾಡಲು ಸರ್ವತ್ಯಾಗಕ್ಕೂ ಸಿದ್ಧರಾದರೆ ಮಾತ್ರ ನಮ್ಮ ಬೇಡಿಕೆ ಈಡೇರುತ್ತದೆ ಎಂದಾಗ ಇಡೀ ಸಭೆ ಚಪ್ಪಾಳೆ ಮೂಲಕ ಬೆಂಬಲ ಸೂಚಿಸಿದ ಬಗ್ಗೆ ಏಕೀಕರಣ ಚಳುವಳಿಗಾರ ಹಾವೇರಿ ಶಂಕರ ಗೋಕಾವಿ ನೆನಪಿಸಿಕೊಳ್ಳುತ್ತಾರೆ.

ಸಭೆ ಮುಗಿದ ಬಳಿಕ ಸಿದ್ದಪ್ಪ ಹಾವೇರಿ ಪಂಚಾಕ್ಷರಪ್ಪ ವಳಸಂಗದಗೆ 'ನಮ್ಮ ಮುಂದಿನ ಪರಿಷತ್ತು ದಾವಣಗೆರೆಯಲ್ಲಿ ಆಗಬೇಕು. ಅದಕ್ಕಾಗಿ ಆಗಬೇಕಾದ ಸಕಲ ಸಿದ್ಧತೆಗೆ ಸಿದ್ಧರಾಗಿ' ಎಂದು ಹೇಳಿದರು.

"ಸಿದ್ದಪ್ಪ ಹೊಸಮನಿಯ ಮತ್ತೊಬ್ಬ ಶಿಷ್ಯ ಹಾಗೂ ಪಂಚಾಕ್ಷರಪ್ಪ ವಳಸಂಗದ ಸ್ನೇಹಿತ ಸ್ವಾತಂತ್ರ್ಯ ಹೋರಾಟಗಾರ ಬ್ಯಾಡಗಿ ತಾಲೂಕಿನ ತುಮರಿಕೊಪ್ಪದ ಬಸಯ್ಯ ಹಿರೇಮಠ ಯಾರಿಗೂ ಹೇಳದೆ ದಾವಣಗೆರೆಗೆ ಹೋಗಿ ಗಡಿಯಾರದ ಕಂಬದ ಕೆಳಗೆ ಅಮರಣ ಉಪವಾಸ ಕುಳಿತುಕೊಂಡರು. ೫–೬ ದಿನ ಕಳೆದ ನಂತರ ದಾವಣಗೆರೆಯ ಹಿರಿಯರಾದ ಕೆ.ಟಿ.ಜಂಬಣ್ಣ, ಗಾದಿ ವೀರಪ್ಪ, ಕಾರಡಗಿಯ ವೀರಭದ್ರಪ್ಪ, ಎ.ಎಚ್. ಶಿವಾನಂದಸ್ವಾಮಿ, ಇಟಗಿ ವೇದಮೂರ್ತಿ ಹೀಗೆ ಊರಿನ ಮುಖಂಡರು ಮತ್ತು ಇತರರು ಉಪವಾಸ ಬಿಡುವಂತೆ ಬಸಯ್ಯ ಹಿರೇಮಠರನ್ನು ಕೇಳಿಕೊಂಡಾಗ ತಾವು ಉಪವಾಸ ನಿಲ್ಲಿಸಲು ಎರಡು ಕರಾರನ್ನು ಹಾಕಿದರು. ಮೊದಲು ನೀವೆಲ್ಲರೂ ದಾವಣಗೆರೆಯಲ್ಲಿ ಪರಿಷತ್ತನ್ನು ಕರೆಯುತ್ತೇವೆ ಎಂದು ಮಾತು ಕೊಡಬೇಕು; ಎರಡನೆಯದಾಗಿ ನಮ್ಮ ಹಿರಿಯ ನಾಯಕ ಸಿದ್ದಪ್ಪ ಹೊಸಮನಿ ನನಗೆ ಉಪವಾಸ ಬಿಡಲು ಅಪ್ಪಣೆ ನೀಡಬೇಕು ಎನ್ನಲು ತಕ್ಷಣವೇ ಸೇರಿದ್ದ ಎಲ್ಲ ನಾಯಕರು ಹಾವೇರಿಯ ಹೊಸಮನಿ ಸಿದ್ದಪ್ಪ ಅವರನ್ನು ಕರೆಸಿದರು. 'ದಾವಣಗೆರೆಯಲ್ಲಿ ಪರಿಷತ್ತನ್ನು ಕರೆಯುತ್ತೇವೆ' ಎಂದು ಊರ ಜನ ಮಾತುಕೊಟ್ಟರು ಹಾಗೂ ಸಿದ್ದಪ್ಪನವರು ಸಹ ಅವರ ಮಾತಿಗೆ ಸರಿಯೆಂದು ಉಪವಾಸ ಬಿಡಲು ತಿಳಿಸಿದರು. ಅಲ್ಲಿಗೆ ಬಸಯ್ಯ ಹಿರೇಮಠರು ತಮ್ಮ ಉಪವಾಸ ಸತ್ಯಾಗ್ರಹ ನಿಲ್ಲಿಸಿದರು."[೫೮]

ಈ ವೇಳೆಗೆ ವಿಧಾನಸಭೆ ಮತ್ತು ಲೋಕಸಭೆಯ ಚುನಾವಣೆಗಳು ಬಂದವು. ಸಿದ್ದಪ್ಪ ಹೊಸಮನಿ ಕನ್ನಡಿಗರಿಗೆ ಅನಾದರ ತೋರಿಸಿದ ಕಾಂಗ್ರೆಸಿಗೆ ಎದುರಾಗಿ ಕರ್ನಾಟಕ ಏಕೀಕರಣ ವತಿಯಿಂದ ಚುನಾವಣೆಗೆ ಸ್ಪರ್ಧಿಸಿ ಸೋತರು. ಆಗ ಕನ್ನಡಾಭಿಮಾನಿಗಳು ಇವರಲ್ಲಿಗೆ ಬಂದು ತಮ್ಮ ನೋವನ್ನು ವ್ಯಕ್ತಪಡಿಸಿದಾಗ ಸಿದ್ದಪ್ಪ ಹೊಸಮನಿ ಯಾರಾದರೂ ಒಬ್ಬರು ಸೋಲಲೇಬೇಕು ಇದಕ್ಕೂ ನಮ್ಮ ಚಳುವಳಿಗೂ ಸಂಬಂಧವಿಲ್ಲ. ಭಾರತ ಚುನಾವಣೆಯಿಂದ ಸ್ವಾತಂತ್ರ್ಯ ಗಳಿಸಿಲ್ಲ, ಬದಲಾಗಿ ಹೋರಾಟದಿಂದ. ಹಾಗಾಗಿ ನಾನು ಹೋರಾಟದಿಂದಲೇ ಏಕೀಕರಣ ಮಾಡುತ್ತೇನೆ ಎಂದು ಸೇರಿದವರನ್ನು ಆಶ್ಚರ್ಯಚಕಿತರನ್ನಾಗಿಸಿದ್ದನ್ನು ಏಕೀಕರಣ ಚಳುವಳಿಗಾರ ಶಂಕರ ಗೋಕಾವಿ ನೆನಪಿಸಿಕೊಳ್ಳುತ್ತಾರೆ.

"ಹುಬ್ಬಳ್ಳಿ, ಧಾರವಾಡ, ರೋಣ ತಾಲೂಕಿನಲ್ಲಿ ಏಕೀಕರಣ ಅಭ್ಯರ್ಥಿಗಳಾದ ಅಂದಾನಪ್ಪ ದೊಡ್ಡಮೇಟಿ, ಕಂಬಳಿ ಸಿದ್ದಪ್ಪ, ಬಸವರಾಜ ಹಂಗರಕ್ಕಿ ವಿಜಯಶಾಲಿಗಳಾದರು. ಇದರಿಂದ ಕೇಂದ್ರ ಸರಕಾರ ಅಳುಕಿತು. ಕರ್ನಾಟಕ ಎಲ್ಲ ಭಾಗಗಳಲ್ಲಿ ಸಭೆ–ಸಮಾರಂಭದ ಕಾರ್ಯಕ್ರಮಗಳು ಜೋರಾಗಿ ನಡೆದವು. ಇದು ಕನ್ನಡಿಗರ ಸಾವು–ಬದುಕಿನ ಕೊನೆ ಹೋರಾಟವೆಂದು ಜನ ಕೋಪಗೊಂಡಿದ್ದರು"[೫೯] ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಮೈಸೂರು ರಾಜ್ಯದ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯ ಹಾವೇರಿಗೆ ಬಂದು ಹೊಸಮನಿ ಸಿದ್ದಪ್ಪರನ್ನು ಕಂಡು ಏಕೀಕರಣದ ಬಗ್ಗೆ ಚರ್ಚೆ ನಡೆಸಿದರು. ಆಗ ಸಿದ್ದಪ್ಪ "ನೀನು ದೊಡ್ಡ ರಾಜ್ಯವೊಂದರ ಮಂತ್ರಿಯಾಗು ರಾಜ್ಯವನ್ನು ಒಂದು ಮಾಡಿದ ಕೀರ್ತಿ ನಿನಗೆ

ಬರುವುದು' ಈ ಸಂದರ್ಭವನ್ನು ಕಳೆದುಕೊಳ್ಳಬೇಡ. ಕೆಂಪೇಗೌಡರು ಮೈಸೂರು ರಾಜ್ಯ ಕಟ್ಟಿದರು. ಆದರೆ ನೀವು ಕರ್ನಾಟಕ ಮಹಾರಾಜ್ಯವನ್ನು ಕಟ್ಟುತ್ತಿರುವೆ ಎಂದಾಗ ಮುಖ್ಯಮಂತ್ರಿ ಹನುಮಂತಯ್ಯ ತಾವು ಕೂಡ ಏಕೀಕರಣಕ್ಕೆ ತಮ್ಮೊಂದಿಗೆ ಕೈಜೋಡಿಸುತ್ತೇವೆ"[೬೦] ಎಂದು ಒಪ್ಪಿಕೊಂಡಿದ್ದು ಸಿದ್ದಪ್ಪನವರ ಹೋರಾಟಕ್ಕೆ ಮತ್ತಿಷ್ಟು ಬಲ ಬಂದಹಾಗಾಯಿತು.

ನಂತರದ ಬೆಳವಣಿಗೆಯಲ್ಲಿ ಹೊಸಮನಿ ಸಿದ್ದಪ್ಪರ ಬೆಂಬಲಿಗ ಪಂಚಾಕ್ಷರಪ್ಪ ವಳಸಂಗದ ಮೇಲೆ ಬಾಂಬ್ ಕೇಸ್ ಹಾಕಿ ಅವರನ್ನು ಅವರ ಪತ್ನಿ ಜಯಮ್ಮ ಹಾಗೂ ಸ್ನೇಹಿತರಾದ ಗುರುಲಿಂಗಪ್ಪ ಅಂಕಲಕೋಟಿ, ಶಿದ್ಲಿಂಗಪ್ಪ ಹೊಸಮನಿ, ರಾಮು ಕ್ಷೌರದ ಇನ್ನೂ ಕೆಲವರನ್ನು ಜೈಲಿಗೆ ಕಳುಹಿಸಲಾಯಿತು. ಈ ವಿವರವನ್ನು ಅಂದು ಭಾಗವಹಿಸಿದ ಹಾವೇರಿಯ ಶಂಕರ ಗೋಕಾವಿ ಅವರ ಹೇಳಿಕೆಯಿಂದ ತಿಳಿಯಲಾಗಿದೆ.

ಹೊಸಮನಿ ಸಿದ್ದಪ್ಪ ಬಳ್ಳಾರಿಯ ಹೊಸಪೇಟೆಯಲ್ಲಿ ಏಕೀಕರಣ ಪರಿಷತ್ತು ನಡೆಸಲು ನಿರ್ಧರಿಸಿದರು. ಅದಕ್ಕಾಗಿ ಪಂಚಾಕ್ಷರಿ ವಳಸಂಗದರವರ ಸೇನಾಧಿಪತ್ಯದಲ್ಲಿ ಸಾವಿರಾರು ಹೋರಾಟಗಾರರನ್ನು ಬಳ್ಳಾರಿ ಕನ್ನಡಿಗರದು ಕನ್ನಡ ಪ್ರಾಂತಕ್ಕೆ ಸೇರಿಸಬೇಕೆಂದು ಹೋರಾಟ ಮಾಡಿದರು. ಹೀಗೆ ಹಾವೇರಿಯಿಂದ ಹಂಪಿಗೆ ಬಳ್ಳಾರಿ ಕನ್ನಡಿಗರದು ಎಂದು ಭಾಗವಹಿಸಿದವರು– ಪ್ರಭಣ್ಣ ನಂದಿ, ಮಲ್ಲಿಕಾರ್ಜುನ ನಂದಿ, ಶಾಂತಯ್ಯ ಹಿರೇಮಠ, ರಾಚಪ್ಪ ಕೌದಿ. ಹೀಗೆ ಹಲವರು ಹಾವೇರಿಯಿಂದ ಬಳ್ಳಾರಿಗೆ ನಡೆದರು."[೬೧] ಹೀಗೆ ಸಿದ್ದಪ್ಪ ಹೊಸಮನಿ–ಪಂಚಾಕ್ಷರಪ್ಪ ವಳಸಂಗದ ನೇತೃತ್ವದಲ್ಲಿ ಏಕೀಕರಣಕ್ಕಾಗಿ ವಿವಿಧ ಹಂತದ ಚಳುವಳಿಗಳನ್ನು ಮಾಡಿ ನಾಡಿನ ಏಕತೆಗಾಗಿ ಶ್ರಮಿಸಿರುವುದನ್ನು ಗುರುತಿಸಲಾಗಿದೆ.

**೫. ಪಂಚಾಕ್ಷರಿ ವಳಸಂಗದ**

ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ಮಾಡಿದ ಜಿಲ್ಲೆಯ ಹೋರಾಟಗಾರರಲ್ಲಿ ಸ್ವಾತಂತ್ರ್ಯ ಯೋಧ ಪಂಚಾಕ್ಷರಪ್ಪ ವಳಸಂಗದ ಒಬ್ಬರು.

ಹೊಸಮನಿ ಸಿದ್ದಪ್ಪನ ನೇತೃತ್ವದಲ್ಲಿ ೧೯೫೪ರಲ್ಲಿ ಕರ್ನಾಟಕ ಏಕೀಕರಣ ಪಕ್ಷಾತೀತ ಪರಿಷತ್ತು ಸ್ಥಾಪನೆಯಾಯಿತು. ಆಗ ಸಿದ್ದಪ್ಪ ಹೊಸಮನಿ ಪಂಚಾಕ್ಷರಪ್ಪನ ಕರ್ತೃತ್ವ ಶಕ್ತಿಯನ್ನು ಮನಗಂಡು ಸಂಘಟನೆಯ ಜವಾಬ್ದಾರಿಯನ್ನು ಇವರಿಗೆ ವಹಿಸಿದ್ದರು. ಈ ಹಿಂದೆ ಸ್ವಾತಂತ್ರ್ಯ ಹೋರಾಟದಲ್ಲಿ ಸಲ್ಲಿಸಿದ್ದ ಸೇವೆಯನ್ನು, ತರಬೇತಿಯನ್ನು, ಅನುಭವವನ್ನು ಈ ಚಳುವಳಿಯಲ್ಲಿ ಪಂಚಾಕ್ಷರಿ ವಳಸಂಗದ ಚೆನ್ನಾಗಿ ಬಳಸಿಕೊಂಡ ಬಗ್ಗೆ ಏಕೀಕರಣ ಚಳುವಳಿಗಾರ ಶಂಕರ ಗೋಕಾವಿ ಹಾಗೂ ಗುರುಶಾಂತಪ್ಪ ಜಾಬಿನ ವಿವರಿಸುತ್ತಾರೆ.

**ಬಂಧನ :** ೧೯೫೩ರಲ್ಲಿ ಕರ್ನಾಟಕ ಏಕೀಕರಣ ಹೋರಾಟದಲ್ಲಿ ಇವರ ಮೇಲೆ ಬಾಂಬ್ ಕೇಸ್ ಹಾಕಿ ಇವರನ್ನು ಪತ್ನಿ ಶ್ರೀಮತಿ ಜಯಮ್ಮ ಹಾಗೂ ಗುರುಲಿಂಗಪ್ಪ ಇನ್ನಿತರರನ್ನು ಬಂಧಿಸಲಾಯಿತು. ಬಿಡುಗಡೆಯ ನಂತರವೂ ಸರಕಾರದ ಅನ್ಯಾಯವನ್ನು ವಿರೋಧಿಸಲು ಜನತೆಯನ್ನು ಹುರಿದುಂಬಿಸಿ ಹಂಪಿಯ ಏಕೀಕರಣ ಸಭೆಗೆ ಕರೆದುಕೊಂಡು ಹೋದವರು.

ಹೊಸಪೇಟೆ ಭಾಗದ ಎಮ್ಮಿಗನೂರು, ಕಮಲಾಪುರ ಮುಂತಾದ ಗ್ರಾಮಗಳಲ್ಲಿ ಒಂದೂವರೆ ತಿಂಗಳುಗಳ ಕಾಲ ಸಂಚರಿಸಿ, ತಾವೇ ರಚಿಸಿದ ಕವಿತೆಗಳನ್ನು ಹಾಡುತ್ತ ಜನರಲ್ಲಿ ಜಾಗೃತಿ ಕಾರ್ಯ ಮಾಡಿದರು. ಆ ಸಮಯದಲ್ಲಿ ತುಂಗಭದ್ರೆಯ ಕಾಲುವೆ ಒಡೆದು ಆಂಧ್ರ ಭಾಗಕ್ಕೆ ಹರಿಯವ ನೀರನ್ನು ನಿಲ್ಲಿಸಲು ಉಗ್ರ ಹೋರಾಟವನ್ನು ನಡೆಸಿದರು."[೨] ಇವರು ಸಿದ್ದಪ್ಪ ಹೊಸಮನಿ ನೇತೃತ್ವದ ಏಕೀಕರಣದ ಎಲ್ಲ ಚಳುವಳಿಗಳಲ್ಲಿ ಭಾಗವಹಿಸಿ ಏಕೀಕರಣದ ಹೋರಾಟದಲ್ಲಿ ಮಹತ್ವದ ಪಾತ್ರವಹಿಸಿರುವುದನ್ನು ಗುರುತಿಸಲಾಗಿದೆ.

**೬. ವಿರುಪಾಕ್ಷಪ್ಪ ಅಂಗಡಿ**

ಕನ್ನಡ ನಾಡಿನ ಗಡಿಗಳಲ್ಲಿ ಹೋರಾಟ ಮಾಡಿ ನುಡಿಯ ಗೌರವ ಎತ್ತಿ ಹಿಡಿದವರು ತುಂಬ ವಿರಳ. ಈ ಸಾಲಿನಲ್ಲಿ ಹಾವೇರಿಯ ವಿರುಪಾಕ್ಷಪ್ಪ ಅಂಗಡಿ ಅಗ್ರಗಣ್ಯರು. ಹಳ್ಳಿಕೇರಿ ಗುದ್ಲೆಪ್ಪ, ವೆಂಕಟೇಶ ಮಾಗಡಿ, ಕೆ.ಎಫ್. ಪಾಟೀಲ್, ಲಿಂಗರಾಜ ಮುದ್ದಣವರ ಮುಂತಾದವರು ಕಟ್ಟಿದ 'ತರುಣ ಸಂಘ'ದಲ್ಲಿ ಸದಸ್ಯರಾಗಿ ಗುರುತಿಸಿಕೊಂಡವರು. ಸ್ವಾತಂತ್ರ್ಯ ಚಳುವಳಿಯೊಂದಿಗೆ ವಿರುಪಾಕ್ಷಪ್ಪ ಅಂಗಡಿ ಕನ್ನಡ ಭಾಷೆಯ ಸ್ಥಾಪನೆಗಾಗಿ ಗಡಿ ಭಾಗದ ಊರುಗಳಾದ–ಅಕ್ಕಲಕೋಟೆ, ಜತ್ತ್, ದಕ್ಷಿಣ ಸೊಲ್ಲಾಪುರ ಮುಂತಾದ ಸ್ಥಳಗಳಲ್ಲಿ ಹೋರಾಟ ಮಾಡಿದರು. ಸಾಂಗಲಿ ಬ್ಯಾಂಕಿನ ಲೆಕ್ಕ ಪತ್ರಗಳು ಮರಾಠಿಯಲ್ಲಿಯೇ ಇರಬೇಕೆಂದು ಮುಂಬೈ ಸರಕಾರ ಆದೇಶ ಮಾಡಿದಾಗ ಆ ಆದೇಶದ ವಿರುದ್ಧ ಹೋರಾಡಿದರು.

ಸಾಂಗಲಿ ಬ್ಯಾಂಕಿನ ವ್ಯವಹಾರಗಳು ಕನ್ನಡದಲ್ಲಿ ನಡೆಯುವಂತೆ ಮಾಡುವಲ್ಲಿ ಯಶಸ್ವಿಯಾದ ಇವರು ಈ ಒಂದು ಆದೇಶ ಹಿಂತೆಗೆಸುವ ಕೆಲಸದಿಂದ ಕನ್ನಡಿಗರು ಉದ್ಧಾರವಾಗುವುದಿಲ್ಲ ಎಂದು ಯೋಚಿಸಿದ ವಿರುಪಾಕ್ಷಪ್ಪ ಮರಾಠಿ ಪ್ರಭಾವವನ್ನು ಕುಗ್ಗಿಸುವ ಕಾರ್ಯ ವಾಗಬೇಕಾದರೆ ಗಡಿ ಭಾಗದಲ್ಲಿ ಕನ್ನಡ ಶಾಲೆಗಳು ಆಗಬೇಕೆಂದು ಹೋರಾಟ ಆರಂಭಿಸಿದರು. ಇವರ ನೇತೃತ್ವದಲ್ಲಿ 'ಗಡಿನಾಡ ಕನ್ನಡಿಗರ ಕರ್ನಾಟಕ ಏಕೀಕರಣ ಸಮ್ಮೇಳನವನ್ನು ಏರ್ಪಡಿಸಿದರು. ಈ ಸಮ್ಮೇಳನಕ್ಕೆ ಸಿದ್ಧನಾಥ ಬಳ್ಳಾರಿ ಶಾಸಕರು, ಜಿ.ಕೆ. ಮೊಗಲಿ ಹಾಗೂ ಚನ್ನವೀರ ಕಲ್ಯಾಣಶೆಟ್ಟಿ ಮುಂತಾದವರು ಭಾಗವಹಿಸಿದ್ದ ಬಗ್ಗೆ ಹಾವೇರಿಯ ಏಕೀಕರಣ ಚಳುವಳಿಗಾರರಾದ ಹಾವೇರಿಯ ಶಂಕರ ಗೋಕಾವಿ ಹಾಗೂ ರುದ್ರಪ್ಪ ಜಾಬಿನ್ ಹೇಳುತ್ತಾರೆ.

"ಮಹಾಜನ ವರದಿ ಸಂಗ್ರಹಕ್ಕಾಗಿ ಮಹಾಜನರು ಜತ್ತದ ಪ್ರವಾಸಿ ಮಂದಿರಕ್ಕೆ ಬಂದಾಗ ಕನ್ನಡಿಗರ ಸ್ಥಿತಿಗತಿ, ಗಡಿ ವಿಚಾರ ಹೀಗೆ ಕನ್ನಡಿಗರ, ಕರ್ನಾಟಕದ ಬಗ್ಗೆ ಮನವಿ ನೀಡಿದವರು. ಇದು ಮಹಾಜನ್ ವರದಿ ಸಂಪುಟ ಎರಡನೆಯ ಪುಟ ೧೨೫ರಲ್ಲಿ ಉಲ್ಲೇಖವಾಗಿದೆ. ಜತ್ತ್‌ನ ಲೋಕಲ್ ಬೋರ್ಡ್ ಚುನಾವಣೆಯಲ್ಲಿ ಕಾಂಗ್ರೆಸ್ ಮತ್ತು ಮರಾಠಿ ಅಭ್ಯರ್ಥಿಗಳ ವಿರುದ್ದ ಮೂವರು ಕನ್ನಡಿಗರನ್ನು ಗೆಲ್ಲಿಸಿದ್ದು ಇವರ ಹಿರಿಮೆ. ಜತ್ತ್‌ನ ರಾಜ ವಿರುಪಣ್ಣನ ಕನ್ನಡ ಪ್ರೀತಿ ಮತ್ತು ಪ್ರಭಾವ ಈ ಗೆಲುವಿಗೆ ಕಾರಣ ಎಂದು ಹೇಳಿರುವುದು ಇವರ

ಕಾರ್ಯಕ್ಕೆ ಸಾಕ್ಷಿಯಂತಿದೆ."[೬೨] ಹೀಗೆ ವಿರುಪಾಕ್ಷಪ್ಪ ಅಂಗಡಿ ಹಾವೇರಿ ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯೊಂದಿಗೆ ಕರ್ನಾಟಕ ಏಕೀಕರಣಕ್ಕೆ ಅಮೂಲ್ಯವಾದ ಕೊಡುಗೆ ನೀಡಿರುವುದನ್ನು ಏಕೀಕರಣ ಚಳುವಳಿಗಾರ ಹೇಳಿಕೆಯಿಂದಲೂ ಗುರುತಿಸಲಾಗಿದೆ.

**ಅನಂತಭಟ್ಟ ಕೇಶವಭಟ್ಟ ಹುರುಳಿಕುಪ್ಪಿ**

ಹಾವೇರಿ ಜಿಲ್ಲೆಯ ಶಿಗ್ಗಾವಿ ಭಾಗದ ಇವರು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಧಾರವಾಡಕ್ಕೆ ಹೋದಾಗ ಅಲ್ಲಿಯ ಸಾರ್ವಜನಿಕ ಚಟುವಟಿಕೆಗಳಲ್ಲಿ ಶಿಗ್ಗಾವಿಯ ತರುಣರೊಂದಿಗೆ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗಿಗಳಾಗುತ್ತಿದ್ದರು. ಆಗಿನ ಕನ್ನಡ ಚಳುವಳಿಯ ನಾಯಕರೆಂದರೆ ಆಲೂರು ವೆಂಕಟರಾಯ, ಕಡಪ ರಾಘವೇಂದ್ರರಾಯರು, ಮುದವೀಡು ಕೃಷ್ಣರಾಯರು, ರಾಜಪುರೋಹಿತರು, ಗದಿಗೆಯ್ಯ ಹೊನ್ನಾಪುರಮಠ ಇನ್ನೂ ಅನೇಕರು. ಆಗಿನ ಇವರ ಚಟುವಟಿಕೆಗಳೆಂದರೆ ಎಲ್ಲಿ ಸಾರ್ವಜನಿಕ ಸಭೆಗಳಾದರೂ ಅಲ್ಲಿಗೆ ಹೋಗಿ ಕನ್ನಡದಲ್ಲಿಯೇ ಮಾತನಾಡಿ ಎಂದು ಒತ್ತಾಯ ಮಾಡುವುದು. ಇದೇ ಸಮಯಕ್ಕೆ ೧೯೨೦ರಲ್ಲಿ ಗಾಂಧೀಜಿ ರಾಷ್ಟ್ರೀಯ ಚಳುವಳಿ ಸಲುವಾಗಿ ಕರ್ನಾಟಕದಲ್ಲಿ ಪ್ರವಾಸ ಕಾಲಕ್ಕೆ ಧಾರವಾಡಕ್ಕೂ ಬಂದಾಗ ಇವರು ಸ್ನೇಹಿತರೊಂದಿಗೆ ಗಾಂಧೀಜಿ ಭೇಟಿಯಾಗಿ ತಮ್ಮ ಕನಸಿನ ಅಖಂಡ ಕರ್ನಾಟಕದ ಬೇಡಿಕೆಯನ್ನು ಅವರಿಗೆ ನಿವೇದಿಸಲು ಅವರು ಅದಕ್ಕೆ ತಮ್ಮ ಸಮ್ಮತಿಸಿದ್ದಲ್ಲದೆ, ತಾವು ನಡೆಸಲಿರುವ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಬೇಕೆಂದು ನಿವೇದಿಸಿದರು. ಅದರಂತೆ ಧಾರವಾಡದಲ್ಲಿಯ ಶಿಗ್ಗಾವಿಯ ತರುಣರು ಶಾಲೆ–ಕಾಲೇಜುಗಳನ್ನು ತ್ಯಜಿಸಿ ಅಸಹಕಾರ ಚಳುವಳಿಯಲ್ಲಿ ಸಂತೋಷದಿಂದ ಭಾಗವಹಿಸಿದರು. ಅದರಲ್ಲಿ ೯ ಅನಂತಭಟ್ಟ ಹುರುಳಿಕುಪ್ಪಿ ಭಾಗವಹಿಸಿದರು; ಆಗ ಇವರ ವಯಸ್ಸು ೧೬. ಈ ವಯಸ್ಸಿನಲ್ಲಿಯೇ ಧಾರವಾಡದಿಂದ ತಮ್ಮ ಚಳುವಳಿ ಪಯಣ ಪ್ರಾರಂಭ ಮತ್ತು ಅದೇ ಅವರಿಗೆ ಪ್ರೇರಣೆಯಾಯಿತು.

**ಶಿವಣ್ಣ ನೆಶ್ವಿ**

"ವೀರನಗೌಡ ಪಾಟೀಲ್ ಒಮ್ಮೆ ಕಚವಿಯ ಮಸೀದಿಯಲ್ಲಿ ಆತ್ಮ ಶುದ್ಧಿಗಾಗಿ ಉಪವಾಸ ಕೈಕೊಂಡಾಗ ಇವರ ಮಿತ್ರರು ಇವರಿಗೆ ತಾವೇನು ಮಾಡುವುದು ಎಂದು ಕೇಳಿದರು. ಹೌದು ಏಕೀಕರಣಕ್ಕಾಗಿ ಉಪವಾಸ ಮಾಡುವುದು ಸದ್ಯಕ್ಕೆ ಸರಿಯಾದ ಕೆಲಸವೆಂದು ಪ್ರತಿಪಾದಿಸಿ, ಸೂಡಂಬಿಯಲ್ಲಿ ಐದು ದಿವಸ ಉಪವಾಸ ಕೈಗೊಂಡರು. ಅದರ ಮುಕ್ತಾಯ ಸಮಾರಂಭದಲ್ಲಿ ದೊಡ್ಡ ಮೆರವಣಿಗೆ ಸಭೆ ಮತ್ತು ಆ ಬಗ್ಗೆ ಒಂದು ಏಕೀಕರಣ ನಾಟಕದ ಏರ್ಪಾಡು ಮಾಡಿ ಆ ಭಾಗದಲ್ಲಿ ಜನ ಜಾಗೃತಿ ಮಾಡಿದರು."[೬೪] ಹೀಗೆ ಕಚವಿ, ಸೂಡಂಬಿ, ಹಿರೇಅಣಜಿ, ಹಂಸಬಾವಿ ಮುಂತಾದ ಕಡೆ ಏಕೀಕರಣ ಚಳುವಳಿಯನ್ನು ಪಸರಿಸಿದವರು.

೭. **ಬಸಪ್ಪ ರಾಯಪ್ಪ ನರಗುಂದ** : ಧಾರವಾಡ ಜಿಲೆಯ ಹುಬ್ಬಳ್ಳಿ ತಾಲೂಕಿನ ಅದರಗುಂಚಿ ಗ್ರಾಮದ ಶಂಕರಗೌಡ್ರು ಪಾಟೀಲ್ "೨೮ ಮಾರ್ಚ್ ೧೯೫೩ರಂದು ಅಖಂಡ ಕರ್ನಾಟಕ ರಚನೆಗಾಗಿ ಉಪವಾಸ ಸತ್ಯಾಗ್ರಹ ಕೈಗೊಂಡರು."[೬೫] ಆ ಸಮಯದಲ್ಲಿ ಹಳ್ಳಿಕೇರಿ ಗುದ್ಲೆಪ್ಪನೊಂದಿಗೆ ಜೊತೆಯಾಗಿ ಅಂದಿನ ಕಠಿಣ ಪರಿಸ್ಥಿತಿಯನ್ನು ತಿಳಿಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದವರು.

**ಕರ್ನಾಟಕ ಏಕೀಕರಣದಲ್ಲಿ ಹಾವೇರಿ ಜಿಲ್ಲೆಯ ಮಹಿಳೆಯರು;** ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಹಾವೇರಿ ಜಿಲ್ಲೆಯ ಮಹಿಳೆಯರು ಪ್ರಮುಖ ಪಾತ್ರವಹಿಸಿದಂತೆ ಕರ್ನಾಟಕ ಏಕೀಕರಣದಲ್ಲಿಯೂ ಪಾತ್ರವಹಿಸಿದ್ದಾರೆ.

* **ಗಂಗಮ್ಮ ಗುದ್ಲೆಪ್ಪ ಹಳ್ಳಿಕೇರಿ;** ಸ್ವಾತಂತ್ರ್ಯ ಚಳುವಳಿ ಮತ್ತು ಏಕೀಕರಣ ಚಳುವಳಿಯಲ್ಲಿ ನಾಯಕರಾದ ಗುದ್ಲೆಪ್ಪ ಹಳ್ಳಿಕೇರಿಯವರ ಪತ್ನಿ ಗಂಗಮ್ಮ ಹಳ್ಳಿಕೇರಿ. ಇವರು ಪತಿಯ ಹೋರಾಟಗಳಿಗೆ ಬೆಂಬಲವಾಗಿ ನಿಂತವರು. ತಮ್ಮ ಮನೆಯಲ್ಲಿ ನಡೆಯುವ ಹೋರಾಟದ ರೂಪುರೇಷೆಗಳಿಗೆ ಸ್ಪಂದಿಸುತ್ತ ಬಂದ ಗಂಗಮ್ಮನವರು ಮನೆಗೆ ಬರುತ್ತಿದ್ದ ಹೋರಾಟಗಾರರಿಗೆ, ರಾಜಕೀಯ ಮುಖಂಡರಿಗೆ ಆತಿಥ್ಯವನ್ನು ನೀಡುವುದು ತಮ್ಮ ಕರ್ತವ್ಯವೆಂದು ಭಾವಿಸಿ ಎಲ್ಲ ಚಳುವಳಿಗಾರರಿಗೆ ನೆರವು ನೀಡಿದ ಬಗ್ಗೆ ದೇವೇಂದ್ರಪ್ಪ ವಿಭೂತಿ ನೆನಪಿಸಿಕೊಳ್ಳುತ್ತಾರೆ.

* **ನಾಗಮ್ಮ ವೀರನಗೌಡ ಪಾಟೀಲ;** ನಾಗಮ್ಮ ವೀರನಗೌಡ ಪಾಟೀಲ್ ಮುಂಬೈ ಅಸೆಂಬ್ಲಿಗೆ ೧೯೩೭ರಲ್ಲಿ ರಾಣೆಬೆನ್ನೂರು ಕ್ಷೇತ್ರದಿಂದ ಆಯ್ಕೆಯಾದವರು. ಹೀಗೆ ಸ್ವಾತಂತ್ರ್ಯ ಹೋರಾಟ, ರಾಜಕೀಯ ಕ್ಷೇತ್ರ, ಹರಿಜನ ಮಕ್ಕಳ ಸೇವೆ ಮತ್ತು ಅದರೊಟ್ಟಿಗೆ ಕರ್ನಾಟಕ ಏಕೀಕರಣಕ್ಕೆ ಧುಮುಕಿದವರು. ನಾಗಮ್ಮ ಪಾಟೀಲರ ಕನ್ನಡಾಭಿಮಾನದ ಬಗ್ಗೆ ಅವರ ಮಗಳಾದ ಲೀಲಾವತಿ ಮಾಗಡಿ ಉಲ್ಲೇಖಿಸುವಂತೆ "ನನ್ನ ತಾಯಿಯವರೇ ಮುಂಬೈ ಅಸೆಂಬ್ಲಿಯಲ್ಲಿ ಕನ್ನಡ ಭಾಷೆಯನ್ನು ಮಾತನಾಡಿದ ಪ್ರಥಮ ಮಹಿಳೆ"[೬] ಎಂಬ ಅವರ ಹೇಳಿಕೆ ನಾಗಮ್ಮನ ಕನ್ನಡಾಭಿಮಾನಕ್ಕೆ ಸಾಕ್ಷಿಯಾಗಿದೆ.

* **ಜಯಮ್ಮ ಪಂಚಾಕ್ಷರಪ್ಪ ವಳಸಂಗದ;** ಪತಿ ಪಂಚಾಕ್ಷರಪ್ಪನೊಂದಿಗೆ ಏಕೀಕರಣ ಚಳುವಳಿಗೆ ನೆರಳಾಗಿ ನಿಂತವರು. ೧೯೫೩ರಲ್ಲಿ ಏಕೀಕರಣ ಹೋರಾಟದ ಸಮಯದಲ್ಲಿ ಬಾಂಬ್ ಕೇಸ್‌ನಲ್ಲಿ ಪತಿ ಪಂಚಾಕ್ಷರಪ್ಪನೊಂದಿಗೆ ಜೈಲು ಶಿಕ್ಷೆ ಅನುಭವಿಸಿದವರು."[೭] ಇವರು ಏಕೀಕರಣದ ಚಳುವಳಿಯಲ್ಲಿ ಜೈಲುಶಿಕ್ಷೆ ಅನುಭವಿಸಿದ ಜಿಲ್ಲೆಯ ಏಕೈಕ ಮಹಿಳೆ ಎಂಬುದು ಗಮನಾರ್ಹ. ಇದೇ ರೀತಿ ಸಿದ್ದಮ್ಮ ಮಹದೇವಪ್ಪ ಮೈಲಾರ ಮತ್ತು ಜಂಗಮನಕೊಪ್ಪದ ದೇವಕ್ಕ ಮನ್ನಂಗಿ ಇನ್ನೂ ಮುಂತಾದ ಮಹಿಳೆಯರು ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿದ್ದಾರೆ.

**ಕರ್ನಾಟಕ ಏಕೀಕರಣದಲ್ಲಿ ರಾಣೆಬೆನ್ನೂರಿನ ಕರ್ನಾಟಕ ಸಂಘ :** "೧೯೩೭ರಲ್ಲಿ ಕನ್ನಡದ ಕುಲಪುರೋಹಿತ ಆಲೂರು ವೆಂಕಟರಾಯರ ಕರೆಯ ಮೇರೆಗೆ ಸ್ಥಾಪಿತವಾದ **ಕರ್ನಾಟಕ ಸಂಘವು** ಕರ್ನಾಟಕ ಏಕೀಕರಣದಲ್ಲಿ ಅತ್ಯಂತ ಸಕ್ರಿಯ ಪಾತ್ರ ವಹಿಸಿದೆ. ಕರ್ನಾಟಕ ಏಕೀಕರಣ ಹೋರಾಟವನ್ನು ಸಂಘಟಿಸಿ ಬಲಗೊಳಿಸುವ ದಿಸೆಯಲ್ಲಿ ನಾಡಹಬ್ಬವನ್ನು ಆಚರಿಸಲು ಸಂಘವು ಪ್ರಾರಂಭಿಸಿತು. ಅಲ್ಲದೆ ತನ್ನದೇ ಆದ ನಾಟ್ಯ ಸಂಘವನ್ನು ಕಟ್ಟಿಕೊಂಡು ನಾಟಕಗಳ ಮೂಲಕ ಕರ್ನಾಟಕ ಏಕೀಕರಣ ಹೋರಾಟವನ್ನು ಸಂಘಟಿಸುವ ಪ್ರಯತ್ನ ಮಾಡಿದ್ದು ವಿಶೇಷವಾಗಿದೆ.

ಟಿ.ಡಿ. ನಾಯಕ ಮಾಸ್ತರ್, ಶಿವಣ್ಣ ಅಂಕಲಕೋಟಿ, ಬಿಳಕಿ ಶಿವರಾಯರು, ಡಾ.ಎಂ.ಆರ್. ದೇಶಪಾಂಡೆ, ಸಿ.ಎಸ್. ಬೆಂಗಳೂರು, ಬಾಳಪ್ಪ ನಾಯ್ಕ, ಕೆ.ಎಸ್. ನಾಯ್ಕ ಮುಂತಾದವರು ಕರ್ನಾಟಕ ಸಂಘದ ನೇತೃತ್ವದಲ್ಲಿ ಆಲೂರು ವೆಂಕಟರಾಯರ ಕರೆಯ ಮೇರೆಗೆ ಏಕೀಕರಣ ಹೋರಾಟದಲ್ಲಿ ಪಾಲ್ಗೊಂಡರು."[೬೮] ಅಂದಿನಿಂದ ಇಂದಿನವರೆಗೂ ಈ ಸಂಘ ಕನ್ನಡ, ಸಾಹಿತ್ಯ ಮತ್ತು ಸಂಸ್ಕೃತಿಗಾಗಿ ನಾಡಹಬ್ಬವನ್ನು ನಿರಂತರವಾಗಿ ಆಚರಿಸುತ್ತಾ ಬಂದಿರುವುದು ಸ್ಮರಣಾರ್ಹವಾದುದು.

**ಕನ್ನಡ ಕಹಳೆ ಮೊಳಗಿಸಿದ ಹಾವೇರಿಯ ಯುವಕರು**

ಕನ್ನಡ ತಾಯಿ ಭುವನೇಶ್ವರಿಗೆ ಜಯವಾಗಲಿ, ಕನ್ನಡ ತಾಯಿಯ ಮಕ್ಕಳು ಒಂದಾಗಿ ಬಾಳಲಿ, ಹರಿದು ಹಂಚಿಹೋದ ಕನ್ನಡ ನಾಡು ಒಂದಾಗಲಿ, ಕರ್ನಾಟಕ ಏಕೀಕರಣದ ಕನಸು ನನಸಾಗಲಿ ಹೀಗೆ ಜಯಘೋಷಗಳನ್ನು ಕೂಗುತ್ತಾ ಹಾವೇರಿಯಲ್ಲಿ ೧೯೫೩ ಆಗಸ್ಟ್ ೧೧ರಂದು ಯುವಕರ ದಂಡು ಹುಬ್ಬಳ್ಳಿಯಿಂದ ಬರುವ ರೇಲ್ವೆಯನ್ನು ಮಧ್ಯಾಹ್ನ ಮೂರು ಗಂಟೆಗೆ ತಡೆದರು. ಆ ಘಟನೆಯಲ್ಲಿ ಸದಾಶಿವಪ್ಪ ವಡ್ನಿಕಟ್ಟಿ, ವಿರುಪಾಕ್ಷಪ್ಪ ಮ್ಯಾಗೇರ, ಮಹದೇವಪ್ಪ ಅರಳಿ, ರುದ್ರಪ್ಪ ಜಾಬೀನ, ವಿರುಪಾಕ್ಷಪ್ಪ ಮೆಳ್ಳಿಗಟ್ಟಿ, ಶಿವಪುತ್ರಪ್ಪ ಚೌಶೆಟ್ಟಿ. ಸದಾಶಿವಪ್ಪ ನಾಡಗೌಡ್ರ, ಬಸವರೆಡ್ಡಿ ಶೆಟ್ಟಪ್ಪನವರು, ಬಾಬುರಾವ ಹಜಾರೆ, ಶಂಕರ ಗೋಕಾವಿ ಮುಂತಾದ ೧೬ ಜನರನ್ನು ಬಂಧಿಸಲಾಯಿತು.

ಬಂಧಿತ ಏಕೀಕರಣ ಸತ್ಯಾಗ್ರಹಿಗಳ ಮೇಲಿನ ಕೇಸನ್ನು ಹುಬ್ಬಳ್ಳಿಯ ನ್ಯಾಯಾಲಯಕ್ಕೆ ಕಳುಹಿಸಲಾಯಿತು. ಹುಬ್ಬಳ್ಳಿಯಲ್ಲಿದ್ದ ಹೊಸಮನಿ ಸಿದ್ದಪ್ಪಗೆ ವಿಷಯ ತಿಳಿಯುತ್ತಿದಂತೆ ತಮ್ಮ ಬೆಂಬಲಿಗರನ್ನು ಕರೆದುಕೊಂಡು ಪೊಲೀಸ್ ಠಾಣೆಗೆ ಹೋದರು. ಬಂಧಿತರಿಗೆ ನೀವು ಯಾರು ಯಾವುದೇ ಚಿಂತೆ ಮಾಡಬೇಡಿ. ನಿಮ್ಮನ್ನು ಬಿಡಿಸುವ ಹೊಣೆ ನನ್ನದು. ನಿಮ್ಮಗಳಿಗಾರಿಗೂ ಯಾವುದೇ ರೀತಿಯಲ್ಲಿ ಹಣಕಾಸಿನ ಖರ್ಚು ಬಾರದ ಹಾಗೆ ನಾನು ನೋಡಿಕೊಳ್ಳುತ್ತೇನೆ ಎಂದು ಧೈರ್ಯ ತುಂಬಿದರು. ಯುವ ನ್ಯಾಯವಾದಿಗಳಾದ ಎಸ್.ಆರ್. ಬೊಮ್ಮಾಯಿ ಹಾಗೂ ಪಾವಟೆ ವಕೀಲರು ಸತ್ಯಾಗ್ರಹಿಗಳನ್ನು ಜಾಮೀನಿನ ಮೇಲೆ ೧೬.೮.೧೯೫೩ ಬಿಡಿಸಿದರು. ಅದಕ್ಕೂ ಮುಂಚಿನ ದಿನ ಆಗಸ್ಟ್ ೧೫ರ ಸ್ವಾತಂತ್ರ್ಯ ದಿನವನ್ನು ಜೈಲಿನಲ್ಲಿ ಆಚರಿಸಿದರು.

ರೈಲ್ವೆ ನ್ಯಾಯಾಲಯದಲ್ಲಿ ಏಕೀಕರಣ ಸತ್ಯಾಗ್ರಹಿಗಳ ವಿಚಾರಣೆಗೆ ಸುಮಾರು ೯ ತಿಂಗಳು ನಡೆದು ಎಲ್ಲರೂ ದೋಷಮುಕ್ತರೆಂದು ನಿರ್ಧರಿಸಿ ೨೪.೫.೧೯೫೪ರಂದು ಆದೇಶ ನೀಡಲಾಯಿತು. ಸತ್ಯಾಗ್ರಹಿಗಳ ಬಿಡುಗಡೆಯ ವಿಚಾರದಲ್ಲಿ ಸಿದ್ದಪ್ಪ ಹೊಸಮನಿ ಹೇಳಿದಂತೆ ಬಂಧನವಾದಾಗಿನಿಂದ ನಂತರದವರೆಗಿನ ಅವರ ಊಟ, ವಸತಿ, ರೈಲ್ವೆ ಚಾರ್ಜ್, ಕೋರ್ಟ್ ಫೀ ಹೀಗೆ ಎಲ್ಲ ಖರ್ಚುಗಳನ್ನು ಹೊಸಮನಿಯವರೆ ನೋಡಿಕೊಂಡರು. ಅಲ್ಲದೆ ಆ ಕೇಸ್‌ಗೆ ಸಂಬಂಧಿಸಿದಂತೆ ಯಾರಿಂದಲೂ ಹಣವನ್ನು ಪಡೆದಿಲ್ಲ ಎಂದು ಅಂದು ಬಂಧಿಗಳಾಗಿದ್ದ ಶಂಕರ ಗೋಕಾವಿ, ರುದ್ರಪ್ಪ ಜಾಬೀನ ಇವರ ಹೇಳಿಕೆಯಿಂದ ತಿಳಿದುಬರುತ್ತದೆ.

**ಕರ್ನಾಟಕ ಏಕೀಕರಣ ಚಳುವಳಿ ಕಾಲಕ್ಕೆ ದುಡಿದ ಕನ್ನಡಾಭಿಮಾನಿಗಳು :** ಹಾವೇರಿ ಜಿಲ್ಲೆಯಲ್ಲಿಯ ಸ್ವಾತಂತ್ರ್ಯ ಚಳುವಳಿ ಮತ್ತು ಕರ್ನಾಟಕ ಏಕೀಕರಣ ಹೋರಾಟದಲ್ಲಿ ಹೋರಾಡಿ ಸೆರೆಮನೆ ಸೇರಿದವರು ಹಲವರು. ಬೆಂಬಲಿಸಿದವರು ಕೆಲವರು. ಇನ್ನೂ ಕೆಲವರು ವಿವಿಧ ಕಾರ್ಯಗಳಿಂದ ಈ ಚಳುವಳಿಯಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ಸ್ವಾತಂತ್ರ್ಯ ಹೋರಾಟದಲ್ಲಿ ಸ್ವದೇಶಿ ವಸ್ತುಗಳ ಬಳಕೆ ಬಗ್ಗೆ ಜಾಗೃತಿ ಕಾರ್ಯವನ್ನು ವಿನೂತನವಾಗಿ ಹಮ್ಮಿಕೊಂಡಿದ್ದ ಶಾಂತಕವಿಗಳು. ಇವರು ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನ ಸಾತೇನಹಳ್ಳಿ ಗ್ರಾಮದಲ್ಲಿ ೧೮೫೬ ಜನವರಿ ೧೫ರಂದು ಜನಿಸಿದರು. ಇವರ ಪೂರ್ಣ ಹೆಸರು ಬಾಳಾಚಾರ್ಯ ಸಕ್ರಿ, ಇವರನ್ನು ಕನ್ನಡದ ದಾಸಯ್ಯನೆಂದು ಕರೆದ್ದುದುಂಟು.

"ಇವರು ಮರಾಠಿ ಭಾಷೆ, ಮರಾಠಿ ಸಾಹಿತ್ಯ, ಮರಾಠಿ ನಾಟಕಗಳೇ ಶ್ರೇಷ್ಠವೆಂದು ತಿಳಿದ ಕಾಲದಲ್ಲಿ ಕನ್ನಡದ ಬಗ್ಗೆ ಅಭಿಮಾನದ ಕಿಚ್ಚು, ಆತ್ಮವಿಶ್ವಾಸ ತುಂಬುವುದಕ್ಕಾಗಿ ಜೀವಿತದ ಉದ್ದಕ್ಕೂ ತಮ್ಮ ಸಾಹಿತ್ಯ ಮತ್ತು ಬದುಕಿನ ಮೂಲಕ ಹೋರಾಟ ಮಾಡಿದವರು. ಕನ್ನಡಕ್ಕೆ ಒಂದು ಘನಗೌರವ ತರುವಲ್ಲಿ ಇವರು ಶ್ರಮಿಸಿದವರು. ಕನ್ನಡ ಕರ್ನಾಟಕ ಕಟ್ಟುವಲ್ಲಿ ಮೊದಲ ಕಿಡಿಗಳಾಗಿ ಸಿಡಿದದ್ದು ಈಗ ಇತಿಹಾಸ.

ಮುಖ್ಯವಾಗಿ ಕೃಷ್ಣದಾನಾಮೃತ, ಗಜೇಂದ್ರ ಮೋಕ್ಷ, ಮುಕುಂದ ದನಾಮೃತ, ವಿದ್ಯಾರಣ್ಯ ಚರಿತ್ರೆ, ವಿರಹಾರಂಗ, ಕೃಷ್ಣಭಿಕಾವಿಲಾಸ ಮೊದಲಾದ ಕಾವ್ಯ ಕೃತಿಗಳನ್ನೂ, ಸೌಗಂಧಿತ ಪರಿಣಯ, ಸೀತಾಸ್ವಯಂವರ, ಸುಧನ್ವವಧೆ ಮೊದಲಾದ ನಾಟಕಗಳನ್ನು ಬರೆದಿರುವ ಶಾಂತಕವಿಗಳು ತಮ್ಮ ಕಾವ್ಯ ಮತ್ತು ನಾಟಕ ಸಾಹಿತ್ಯದಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಅಮೋಘ ಸೇವೆ ಸಲ್ಲಿಸಿದವರು."[೯]

**ಗಳಗನಾಥರು :** ೧೮೬೯–೧೯೪೨

"ವೆಂಕಟೇಶ ತಿರುಕೋ ಕುಲಕರ್ಣಿ ಜನಿಸಿದ್ದು ೧೮೬೯ ಜನವರಿ ೫ರಂದು ಹಾವೇರಿ ಜಿಲ್ಲೆ ಗಳಗನಾಥ ಗ್ರಾಮದಲ್ಲಿ. ೧೯೦೭ರಲ್ಲಿ ಸದ್ಬೋದ ಚಂದ್ರಿಕೆ ಮಾಸ ಪತ್ರಿಕೆಯನ್ನು ಆರಂಭಿಸಿದ ಇವರು ಎರಡು ಸಾವಿರಕ್ಕೂ ಹೆಚ್ಚು ಚಂದಾದಾರರನ್ನು ಆ ಕಾಲದಲ್ಲಿಯೇ ಪಡೆದಿದ್ದು ವಿಶೇಷ. ಆ ಪತ್ರಿಕೆಯಿಂದ ಸ್ವಾತಂತ್ರ್ಯ ಚಳುವಳಿ ಮತ್ತು ಕರ್ನಾಟಕ ಏಕೀಕರಣದ ಜಾಗೃತಿ ಕಾರ್ಯ ಮಾಡಿದವರು. ಅಗಡಿಯ ಆನಂದವನದ ಶೇಷಾಚಲ ಆಶ್ರಮದ ಪ್ರೇರಣೆಯಿಂದ ೧೯೦೭ರಲ್ಲಿ 'ಸದ್ಬೋಧ ಚಂದ್ರಿಕೆ' ಎಂಬ ಮಾಸಪತ್ರಿಕೆಯನ್ನು ಗಳಗನಾಥರು ಆರಂಭಿಸಿದರು. ಮಹಾರಾಷ್ಟ್ರದ ಇತಿಹಾಸದ ಬಗ್ಗೆ ಶೇಷಾಚಲ ಗ್ರಂಥಮಾಲೆ ಪ್ರಕಟಿಸಿದ ಕನ್ನಡ ಕಾದಂಬರಿಗಳು ಚಳುವಳಿಗಾರರಲ್ಲಿ ದೇಶಭಕ್ತಿ ಹುಟ್ಟಿಸಿದವು.

ಇವರು ಪ್ರಬುದ್ಧ ಪದ್ಮನಯನ(೧೮೯೮), ಮಾಧವ ಕರುಣಾ ವಿಲಾಸ, ದುರ್ಗದ ಬಿಚ್ಚು ಗತ್ತಿ, ಕುಮುದಿನಿ ಹೀಗೆ ಮುಂತಾದ ೨೨ ಕಾದಂಬರಿಗಳನ್ನು ರಚಿಸಿದವರು. ತಲೆಮೇಲೆ

ಪುಸ್ತಕದ ಗಂಟು ಹೊತ್ತು ಮನೆಮನೆಗೆ ಹೋಗಿ ಪುಸ್ತಕ ಸಂಸ್ಕೃತಿಯನ್ನು ಕನ್ನಡ ನಾಡಿನಲ್ಲಿ ಬಿತ್ತಿ ಬೆಳೆಸಿದವರಲ್ಲಿ ಮೊದಲಿಗರು."[೨೦] ಇವರು ನಾಡು-ನುಡಿಗೆ ವಿಶಿಷ್ಟ ರೀತಿಯಲ್ಲಿ ಸೇವೆ ಸಲ್ಲಿಸಿದವರು.

**ಕರ್ನಾಟಕ ಏಕೀಕರಣದಲ್ಲಿ ಪ್ರಮುಖ ಪಾತ್ರವಹಿಸಿದ ಪತ್ರಿಕೆಗಳು** : ಸ್ವಾತಂತ್ರ್ಯ ಸಂಗ್ರಾಮಕ್ಕೆ ಮತ್ತು ಕರ್ನಾಟಕ ಏಕೀಕರಣದಲ್ಲಿ ಚಳುವಳಿಗಾರರಿಗೆ ಉತ್ಸಾಹ ತುಂಬುವಲ್ಲಿ ಪತ್ರಿಕೆಗಳ ಪಾತ್ರ ಮಹತ್ವವಾದದ್ದು. ಅಂಥ ಪತ್ರಿಕೆಗಳೆಂದರೆ-"ವಾಗ್ಭೂಷಣ, ಜಯಕರ್ನಾಟಕ, ಕರ್ನಾಟಕ ಪತ್ರ, ಕರ್ನಾಟಕ ಕೇಸರಿ, ಕರ್ನಾಟಕ ವೃತ್ತ, ಲೋಕ ಬಂಧು, ಚಂದ್ರೋದಯ, ರಾಷ್ಟ್ರಮತ, ವಿಹಾರಿ, ಕಾಳ, ಧಾರವಾಡ ವೃತ್ತ, ರಾಜಹಂಸ, ವಿಜಯ, ಹಿಂದೂಸ್ಥಾನ ಸಮಾಚಾರ, ಕನ್ನಡಾವೃತ್ತ, ಕರ್ನಾಟಕ ವೈಭವ, ವಿಶ್ವ ಕರ್ನಾಟಕ, ಕರ್ಮವೀರ, ಸಂಯುಕ್ತ ಕರ್ನಾಟಕ, ಶಿವಾನುಭವ, ಕನ್ನಡ ನುಡಿ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ."[೨೧] ಹೀಗೆ ಹಲವಾರು ಪತ್ರಿಕೆಗಳು ಕರ್ನಾಟಕ ಏಕೀಕರಣದಲ್ಲಿ ತಮ್ಮದೇಯಾದ ಪಾತ್ರ ವಹಿಸಿರುವುದನ್ನು ಮರೆಯುವಂತಿಲ್ಲ.

ಒಟ್ಟಾರೆ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಹೋರಾಟದೊಂದಿಗೆ ನಾಡು-ನುಡಿಗಾಗಿ ಸ್ವಾತಂತ್ರ್ಯ ನಂತರವೂ ವಿವಿಧ ಕಾರ್ಯಗಳಿಂದ ಸ್ಮರಣಾರ್ಹವಾದ ಕೊಡುಗೆ ನೀಡಿರುವುದನ್ನು ಗುರುತಿಸಲಾಗಿದೆ.

**ಹಾವೇರಿಯಲ್ಲಿ ಜರುಗಿದ ಐತಿಹಾಸಿಕ ಪಕ್ಷಾತೀತ ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಭಾಗವಹಿಸಿದವರು**

| ಅ.ನಂ. | ಹಾವೇರಿ ಪರಿಷತ್ತಿನಲ್ಲಿ ಭಾಗವಹಿಸಿದ ಗಣ್ಯರು | ಅ.ನಂ. | ಹಾವೇರಿ ಪರಿಷತ್ತಿನಲ್ಲಿ ಭಾಗವಹಿಸಿದ ಗಣ್ಯರು |
|---|---|---|---|
| ೧. | ಎಚ್.ಎಫ್. ಮುದಿರೆಡ್ಡಿ, ವಕೀಲರು | ೨೮. | ದೀಕ್ಷಿತ್, ವಕೀಲರು ಧಾರವಾಡ |
| ೨. | ಗಾದಿ ಲಿಂಗನಗೌಡರು | ೨೯. | ಮಹದೇವ ಬಣಕಾರ ಮೋಟೆಬೆನ್ನೂರು |
| ೩. | ಅಳವಂಡಿ ಶಿವಮೂರ್ತಿಸ್ವಾಮಿಗಳು | ೩೦. | ಶಿವನಗೌಡ ಮಲ್ಲನಗೌಡ್ರ, ಆಲದಕಟ್ಟಿ |
| ೪. | ಜಿನರಾಜ ಹೆಗಡೆ, ಮಂಗಳೂರು | ೩೧. | ನೀಲಗಂಗಯ್ಯ ಪೂಜಾರ. ಎಂ.ಎಲ್.ಎ |
| ೫. | ವೆಂಕಟೇಶ ಮಾಸ್ತಿ ಅಯ್ಯಂಗಾರ್, | ೩೨. | ಅಂದಾನಪ್ಪ ಕಂಬಳಿ, ಎಂ.ಎಲ್.ಎ ಬೆಂಗಳೂರು |
| ೬. | ಬಿ.ಬಿ. ಕಕ್ಕಿಲ್ಲಾಯ, ಕಾಸರಗೋಡು (ಕೇರಳ) | ೩೩. | ವೇದಮೂರ್ತಿ ಇಟಗಿ, (ನೇತಾಜಿ ಪತ್ರಿಕೆ) |

| | | | |
|---|---|---|---|
| ೭. | ಕೆ.ಆರ್. ಕಾರಂತರು, ಮಂತ್ರಿಗಳು ತಮಿಳುನಾಡು | ೩೪. | ಎ.ಎಚ್. ಶಿವಾನಂದಸ್ವಾಮಿ, ದಾವಣಗೆರೆ |
| ೮. | ಕೆ.ಎಫ್. ಪಾಟೀಲ್. ಕಾಕೋಳ | ೩೫. | ಅಂದಾನಪ್ಪ ದೊಡ್ಡಮೇಟಿ, ರೋಣ |
| ೯. | ಗೋವಿಂದ ಪೈ ಮಂಜೇಶ್ವರ, ಸಾಹಿತಿಗಳು | ೩೬. | ಕೆ.ಎಚ್. ಪಾಟೀಲ್, ಗದಗ |
| ೧೦. | ಚನ್ನಪ್ಪನವರು ವಾಲಿ, ಸಂಪಗಾವಿ | ೩೭. | ಅದರಗುಂಜಿ ಶಂಕರಗೌಡ ಪಾಟೀಲ |
| ೧೧. | ಶಾಂತಿನಾಥ ಇಂಗಳೆ, ಕಿತ್ತೂರು | ೩೮. | ಎಮ್.ಎನ್. ಬ್ಯಾಡಗಿ, ವಕೀಲರು |
| ೧೨. | ಚಿನ್ಮಯಸ್ವಾಮಿ ಓಂಕಾರಮಠ, ಹುಬ್ಬಳ್ಳಿ | ೩೯. | ಎಚ್.ಸಿ. ಕಿಲಕರ್ಣಿ, ವಕೀಲರು |
| ೧೩. | ಮುರುಗೋಡ ಮಹಾದೇವರು, ಹುಬ್ಬಳ್ಳಿ | ೪೦. | ಬಿ.ಎಸ್. ಪಾಟೀಲ ವಕೀಲರು, ಹಾನಗಲ್ |
| ೧೪. | ಡಾ. ಬಸವರಾಜ ನಾಗೂರು, ಬಿಜಾಪುರ | ೪೧. | ರಾಯನಗೌಡ್ರು, ತಲ್ಲೂರು |
| ೧೫. | ವೀರಪ್ಪನವರು ಸುಗಂಧಿ, ಬಾಗಲಕೋಟೆ | ೪೨. | ಮಹದೇವಪ್ಪ ಪಟ್ಟಣಶೆಟ್ಟಿ, ರಾಮದುರ್ಗ |
| ೧೬. | ಎನ್.ಎಲ್.ಉಪಾಧ್ಯಾಯರು, ಬೆಂಗಳೂರು | ೪೩. | ರಾಘಣ್ಣ ಮಂಡಗಿ, ಬೆಳಗಾವಿ |
| ೧೭. | ಎಸ್.ಶಿವಪ್ಪನವರು, ಬೆಂಗಳೂರು | ೪೪. | ಪಾರೇಶಪ್ಪ ಶೇರಿ, ಬೆಳಗಾವಿ |
| ೧೮. | ಬಸವರಾಜ ಕಟ್ಟಿಮನಿ, ಸಾಹಿತಿಗಳು | ೪೫. | ಕರಿಯಪ್ಪನವರು ಹುಚ್ಚಣ್ಣನವರ |
| ೧೯. | ಲಿಂಗರಾಜ ಮುದ್ದಣ್ಣನವರ, ಬ್ಯಾಡಗಿ | ೪೬. | ಕರಿಯಪ್ಪ ಸಂಗೂರು, ಸಂಗೂರು |
| ೨೦. | ಎಸ್.ಬಿ. ಹಿರೇಮಠ, ವಕೀಲರು ಹಾವೇರಿ | ೪೭. | ಎಸ್.ಎಂ.ರಾಜೇನವರ, ಹಾವೇರಿ |
| ೨೧. | ಬಿ.ಎಸ್.ಪಾಟೀಲರು, ವಕೀಲರು ಧಾರವಾಡ | ೪೮. | ಎಸ್.ಪಿ.ಉಪಾಧ್ಯ, ಹಾವೇರಿ |
| ೨೨. | ಬಿ.ಎಲ್ ರಾವ್‌ಬಹದ್ದೂರ್ | ೪೯. | ಬಸಪ್ಪ ಮಹಾಂತ, ಹಾವೇರಿ. |
| ೨೩. | ಗದಿಗೆಪ್ಪ ಹುರುಳಿ, ಪತ್ರಕರ್ತರು ಧಾರವಾಡ, ಹಾವೇರಿ | ೫೦. | ಗೋವಿಂದಚಾರ್ಯ ಅಗ್ನಿಹೋತ್ರಿ, |
| ೨೪. | ಕೋ. ಚನ್ನಬಸಪ್ಪನವರು, ಬಳ್ಳಾರಿ | ೫೧. | ಗುರುಲಿಂಗಪ್ಪ ಅಂಕಲಕೋಟಿ, ಹಾವೇರಿ |
| ೨೫. | ವೀರಭದ್ರಪ್ಪ ಶಿರೂರು, ಕೊಪ್ಪಳ | ೫೨. | ಪಂಚಾಕ್ಷರಪ್ಪ ವಳಸಂಗದ. ಹಾವೇರಿ |
| ೨೬. | ಅಲ್ಲಂ ಕರಿಬಸಪ್ಪನವರು, ಹೊಸಪೇಟೆ | ೫೩. | ಶ್ರೀಮತಿ ಜಯಮ್ಮ ಪಂಚಾಕ್ಷರಪ್ಪ ವಳಸಂದ |
| ೨೭. | ಶರಣಗೌಡರು ಪಾಟೀಲರು, ಗುಲ್ಬರ್ಗಾ | ೫೪. | ಶಿದ್ಲಿಂಗಪ್ಪ ಹೊಸಮನಿ ಕರ್ಜಗಿ |

## ಹಾವೇರಿಯ ಪರಿಷತ್ತಿನಲ್ಲಿ ಭಾಗವಹಿಸಿದ ಜಿಲ್ಲೆಯ ಕಾರ್ಯಕರ್ತರು

| ಅ.ನಂ. | ಹಾವೇರಿ ಪರಿಷತ್ತಿನಲ್ಲಿ ಭಾಗವಹಿಸಿದ ಗಣ್ಯರು | ಅ.ನಂ. | ಹಾವೇರಿ ಪರಿಷತ್ತಿನಲ್ಲಿ ಭಾಗವಹಿಸಿದ ಗಣ್ಯರು |
|---|---|---|---|
| ೧. | ಪಂಚಾಕ್ಷರಪ್ಪ ರೇವಣಪ್ಪ ವಳಸಂಗದ (ಮುಖಂಡರು) ಹಾವೇರಿ | ೬೬. | ಶರಣಪ್ಪ ಕೋಳಕೂರು, ಹಾವೇರಿ |
| ೨. | ಬಸಯ್ಯ ಹಿರೇಮಠ ತುಮರಿಕೊಪ್ಪ ತಾ॥ ಬ್ಯಾಡಗಿ | ೬೭. | ನಾಗಪ್ಪ ಹಂದ್ರಾಳ, ಹಾವೇರಿ |
| ೩. | ಜಯ್ಯಣ್ಣ ಚೌಶೆಟ್ಟಿ, ಹಾವೇರಿ | ೬೮. | ಬಾರಮಲ್ಲ ಮಾರವಾಡಿ, ಹಾವೇರಿ |
| ೪. | ಮುರಿಗೆಪ್ಪ ನಂದಿವಾಡ, ಹಾವೇರಿ | ೬೯. | ಪರಪ್ಪ ಬಾಲೇಹೂಸೂರು, ಹಾವೇರಿ |
| ೫. | ರಾಮಣ್ಣ ಕ್ಷೌರದ, ಹಾವೇರಿ | ೭೦. | ಬಸಪ್ಪ ಗುಮ್ಮಕಾರ, ಹಾವೇರಿ |
| ೬. | ಶಿದ್ಲಿಂಗಪ್ಪ ಹೊಸಮನಿ, ಕರ್ಜಗಿ | ೭೧. | ಸಿಮಣ್ಣ ಹತ್ತಿ, ಹಾವೇರಿ |
| ೭. | ಪಟ್ಟದಯ್ಯನವರು ಹೇಮಗಿರಿಮಠ, ಹಾವೇರಿ | ೭೨. | ಬಸಲಿಂಗಪ್ಪ ಅಪ್ಪಾಜಿ, ಹಾವೇರಿ |
| ೮. | ಕೃಷ್ಣಾಜಿ ಚವ್ಹಾಣ, ಹಾವೇರಿ | ೭೩. | ಪುಟ್ಟಪ್ಪ ನಾಡರ, ಹಾವೇರಿ |
| ೯. | ಶಾಂತಪ್ಪ ಸುರುಳಿಹಳ್ಳಿ, ಹಾವೇರಿ | ೭೪. | ವಿರುಪಾಕ್ಷಪ್ಪ ಕಡ್ಲಿ, ಹಾವೇರಿ |
| ೧೦. | ಪ್ರಭಣ್ಣ ನಂದಿ, ಹಾವೇರಿ | ೭೫. | ಪ್ರಾಣಲಿಂಗಯ್ಯ ಜಾಗಟಗೇರಿ, ಹಾವೇರಿ |
| ೧೧. | ಮಲ್ಲಿಕಾರ್ಜುನ ನಂದಿ, ಹಾವೇರಿ | ೭೬. | ರೇವಣ್ಣಪ್ಪ ಮುದ್ದಿ, ಹಾವೇರಿ |
| ೧೨. | ಶಾಂತಮಲ್ಲಯ್ಯ ಹಿರೇಮಠ, ಹಾವೇರಿ | ೭೭. | ಬಸಲಿಂಗಯ್ಯ ಹಾಲಯ್ಯನವರಮಠ, ಹಾವೇರಿ |
| ೧೩. | ಚಂದ್ರಶೇಖರಪ್ಪ ಮುರಿಗೆಪ್ಪ ಸುರುಗಿಹಳ್ಳಿ, ಹಾವೇರಿ | ೭೮. | ಅಡವಯ್ಯ ಇಚ್ಚಂಗಿಮಠ |
| ೧೪. | ವೀರಭದ್ರಪ್ಪ ಆನೂರು, ಹಾವೇರಿ | ೭೯. | ಶಿವಲಿಂಗಪ್ಪ ಮಾಗನೂರು |
| ೧೫. | ಸಿದ್ದಪ್ಪ ತಿಪ್ಪಶೆಟ್ಟಿ, ಹಾವೇರಿ | ೮೦. | ಶಿವಪುತ್ರಪ್ಪ ತುಪ್ಪದ, ಹಾವೇರಿ |
| ೧೬. | ಬಂಗಾರೆಪ್ಪ ತುಪ್ಪದ, ಹಾವೇರಿ | ೮೧. | ನಾಗೇಂದ್ರಪ್ಪ ಹಾವನೂರು, ಹಾವೇರಿ |
| ೧೭. | ರುದ್ರಪ್ಪ ಜಾಬಿನ್, ಹಾವೇರಿ | ೮೨. | ಶಂಕ್ರಪ್ಪ ಅರ್ಕಸಾಲಿ, ಹಾವೇರಿ |
| ೧೮. | ಪುಟ್ಟಪ್ಪ ವಾರದ, ಹಾವೇರಿ | ೮೩. | ಶಿವಪ್ಪ ಎಡವಣ್ಣನವರ, ಹಾವೇರಿ |
| ೧೯. | ಯಲ್ಲಪ್ಪ ಬೆಟಗೇರಿ, ಹಾವೇರಿ | ೮೪. | ಮಲ್ಲೇಶ ಕುರುಬರ, ಹಾವೇರಿ |
| ೨೦. | ಹಾಲಪ್ಪ ಸಮಗಾರ, ಹಾವೇರಿ | ೮೫. | ರಾಮಣ್ಣ ಹಳ್ಳಿಯವರ, ಹಾವೇರಿ |
| ೨೧. | ಮಲ್ಲೇಶಿ ಡೋರ, ಹಾವೇರಿ | ೮೬. | ವಾಮದೇವ ಗುರುದೇವರಮಠ, ಹಾವೇರಿ |

| | | | |
|---|---|---|---|
| ೨೨. | ಪೀರಸಾಬ ತಾಳಿಕೋಟಿ, ಹಾವೇರಿ | ೮೭. | ಮಂಜಪ್ಪ ಮುದ್ದಿ, ಹಾವೇರಿ |
| ೨೩. | ಬಾಬು ನದಾಫ ಹಾವೇರಿ | ೮೮. | ವೀರಣ್ಣ ವಳಸಂಗದ, ಹಾವೇರಿ |
| ೨೪. | ಚನ್ನಬಸಪ್ಪ ಹಿಂಚಿಗೇರಿ, ಹಾವೇರಿ | ೮೯. | ಮಧ್ವ ತಟ್ಟ, ಹಾವೇರಿ |
| ೨೫. | ಗುರುಶಾಂತಪ್ಪ ಪತ್ರಿ, ಹಾವೇರಿ | ೯೦. | ಬಸವಂತ ಬಾಡದ, ಹಾವೇರಿ |
| ೨೬. | ರಾಯಪ್ಪ ಕಳಸೂರು, ಹಾವೇರಿ | ೯೧. | ಕೊಟ್ರಗೌಡ ಪಾಟೀಲ, ಬುಡುಪನಹಳ್ಳಿ ತಾ॥ಬ್ಯಾಡಗಿ |
| ೨೭. | ರಾಘವೇಂದ್ರ ಕೊಲ್ಲಾಪುರ, ಹಾವೇರಿ | ೯೨. | ಗೋಪಾಲ ಬಾರಟಕ್ಕೆ, ಹಾವೇರಿ |
| ೨೮. | ಬಸವಣ್ಯಯ್ಯ ಹೊಂಬರಡಿ, ಹಾವೇರಿ | ೯೩. | ಉಳಿವೆಪ್ಪ ಮಾಸೂರು, ಹಾವೇರಿ |
| ೨೯. | ಪೂರ್ವಾಚಾರಿ ಹೂಗಾರ, ಹಾವೇರಿ | ೯೪. | ವಿರುಪಾಕ್ಷ ಹೊರಡಿ, ಹಾವೇರಿ |
| ೩೦. | ಬಸಯ್ಯ ಕಬ್ಬಿಣಕಂತಿಮಠ, ಹಾವೇರಿ | ೯೫. | ಬಸಯ್ಯ ಸಾವಿರಮಠ, ಹಾವೇರಿ |
| ೩೧. | ಈರಪ್ಪ ಹೂಗಾರ, ಹಾವೇರಿ | ೯೬. | ಕರಬಸಪ್ಪ ಗುತ್ತ್ಯಾಳ, ಹಾವೇರಿ |
| ೩೨. | ಸಿದ್ದಪ್ಪ ಪುರದ, ಹಾವೇರಿ | ೯೭. | ಶಿವಬಸಪ್ಪ ಮಾಡ್ಯಾಳ, ಹಾವೇರಿ |
| ೩೩. | ನಿಂಬಣ್ಣ ಸುಂಕದ, ಹಾವೇರಿ | ೯೮. | ಕೃಷ್ಣಪ್ಪ ಬಸಗಣ್ಣಿ, ಹಾವೇರಿ |
| ೩೪. | ನಾಗಪ್ಪ ತಿರುಕಣ್ಣನವರ, ದೇವಗಿರಿ | ೯೯. | ಉಳಿವೆಪ್ಪ ದುರ್ಗದ, ಹಾವೇರಿ |
| ೩೫. | ಬಸನಗೌಡ ಗದಿಗೆಪ್ಪಗೌಡರ, ಕೂಳೇನೂರ | ೧೦೦. | ಬಸವರಾಜ ಗೋಧಿ, ಹಾವೇರಿ |
| ೩೬. | ಸಿದ್ದಪ್ಪ ಅಂಚಿ, ಹಾವೇರಿ | ೧೦೧. | ಬಸಪ್ಪ ಗಿಡ್ಡಪ್ಪ ಹಂದ್ರಾಳ, ಹಾವೇರಿ |
| ೩೭. | ಕೃಷ್ಣಪ್ಪ ದೇಶಪಾಂಡೆ, ಹಾವೇರಿ | ೧೦೨. | ಬಸವಣ್ಯಪ್ಪ ಆಲದಕಟ್ಟಿ, ಬಂಕಾಪುರ |
| ೩೮. | ನಾಗಪ್ಪ ಮಾನೇಗಾರ, ಹಾವೇರಿ | ೧೦೩. | ಮುರಿಗೆಪ್ಪ ಉಪ್ಪಿನ, ಹಾವೇರಿ |
| ೩೯. | ಮಲ್ಲಾರಿ ಜೋಡಗೆ, ಹಾವೇರಿ | ೧೦೪. | ಸಂಗಪ್ಪ ಕೂಡ್ಲೆಪ್ಪನವರ, ಹಾವೇರಿ |
| ೪೦. | ಎಂ.ಜಿ.ಪಾಟೀಲ್, ಸುಣ್ಣಕಲ್ಲಬಿದರಿ (ರಾಣೆಬೆನ್ನೂರು) | ೧೦೫. | ಸಿದ್ದಪ್ಪ ಕೋರಿಕೂಪ್ಪ, ಹಾವೇರಿ |
| ೪೧. | ಬಿ.ಎಸ್.ಪಾಟೀಲ, ಹಾವೇರಿ | ೧೦೬. | ಬಸವಣ್ಣೆಪ್ಪ ಅಕ್ಕಿ, ಹಾವೇರಿ |
| ೪೨. | ಗಂಗಾದರ ಹರಕುಣಿ, ಹಾವೇರಿ | ೧೦೭. | ಲೋಕಪ್ಪ ಗುಂಡೆ, ಹಾವೇರಿ |
| ೪೩. | ಶಿವಪ್ಪ ಚಕ್ರಸಾಲಿ, ದೇವಿಹೊಸೂರು. | ೧೦೮. | ಕೃಷ್ಣಾಜಿ ಜೋಡಗೆ, ಹಾವೇರಿ |
| ೪೪. | ದಾನಪ್ಪ ಬಸೆಟ್ಟಿಯವರ, ಕುರುಬಗೊಂಡ | ೧೦೯. | ವಿರುಪಾಕ್ಷಪ್ಪ ಕೋರಿ, ಹಾವೇರಿ |
| ೪೫. | ಎಂ.ಜಿ.ನಾಗನೂರು, ಹಾವೇರಿ | ೧೧೦. | ಶ್ರೀಶೈಲ ಬ್ಯಾಡಗಿ, ಹಾವೇರಿ |
| ೪೬. | ಚಂದ್ರಶೇಖರಯ್ಯ ಉದಗಟ್ಟಿ, ಹಾವೇರಿ | ೧೧೧. | ಸಿದ್ದಣ್ಣ ಬ್ಯಾಡಗಿ, ಹಾವೇರಿ |
| ೪೭. | ಬಸವರಾಜ ಮಹಾರಾಜಪೇಟೆ, ಬ್ಯಾಡಗಿ | ೧೧೨. | ಬಿಂದು ಕುಲಕರ್ಣಿ, ಹಾವೇರಿ |

| | | | |
|---|---|---|---|
| ೪೮. | ಬಸವರಾಜ ಹುಂಬಿ, ಹಾವೇರಿ | ೧೧೩. | ಗುರುಪಾದಪ್ಪ ಯಾದವಾಡ, ಹಾವೇರಿ |
| ೪೯. | ರಾಚಪ್ಪ ಹಂದ್ರಾಳ, ಹಾವೇರಿ | ೧೧೪. | ಕೃಷ್ಣಾಜಿ ಗಿತೆ ಹಾವೇರಿ |
| ೫೦. | ಆರ್.ಕೆ. ಓತ್ತಲಮನಿ, ಮೋಟೆಬೆನ್ನೂರು | ೧೧೫. | ಶಿವಯೋಗಿ ಮಾಲಿಂಗಶೆಟ್ಟಿ, ಹಾವೇರಿ |
| ೫೧. | ಶಿವಯ್ಯ ಸಾಲಿಮಠ, ಬೆಳಗಾಲಪೇಟೆ. | ೧೧೬. | ಬಾಬು ಮುನ್ಸಿ, ಹಾವೇರಿ |
| ೫೨. | ಗುರುಪಾದಪ್ಪ ಬೆಲ್ಲದ, ಅಕ್ಕಿಆಲೂರು | ೧೧೭. | ವಿಠ್ಠಪ್ಪ ಮಡಿವಾಳರ, ಹಾವೇರಿ |
| ೫೩. | ಸೋಮಣ್ಣ ಹಳ್ಳಿಯವರ, ಹಾವೇರಿ | ೧೧೮. | ಮಲ್ಲೇಶಪ್ಪ ಹೂಗಾರ, ಹಾವೇರಿ |
| ೫೪. | ಶಿವಾನಂದ ಮಲ್ಲಾರಿ, ಹಾವೇರಿ | ೧೧೯. | ಶಿವಾನಂದ ನಾಡಕರ್ಣಿ, ಹಾವೇರಿ |
| ೫೫. | ಶಿವಪ್ಪ ಉಪ್ಪಿನ, ಹಾವೇರಿ | ೧೨೦. | ಮಾಲಿಂಗಪ್ಪ ಹಂದ್ರಾಳ, ಹಾವೇರಿ |
| ೫೬. | ಚಂದ್ರಶೇಖರ, ಚಿಕ್ಕಕುರುವತ್ತಿ | ೧೨೧. | ಬಾಬು ಲಂಕೇಶ್ವರ, ಹಾವೇರಿ |
| ೫೭. | ಶಿವಾನಂದ ನಡುವಿನಮನಿ, ಹಾವೇರಿ | ೧೨೨. | ಮಲ್ಲೇಶಿ ಸರಾವರಿ, ಹಾವೇರಿ |
| ೫೮. | ಮಹಿಪತಿ ಅವಘಾನ, ಹಾವೇರಿ | ೧೨೩. | ಮಲ್ಲಣ್ಣ ಕೋಣನಹಳ್ಳಿ, ಹಾವೇರಿ |
| ೫೯. | ಓಂಕಾರ ಅವಘಾನ, ಹಾವೇರಿ | ೧೨೪. | ಬಂಗಾರಿ ಇಸಳೂರ, ಹಾವೇರಿ |
| ೬೦. | ಮಾಲಿಂಗಪ್ಪ ಹತ್ತಿ, ಹಾವೇರಿ | ೧೨೫. | ರಾಚಪ್ಪ ಕೋಳಕೊರ, ಹಾವೇರಿ |
| ೬೧. | ಷಣ್ಮುಖ ಅವಘಾನ, ಹಾವೇರಿ | ೧೨೬. | ಬಸವರಾಜ ವಿರುಪಾಕ್ಷಪ್ಪ, ಹಾಲಪ್ಪನವರ |
| ೬೨. | ಶಿವಪ್ಪ ವಾಲಿಶೆಟ್ಟರ, ಹಾವೇರಿ | ೧೨೭. | ಶಿವಣ್ಣ ವೀರಪ್ಪ ಮಾಸೂರು, |
| ೬೩. | ಮಲ್ಲಿಕಾರ್ಜುನ ಮಠದ, ಹಾವೇರಿ | ೧೨೮. | ಶಿವಯೋಗಪ್ಪ ಶಿವಪ್ಪ ತುಪ್ಪದ |
| ೬೪. | ಶಿವಬಸಪ್ಪ ಶೀಲವಂತರ, ಹಾವೇರಿ | ೧೨೯. | ವೀರಭದ್ರಪ್ಪ, ಹಾವನೂರು |
| ೬೫. | ಚನ್ನಬಸಪ್ಪ ಮತ್ತೂರ, ಹಾವೇರಿ | ೧೩೦. | ಶಂಕ್ರಯ್ಯ ವರ್ದಿಮಠ, ಹಾವೇರಿ |

**ಕೊನೆ ಟಿಪ್ಪಣೆಗಳು**

೧. ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು. ಸಂ. ೩ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮. ಪುಟ ೩೮೫

೨. ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ತಿ.ರು. ನೆಶ್ವಿ, ನೆಶ್ವಿ ಪ್ರಕಾಶನ, ಹಂಸಬಾವಿ ತಾ॥, ಹಿರೇಕೆರೂರು ಜಿ॥, ಹಾವೇರಿ, ೧೯೯೮, ಪುಟ ೩೮ ಮತ್ತು ೩೯

೩. ಕಲಬುರ್ಗಿ ಎಂ.ಎಂ.(ಸಂ), ಉಕ್ಕಿನ ಮನುಷ್ಯ, ಶ್ರೀ ಗುದ್ಲೆಪ್ಪ ಹಳ್ಳಿಕೇರಿ ಜನ್ಮಶತಮಾನೋತ್ಸವ ಸಮಿತಿ, ಬೆಂಗಳೂರು-ಹುಬ್ಬಳ್ಳಿ, ವಿದ್ಯಾನಗರ ಹುಬ್ಬಳ್ಳಿ, ೨೦೦೬, ಪುಟ ೪೪

೪. ಅದೇ, ಪುಟ ೭೮೭

೫. ಮೂಡಿ ಫ್ವಿ.ಎಂ., ಹಿರೇಕೆರೂರ ತಾಲೂಕಿನ ಗಾಂಧಿ, ಪ್ರಕಾಶಕರು, ಅನಸೂಯಕ್ಕ ಶಂಭುಲಿಂಗಪ್ಪ ಜವಳಿ, ಆನಂದ ನಗರ ಹುಬ್ಬಳ್ಳಿ, ೧೯೯೮, ಪುಟ ೫ ಮತ್ತು ೬

೬. ಅದೇ, ಪುಟ ೫೧ ಮತ್ತು ೫೨

೭. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ–೩, ಪುಟ ೨೯೪ ಮತ್ತು ೩೦೧

೮. ಸಂಪಳ್ಳಿ ಕಮಲಾ, ನಮ್ಮ ವೀರ ವನಿತೆಯರು, ನಂ. ೩೫, ಎಂ.ಎಸ್.ಎಚ್.ಕಾಲೋನಿ, ಆನಂದ ನಗರ, ಹೆಬ್ಬಾಳ, ಬೆಂಗಳೂರು, ೧೯೯೨, ಪುಟ ೧೧೪.

೯. ಬಣಕಾರ ಎನ್.ಜಿ., ಕ್ರಾಂತಿವೀರ ಮೆಣಸಿನಾಳ ತಿಮ್ಮನಗೌಡ, ಅಪ್ರಕಟಿತ ಲೇಖನ ಪುಟ

೧೦. ಪಾರ್ವತಿ ಇಂದುಶೇಖರ; ಕ್ರಾಂತಿವೀರ ಡಾ. ಶಿವಣ್ಣ ನೆಶ್ವಿ, ನಂದಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು, ೧೯೯೧ ಪುಟ ೪೩ ಮತ್ತು ೪೪

೧೧. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ–೧, ಪುಟ ೭೫೮

೧೨. ಭಿಕ್ಷಾವರ್ತಿಮಠ ಕೆ.ಬಿ., ವೀರ ಸ್ವಾತಂತ್ರ್ಯಯೋಧ–ಶರಣ ಹಾವೇರಿಯ ಗುರುಶಾಂತಪ್ಪ ಜಾಬಿನ, ಗ್ರಾಮೀಣ ಪ್ರಕಾಶನ, ಕುರಗುಂದ ತಾ॥ ಜಿ॥, ಹಾವೇರಿ, ೨೦೦೭, ಪುಟ ೮

೧೩. ಶ್ರೀಮತಿ ಲೀಲಾವತಿ ಭೋಜರಾಜ ಪಾಟೀಲ, ಚಿಕ್ಕ ಎಡಚಿಯ ಸ್ವಾತಂತ್ರ್ಯ ಯೋಧ ಶಂಕರಗೌಡ ಪಾಟೀಲ, ಶಿವಯೋಗಿ ಸಿದ್ಧಲಿಂಗ ಪ್ರಕಾಶನ, ಹಂಸಬಾವಿ ತಾ॥, ಹಿರೇಕೆರೂರು ಜಿ॥, ಹಾವೇರಿ. ೨೦೧೧ ಪುಟ ೩೦

೧೪. ಅದೇ, ಪುಟ ೪೯

೧೫. ಅದೇ, ಪುಟ ೫೧

೧೬. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ–೧, ಪುಟ ೭೮೭

೧೭. ನರಗುಂದ ಬಸಪ್ಪ ರಾಯಪ್ಪ, ರಾಯಪ್ಪ ನರಗುಂದ. ಪ್ರಕಾಶಕರು ಶ್ರೀ ಶಾಂತೇಶ್ವರ ಆಶ್ರಮ ಟ್ರಸ್ಟ್, ಹೂವಿನಶಿಗ್ಲಿ, ತಾ॥ ಸವಣೂರು ಜಿ॥, ಹಾವೇರಿ, ೨೦೦೮, ಪುಟ ೨೭

೧೮. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯ ಯೋಧ ತಿ.ರು. ನೆಶ್ವಿ, ಪುಟ ೩೭

೧೯. ಅದೇ, ಪುಟ ೩೯

೨೦. ಅದೇ, ಪುಟ ೪೦

೨೧. ಹಿರೇಅಣಜಿ ಚಳುವಳಿಗಾರ ಪುಟ್ಟಪ್ಪ ಹರಭಿ ಅವರಿಂದ ಪಡೆದ ವಿವರ

೨೨. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ತಿ.ರು. ನೆಶ್ವಿ, ಪುಟ ೪೯

೨೩. ಅದೇ, ಪುಟ ೫೫

೨೪. ಪೂರ್ವೋಕ್ತ, ಕಲಬುರ್ಗಿ ಎಂ.ಎಂ.(ಸಂ), ಕರ್ನಾಟಕದ ಉಕ್ಕಿನ ಮನುಷ್ಯ ಶ್ರೀ ಗುದ್ಲೆಪ್ಪ ಹಳ್ಳಿಕೇರಿ. ೨೦೦೬, ಪುಟ ೨೯

೨೫. ಪೂರ್ವೋಕ್ತ, ಕಾಮತ್ ಸೂರ್ಯನಾಥ(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೧, ಪುಟ ೮೩೬

೨೬. ಪೂರ್ವೋಕ್ತ, ಕಾಮತ್ ಸೂರ್ಯನಾಥ, ಜಿಲ್ಲಾ ಗ್ಯಾಸೆಟಿಯರ್, ಪುಟ ೧೫೪

೨೭. ಸಂಕಣ್ಣನವರ ಜಿ. ಸಂಕಮ್ಮ, ಹೋರಾಟದ ಒಂದು ನೋಟ-ಶ್ರೀಮತಿ ಸಿದ್ದಮ್ಮ ಮಹದೇವಪ್ಪ ಮೈಲಾರ(ಬದುಕು-ಬರಹ), ಸಮೃದ್ಧಿ ಪ್ರಕಾಶನ, ಬ್ಯಾಡಗಿ, ೨೦೧೩, ಪುಟ ೧೧೬ ಮತ್ತು ೧೧೯

೨೮. ಅದೇ, ಪುಟ ೧೨೧

೨೯. ಪೂರ್ವೋಕ್ತ, ಸಂಪಳ್ಳಿ ಕಮಲಾ, ನಮ್ಮ ವೀರ ವನಿತೆಯರು, ೧೯೯೨, ಪುಟ ೧೨೧

೩೦. ಅದೇ, ಪುಟ ೧೧೪

೩೧. ಪೂರ್ವೋಕ್ತ, ಕಾಮತ್ ಸೂರ್ಯನಾಥ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೩, ಪುಟ ೩೦೪

೩೨. ಸುಶೀಲಾ ಸುಬ್ರಹ್ಮಣ್ಯ(ಸಂ), ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು-ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಬೆಂಗಳೂರು, ಪ್ರಕಾಶನ ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಯೋಧರು ಮತ್ತು ಉತ್ತರಾಧಿಕಾರಿಗಳ ಸಂಸ್ಥೆ ಬೆಂಗಳೂರು. ೧೯೯೩ ಪುಟ ೧೭೧

೩೩. ಪೂರ್ವೋಕ್ತ, ಮೂಡ್ವಿ ವ್ಹಿ.ಎಂ., ಹಿರೇಕೆರೂರ ತಾಲೂಕಿನ ಗಾಂಧಿ, ೧೯೯೮, ಪುಟ ೫೩

೩೪. ಅದೇ, ಪುಟ ೬೪

೩೫. ಪೂರ್ವೋಕ್ತ, ಕಾಮತ್ ಸೂರ್ಯನಾಥ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೧, ಪುಟ ೭೫೬

೩೬. ಹಾನಗಲ್ಲು ಚಳುವಳಿಗಾರ ಸುಬ್ಬಣ್ಣಾಚಾರ್ಯ ಅಕ್ಕಿವಳಿ ನೀಡಿದ ವಿವರ

೩೭. ಚವಲಾರ ಸರೋಜಿನಿ(ಪ್ರ.ಸಂ), ಚಿರ ಚೇತನ. ಪ್ರಕಾಶಕರು: ಕೆ.ಎಫ್. ಪಾಟೀಲರ ಅಭಿನಂದನಾ ಗ್ರಂಥ, ೮೯ನೇ ವರ್ಧಂತಿ ಸನ್ಮಾನ ಸಮಿತಿ, ರಾಣೆಬೆನ್ನೂರು, ಜಿಲ್ಲಾ ಹಾವೇರಿ, ೧೯೮೯, ಪುಟ ೧೧

೩೮. ಪೂರ್ವೋಕ್ತ, ಪಾಟೀಲ ಭೋಜರಾಜ, ಸ್ವಾತಂತ್ರ್ಯಯೋಧ ತಿ.ರು. ನೆಶ್ವಿ, ಪುಟ ೧೫ ಮತ್ತು ೨೩

೩೯. ಅದೇ, ಪುಟ ೩೮

೪೦. ಅದೇ, ಪುಟ ೬೧

೪೧. ಪೂರ್ವೋಕ್ತ, ಕಲಬುರ್ಗಿ ಎಂ.ಎಂ. (ಸಂ), ಉಕ್ಕಿನ ಮನುಷ್ಯ ಹಳ್ಳಿಕೇರಿ ಗುದ್ಲೆಪ್ಪ, ೨೦೦೬, ಪುಟ ೯೧

